ಶ್ರೀ ನೀಲಕಂಠನಾಗನಾಥಾಚಾರ್ಯ ವಿರಚಿತ

# ವೀರಮಾಹೇಶ್ವರಾಚಾರಸಂಗ್ರಹಃ

ಶ್ರೀಧರಾಂಕಪ್ರಣೀತ ಕರ್ನಾಟಕಭಾಷಾವಿವರಣ ಸಹಿತಃ

# VĪRAMĀHEŚWARĀCĀRA SAṄGRAHAḤ

of

Śri NĪLAKANṬHANĀGANĀTHĀCĀRYA

with the Commentary 'Karnātakabhāṣābhūṣaṇa' of

Śri SRĪDHARĀNKA

Vol. I

*General Editor* :

Dr. K. RAJAGOPALACHAR, M.A., Ph.D.

*Editor* :

Vidwan M. S. BASAVARAJAIAH





ಪ್ರಾಚ್ಯವಿದ್ಯಾ ಸಂಶೋಧನಾಲಯ

ORIENTAL RESEARCH INSTITUTE, MYSORE

೧೯೯೧

*Price* : Rs. 58-00

UNIVERSITY OF MYSORE
ORIENTAL RESEARCH INSTITUTE SERIES No. 176

ಮೈಸೂರು ವಿಶ್ವವಿದ್ಯಾನಿಲಯ
ಪ್ರಾಚ್ಯವಿದ್ಯಾ ಸಂಶೋಧನಾಲಯ ಗ್ರಂಥಮಾಲಾ—176

# VĪRAMĀHEŚWARĀCHĀRA SAṄGRAHAḤ

ಶ್ರೀನೀಲಕಂಠನಾಗನಾಥಾಚಾರ್ಯವಿರಚಿತ

# ವೀರಮಾಹೇಶ್ವರಾಚಾರಸಂಗ್ರಹಃ

ಶ್ರೀಧರಾಂಕಪ್ರಣೀತಕರ್ನಾಟಭಾಷಾಸಹಿತಃ



ORIENTAL RESEARCH INSTITUTE
MYSORE

ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು
1991

UNIVERSITY OF MYSORE
ORIENTAL RESEARCH INSTITUTE SERIES No. 176

# VĪRAMĀHEŚWARĀCHĀRA SAÑGRAHAḤ

of

Sri NEELAKANTHANAGANATHACHARYA

with Kannada Commentary

of

Sri SRIDHARANKA

*General Editor*:

Dr. K. RAJAGOPALACHAR, M.A., Ph.D.
Director
Oriental Research Institute
and Professor and Head of the P.G. Dept. of Sanskrit
Manasagangotri
University of Mysore, Mysore.

*Edited by*:

Vidwan M. S. BASAVARAJAIAH
Senior Research Asst. (Retd.)
Oriental Research Institute, Mysore

ORIENTAL RESEARCH INSTITUTE
MYSORE
1991

ಮೈಸೂರು ವಿಶ್ವವಿದ್ಯಾನಿಲಯ
ಪ್ರಾಚ್ಯವಿದ್ಯಾಸಂಶೋಧನಾಲಯಗ್ರಂಥಮಾಲಾ ಸಂ. 176

ಶ್ರೀ ನೀಲಕಂಠನಾಗನಾಥಾಚಾರ್ಯವಿರಚಿತ

# ಶ್ರೀವೀರಮಾಹೇಶ್ವರಾಚಾರಸಂಗ್ರಹಃ

ಶ್ರೀ ಶ್ರೀಧರಾಂಕಪ್ರಣೀತಕರ್ನಾಟಭಾಷಾವ್ಯಾಖ್ಯಾಸಹಿತ

ಪ್ರಧಾನ ಸಂಪಾದಕ :

**ಡಾ. ಕೆ. ರಾಜಗೋಪಾಲಾಚಾರ್, ಎಂ.ಎ., ಪಿಹೆಚ್.ಡಿ.**

ಪ್ರಾಚ್ಯವಿದ್ಯಾಸಂಶೋಧನಾಲಯ ನಿರ್ದೇಶಕ
ಮೈಸೂರು ವಿಶ್ವವಿದ್ಯಾನಿಲಯ ಸ್ನಾತಕೋತ್ತರ ಸಂಸ್ಕೃತ ವಿಭಾಗ
ಪ್ರಾಧ್ಯಾಪಕ ಹಾಗೂ ಮುಖ್ಯರು
ಮಾನಸಗಂಗೋತ್ರಿ, ಮೈಸೂರು

ಸಂಪಾದಕ :

**ವಿದ್ವಾನ್ ಎಂ. ಎಸ್. ಬಸವರಾಜಯ್ಯ**

ಹಿರಿಯ ಸಂಶೋಧನಸಹಾಯಕರು (ನಿವೃತ್ತ)
ಪ್ರಾಚ್ಯವಿದ್ಯಾಸಂಶೋಧನಾಲಯ, ಮೈಸೂರು

ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು
೧೯೯೧

# ಮುನ್ನುಡಿ

ತ್ರಿವಿಧಾತ್ಮಕ ಆಗಮಶಾಸ್ತ್ರಗಳಲ್ಲಿ ಶೈವಾಗಮವೊಂದು. ಈ ಶೈವಾಗಮದಲ್ಲಿ 'ವೀರಮಾಹೇಶ್ವರಾಚಾರಸಂಗ್ರಹ' ಎಂಬುದು ಬಹಳ ಪ್ರಥಿತವಾದುದು. ಇದರ ಕರ್ತೃ ಶ್ರೀನೀಲಕಂಠನಾಗನಾಥಾಚಾರ್ಯ. ಈ ಕೃತಿಯಲ್ಲಿ 8 ಸಾವಿರ ಶ್ಲೋಕ ಗಳನ್ನೊಳಗೊಂಡ 78 ಅಧ್ಯಾಯಗಳಿವೆ. ಸರಳ ಶೈಲಿಯಲ್ಲಿ ವೀರಶೈವಸಿದ್ಧಾಂತದ ಪ್ರಕಾರ 'ಶಿವತತ್ತ್ವ'ದ ನಿರೂಪಣೆಯನ್ನೊಳಗೊಂಡ ಆಚಾರದ ಪ್ರತಿಪಾದನೆಯನ್ನು ಗ್ರಂಥ ಕರ್ತೃವು ಮಾಡಿದ್ದಾನೆ. ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಎಲ್ಲ ಮಾಹೇಶ್ವರ ಗ್ರಂಥಗಳನ್ನೂ ಪುರಾಣೇತಿಹಾಸಗಳನ್ನೂ ಅವಲೋಕಿಸಿ ಈ ಗ್ರಂಥದ ರಚನೆಯಾಗಿದೆ ಎಂಬುದನ್ನು ಗ್ರಂಥಕರ್ತೃವೇ ಪ್ರಾಸ್ತಾವಿಕ ಶ್ಲೋಕವೊಂದರಲ್ಲಿ ತಿಳಿಸಿದ್ದಾನೆ. ಇದರ ಪ್ರಭಾವವು ಅನಂತರದ ವೀರಶೈವ ಸಿದ್ಧಾಂತ ನಿರೂಪಣಾಗ್ರಂಥಗಳಲ್ಲಿ ಕಂಡುಬರು ವುದರಿಂದ ಈ ಗ್ರಂಥವು ಪ್ರಮಾಣಗ್ರಂಥಗಳಲ್ಲೊಂದು ಎಂದು ಪರಿಗಣಿತವಾಗಿದೆ. ಇದು ಸಂಸ್ಕೃತ ಭಾಷೆಯಲ್ಲಿರುವುದು ಮತ್ತೊಂದು ವೈಶಿಷ್ಟ್ಯ. ಇದಕ್ಕೆ ಶ್ರೀಧರಾಂಕ ನೆಂಬುವನು ಕನ್ನಡದಲ್ಲಿ ವಿವರಣೆಯನ್ನು ಕೊಟ್ಟಿರುವುದು ಗ್ರಂಥಕ್ಕೆ ಮತ್ತಷ್ಟು ಒನಪು ತಂದಿದೆ.

ಈ ಗ್ರಂಥದ ಹಿರಿಮೆಯನ್ನು ಓದುಗರೆಲ್ಲರಿಗೂ ಪರಿಚಯಮಾಡಿಕೊಡಬೇಕೆಂಬ ಉದಾತ್ತ ಉದ್ದೇಶದಿಂದ ಶ್ರೀಮಾನ್ ಬಸವರಾಜಯ್ಯನವರು ಈ ಗ್ರಂಥದ ನಾಲ್ಕೈದು ಹಸ್ತಪ್ರತಿಗಳನ್ನು ಕೂಲಂಕಷವಾಗಿ ಅವಲೋಕಿಸಿ ಪಾಠಪರಿಷ್ಕರಣ ಮಾಡಿ ಗ್ರಂಥವನ್ನು ಪ್ರಕಟಿಸಲು ಮಹದುಪಕಾರವನ್ನು ಸಲ್ಲಿಸಿದ್ದಾರೆ. ಕೃತಿಯ ಪರಿಚಯ, ಕರ್ತೃವಿನ ಪರಿಚಯ ಇತ್ಯಾದಿ ವಿಷಯಗಳನ್ನು ಸವಿಸ್ತಾರವಾಗಿ ನಿರೂಪಿಸಿರುವುದು ಸ್ತುತ್ಯರ್ಹ. ಅವರಿಗೆ ಪ್ರಾಚ್ಯವಿದ್ಯಾಸಂಶೋಧನಾಲಯದ ಪರವಾಗಿ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಈ ಸಂಸ್ಥೆಯಿಂದ ಅವ್ಯಾಹತವಾಗಿ ಸಾಗುತ್ತಿರುವ ಪ್ರಕಟಣೆಗೆ ಸಾಕಷ್ಟು ಉತ್ತೇಜನವನ್ನು ನೀಡಿ ಆರ್ಥಿಕವಾಗಿ ಸಹಕರಿಸುತ್ತಿರುವ ಮೈಸೂರು ವಿಶ್ವವಿದ್ಯಾನಿಲಯದ

ಕುಲಪತಿಗಳಾಗಿರುವ ಡಾ. ಸೆಲ್ವೀದಾಸ್‌ರವರಿಗೂ, ಕುಲಸಚಿವರಾಗಿರುವ ಪ್ರೊ. ವಿ. ಕೆ. ನಟರಾಜ್‌ರವರಿಗೂ, ವಿತ್ತಾಧಿಕಾರಿಗಳಿಗೂ ನನ್ನ ಅನಂತಾನಂತ ಕೃತಜ್ಞತೆಗಳು. ಮೈಸೂರು ವಿಶ್ವವಿದ್ಯಾನಿಲಯದ ಈ ಸಂಶೋಧನಾಲಯದ ಪ್ರಕಟಣೆಯ ಬಗೆಗೆ ಬಹಳ ಆಸ್ಥೆಯನ್ನು ವಹಿಸಿ ಉತ್ತೇಜನ ನೀಡುತ್ತಿರುವ ಮುದ್ರಣಾಲಯದ ನಿರ್ದೇಶಕರಾದ ಶ್ರೀಯುತ ಸಿದ್ದೇಗೌಡರಿಗೆ ನಾನು ಆಭಾರಿಯಾಗಿದ್ದೇನೆ.

ಶ್ರದ್ಧಾನ್ವಿತ ಕೆಲಸಗಾರರು ವಿರಳವಾಗುತ್ತಿರುವ ಈ ಪರಿಸರದಲ್ಲಿ ಎಂದಿನಂತೆ ಸಂಸ್ಕೃತ ಸಾಹಿತ್ಯ ಸದನದ ಮೂಲಕ ಸಾಕಷ್ಟು ಸಂಸ್ಕೃತ ಪುಸ್ತಕಗಳನ್ನು ಹೊರ ತಂದಿರುವ ಮುದ್ರಣಾಲಯದ ಮಾಲೀಕರಾದ ಪ್ರೊ. ಎಸ್. ರಂಗಾಚಾರ್ಯರವರು ಈ ಗ್ರಂಥವನ್ನು ಅಚ್ಚುಹಾಕಿಸಿ ಸಕಾಲಕ್ಕೆ ಸಿದ್ಧಪಡಿಸಿರುತ್ತಾರೆ. ನನ್ನ ವಿದ್ಯಾಗುರುಗಳಾದ ಪ್ರೊ. ಎಸ್. ರಂಗಾಚಾರ್ಯರವರಿಗೆ ವೈಯಕ್ತಿಕ ನಮನ ಮಾತ್ರವಲ್ಲದೆ, ಪ್ರಾಚ್ಯವಿದ್ಯಾಸಂಶೋಧನಾಲಯದ ಪರವಾಗಿ ಕೃತಜ್ಞತೆಯನ್ನು ಈ ಮೂಲಕ ಸಲ್ಲಿಸುವುದು ನನ್ನ ಭಾಗ್ಯವಾಗಿದೆ. ಮುಂಪೆಯೂ ಇದೇರೀತಿ ಈ ಸಂಶೋಧನಾಲಯದ ಪ್ರಕಟಣೆಗೆ ಅವರು ಅನುವಾಗುವುದರ ಮೂಲಕ ಹರಸಲೆಂದು ಆಶಿಸುತ್ತೇನೆ.

ಕೆ. ರಾಜಗೋಪಾಲಾಚಾರ್
ನಿರ್ದೇಶಕರು
ಪ್ರಾಚ್ಯವಿದ್ಯಾಸಂಶೋಧನಾಲಯ
ಮೈಸೂರು

# ಪ್ರಸ್ತಾವನೆ

## ಗ್ರಂಥದ ಸ್ಥೂಲಪರಿಚಯ

ವೀರಮಾಹೇಶ್ವರಾಚಾರಸಂಗ್ರಹವೆಂಬ ಸಂಸ್ಕೃತ ಗ್ರಂಥವನ್ನು ಬರೆದವನು ಮಹಾವಿಬುಧನೂ ವೀರಮಾಹೇಶ್ವರನೂ ಆದ ನೀಲಕಂಠನಾಗನಾಥಾಚಾರ್ಯನು. ಈ ಗ್ರಂಥದಲ್ಲಿ 78 ಅಧ್ಯಾಯಗಳೂ 8 ಸಾವಿರ ಶ್ಲೋಕಗಳೂ ಇದ್ದು ಸುಮಾರು 60 ಕ್ಕೂ ಹೆಚ್ಚಿನ ಪುರಾತನ ಗ್ರಂಥಗಳಿಂದ ಸಂಗ್ರಹಿಸಿದ ಪ್ರಮಾಣಗಳು ಇರುತ್ತವೆ. ಈ ಗ್ರಂಥಕಾರನೇ ತನ್ನ ಕೃತಿಯ ಬಗೆಗೆ "ಏತಾನ್ ಮಾಹೇಶ್ವರಾನ್ ಸರ್ವಾನ್ ನತ್ವಾ ತತ್ತತ್ಪ್ರಸಾದತಃ (1-23), ತತ್ಸಂಗೃಹೀತಾನ್ ಗ್ರಂಥಾಂಶ್ಚ ಶ್ರುತಿ-ಸ್ಮೃತಿ-ಶಿವಾಗಮಾನ್ । ಇತಿಹಾಸಪುರಾಣಾದೀನ್ ಆಲೋಕ್ಯಾತಿಪ್ರಯತ್ನತಃ (1-24), ತತ್ರ ಸಾರತರಾನ್ ಶ್ಲೋಕಾನ್ ವೀರಮಾಹೇಶ್ವರೋಚಿತಾನ್ । ಆದಾಯ ತಾನ್ ನೀಲಕಂಠನಾಗನಾಥಾರ್ಯಧೀಮತಾ। ಶ್ರೀಮನ್ಮಹಾಳ್ವಾಯಿಸೋಮೇಶಪಾದಾಬ್ಜಾಹಿತ ಚೇತಸಾ (1-25), ಹಿತಾಯ ಶಿವಭಕ್ತಾನಾಂ ಸದಾಚಾರಾನುವರ್ತಿನಾಂ । ವೀರ-ಮಾಹೇಶ್ವರಾಚಾರಸಂಗ್ರಹಃ ಕ್ರಿಯತೇ ಮಹಾನ್ (1-26), ಎಂಬೀ ಶ್ಲೋಕಗಳಲ್ಲಿ ತನ್ನ ವಿದ್ವತ್ಪರಿಶ್ರಮವನ್ನೂ ತಾನು ಬಳಸಿಕೊಂಡಿರುವ ಆಕರಗ್ರಂಥಗಳನ್ನೂ ಮತ್ತು ತನ್ನ ಗ್ರಂಥದ ಆಶಯವನ್ನೂ ಸ್ಥೂಲವಾಗಿ ವಿಶದೀಕರಿಸಿರುತ್ತಾನೆ.

## ಈ ಗ್ರಂಥ ಬೀರಿರುವ ಪ್ರಭಾವ

ಈ ಬೃಹದ್ಗ್ರಂಥವು ವೀರಮಾಹೇಶ್ವರರ (ವೀರಶೈವರ) ಉತ್ತಮೋತ್ತಮ ನಿಬಂಧ ಗ್ರಂಥವಾಗಿದ್ದು ಪ್ರಮಾಣಗ್ರಂಥವೆನಿಸಿದೆ. ಮುಂದಿನ ವೀರಶೈವವಿಬುಧರು ಒಂದಲ್ಲೊಂದು ರೀತಿಯಲ್ಲಿ ಈ ಗ್ರಂಥಕ್ಕೆ ಋಣಿಗಳಾಗಿರುತ್ತಾರೆ. ಕನ್ನಡದಲ್ಲಿ ಬೆಳೆದುಬಂದಿರುವ ಪದ್ಮಣಾಂಕನ ಪದ್ಮರಾಜಪುರಾಣ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ, ವಿರೂಪಾಕ್ಷಪಂಡಿತನ ಚನ್ನಬಸವಪುರಾಣ, ಗುಬ್ಬಿಮಲ್ಲಣಾರ್ಯನ ವೀರಶೈವಾಮೃತಮಹಾಪುರಾಣ, ಸಿದ್ಧನಂಜೇಶನ ಗುರುರಾಜಚಾರಿತ್ರ, ವಿರಕ್ತ-ತೋಂಟದಾರ್ಯನ ಪಾಲ್ಕುರಿಕೆ ಸೋಮೇಶ್ವರ ಪುರಾಣಾದಿಗಳು ಈ ಗ್ರಂಥವನ್ನು ಮಾದರಿಯಾಗಿಟ್ಟುಕೊಂಡು ತುಂಬಿಕೊಂಡು ಬೆಳೆದುಬಂದಿವೆಯೆಂಬುದು ಇವುಗಳಲ್ಲಿನ

ವಿಷಯಪ್ರತಿಪಾದನೆಗಳ ತುಲನೆಯಿಂದ ಅರಿಯಬಹುದಾಗಿದೆ. ಪದ್ಮರಾಜಪುರಾಣಕಾರ, ಭೈರವೇಶ್ವರಕಾವ್ಯಕಥಾಮಣಿಸೂತ್ರರತ್ನಾಕರಕಾರ, ಗಣಾಡಂಬರ (ಪುರಾತನರ–ಚರಿತೆ) ಚರಿತ್ರೆಕಾರ, ಶಿವಾಧಿಕ್ಯ ಪುರಾಣಕಾರ, ಗಂಗೋದಯ ಕಾವ್ಯಕಾರ ಇವರೇ ಮೊದಲಾದವರು ಈ ಗ್ರಂಥವನ್ನು ಉಲ್ಲೇಖಿಸಿ ಇದರಿಂದ ಉಪಕಾರವನ್ನು ಪಡೆದಿರುತ್ತಾರೆ. ಅಲ್ಲದೆ ಈ ಮಹಾಗ್ರಂಥಕ್ಕೆ ಶ್ರೀಧರಾಂಕನೆಂಬ ವಿದ್ವಾಂಸನು ಕನ್ನಡ ವ್ಯಾಖ್ಯಾನವನ್ನು ಬರೆದಿರುತ್ತಾನೆ. ಇಷ್ಟೇ ಅಲ್ಲದೆ ಪರ್ವತಲಿಂಗನಾಮಾತ್ಯನೆಂಬ ತೆಲುಗು ವಿದ್ವಾಂಸನಿಂದ ಆಂಧ್ರಭಾಷೆಯಲ್ಲಿ ದ್ವಿಪದಕಾವ್ಯವಾಗಿ ಹತ್ತು ಆಶ್ವಾಸಗಳಲ್ಲಿ ಸುಂದರವಾಗಿ ಸಂಗ್ರಹರೂಪವಾಗಿ ಅನುವಾದ ಮಾಡಲ್ಪಟ್ಟದೆ.

## ಗ್ರಂಥಸಾರ

ಈ ಗ್ರಂಥದಲ್ಲಿ ಪ್ರಧಾನವಾಗಿ ಧರ್ಮಾಧರ್ಮ ವಿಚಾರಗಳೂ ಶಿವನ ಲೀಲೆಗಳೂ, ಶಿವಾಧಿಕ್ಯವೂ ಶಿವಭಕ್ತರ ಆಚಾರ ವಿಚಾರಗಳೂ ವೀರಮಾಹೇಶ್ವರರ ಷಟ್ಸ್ಥಲ-ಸಿದ್ಧಾಂತವೂ ಶಿವಭಕ್ತಾಧಿಕ್ಯವೂ ನಿಗಮಾಗಮಪುರಾಣೇತಿಹಾಸಾದಿಗ್ರಂಥಗಳಿಂದ ಸಂಗ್ರಹಿಸಲ್ಪಟ್ಟು ಮನಂಬುಗುವಂತೆ ಪ್ರತಿಪಾದಿತಗಳಾಗಿವೆ.

## ಈ ಗ್ರಂಥದ ಮೇಲೆ ಪ್ರಾಕ್ತನ ಗ್ರಂಥಪ್ರಭಾವ

ಈ ಮಹಾಗ್ರಂಥ ಪ್ರತಿಪಾದಿತ ವಿಚಾರಗಳು ವೇದಾಗಮ ಪುರಾಣೇತಿಹಾಸಾದಿಗಳಲ್ಲಿಯೂ ಕ್ರಿ. ಶ. 1073 ರಲ್ಲಿದ್ದ ಸೋಮಶಂಭುವಿನ ಸೋಮಶಂಭುಪದ್ಧತಿಃ, ಜ್ಯೋತಿರ್ನಾಥನ ಶೈವರತ್ನಾಕರಃ, ಹರದತ್ತಾಚಾರ್ಯನ ತಾತ್ಪರ್ಯಸಂಗ್ರಹಃ, ದೇವರ ದಾಸಿಮಯ್ಯನ ವಚನಗಳು ಇವುಗಳಲ್ಲಿಯೂ, 12ನೆಯ ಶತಮಾನದ ಶ್ರೀ ಬಸವೇಶ್ವರಾದಿ ಶಿವಶರಣ-ಶರಣೆಯರ ವಚನಶಾಸ್ತ್ರಗಳಲ್ಲಿಯೂ, ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿವತತ್ತ್ವಸಾರ, ಕೆರೆಯ ಪದ್ಮರಸರ ದೀಕ್ಷಾಬೋಧೆ, ಕುಮಾರ ಪದ್ಮರಸನ ಸಾನಂದ ಚರಿತೆಗಳಲ್ಲಿಯೂ ಹರಿಹರನ ಕೃತಿಗಳಲ್ಲಿಯೂ ಮಲ್ಲಿಕಾರ್ಜುನ ಪಂಡಿತಾರಾಧ್ಯಚರಿತಮು, ಬಸವಪುರಾಣಮು, ಚತುರ್ವೇದಸಾರಸೂಕ್ತಾಲು, ಅನುಭವಸಾರಮು, ಗಂಗೋತ್ಪತ್ತಿರಗಡ, ವೃಷಾಧಿಪಶತಕಮು, ಬಸವೋದಾಹರಣಮ್, ಷಟ್ಸ್ಥಲಗದ್ಯಂ ಬಸವರಾಜೀಯಮ್ ಅಥವಾ ಸೋಮನಾಥಭಾಷ್ಯಂ, ಮುಂತಾದ ಪಾಲ್ಕುರಿಕೆ ಸೋಮನಾಥನ ಕೃತಿಗಳಲ್ಲಿಯೂ ಬಿತ್ತರೂಪಗಳಾಗಿ ಪ್ರತಿಪಾದಿತಗಳೇ ಆಗಿರುವ ವಿಚಾರಗಳು ಇಲ್ಲಿ ಉಪಬೃಂಹಣರೂಪಗಳಾಗಿರುತ್ತವೆ.

ಈ ಎಲ್ಲಾ ವಿಚಾರಗಳೂ ತಮಿಳು ನಾಡಿನ ಶಿವಭಕ್ತರಾದ ಪುರಾತನರ ಹಾಗೂ ಶೈವರ ಕೃತಿಗಳಲ್ಲಿಯೂ ಕಾಶ್ಮೀರದ ಮಹಾಮಾಹೇಶ್ವರರ ಕೃತಿಗಳಲ್ಲಿಯೂ

ಕರ್ಣಾಟಾಂಧ್ರ ತಮಿಳು ದೇಶಗಳ ವೀರಮಾಹೇಶ್ವರರ ಕನ್ನಡ-ತೆಲುಗು-ತಮಿಳು ಮತ್ತು ಸಂಸ್ಕೃತಕೃತಿಗಳಲ್ಲಿಯೂ ಮೂಡಿಬಂದಿವೆ. ಸಪ್ತವಿಧ ಶೈವಕಕ್ಕೂ ಶಿವಲಿಂಗ ಪೂಜೆಯೂ ಶಿವಾಧಿಕ್ಯವೂ ಶಿವಭಕ್ತಾಧಿಕ್ಯವೂ ಶಿವಾನುಗ್ರಹಸಾಧನೆಯು ಶಿವಜ್ಞಾನ ವಿದ್ಯೆಯೂ ಹಲ-ಕೆಲವು ವೈಶಿಷ್ಟ್ಯಗಳೊಂದಿಗೆ ಸರ್ವಸಾಮಾನ್ಯ ವಿಷಯಗಳಾಗಿವೆ. ಇದೇ ತೆರನ ಬೃಹದ್ಗ್ರಂಥಗಳೂ ಪ್ರಕರಣಗ್ರಂಥಗಳೂ, ಶಿವಾಗಮಗಳನ್ನೂ, ಶೈವಸಿದ್ಧಾಂತಗಳನ್ನೂ ಎತ್ತಿ ಹಿಡಿದಿರುವ ಗ್ರಂಥಗಳೂ ತಮಿಳು ಭಾಷೆಯಲ್ಲಿಯೂ ಸಂಸ್ಕೃತದಲ್ಲಿಯೂ ಬಂದಿವೆ.

ಮಲ್ಲಿಕಾರ್ಜುನ ಪಂಡಿತಾರಾಧ್ಯ, ಪಾಲ್ಕುರಿಕೆ ಸೋಮನಾಥ, ಕೆರೆಯ ಪದ್ಮರಸರ ಹಾಗೆ ವಾದಿಸಿಯೂ ಶ್ರುತ್ಯಾಧಾರಗಳಿಂದ ಬೃಹದ್ಗ್ರಂಥ ರಚಿಸಿಯೂ ಶಿವಾಧಿಕ್ಯವನ್ನೂ ಶಿವಾದ್ವೈತವನ್ನೂ ಪುಲವಕಪಿಲರು ಎಂಬ ತಮಿಳುನಾಡಿನ ವಿಬುಧರು ತಮಿಳು ಭಾಷೆಯಲ್ಲಿ ಸಾಧಿಸಿರುವರು ಎಂದು ಕೆರೆಯ ಪದ್ಮರಸರ ಪುತ್ರನಾದ ಕುಮಾರ ಪದ್ಮರಸನು 'ಶ್ರುತಿಗಳಾಣುವನೆತ್ತಿ ದ್ರಾವಿಡ। ಕೃತಿಯ ಬೆಂಬಾವುಗಳನಬುದಶ! ಶತವ ತೊಂಬತ್ತಾರು ಪ್ರಕರಣವೆಸಗಿ ಮಾಧವನಂ॥ ಶ್ರುತಿಬಹಿಷ್ಕೃತನೆನಿಸಿ ವಾದಿಸಿ। ಜಿತಪುರಾದ್ವೈತಪ್ರತಿಷ್ಠೆಯ। ನತಿಶಯದಿನೆಸಗಿದ ಪುಲವಕಪಿಲರುವನಂತಲ್ಲಿ॥ ಎಂದು ತನ್ನ ಸಾನಂದ ಚರಿತೆಯಲ್ಲಿ (ಸಂಧಿ 9-44) ತಿಳಿಸಿರುವನು. ಹೀಗೆಯೇ ಪ್ರಚ್ಛನ್ನ ಬೌದ್ಧನ ವೇದಾಂತವನ್ನು ಖಂಡಿಸಿ ಭಂಗಿಸಿದ ಒರುಮುಕ್ಕಾಳುವರ್ ಎಂಬವರನ್ನೂ (ಸಾ. ಚ. 9-44) ಮತ್ತು ಶ್ರೀವಿಶುದ್ಧ ಪ್ರಕರಣಂಗಳನೆಸಗಿ ವೇದ। ಶೈವತಂತ್ರಾವಳಿಗೆ ಭಾಷ್ಯಮುಂ ದೀಪಿಕೆಯ। ನಾ ವೃತ್ತಿಯಂ ವ್ಯಾಖ್ಯೆಯುಂ ಬರೆದ ಬೋಧಾಯನಾರ್ಯ ನುರು ಶಂಕರಾರ್ಯಂ॥ ವೋವೊ ಹರದತ್ತರ್ ತ್ರಿಲೋಚನಾಘೋರಶಿವ। ದೇವ ಗುಣನಿಲಯ ಸರ್ವಾತ್ಮಶಂಭುಗಳಾದ।ಪಾವನರ್ ಭೂತಿಕಂಠಾದಿ ಪೂರ್ವಾಚಾರ್ಯರನ್ನೂ (ಪದ್ಮರಾಜ ಪುರಾಣ 1-11) ಪದ್ಮಣಾಂಕನು ಸೂಚಿಸಿ ಮಣಿದಿರುವನು.

ಈ ಎಲ್ಲ ವಿಚಾರಗಳಿಂದ ಈ ವೀರಮಾಹೇಶ್ವರಾಚಾರಸಂಗ್ರಹದಲ್ಲಿ ಪ್ರತಿಪಾದಿಸಲ್ಪಟ್ಟಿರುವ ಶೈವಾಗಮಿಕ ವಿಚಾರಗಳು ಪುರಾತನ ಕಾಲದಿಂದಲೂ ಇದ್ದವುಗಳೇ ಎಂಬುದು ಮಥಿತಾರ್ಥವಾಗಿದ್ದು ಇಲ್ಲಿ ಶ್ರುತಿ-ಸ್ಮೃತಿ ಪುರಾಣೇತಿಹಾಸಗಳಿಂದ ಉಪಬೃಂಹಣ ಮಾಡಲ್ಪಟ್ಟು ಮಂಡಿತಗಳಾಗಿವೆ.

## ಈ ಗ್ರಂಥದ ಬಗೆಗೆ ಕನ್ನಡ ವ್ಯಾಖ್ಯಾಕಾರನಾದ ಶ್ರೀಧರಾಂಕನ ಹೇಳಿಕೆ

ಕನ್ನಡ ವ್ಯಾಖ್ಯಾನಕಾರನಾದ ಶ್ರೀಧರಾಂಕನು ಈ ಗ್ರಂಥದ ಬಗೆಗೆ ಗ್ರಂಥಾಂತ್ಯದಲ್ಲಿ ಎಂದರೆ 78ನೆಯ ಅಧ್ಯಾಯ ಪರಿಸಮಾಪ್ತಿಯಾದನಂತರ ಹೀಗೆ ಹೇಳಿರುತ್ತಾನೆ—(ಚ ಪ್ರತಿಯಿಂದ ಉದ್ಧೃತ)

"॥೫೧॥ ಇತಿ ಶ್ರೀ ನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ ಶ್ರೀಮದ್ ವೀರಮಾಹೇಶ್ವರಾಚಾರಸಂಗ್ರಹೇ ಸದಾಚಾರನಿರೂಪಣೇ ವೀರಶೈವಾಗಮಸುಧಾರ್ಣವ-ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಮಲ್ಲಿಕಾರ್ಜುನಾಚಾರ್ಯಸ್ಯಾನು-ಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ ಶಿವಭಕ್ತಪೂಜಾ-ಮಾಹಾತ್ಮ್ಯಕಥನೇ ಶ್ರೀಮದ್ವೀರಸ್ಕಂದಸಂವಾದೋ ನಾಮಾಷ್ಟಸಪ್ತತಿತಮೋಽಧ್ಯಾಯಃ ॥ ಅಂತು ಅಧ್ಯಾಯ ೭ಲಕ್ಕಂ ವೃತ್ತ ೩೩೧। ಅಂತು ಸಹ ಗ್ರಂಥ ೮೮೦೦ಕ್ಕಂ ಮಂಗಳಮಹಾ ಶ್ರೀಶ್ರೀಶ್ರೀ ॥

ಶಾರ್ದೂಲವೃತ್ತ ॥

ಶ್ರೀಮದ್ಬೊಪ್ಪಣದೇಶಿಕೇಂದ್ರತನಯಃ ಸರ್ವಾಗಮಾರ್ಥೋದಯಃ
ಸಾರಜ್ಞಃ ಶಿವಪಾದಪಂಕಜಲಸದ್ಭೃಂಗಃ ಪ್ರಕಾಶೀಕೃತಃ ॥
ವ್ಯಾಖ್ಯಾಂ ಸದ್ಗುರುಮಲ್ಲಿಕಾರ್ಜುನವಿಭುಃ ಶ್ರೀ ವೀರಮಾಹೇಶ್ವರಾ-
ಚಾರಸ್ಯಾಸ್ತು ಶುಭಂ ತು ತಸ್ಯ ಸುಧಿಯಾ ಯಚ್ಛ್ರೀಧರಾಂಕೇಣ ವಾ ॥೧॥

ಗ್ರಂಥ ॥ ವೀರಮಾಹೇಶ್ವರಾಚಾರಸಂಗ್ರಹಸ್ಯ ಶುಭಾತ್ಮಿಕಾ
ಕರ್ಣಾಟಭಾಷಯಾ ವ್ಯಾಖ್ಯಾ ಜೀಯಾದಾಚಂದ್ರತಾರಕಮ್ ॥೨॥

ಗದ್ಯ ॥ ಇತಿ ನಿಖಿಲಸುರಾಸುರೇಂದ್ರವಿರಿಂಚಿಮುಕುಂದಮಕುಟಮಣಿಕಿರಣ-ಬಿಂಬಚುಂಬಿತಾಂಘ್ರಿನಖೇಂದುಭಗವದಂಬಿಕಾಮುಖಾಂಬುಜಾದಿತ್ಯಪರಮಶಿವಚರಣ-ನಳಿನಾರ್ಚನಕೃತಾರ್ಥೀಕೃತಹೃದಯಃ ಶಿವಾದ್ವೈತಪ [ ಥನಿವಾರಿತ ]ಸರ್ವಸಂಶಯಃ ಷಟ್ಸ್ಥಲಬ್ರಹ್ಮವಾದೀ ಸುಗುಣಮಣಿಗಣಾಲಂಕೃತಕರ್ಣಾಟದೇಶಜನಾಜ್ಞಾನ-ನಿರ್ಹರಣಾರಾಧ್ಯವರ್ಯಃ ಗೊರಗೋಡಪುರವರಾಧೀಶ್ವರಬೊಪ್ಪಣದೇಶಿಕೇಂದ್ರ-ತನೂಭವಃ ಶ್ರೀಮಲ್ಲಿಕಾರ್ಜುನಾಚಾರ್ಯಃ ಸಕಲವಿದ್ವತ್ಸಭಾಮಧ್ಯೇ 'ಪದವಾಕ್ಯ ಪ್ರಮಾಣಜ್ಞಂ ವಿಬುಧಜನಕರ್ಣಾಮೃತಸ್ಯಂದಿನಂ ಶ್ರೀಧರಾಂಕಂ ಮಾಂ ಆಲೋಕ್ಯ, 'ಪೂರ್ವಸ್ಮಿನ್ ವೀರಶೈವಾಗ್ರಗಣ್ಯವಿದ್ಯಾಶಂಕಂ ನಾಮದ ರಾಜಪುತ್ರಾನುಮತಾನ್ ಮಾಹೇಶ್ವರಮನಃಕುಮುದವನವಿಕಾಸಮನೋಲ್ಲಾಸಚಂದ್ರೋದಯವೀರಮಾಹೇ-ಶ್ವರಾಚಾರಸಂಗ್ರಹಂ ನೀಲಕಂಠನಾಗನಾಥಾಚಾರ್ಯಃ ಕಲ್ಪಯಾಮಾಸ।' ತಚ್ಚಾಷ್ಟ-ಸಹಸ್ರಗ್ರಂಥಂ ಜಗದ್ಧಿತಾರ್ಥಂ ಕರ್ಣಾಟಭಾಷಾವ್ಯಾಖ್ಯಾಕರ್ತವ್ಯೇತ್ಯುದೀರಯಾ-ಮಾಸ। ತಥೇತ್ಯಂಗೀಕೃತ್ಯ ಮಯಾ ಮಂಜುಳಗಿರಾ ವ್ಯಾಕ್ರಿಯತೇ। ಪರಗುಣಪರ-ಮಾಣುಮಪಿಪರ್ವತಾಕಾರಂ ಕೃತವದ್ಭಿರ್ನಿತ್ಯಂ ಸುಖಾತಿಶಯೇನ ಶಿವಕಥಾಮೃತಂ ಪೇಪೀಯಮಾನೈಸ್ತ್ರಿಯಂಬಕಪದಪಂಕೇಜಮಕರಂದಭ್ರಮರಾಯಮಾಣೈಃ ಶಿವಾ-ದ್ವೈತಸುಧಾರ್ಣವತರಂಗಸಂಘಟ್ಟನನಿಮಗ್ನಮಾನಸೈಃ ಪರಮಮಾಹೇಶ್ವರೈರ್ಭವದ್ಭಿಃ ಶ್ರೋತವ್ಯಮ್ ॥೩॥

ಆಶೀರ್ವಾದವೃತ್ತಂ।

ವಿಶ್ವಂ ಯಸ್ಯ ಹೃದಿ ಸ್ಫುರತ್ಯವಿರತಂ ದೇವಪ್ರಸಾದಾದಹೋ
ಜಜ್ಞೇ ಸರ್ವಮಿದಂ ಸುರಾಸುರಗುರೋಃಶ್ಯಂಭೋಃ ಪ್ರಭಾವಾದಪಿ ॥
[1]ದೇವೇಷು ಪ್ರಥಿತೇಷು ಶಾಸ್ತ್ರನಿಚಯೇಷು ಸ್ತುತ್ಯ ಏವೇಶಿ ಸಃ
ಪಾಯಾದ್ವಸ್ಸತತಂ ಮುದಾ ಶುಭಕರಸ್ತ್ರೈಲೋಕ್ಯರಕ್ಷಾಕ್ಷಮಃ ॥೪॥

ಯಚ್ಚಾಪಸ್ತು ಸುರಾಶ್ರಯಸ್ತ್ವವಿರತಂ ಬಾಣಸ್ತು ರಕ್ಷಾಕರಃ
ಸೃಷ್ಟಿಂ ಚಾಪಿ ಕರೋತಿ ಸಾರಥಿರಹೋ ಜ್ಯಾ ಧಾರ್ಯತೇ ಮೇದಿನೀಮ್ ॥
ಯಚ್ಚಾರ್ಥಾಸ್ತುರಗಾಶ್ಚರಾಚರಮಿದಂ ಧತ್ತೇ ರಥಸ್ತ್ವೀದೃಶೋ
ದೇವಸ್ಸರ್ವಜಗತ್ಪತಿಃ ಪ್ರತಿದಿನಂ ತುಷ್ಟ್ಯರ್ಥಮ್ . . . ॥೫॥

ಇದು ಶಿವಭಕ್ತಚಾತಕಚಯಕ್ಕೆ ಮಹಾಭ್ರ ಶಿವೈಕ್ಯಚಂದ್ರಕಾಂ-
ತಪ ನಿವಹಕ್ಕೆ ಚಂದ್ರಿಕೆ ಮನೋಹರಭಾಕ್ತಿಕಪದ್ಮವೃಂದಸಂ-
ಪದಕೆ ಖರಾಂಶು ಸಜ್ಜನಸುಚಿತ್ತವನಕ್ಕೆ ವಸಂತ ನಾಡೆ ಸೋ—
ಪೊದವಿದ ವೀರಶೈವಘನತಂತ್ರದ ದೀಪಿಕೆ ಭೂತಳಾಗ್ರದೊಳ್ ॥೬॥

ಹೀಗೆ ತನ್ನ ವ್ಯಾಖ್ಯಾನವನ್ನು ಮುಗಿಸುವಾಗ ಈ ಗ್ರಂಥ ರಚನೆಯಾದ ಬಗೆಗೆ ಮತ್ತು ಈ ಮಹಾಗ್ರಂಥಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆ ಎಂದು ಪ್ರೇರಣೆಯಿತ್ತವರ ಬಗೆಗೆ ವ್ಯಾಖ್ಯಾಕಾರನಾದ ಶ್ರೀಧರಾಂಕನೇ ತಿಳಿಸಿರುವನು.

ಇಲ್ಲಿ ಶ್ರೀಧರಾಂಕನು ತನ್ನನ್ನು 'ಪದವಾಕ್ಯಪ್ರಮಾಣಜ್ಞನೆಂದೂ ವಿಬುಧಜನ ಕರ್ಣಾಮೃತಸ್ಯಂದಿ' ಎಂದೂ ವರ್ಣಿಸಿಕೊಂಡಿರುವನು, ಅಷ್ಟೆ. ತನ್ನ ದೇಶ-ಕಾಲ-ತಂದೆ ತಾಯಿ ಮುಂತಾದ ಪರಿಚಯಗಳೇನೂ ಇಲ್ಲಿ ಹೇಳಲ್ಪಟ್ಟಿರುವುದಿಲ್ಲ, ತನಗೆ ಕನ್ನಡದಲ್ಲಿ ವ್ಯಾಖ್ಯಾನಮಾಡಲು ಆಜ್ಞೆಯಿತ್ತ ಗೊರಗೋಡಪುರವರಾಧೀಶ್ವರನಾದ ಬೊಪ್ಪಣದೇಶಿಕೇಂದ್ರನ ಪುತ್ರನಾದ ಮಲ್ಲಿಕಾರ್ಜುನಾಚಾರ್ಯನಿಗೆ ಕೊಟ್ಟಿರುವ ವಿಶೇಷಣಗಳಲ್ಲಿ 'ಕರ್ಣಾಟದೇಶಜನಾಜ್ಞಾನನಿರ್ಹರಣಾರಾಧ್ಯವರ್ಯಃ' ಎಂಬ ವಿಶೇಷಣವು ಕನ್ನಡ ದೇಶದ ಜನರ ಉದ್ಧಾರದ ಬಗೆಗೆ ಇರುವ ಈ ಆಚಾರ್ಯನ ಕಳಕಳಿ ಆದರ್ಶಪ್ರಾಯವಾಗಿದೆ. ಜಗದ್ಧಿತಾರ್ಥವಾಗಿ ಈ ಗ್ರಂಥಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆ ಎಂದು ಹೇಳಿರುವುದು ಈ ಗ್ರಂಥದ ಬಗೆಗೆ ಇರುವ ಆಚಾರ್ಯನ ಅತೀವ ಆಸಕ್ತಿಯನ್ನೂ ತೋರಿಸುತ್ತದೆ. ಈ ಬೃಹದ್ಗ್ರಂಥದ ಪರಿಚಯವನ್ನು ಆಚಾರ್ಯನು ವ್ಯಾಖ್ಯಾನಕಾರನಾದ ಶ್ರೀಧರಾಂಕನಿಗೆ ತಿಳಿಸಿರುವಲ್ಲಿನ "ಪೂರ್ವದಲ್ಲಿ ವೀರಶೈವಾಗ್ರಗಣ್ಯ 'ವಿದ್ಯಾಶಂಕರ' ನಾಮದ ರಾಜಪುತ್ರನ ಅನುಮತಾನುಸಾರವಾಗಿ' ಮಾಹೇಶ್ವರರ

1 ದೇವೇಷು (ಕ.ಪಾಠ.)

ಮನವೆಂಬ ಕನ್ನೈದಿಲೆಯ ವನವಿಕಾಸಕ್ಕೆ ಚಂದ್ರೋದಯ ರೂಪವಾದ 'ವೀರಮಾಹೇಶ್ವರಾಚಾರಸಂಗ್ರಹ'ವನ್ನು ನೀಲಕಂಠನಾಗನಾಥಾಚಾರ್ಯನು ರಚಿಸಿರುವನು. ಆ ಗ್ರಂಥವು ಎಂಟು ಸಾವಿರ ಗ್ರಂಥವನುಳ್ಳುದಾಗಿದೆ. ಈ ಬೃಹದ್ಗ್ರಂಥಕ್ಕೆ ನೀನು ಕನ್ನಡ ವ್ಯಾಖ್ಯಾನವನ್ನು ಬರೆ" ಎಂಬ ಈ ಭಾಗವು ಶಾ|| ಶಕ 1556 (ಕ್ರಿ.ಶ. 1634) ರಲ್ಲಿ ಪ್ರತಿಮಾಡಿರುವ ವ್ಯಾಖ್ಯಾನವಿರುವ 'ಕ' ಸಂಜ್ಞಕವಾದ ಓಲೆಯ ಪ್ರತಿಯಲ್ಲಿಯೂ ಶಾ|| ಶಕ 1583 (ಕ್ರಿ.ಶ. 1661)ರಲ್ಲಿ ಪ್ರತಿಮಾಡಿರುವ ವ್ಯಾಖ್ಯಾನವಿರುವ 'ಚ' ಸಂಜ್ಞಕವಾದ ಓಲೆಯ ಪ್ರತಿಯಲ್ಲಿಯೂ 'ಖ' ಸಂಜ್ಞಕವಾದ (ವ್ಯಾಖ್ಯಾನವಿರುವ) ಓಲೆಯ ಪ್ರತಿಯು ಅಸಮಗ್ರವಾಗಿದ್ದು ತ್ರುಟಿತವಾಗಿ ರಾಜಪುತ್ರನ ಹೆಸರು ಉಕ್ತವಾಗಿರುವ ಭಾಗವು ಲುಪ್ತವಾಗಿ ಉಳಿದ ಭಾಗವು ಅಲ್ಪಸ್ವಲ್ಪ ಅಕ್ಷರಗಳನುಳ್ಳದಾಗಿದೆ. ಅಂತೂ ವ್ಯಾಖ್ಯಾನವಿರುವ ಎಲ್ಲ ಪ್ರತಿಗಳಲ್ಲಿಯೂ ಈ ಅಂಶ ಬಂದಿದೆ.

ಇಲ್ಲಿ "ನೀಲಕಂಠನಾಗನಾಥಾಚಾರ್ಯನು ಓರ್ವ 'ವೀರಶೈವಾಗ್ರಗಣ್ಯನಾದ ವಿದ್ಯಾಶಂಕಂ ನಾಮದ ರಾಜಪುತ್ರನ' ಇಚ್ಛೆಯಿಂದಾಗಿ ಈ ಗ್ರಂಥವನ್ನು ಬರೆದನು" ಎಂಬಂಶ ವ್ಯಾಖ್ಯಾಕಾರನ ಗದ್ಯಭಾಗದಿಂದ ತಿಳಿದುಬರುತ್ತದೆ. ಆದರೆ ಆ ವೀರಶೈವ ರಾಜಪುತ್ರನ ಹೆಸರು 'ವಿದ್ಯಾಶಂಕಂ ನಾಮದ ಎಂದೇ ಎಲ್ಲ ಓಲೆಗಳಲ್ಲಿಯೂ ವ್ಯತ್ಯಾಸವಿಲ್ಲದೆ ಬರೆಯಲ್ಪಟ್ಟದ್ದು 'ವಿದ್ಯಾಶಂಕಂ' ಎಂಬ ಪದ ಅಸ್ಪಷ್ಟಾರ್ಥವುಳ್ಳದಾಗಿದೆ. 'ನಾಮದ' ಎಂಬುದು ಕನ್ನಡ ಪದದಂತಿದೆ.' 'ವಿದ್ಯಾಶಂಕ ನಾಮಕ' ಇಲ್ಲವೇ 'ವಿದ್ಯಾಸಂಕಮ ನಾಯಕ' ಎಂದಿರಬಹುದೇ? ಹೀಗೆ ತಿಳಿಯಲು ಸಂದಿಗ್ಧವಾಗಿದೆ. ಈ ಗ್ರಂಥ ಬರೆಸಿದ ಈ ವೀರಶೈವರಾಜಪುತ್ರನಾರು? ಇವನ ನೈಜ ಹೆಸರೇನಿರಬಹುದು? ಎಂಬುದು ಸಂಶೋಧನಾರ್ಹ ವಿಚಾರವಾಗಿದೆ.

## ಈ ಗ್ರಂಥದ ಬಗ್ಗೆ ಆಂಧ್ರಾನುವಾದಕನಾದ

## ಪರ್ವತ ಮಂತ್ರಿ ಲಿಂಗನಾಮಾತ್ಯನ ಹೇಳಿಕೆ

ತೆನುಗಿನಲ್ಲಿ ಈ ಗ್ರಂಥವನ್ನು ಅನುವಾದ ಮಾಡಿರುವ ಪರ್ವತಮಂತ್ರಿ ಲಿಂಗನಾಮಾತ್ಯನು— × × × × × × × ಊರ್ಧ್ವಲೋಚನುಡು |
ವಿವಿಧವೇದಜ್ಞುಂಡು ವಿಜ್ಞಾನಕರುಡು | ಅವನಿಲಿಂಗಾಕಾರಮೈನ ನಿರ್ಮಲುಡು |
ಸದ್ಗುಣಾಚಾರುಂಡು ಸರ್ವಪೂಜಿತುಡು | ಮದ್ಗುರುಂಡೈನ ಶ್ರೀಮಲ್ಲಿಕಾರ್ಜುನುಡು |
ಮುದಮುನ ಪ್ರತ್ಯಕ್ಷ ಮೂರ್ತಿಯೈ ನಿಲಿಚಿ | ಸದಮಲಾತ್ಮಕ ಯಾಲ
'ಶಂಕ (ಶಂಕ್ಕ) ನೊಂದ್ವಿ (ಪ್ನೆ)ರವು'

ಹರ (ರು) ದಿವ್ಯನಾಮಸಂಸ್ಮರಣ ಮಾತ್ರಮುನ। ಪರಮಾತ್ಮ ಸಾಯುಜ್ಯ ಪದಮು
ಸಿದ್ಧಿಂಚು।
ಮಾನ್ಯೆನ ಸಪ್ತಸಂತಾನಂಬುಲಂದು। ಪೂನಿ ಕಾವ್ಯ [ವ್ಯ ?] ಮು ಶೇಯು
ಪುಣ್ಯಮಗ್ಗಲಮು।
ಸಿದ್ಧಿಂಚು ಗಾವುನ ಕ್ಷಿತಿಬೂರ್ವಮುಂದು। ಶುದ್ಧಾತ್ಮುಡೈನ ಭೂಸುರವರ್ಯುಡಯಿನ।
ಶ್ರೀಗುರುಪ್ರಿಯುಡೈನ 'ಶ್ರೀ ನೀಲಕಂಠು। ನಾಗನಾಥಾಚಾರ್ಯ
ನಾಮಾಂಕುಡೆಲಮಿ' ?।
ಸಕಲಶ್ರುತಿಸ್ಮೃತಿಶಾಸ್ತ್ರ ಪುರಾಣ। ನಿಕರಂಬುಲಂದುನ್ನ ನಿಟಲಾಕ್ಷುಮಹಿಮ।
ಅಧ್ಯಾಯಮುಲುದಿವಿಚಿಯಾದಿ ಸಂಸ್ಕೃತಮು। ಹೃದ್ಯಮ್ಮೈ
ಸಕಲವೇದೋಕ್ತಂಬು ನೊಂದ (?)।
ವೀರಮಾಹೇಶ್ವರಾಚಾರ ಸಂಗ್ರಹಮು। ವೇರ ಬ್ರವರ್ತಿಲ್ಲ
ಚೇರ್ಮಿ (ಚ್ಯೆರ್ಮಿ) ಪುಣ್ಯಲಕು।
ತೆರಗೊಪ್ಪ ವಿಜ್ಞಾನದೀಪಂಬು ಚೇಶೀ। ನರು (ವ ?) ದಾರ
ಚೆಪ್ಪೆಂದು ನಪ್ಪುರಾಣಂಬು (ಬ)।
ಕೃ (ಧೃ ?) ತಿನಾಂಧ್ರಭಾಷನು ಕೃತಿಶೇಯುದೇನಿ। ಅತುಲಿತ
ಸುಜ್ಞಾನಮ(ಮು)ದಿನೀಕುಗಲ(ಲು)ಗು।
ಕಾಮಿಂಚಿನಟ್ಲನಿ (ನ ಲಕ್ಷ್ಮಿನಿ) ಕಾಮ್ಯಂಬುವೆಲ್ಲ। ನಾ
ಮಹೇಶ್ವರುಡಿಚ್ಚುನದಿ ನಿಶ್ಚಯಂಬು।
ಅನುಚು ಶ್ರೀಗುರುನಾಥುಡತ್ಯಂತ ಕರುಣ। ನನುರಾಗಮುನ
ಬ್ರೀತಿ (ಪ್ರೀತಿ) ನಾಜ್ಞುಶೇಯುಟಯು।
ಗುರುನಾಥುನಾಜ್ಞನು ಗುರುನಿ ಸತ್ಕೃಪನು ಗುರುವುನು
ಗುರುವ್ಯೆನ ಗುರುಬ್ರಸ್ತುತಿಂತು।
ನಾದೇವದೇವು ಮಹಾತ್ಮ್ಯಂಬುದೆಲಸಿ। ಸಾಧಿಂಚಿ ವರ್ಣಿಂಪ ಶಕ್ಯಂಬುಗಾಕ।"

ಎಂದು ತನ್ನ ದ್ವಿಪದ ಗ್ರಂಥದ ಅನುವಾದದ ಅವತಾರಿಕೆಯಲ್ಲಿ ತಿಳಿಸಿರುವ ವಿಚಾರಗಳೂ ಕನ್ನಡ ವ್ಯಾಖ್ಯಾನಕಾರನ ಹೇಳಿಕೆಯಂತೆಯೇ ಇದ್ದು ಅಸ್ಪಷ್ಟವಾಗಿಯೇ ಇವೆ. ಇಲ್ಲಿ ಆಂಧ್ರಕವಿಯು ಊರ್ಧ್ವಲೋಚನ ಪಡೆದ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯನೆಂದೂ ಹೇಳಿಕೊಂಡಿರುವನು. ಮದುಗ್ಗುರುಂಡೈನ ಶ್ರೀಮಲ್ಲಿಕಾರ್ಜುನುಡು ಎಂಬುದು ಕನ್ನಡ ವ್ಯಾಖ್ಯಾನಕಾರನು ತಿಳಿಸಿರುವ ಗೊರಗೋಡಿನ ಮಲ್ಲಿಕಾರ್ಜುನನಾಗಿರಬೇಕು. ಹಾಗೆ ಅನುವಾದಕನು ತಿಳಿಸಿಲ್ಲ. ಸಾಕ್ಷಾತ್ ಮಲ್ಲಿಕಾರ್ಜುನ ಪಂಡಿತಾರಾಧ್ಯನ ಶಿಷ್ಯನಾದಲ್ಲಿ 12ನೆಯ ಶತಕದವನಾಗಬೇಕಾಗುತ್ತದೆ ಅನುವಾದಕ. ಕೇವಲ ಗುರುಭಾವನೆಯಿಂದ ಸ್ಮರಿಸಿರುವನೆಂದಿಟ್ಟುಕೊಂಡಲ್ಲಿ ಗೊರಗೋಡಿನ ಮಲ್ಲಿಕಾರ್ಜುನನೆಂದು ಸ್ಪಷ್ಟವಾಗಿ ಹೇಳಿಲ್ಲವಾಗಿ ತೊಡಕಾಗಿರುತ್ತದೆ. ಇಲ್ಲಿಯೂ

ಶಂಕ (ಶಂಕ್ಕ)ನೊಂದ್ವಿ(ದ್ವೆ)ರವು ಎಂಬ ಪದವಿದೆ. ವಿದ್ಯಾಶಂಕನೆಂದೇನೂ ಇಲ್ಲಿ ಹೇಳಿಲ್ಲ. ಹೀಗಾಗಿ ಅನುವಾದಕನಾದ ಪರ್ವತ ಮಂತ್ರಿಲಿಂಗನಾಮಾತ್ಯನ ಹೇಳಿಕೆಯೂ ಸಂದಿಗ್ಧವಾಗಿಯೇ ಇದೆ. 'ಕ್ಷಿತಿಬೂರ್ವಪಂದು' ಇತ್ಯಾದಿಯಾಗಿ ಅನುವಾದ ಮಾಡಿರುವ ಧಾಟಿ ನೋಡಿದರೆ ಕನ್ನಡ ವ್ಯಾಖ್ಯಾನಕಾರನ ಹೇಳಿಕೆಯನ್ನೇ ಅನುಕರಿಸಿ ಚಿತ್ರಿಸಿ ದಂತಿದೆ. ಈ ಕನ್ನಡ ವ್ಯಾಖ್ಯಾನಾನಂತರವೇ ತೆಲುಗಿನಲ್ಲಿ ಅನುವಾದವಾದಂತಿದೆ.

## ನೀಲಕಂಠನಾಗನಾಥಾಚಾರ್ಯನ ಸ್ಥಳ–ಕಾಲಾದಿಗಳ ಸಮೀಕ್ಷೆ

ಈತನು ಗ್ರಂಥಾದಿಯಲ್ಲಿ ಶ್ರೀಗುರುನುತಿಮಾಡುವಾಗ 'ನಮೋ ಮುಳ್ವಾಯಿ ಸೋಮೇಶಗುರವೇ (1-2) ಎಂಬುದಕ್ಕೆ ವ್ಯಾಖ್ಯಾನಕಾರನು 'ಮುಳುವಾಗಿಲ ಸೋಮೇಶ್ವರ ಗುರುರಾಯಂಗೋಸ್ಕರ ನಮಸ್ಕಾರವು' ಎಂದೂ 'ಶ್ರೀಮನ್ಮುಳ್ವಾಯಿ ಸೋಮೇಶಪಾದಾಬ್ಜಾಹಿತಚೇತಸಾ (1-25)' ಎಂಬುದಕ್ಕೆ ಒಪುತ್ತಂವಿದ್ದ ಮುಳು ವಾಗಿಲ ಸೋಮೇಶ್ವರಲಿಂಗದ ಪಾದಕಮಲದಲ್ಲಿ ಇರಿಸಲುಪಟ್ಟ ಚಿತ್ತವನುಳ್ಳಂಥಾ 'ನೀಲಕಂಠನಾಗನಾಥಾರ್ಯಧೀಮತಾ = ನೀಲಕಂಠನಾಗನಾಥಾಚಾರ್ಯನೆಂಬ ವಿದ್ವಾನ್ನುವಿನಿಂದ' ಎಂದೂ ವ್ಯಾಖ್ಯಾನಮಾಡಿರುವದರಿಂದ, ವ್ಯಾಖ್ಯಾನಕಾರನನ್ನು ಅವಲಂಬಿಸಿ ಹೇಳಬೇಕೆಂದರೆ, ಈ ನೀಲಕಂಠನಾಗನಾಥಾಚಾರ್ಯನಿಗೆ ಮುಳವಾಗಿಲ ಲ್ಲಿದ್ದ ಸೋಮೇಶ್ವರನೆಂಬ ಗುರುರಾಯನೊಬ್ಬನಿದ್ದನೆಂದೂ, ನೀಲಕಂಠನಾಗನಾಥಾ ಚಾರ್ಯನು ಮುಳವಾಗಿಲ ಸೋಮೇಶ್ವರಲಿಂಗದ ಅನನ್ಯ ಭಕ್ತನಾಗಿದ್ದನು ಎಂದೂ ತಿಳಿದುಬರುತ್ತದೆ. ಕೋಲಾರಜಿಲ್ಲೆಯ ಮುಳಬಾಗಿಲಿಗೆ ಮುಳವಾಯಿ ಮುಳುವಾಯಿ ಎಂಬ ಹೆಸರುಗಳೂ ಶಾಸನಗಳಲ್ಲಿವೆ. ವೀರ ಕಂಪಣರಾಯಚರಿತದಲ್ಲಿ ಗಂಗಾದೇವಿಯು ಈ ಊರಿಗೆ 'ಕಂಟಕಾನನ'ನೆಂದು ಹೇಳಿರುವಳು. ಇಲ್ಲಿ ಸೋಮೇಶ್ವರ ದೇವಾಲಯವೂ ಇದೆ. ಮೊಟ್ಟಮೊದಲಲ್ಲಿಯೇ ಸೋಮೇಶಗುರುರಾಯನನ್ನು ನುತಿಸಿರುವುದರಿಂದಲೂ 'ಮುಳ್ವಾಯಿ ಸೋಮೇಶ (ಲಿಂಗ) ಪಾದಾಬ್ಜಾಹಿತಚೇತಸಾ' ಎಂದು ತನಗೆ ವಿಶೇಷಣ ವನ್ನು ಕೊಟ್ಟುಕೊಂಡಿರುವುದರಿಂದಲೂ ಬಹುಶಃ ಈ ನೀಲಕಂಠನಾಗನಾಥಾ ಚಾರ್ಯನು ಇದೇ ಮುಳಬಾಗಿಲವನೆಂದು ಊಹಿಸಬಹುದಾಗಿದೆ.

ಕೆರೆಯ ಪದ್ಮರಸರ ಜೊತೆಗೂಡಿದ್ದ ವಿಬುಧರಲ್ಲಿ ಜಗದಾರಾಧ್ಯನಾಗಾರ್ಯ ಹಾಗೂ ನೀಲಕಂಠನಾಗಾರ್ಯ ಅಥವಾ ನೀಲಕಂಠನಾಗನಾಥಾಚಾರ್ಯನೀರ್ವರು ತರುಣವಿಬುಧರಾಗಿದ್ದರೆಂಬ ವಿಚಾರ—

ಉದ್ಭಟ ಕಾವ್ಯವನ್ನು ಬರೆದಿರುವ ಸೋಮರಾಜನು ಕ್ರಿ.ಶ. 1160ರಲ್ಲಿದ್ದ ಶ್ರೀ ಅಲ್ಲಮಪ್ರಭುದೇವರ ಮಹಾಭಕ್ತ. ಬಸವೇಶ್ವರಾದಿಗಳಲ್ಲಿಯೂ ಅತೀವ ಭಕ್ತಿ ಯನ್ನು ತೋರ್ಪಡಿಸಿರುವನು. ತನ್ನ ಇಳಿ ವಯಸ್ಸಿನಲ್ಲಿ ಕಮನೀಯವಾದ ಈ

ಕಾವ್ಯವನ್ನು ಶಾಲಿವಾಹನಶಕ 1144ನೆಯ ಚಿತ್ರಭಾನು ಸಂವತ್ಸರದಲ್ಲಿ ಎಂದರೆ, ಕ್ರಿ.ಶಕ. 1222ರಲ್ಲಿ ಬರೆದು ಅಲ್ಲಮಪ್ರಭುಗರ್ಪಿತವಮಾಡಿ ಮುಗಿಸಿರುವುದಾಗಿ ತಾನೇ ತನ್ನ ಗ್ರಂಥಾಂತ್ಯ ಪದ್ಯ (ಆಶ್ವಾಸ 12-146)ದಲ್ಲಿ ತಿಳಿಸಿರುವನು. ಈ ಕಾವ್ಯವು 1921 ರಲ್ಲಿ ಆರ್. ಶ್ಯಾಮಶಾಸ್ತ್ರಿಗಳಿಂದ ಸಂಪಾದಿತವಾಗಿ ಮೈಸೂರು ಓರಿಯಂಟಲ್ ಲೈಬ್ರರಿ ಯಿಂದ ಪ್ರಕಟವಾಗಿದೆ. ಈ ಗ್ರಂಥದ ಆದಿಮ ಭಾಗದಲ್ಲಿ 'ಪ್ರಮಥಾನೀಕ ಕಥಾರ್ಣ-ವೇಂದು ಹರಿದೇವಾಚಾರ್ಯ (ಹರಿಹರದೇವ), ವೃಷಭಸ್ತವಾಮರಮಹೀಜಾರಾಮನಾದ ಸೋಮ ಎಂದರೆ ಪಾಲ್ಕುರಿಕೆ ಸೋಮನಾಥ, ಮತ್ತು ವಿಮಲಜ್ಞಾನ ಸುದೀಪಿಕಾ-ಸ್ಫುರಿತ ಚೇತಸ್ಸದ್ಮನಾದ ಪದ್ಮ ಎಂದರೆ ಕೆರೆಯ ಪದ್ಮರಸ ಈ ಮೂವರನ್ನು ಬಲ ಗೊಂಡು ಈ ಕಾವ್ಯವನ್ನು ಹೇಳುವುದಾಗಿ (ಆ. 1-9) ತಿಳಿಸಿರುವನು. ಈ ಸೋಮ ರಾಜನು ಬಸವೇಶ್ವರಾದಿ ಶರಣರ ಸಮಕಾಲೀನನಾಗಿ ಶತಾಯುಷಿಯಾಗಿರುವನು. ಇವನಿಂದ ನುತರಾದ ಹರಿದೇವಾಚಾರ್ಯ-ಪಾಲ್ಕುರಿಕೆ ಸೋಮ-ಕೆರೆಯಪದ್ಮರಸರೂ ಸಹ ಬಸವಾದಿ ಶರಣರ ಸಮಕಾಲೀನರಲ್ಲವಿದ್ದರೂ ಅತೀವ ಸಮೀಪಕಾಲದವರಾಗಿ ಕ್ರಿ.ಶ. 1222ರ ಕಾಲಕ್ಕೂ ಮುನ್ನವೇ ಪ್ರಖ್ಯಾತರಾಗಿದ್ದರು ಎಂಬುದು ನಿರ್ವಿವಾದವಾದ ಅಂಶವೆಂದು ಈ ಗ್ರಂಥದಿಂದ ತಿಳಿಯಬಹುದಾಗಿದೆ.

ನರಸಿಂಹಬಲ್ಲಾಳನ (ಕ್ರಿ.ಶ. 1141–1179) ಆಸ್ಥಾನದಲ್ಲಿ ತ್ರಿಭುವನತಾತ ನೆಂಬವನೊಡನೆ ವಾದ ಮಾಡಲು ದೋರಾಂಬುಧಿಗೆ (ದ್ವಾರಸಮುದ್ರ-ಹಳೇಬೀಡು) ಸುತನಾದ ಕುಮಾರಪದ್ಮರಸನೊಂದಿಗೆ ಹೊರಟ ಕೆರೆಯ ಪದ್ಮರಸರೊಂದಿಗೆ ಹೋಗಿದ್ದ ವಿದ್ವಜ್ಜನರ ಹಾಗೂ ಅವರ ಹೇಳಿಕೆಗಳ ಪಟ್ಟಿಯನ್ನು ಕೆರೆಯಪದ್ಮರಸರ ಸುತನಾದ ಕುಮಾರಪದ್ಮರಸನು ತನ್ನ 'ಸಾನಂದ ಚರಿತೆಯ ಕಥಾಗರ್ಭಸಂಧಿ'ಯಲ್ಲಿಯೂ, ಕೆರೆಯ ಪದ್ಮರಸರಿಂದ 8ನೆಯ ತಲೆಮಾರಿನವನಾಗಿ ವಂಶಜನೇ ಆದ ಕವಿಪದ್ಮಣಾಂಕನು (ಕ್ರಿ.ಶ. 1385) ತನ್ನ 'ಪದ್ಮರಾಜಪುರಾಣ'ದಲ್ಲಿಯೂ ಕೊಟ್ಟಿರುವರು. ಈ ಎರಡು ಗ್ರಂಥ ಗಳಲ್ಲಿಯೂ ವಿದ್ವಜ್ಜನರ ಕ್ರಮಾಂಕವು ಸಮಾನವಾಗಿಯೇ ಇದೆ. ಸಾನಂದ ಚರಿತೆ ಯಲ್ಲಿ 'ಜಗದಾರಾಧ್ಯ ನಾಗಾರ್ಯನು' ಪಟ್ಟಿಯಲ್ಲಿ ಬಂದಿಲ್ಲವಾದರೂ ಐದನೆಯ ವಿಶ್ವಣ್ಣಗಳ—

ಸಾನಂದಚರಿತಂ ಶೈವಾದ್ವೈತಂ ಧೂತಮತಾಂತರಂ ।  
ಶಿವಸಾಕಾರಸಿದ್ಧಾಂತಂ ಪದ್ಮರಾಜೋ ವ್ಯಚೀಕರತ್ (9)  
ಹರಸಾಕಾರಸಿದ್ಧಾಂತಂ ಸಾನಂದಚರಿತಂ ಸತಾಮ್ ।  
ಕಥಯನ್ನಾಗಿದೇವಾರ್ಯಃ ಶಿವಾಯ ಜಯತಾದಿಹ (10)  
ಶ್ರೀಮದ್ದೇಶಿಕಪದ್ಮರಾಜಚರಿತಂ ಸಾಕಾರ ಸಿದ್ಧಾಂತಕಂ ।  
ಶೈವಾದ್ವೈತಮಶೇಷದುರ್ಮತಕುಲಧ್ವಾಂತಪ್ರಭಾವಲ್ಲಭಂ ।

ಸಾನಂದಸ್ಯ ಚರಿತ್ರಮತ್ರ ಜಗತಿ ಪ್ರಖ್ಯಾಪಯಂತಂ ಮುದಾ |
'ನಾಗಾರ್ಯಂ' ಸಮವತ್ವಶೇಷ 'ಜಗದಾರಾಧ್ಯಂ' ಭವಾನೀಧವಃ (11)

ಎಂಬ ಹೇಳಿಕೆಯಲ್ಲಿಯೂ

ಎಂಟನೆಯವರಾದ ಹಂಪೆಯ ರಾಮಣ್ಣಗಳ—

'ಪರವಾದಿಧ್ವಾಂತಸೂರ್ಯಂ ಕೆರೆಯ ಪದುಮರಾಜಂ ಸ್ವಗುರ್ವಾಜ್ಞೆಯಿಂ |
ದೀಶ್ವರ ಭಕ್ತರ್ ಮೆಚ್ಚಿಯೊಹಾ ವಿರಚಿಸಿದ ಶಿವಾದ್ವೈತ ಸಾಕಾರ ಸಿದ್ಧಾಂ |
ತರಸಂ ಸಾನಂದಚಾರಿತ್ರಮನೆಸಸರಿಸುತ್ತಿರ್ಪುದೀಕ್ಷೋಣಿಗೆಂದುಂ |
ಗುರುಭಕ್ತಂ ಕಾರಣಾತ್ಮಂ ವರಗುಣಿ 'ಜಗದಾರಾಧ್ಯನಾ ನಾಗಿದೇವನ್' (16)

ಎಂಬ ಹೇಳಿಕೆಯಲ್ಲಿಯೂ, ಹೀಗೆಯೇ ಸಾನಂದಚರಿತೆ-ಪದ್ಮರಾಜಪುರಾಣಗಳಲ್ಲಿಯೂ ಈ ಜಗದಾರಾಧ್ಯನಾಗಿದೇವನ ಹೆಸರು ಬಂದಿದ್ದು, ಉಭಯ ಗ್ರಂಥಗಳಲ್ಲಿಯೂ ಕೆರೆಯಪದ್ಮರಸರೊಡನಿದ್ದ 12 ಮಂದಿ ಶೈವ ವಿದ್ವಾಂಸರ ಬಗೆಗೆ ಏಕಾಭಿಪ್ರಾಯವಿದೆ. ಪದ್ಮರಾಜಪುರಾಣದಲ್ಲಿ 'ಜಗದಾರಾಧ್ಯನಾಗಿದೇವೋತ್ತಮ' ಎಂದು ಹೇಳಿದೆ. ಗುರುಭಕ್ತನೂ ಕಾರಣಾತ್ಮನೂ ವರಗುಣಿಯೂ ಆದ ಈತನು ಸಾನಂದಚರಿತೆಯನ್ನು ಸಜ್ಜನರಲ್ಲಿ ಪ್ರಚಾರಮಾಡುತ್ತಾ ಪ್ರಖ್ಯಾತಿಗೊಳಿಸುತ್ತಿದ್ದನು ಎಂಬುದರಿಂದ ಇವನು ಕೆರೆಯ ಪದ್ಮರಸರ ಜೊತೆಗೂಡಿ ಇದ್ದ ತರುಣವಿಬುಧನೆಂದು ತಿಳಿಯುತ್ತದೆ.

ಒಟ್ಟಾಗಿ, ಸಾನಂದ ಚರಿತೆಯಲ್ಲಿ ಜಗದಾರಾಧ್ಯವಿಶೇಷಣವಿಲ್ಲದೇ ಕೇವಲ 'ನಾಗಿದೇವಾರ್ಯ' 'ಜಗದಾರಾಧ್ಯನಾಗಾರ್ಯ' 'ಜಗದಾರಾಧ್ಯನಾಗಿದೇವ' ಪದ್ಮರಾಜಪುರಾಣದಲ್ಲಿ 'ಜಗದಾರಾಧ್ಯನಾಗಿದೇವೋತ್ತಮ' ವೀರಮಾಹೇಶ್ವರಾಚಾರಸಂಗ್ರಹದಲ್ಲಿ 'ಜಗದಾರಾಧ್ಯನಾಗೇಶಗುರು' ಎಂಬುದಾಗಿ ಅಲ್ಪಸ್ವಲ್ಪ ವ್ಯತ್ಯಾಸದಿಂದ ಪ್ರಯೋಗಿಸಿರುವ ಹೆಸರುಗಳೆಲ್ಲಾ, ಹೇಗೆ ಶ್ರೀ ಬಸವಣ್ಣನವರೊಬ್ಬರಿಗೇ 'ಬಸವ-ಬಸವಣ್ಣ-ಬಸವಿದೇವ-ಬಸವೇಶ್ವರ-ಬಸವಲಿಂಗ' ಎಂಬ ಹೆಸರುಗಳು ಬಂದಿರುವುವೋ ಹಾಗೆಯೇ ಈ ಹೆಸರುಗಳೂ ಜಗದಾರಾಧ್ಯ ನಾಗಿದೇವನೊಬ್ಬನಿಗೇ ಸಂಬಂಧಿಸಿಕೊಂಡು ಬಂದಿವೆ.

ವೀರಮಾಹೇಶ್ವರಾಚಾರಸಂಗ್ರಹಕಾರನಾದ ನೀಲಕಂಠನಾಗನಾಥಾಚಾರ್ಯನು ತನ್ನ ಗ್ರಂಥದ ಆದಿಮಭಾಗದಲ್ಲಿ 'ವ್ಯಾಕರೋತ್' ಯಃ 'ಶಿವಜ್ಞಾನಸಮುಚ್ಚಯಮ-ಕಲ್ಮಷಂ | ಜಗದಾರಾಧ್ಯನಾಗೇಶಗುರುಂ ತಂ ಸತತಂ ಭಜೇ' (ಅ. 1-19) ಎಂದು ನುತಿಸಿರುವ 'ಜಗದಾರಾಧ್ಯವಿಶೇಷಣಯುಕ್ತನಾದ ನಾಗೇಶಗುರುವೂ ಮೇಲ್ಕಂಡ ಜಗದಾರಾಧ್ಯ ನಾಗಿದೇವನೂ ಭಿನ್ನವ್ಯಕ್ತಿಗಳಾಗದೇ ಒಬ್ಬನೇ ಆಗಿದ್ದಿರಬೇಕು. ಈ ಜಗದಾರಾಧ್ಯನಾಗೇಶಗುರುವು 'ಶಿವಜ್ಞಾನಸಮುಚ್ಚಯಃ' ಎಂಬ ಗ್ರಂಥವನ್ನು

ರಚಿಸಿದನು ಅಥವಾ ಆ ಗ್ರಂಥವನ್ನು ವ್ಯಾಖ್ಯಾನಿಸಿದನು ಎಂಬುದೊಂದು ಇಲ್ಲಿನ ಹೊಸ ವಿಶೇಷಾಂಶ. ವ್ಯಾಖ್ಯಾನಕಾರನು ತನ್ನ ಗ್ರಂಥಾಂತ್ಯದ ಹೇಳಿಕೆಯಲ್ಲಿ 'ಮಯಾ ಮಂಜುಳಗಿರಾ ವ್ಯಾಕ್ರಿಯತೇ' ಎಂಬಲ್ಲಿ ವ್ಯಾಖ್ಯಾನ ಮಾಡಲ್ಪಡುತ್ತಿದೆ ಎಂದು ಹೇಳಿರುವುದರಿಂದ ಈ ಸಂದೇಹ ಉಂಟಾಗಿದೆ.

## ನೀಲಕಂಠನಾಗನಾಥಾಚಾರ್ಯನೂ ಈ ಜಗದಾರಾಧ್ಯ ನಾಗಿದೇವನಂತೆ ಕೆರೆಯ ಪದ್ಮರಸರ ಜೊತೆಗಿದ್ದ ತರುಣವಿಬುಧನೆಂಬ ವಿಚಾರ

ಪದ್ಮರಾಜಪುರಾಣದಲ್ಲಿ ಮಾತ್ರ (ಸಂ. 9–21) ಕೆರೆಯ ಪದ್ಮರಸರ ವಾದ ಕಾಲದಲ್ಲಿ ಜೊತೆಗಿದ್ದ ವಿದ್ವಾಂಸರ ಪಟ್ಟಿಯಲ್ಲಿ 'ಉದ್ಧತಶಾಸ್ತ್ರಿನಿಕರಭಂಜನ-ನಾಗನಾಥಾರ್ಯ' ಎಂಬ ಹೊಸ ಹೆಸರೊಂದು ಬಂದಿದೆ. ಸಾನಂಪಚರಿತೆಯ ಪಟ್ಟಿಯಲ್ಲಿ ಬಂದಿರುವುದಿಲ್ಲ. ಈ ಪುರಾಣಕಾರನಾದ ಪದ್ಮಣಾಂಕನಿಗೆ (ಕ್ರಿ.ಶ.ಸು. 1385) ನೀಲಕಂಠನಾಗನಾಥಾಚಾರ್ಯನ ಮತ್ತು ಆತನ ಗ್ರಂಥವಾದ ವೀರಮಾಹೇ-ಶ್ವರಾಚಾರಸಂಗ್ರಹದ ಪೂರ್ಣ ಮಾಹಿತಿ ಗೊತ್ತಿದೆ. ಈ ತನ್ನ ಪುರಾಣದಲ್ಲಿ ನೀಲಕಂಠ ನಾಗನಾಥಾಚಾರ್ಯನು ನುತಿಸಿರುವ ಕೆಲ ಗ್ರಂಥಕಾರರ ಹೆಸರುಗಳನ್ನೂ ಕೂಡಿಸಿ-ಕೊಂಡೇ

" ವೀರಮಾಹೇಶ್ವರಾಚಾರಸಂಗ್ರಹಶಾಸ್ತ್ರ।
ಕಾರನೆನಿಸಿದ 'ನೀಲಕಂಠನಾಗಾರ್ಯಂಗೆ। '
ಸಾರತರ ಬಸವರಾಜೀಯಮಂ ನೆಗಳ್ದ ಪಾಲ್ಕುರಿಕೆ ಸೋಮೇಶ್ವರಂಗೆ॥

ಚಾರುಸಾರೋದ್ಧಾರಮಂ ಪಡೆದ ಲಕ್ಷ್ಮೀಧ।
ರಾರಾಧ್ಯಪತಿ ಗುರುಶಿವಜ್ಞಾನದೀಪಿಕೆಯ।
ನೋರಂತೆ ರಚಿಸಿದನುಪಮ ಮಲ್ಲಿಕಾರ್ಜುನಾಚಾರ್ಯಂಗೆ ವಂದಿಸುವೆನು॥

(ಪ. ಪು. ಸಂ. 1-12) ಎಂಬ ಪದ್ಯವನ್ನು ರಚಿಸಿ ನುತಿಸಿರುವನು. ಇಲ್ಲಿಯೂ 'ನೀಲಕಂಠನಾಗನಾಥಾಚಾರ್ಯನ' ಗ್ರಂಥೋಲ್ಲೇಖಮಾಡುತ್ತಲೂ ಹೆಸರನ್ನು ಸ್ವಲ್ಪ ವ್ಯತ್ಯಾಸದಿಂದ 'ನೀಲಕಂಠನಾಗಾರ್ಯ' ಎಂದು ಸಂಕ್ಷಿಪ್ತವಾಗಿ ಪ್ರಯೋಗಿಸಿರುವನು. ನೀಲಕಂಠನಾಗನಾಥಾಚಾರ್ಯನೂ ಸಹ ತನ್ನ ವೀರಮಾಹೇಶ್ವರಾಚಾರ-ಸಂಗ್ರಹದ ಅ. 1–25ರಲ್ಲಿ ತನ್ನ ಹೆಸರನ್ನು 'ನೀಲಕಂಠನಾಗನಾಥಾಚಾರ್ಯ'ನೆಂದೂ ಹೇಳಿಕೊಂಡಿರುವನು. ಕೆರೆಯ ಪದ್ಮರಸರೊಡಗೂಡಿ ವಾದಕಾಲಕ್ಕೆ ಹೋಗಿದ್ದ ವಿಬುಧರಲ್ಲಿ 'ಉದ್ಧತಶಾಸ್ತ್ರಿನಿಕರಭಂಜನ ನಾಗನಾಥಾರ್ಯ'ನೂ ಒಬ್ಬ ಎಂದು

(ಸಂ. 9-21) ಕೆರೆಯಪದ್ಮರಸರ ವಂಶಜನಾಗಿ ಕೆರೆಯಪದ್ಮರಸರಿಂದ 8ನೆಯ ತಲೆಯವನಾಗಿರುವ ಕವಿಪದ್ಮಣಾಂಕನು ಉಲ್ಲೇಖಿಸಿರುವ 'ನೀಲಕಂಠನಾಗಾರ್ಯ'ನೆಂಬ ಈ ಹೆಸರು ಈ ವೀರಮಾಹೇಶ್ವರಾಚಾರ ಸಂಗ್ರಹಕಾರನಾದ 'ನೀಲಕಂಠನಾಗನಾಥಾಚಾರ್ಯನ' ಸಂಕ್ಷಿಪ್ತನಾಮವೆಂದೇ ಇಟ್ಟುಕೊಂಡಲ್ಲಿ ಈ ವೀರಮಾಹೇಶ್ವರಾಚಾರಸಂಗ್ರಹಕಾರನಾದ ನೀಲಕಂಠನಾಗನಾಥಾಚಾರ್ಯನೂ, ಕೆರೆಯಪದ್ಮರಸರಕಾಲದ ತರುಣವಿಬುಧನೆಂದು ವಿದಿತವಾಗುತ್ತದೆ. ತನ್ನ ವೀರಮಾಹೇಶ್ವರಾಚಾರಸಂಗ್ರಹದಲ್ಲಿ ಕೆರೆಯಪದ್ಮರಸ-ಹರಿಹರ-ಪಾಲ್ಕುರಿಕೆ ಸೋಮನಾಥರನ್ನು ತಾನೂ ಹೆಸರಿಸಿ ನಮಿಸಿರುವುದರಿಂದ ಇವರ ಸಮಕಾಲೀನ ತರುಣವಿಬುಧನಾಗಿ ಕ್ರಿ.ಶ. 12ನೆಯ ಶತಮಾನದ ಉತ್ತರಾರ್ಧದಿಂದ 13ನೆಯ ಶತಮಾನದ ಪೂರ್ವಾರ್ಧಕಾಲದವನೆಂದು ಇಟ್ಟುಕೊಳ್ಳಬಹುದಾಗಿದೆ.

## ನೀಲಕಂಠನಾಗನಾಥಾಚಾರ್ಯನು ತನ್ನ ಗ್ರಂಥದ ಆದಿಮಭಾಗದಲ್ಲಿ ಉಲ್ಲೇಖಿಸಿರುವ ಗ್ರಂಥಕರ್ತೃಗಳ ಮತ್ತು ಗ್ರಂಥಗಳ ವಿಚಾರ

ಈತನು ಉಲ್ಲೇಖಿಸಿರುವ ಗ್ರಂಥಗಳಲ್ಲಿ ಮಲ್ಲಪಾರ್ಯಗುರುವಿನ ಶಿವಜ್ಞಾನದೀಪಿಕಾ, ಲಕ್ಷ್ಮೀದೇವ ಗುರುವಿನ ಸಾರೋದ್ಧಾರಃ, ಜಗದಾರಾಧ್ಯ ನಾಗೇಶ ಗುರುವಿನ ಶಿವಜ್ಞಾನಸಮುಚ್ಚಯಃ ಎಂಬ ಗ್ರಂಥಗಳು ಸಿಕ್ಕಿರುವುದಿಲ್ಲ. ಪಾಲ್ಕುರಿಕೆ ಸೋಮನಾಥನ ಬಸವರಾಜೀಯಮ್ (ಸೋಮನಾಥಭಾಷ್ಯಂ), ಜ್ಯೋತಿರ್ನಾಥನ ಶೈವರತ್ನಾಕರಃ, ದೇಶಭಾಷೆಯಲ್ಲಿ ಬರೆದಿರುವ ಹಂಪೆಯ ಹರೀಶ್ವರನ ಪುರಾತನರ ರಗಳೆಗಳು ಉಪಲಬ್ಧಗಳಾಗಿವೆ.

## ಸಂಸ್ಕೃತಸಾನಂದ ಚರಿತ ವಿಚಾರ

ಸಾನಂದಚರಿತಂ ನಾಮ ಗ್ರಂಥಂ ಚಕ್ರೇತಿಯತ್ನತಃ ।
ಯಸ್ತಸ್ಮೈ ಪದ್ಮರಾಜಾಯ ನಮೋ ದುರ್ವಾದದಾಹಿನೇ (೧-೧೬)

ಎಂಬುದಾಗಿ ಸಂಸ್ಕೃತ ಗ್ರಂಥಗಳ ಸಾಲಿನಲ್ಲಿ ತಿಳಿಸಿರುವ ಪದ್ಮರಾಜವಿರಚಿತವಾದ ಸಾನಂದಚರಿತಮ್ ಎಂಬುದು 'ಕೆರೆಯ ಪದ್ಮರಾಜ' ಎಂಬ ವಿಶೇಷಣದಿಂದ ಕೂಡಿದ ಪೂರ್ಣನಾಮ ಈ ನುತಿಯಲ್ಲಿಲ್ಲದುದರಿಂದಲೂ, ಕೆರೆಯ ಪದ್ಮರಸರ ಮಗನಾದ ಕುಮಾರ ಪದ್ಮರಸನಿಂದ ರಚಿತವಾಗಿ ಮುದ್ರಿತವಾಗಿರುವ ಕನ್ನಡ ಸಾನಂದ ಚರಿತೆಯಲ್ಲಿ

ಪಿರಿದುಮಾರುಂ ಮುನ್ನ ।
ವಿರಚಿಸಿದರಿಲ್ಲೆಂದು ।

ಧರಣಿಯೊಳೊಳುಗನ್ನಡದಿ ಪಸರಿಸೆಂದು ||
ಗುರುರೂಪವಿಶ್ವಪತಿ |
ಕರುಣಿಸಿದ ತೆರದಿ ನಾಂ |
ವರ ಪುರಾಣಾರ್ಥಮಂ ಕನ್ನಡಿಸಿದೆಂ || (ಸಾ. ಚ. ಸಂಧಿ. 2-3);

ಹರಚತುರಾನನ ಪರಮ |
ವಿರಚಿತ ಶ್ಲೋಕಬಂ |
ಧುರ ದೇವಭಾಷೆಯಂ ಕನ್ನಡಿಸಿದೆಂ ||
ಗುರು ಕೆರೆಯ ಪದ್ಮರಸ |
ವರಸೂನು ಪದುಮಿಗಂ |
ಧರೆಯೊಳು ಸ್ತ್ರೀಬಾಲಸಾಧ್ಯವಾಗೆ || (ಸಾ. ಚ. 1-10),

ಇಂದುಜೂಟನ ಕಂದ |
ನಿಂದೊರೆದ ಶ್ರೀ ಮಹಾ |
ಸ್ಕಾಂದದಾಖ್ಯಾನಂಗಳಿಗೆ ತಲೆಯಿದೆ ||
ಯೆಂದು ಕೃಪೆಯಿಂ ಪೇಳ್ದನಂದೊಲಿದು ಶೈಲಾದಿ |
ಯಂದಾ ಸನತ್ಕುಮಾರಂಗೆ ತಾನೆ || (ಸಾ. ಚ. 1-31)

ಎಂದೂ ಮತ್ತೆ ಪ್ರತಿಸಂಧಿಯ ಅಂತ್ಯದಲ್ಲಿಯೂ 'ಶ್ರೀನಂದಿನಾಥೇಶನಿಗದಿತ'ವೆಂದೂ ಹೇಳಿರುವನು. ತನ್ನ ತಂದೆಯಾದ ಕೆರೆಯ ಪದ್ಮರಸರ ಸಂಸ್ಕೃತ ಕೃತಿಯೊಂದು ಇದ್ದಿತೆಂದೂ ಅದರ ಅನುವಾದವೇ ಇದೆಂದೂ ಎಲ್ಲಿಯೂ ಹೇಳಿಕೊಂಡಿಲ್ಲ. ಅಷ್ಟೇ ಅಲ್ಲ, ಸೂಚನಾಮಾತ್ರದಿಂದಲೂ ತಿಳಿಸಿರುವುದಿಲ್ಲ. ಇದೇ ಮಗನ ಸಾನಂದಚರಿತೆಯಲ್ಲಿ ಸಂಧಿ 9-53ರಲ್ಲಿ ಈ ಕನ್ನಡ ಸಾನಂದ ಚರಿತೆ ಮುಗಿವ ಮುನ್ನವೇ ಕೆರೆಯ ಪದ್ಮರಸರು ಲಿಂಗೈಕ್ಯರಾಗಿ ಕೈಲಾಸ ಸೇರಿದ್ದರು ಎಂದೂ ಮಗನೇ ತಿಳಿಸಿರುವನು. ಈ ಕನ್ನಡ ಕೃತಿಗೆ—ವೇದಾಗಮ ಪುರಾಣಗಳಿಂದ ಕೆರೆಯ ಪದ್ಮರಸರು ಅತಿಪ್ರಯತ್ನದಿಂದ ಸುಮಾರು 800ಕ್ಕೂ ಮೇಲ್ಪಟ್ಟು ಶಿವಸಿದ್ಧಾಂತ ಸ್ಥಾಪನೆಗನುಕೂಲವಾಗುವಂತಹ ಪ್ರಮಾಣಗಳನ್ನೊದಗಿಸಿ ಸ್ತ್ರೀ-ಬಾಲ ಸಾಧ್ಯವಾಗುವ ಹಾಗೆ ಸ್ಕಾಂದಪುರಾಣದಲ್ಲಿನ ಸಾನಂದ ಚರಿತೆಯನ್ನು ಬರೆದು ಅದರಲ್ಲಿ ತಂದೆಯ ಗಳಿಕೆಗಳಾದ ದೃಷ್ಟಿಕೆಗಳನ್ನು ಧಾರಾಳವಾಗಿ ಬಳಸಿಕೊಂಡಿರುವನು. ಇಂತಹ ಪ್ರಮಾಣಗಳ ಗಣಿಯೇ ಇವರಲ್ಲಿತ್ತು. ಆದ್ದರಿಂದಲೇ ವಾದದಲ್ಲಿ ಜಯಗಳಿಸಿದರು. ಮಗನಿಗೂ ಈ ಪ್ರಮಾಣಗಳನ್ನು ನೀನು ಸಾನಂದಚರಿತೆಯಲ್ಲಿ ಬಳಸಿಕೋ ಎಂದು ರೂಪ-ರೇಖೆಗಳನ್ನು ಹೇಳಿದ್ದ ವಿಚಾರಗಳೂ ಅವರ ಜೊತೆಗಿದ್ದ ವಿಬುಧರಿಗೂ ಗೊತ್ತಿದ್ದ ವಿಚಾರ. ಆದ್ದರಿಂದಲೇ 'ಮಗನಿಂದ ಸಾನಂದಚರಿತೆ ಮಾಡಿಸಲು ಸಿದ್ಧತೆಗಳನ್ನೇರ್ಪಡಿಸಿಕೊಂಡಿದ್ದರಿಂದ — ವಿಬುಧರು ಸಾಕ್ಷಾತ್—ಕೆರೆಯ ಪದ್ಮರಸರೇ ಈ ಪ್ರಮಾಣಗಳನ್ನು ಬಳಸಿಕೊಂಡು ಸಂಸ್ಕೃತ

ಸಾನಂದಚರಿತೆಯನ್ನು ಬರೆದಿರುವರು ಎಂಬ ಭ್ರಮೆಗೆ ಬಿದ್ದು, ಸಾನಂದಚರಿತೆಯ ನಿರ್ಮಾಣಕ್ಕೂ ಮುನ್ನವೇ ವಾದ ಕಾಲದಲ್ಲಿ ಕೊಟ್ಟಿರುವ ವಿಬುಧರ ಹೇಳಿಕೆಗಳೂ ಅಸ್ಪಷ್ಟಗಳಾಗಿಯೇ ಇವೆ. ಸಂಸ್ಕೃತ ಸಾನಂದಚರಿತೆಯನ್ನು ತನ್ನ ತಂದೆಯೇ ಬರೆದುದಾಗಿದ್ದಲ್ಲಿ ಮಗನಾದ ಕುಮಾರ ಪದ್ಮರಸನು ಸ್ಪಷ್ಟವಾಗಿ ಭಕ್ತಿಪೂರ್ವಕವಾಗಿ ಈ ತನ್ನ ಕೃತಿಯಲ್ಲಿ ಹೇಳಿಕೊಳ್ಳುತ್ತಿರಲಿಲ್ಲವೇ? ಅಥವಾ ತಾವೂ ಸಂಸ್ಕೃತದಲ್ಲಿ ರಚಿಸಬೇಕೆಂದಿರುವಲ್ಲಿ ಲಿಂಗೈಕ್ಯರಾಗಿರಬೇಕು.

ಈ ಕೆರೆಯ ಪದ್ಮರಸರ ವಂಶಜನೇ ಆಗಿ ಕೆರೆಯ ಪದ್ಮರಸರಿಂದ ಎಂಟನೆಯ ತಲೆಮಾರಿನವನಾದ ಕವಿ ಪದ್ಮಣಾಂಕನು ಈ ಬಗೆಗೆ ನೇರವಾಗಿ ತನ್ನ ಪದ್ಮರಾಜಪುರಾಣದಲ್ಲಿ ಹೀಗೆ ತಿಳಿಸುತ್ತಾನೆ—

ಬಾಪು ದೇಶಿಕಶಿರೋರತ್ನ ಧರೆಯಂ ಪೊರೆಯ ।
ಲೌಪಚಾರಿಕ ವಿಗ್ರಹಂದಾಳ್ದು ಬಂದ ಗುರು ।
ರೂಪ ವಿಶ್ವೇಶನಲ್ಲದೆ ಪೆರನೆ ನಿನಗಿದರಿದೇಯೆಂದು ಭಕ್ತರುಲಿಯೆ ॥
ಓಪ ಶಿಷ್ಯನ ಬೋಧಿಸಿದ ರೀತಿಯಿಂದ ರಘು ।
ಟಾಪವದ್ಧತಿಯೊಳುರೆ ಸಸಾಕ್ಷಿಕಂ ವೀರಶೈ ।
ವೋಪಕಾರಾರ್ಥವಿಂಪವುರ 'ದೀಕ್ಷಾಬೋಧ'ವೆಂಬ ಕೃತಿಯಂ ವಿರಚಿಸಿ ॥
(ಪ. ಪು. ಸಂ. 12-55);

ಬಳಿಕ ಸಮಯಸ್ಥಾಪನಾರ್ಥಂ ಶ್ರುತಿ ಸ್ಮೃತಿ ವಿ ।
ಮಲ ಪುರಾಣಾಗಮೋಪನಿಷತ್ಪ್ರಭೃತಿಶಾಸ್ತ್ರ ।
ಕುಳದ ಸಾರಂಡೆಗೆದು ದೃಷ್ಟಕೆ ಬರೆದು. ಸರ್ವರರಿಯೆ ಕರ್ಣಾಟವಾಗಿ ॥
ಅಲಘು ವರ್ಣಕರೀತಿಯಿಂ ರಸಂ ಮುಸುಕಿಯು ।
ಜ್ಜ್ವಳಿಪಂತೆ 'ಸಾನಂದಚರಿತಾಖ್ಯಶಾಸ್ತ್ರವು'ನ ।
ತುಳ ಗುರುವರಂ ನಿಜಾತ್ಮಜನಿಸೊರೆಯಿಸುತೆ ಶಿವಸುಖದೊಳಿಂತೊಪ್ಪುತಿರ್ದಂ ॥
(ಪ ಪು. ಸಂ. 12-56)

ಎಂದು ಈ ವಂಶಜರು ಕೊಟ್ಟಿರುವ ಸ್ಪಷ್ಟ ವಿವರಣೆಗಳಿಂದ ಕೆರೆಯಪದ್ಮರಸರು ಸಂಸ್ಕೃತ ಸಾನಂದಚರಿತೆಯನ್ನು ಬರೆದಿರುವರು ಎಂಬ ಭ್ರಮೆಯನ್ನು ಸ್ಪಷ್ಟವಾಗಿ ಹೋಗಲಾಡಿಸಿರುವರು. ದೀಕ್ಷಾಬೋಧೆಯನ್ನು ಉಲ್ಲೇಖಿಸಿದವನು ಸಂಸ್ಕೃತ ಸಾನಂದಚರಿತೆಯಿದ್ದುದೇ ಆದರೆ ಅದನ್ನೂ ಇಲ್ಲಿ ಉಲ್ಲೇಖಿಸುತ್ತಿರಲಿಲ್ಲವೇ? ಅಥವಾ ಕುಮಾರಪದ್ಮರಸನ ಕನ್ನಡ ಸಾನಂದ ಚರಿತೆಯನ್ನೇ ಸಮಕಾಲದ ತರುಣ ವಿಬುಧನಾದ ನೀಲಕಂಠನಾಗನಾಥಾಚಾರ್ಯನು ಉಲ್ಲೇಖಿಸಿರಬಹುದು. 'ಕೆರೆಯ (ತಟಾಕ)' ಎಂಬ ವಿಶೇಷಣ ಕೊಡದೆ ಕೇವಲ 'ಪದ್ಮರಾಜಾರ್ಯ' ಎಂದೇ ನುತಿಸಿರು

ವನು. ಅಲ್ಲದೆ ಶಿವಧರ್ಮೋತ್ತರದಲ್ಲಿನ ಧರ್ಮಾಧರ್ಮಭೇದ-ನರಕಗಳ ವರ್ಣನೆ ಪಿಂಡೋತ್ಪತ್ತಿ—ಸಂಸಾರ ಹೇಯತ್ವ ಮತ್ತು ಸ್ಕಾಂದಪುರಾಣದ ಸಾನಂದಚರಿತೆ ಇವುಗಳು ಎರಡು ಗ್ರಂಥಗಳಲ್ಲಿಯೂ ಆದಿಮ ಭಾಗದಲ್ಲಿಯೇ ಸಂಕ್ಷೇಪ-ವಿಸ್ತಾರ ಗಳಿಂದ ಮೂಡಿಬಂದಿವೆಯಾಗಿ ಸುಲಭವಾಗಿ ತಳ್ಳಿಹಾಕುವಂತೆಯೂ ಇಲ್ಲ. ವ್ಯತ್ಯಾಸ ಭಾಷೆ ಮಾತ್ರ. ಅಲ್ಲಿ ಕನ್ನಡ, ಇಲ್ಲಿ ಸಂಸ್ಕೃತ, ಇಷ್ಟೆ. ಸ್ಪಷ್ಟವಾಗಿ ಹರೀಶ್ವರನ ಬಗೆಗೆ ಹೇಳಿದಂತೆ ಇಲ್ಲಿ 'ದೇಶಭಾಷಯಾ' ಎಂದು ಹೇಳಿಲ್ಲವೆಂಬು ದೊಂದೇ ಭ್ರಮೆಗೆ ಕಾರಣವಾಗಿದೆ. ಸಂಸ್ಕೃತ ಸಾನಂದಚರಿತೆಯು ಉಲ್ಲೇಖ ಮಾತ್ರವಾಗಿಯಾದರೂ ವೀರಶೈವ ಸಾಹಿತ್ಯದಲ್ಲಿ ಈ ವರೆಗೆ ಕಾಣಬಂದಿಲ್ಲ. ಇದು ಲಭ್ಯವಾದಲ್ಲಿ ಪರಮಭಾಗ್ಯವೆನ್ನಬಹುದಾಗಿದೆ.

## ಜ್ಯೋತಿರ್ನಾಥನ ಶೈವರತ್ನಾಕರ ಗ್ರಂಥ ವಿಚಾರ

ಜ್ಯೋತಿರ್ನಾಥನ ಶೈವರತ್ನಾಕರಃ ಎಂಬ ಗ್ರಂಥವು ಸೊಲ್ಲಾಪುರದಲ್ಲಿ ವಾರ ದವರಿಂದ ಮರಾಠಿ ವ್ಯಾಖ್ಯಾನದೊಂದಿಗೆ 1909ರಲ್ಲಿ ಮುದ್ರಿತವಾಗಿದೆ. ಈ ಗ್ರಂಥವು ಏಕೋತ್ತರಶತಸ್ಥಲೀ ಗ್ರಂಥ ರಚಿಸಿರುವ ಜಕ್ಕಣಾರ್ಯ ಮುಂತಾದವರಿಂದ ಉಲ್ಲೇಖಿತವಾಗಿದ್ದು ವೀರಶೈವರ ಪ್ರಾಚೀನ ಗ್ರಂಥವಾಗಿದೆ. ಪಾಲ್ಕುರಿಕೆ ಸೋಮನಾಥನ ಬಸವರಾಜೀಯದ ಪೀಠಿಕಾ ಭಾಗವೂ ಶೈವರತ್ನಾಕರದ ಪೀಠಿಕಾ ಭಾಗವೂ ಪರಸ್ಪರ ಹೋಲುತ್ತದೆ. ನಿಜಗುಣ ಶಿವಯೋಗಿಯ ವಿವೇಕ ಚಿಂತಾ ಮಣಿಯ ಮೇಲೂ ಈ ಗ್ರಂಥದ ಪ್ರಭಾವ ಬಿದ್ದಿದೆ. ಜ್ಯೋತಿರ್ನಾಥನು ಸಪ್ತ ವಿಧಶೈವಕ್ಕೂ ಅಧಿಕವಾಗಿ ವೀರಶೈವಕ್ಕೂ ಸಂಬಂಧಿಸಿದಂತೆ ಸದಾಚಾರ-ಷಟ್ಸ್ಥಲ-ಪಂಚಾಚಾರ-ಅಷ್ಟಾವರಣ ಇತ್ಯಾದಿ ವಿಷಯಗಳನ್ನು ಮಂಡಿಸಿರುತ್ತಾನೆ. ಈ ಗ್ರಂಥದಲ್ಲಿ ಹರದತ್ತಾಚಾರ್ಯನ ತಾತ್ಪರ್ಯ ಸಂಗ್ರಹವನ್ನೂ ಸೋಮಶಂಭುವಿನ [ಸೋಮಶಂಭುಪದ್ಧತಿಃ] ಎಂಬ ಗ್ರಂಥವನ್ನೂ ಉಲ್ಲೇಖಿಸಿರುವನಾಗಿ ಇವರೀರ್ವರಿ ಗಿಂತ ಈಚಿನವನಾಗಿದ್ದಾನೆ. ಪಾಲ್ಕುರಿಕೆ ಸೋಮನಾಥನೂ ಈ ಗ್ರಂಥಗಳನ್ನು ಉಲ್ಲೇಖಿಸಿರುವನು. ಡಾ. ಎಸ್. ಸಿ. ನಂದೀಮಠ ಅವರು ಕನ್ನಡ ನಾಡಿನ ಚರಿತ್ರೆ ಭಾಗ 2 (ಕ. ಸಾ. ಪರಿಷತ್ತು 1944) ರಲ್ಲಿ ಪುಟ 193, 194ರಲ್ಲಿ "ಸೋಮಶಂಭು ಕರ್ಮಕ್ರಿಯಾಕಾಂಡವನ್ನು ಬರೆದಿದ್ದಾನೆ. ಇದರ ಹಸ್ತಪ್ರತಿಗಳು ನೇಪಾಳ ಕಾಶ್ಮೀರ ಕಲ್ಕತ್ತೆ ತಂಜಾವೂರು ಮದ್ರಾಸು ಪುಸ್ತಕಾಲಯಗಳಲ್ಲಿ ಇವೆ. ಅಘೋರ ಶಿವನೂ, ಈಶಾನ ಶಿವನೂ ಸರ್ವದರ್ಶನ ಸಂಗ್ರಹಕಾರನೂ ಈ ಗ್ರಂಥ ವನ್ನು ಉಲ್ಲೇಖಿಸಿದ್ದಾರೆ. ಸೋಮಶಂಭು ಈ ಗ್ರಥಂವನ್ನು ವಿಕ್ರಮಸಂವತ್ 1130 ಅಂದರೆ ಕ್ರಿ.ಶ. 1073ರಲ್ಲಿ ಬರೆದನು." ಎಂದು ತಿಳಿಸಿರುವರು. ಗುಂಟೂರು

ಡಿಸ್ಟ್ರಿಕ್ಟ್ ಗುಂಟೂರು ತಾಲೂಕಿನ ಮಲ್ಕಾಪುರಂ ಗ್ರಾಮದ ಪಾಳುಬಿದ್ದ ದೇವಾಲ-ಯದ ಸಮೀಪದಲ್ಲಿ ಇರುವ ದೊಡ್ಡ ನಂದಿಕಂಬದ ಮೇಲೆ ಕೆತ್ತಿರುವ ಶಕ 1183 ದುರ್ಮತಿ ಸಂವತ್ಸರದ ಶಾಸನದಲ್ಲಿ ಕಾಕತೀಯ ದೊರೆ ಗಣಪತಿ ಮತ್ತು ಮಗಳು ರುದ್ರಮದೇವಿ ಇವರೀರ್ವರೂ ಶುದ್ಧಶೈವಮತವಾದ ಗೋಳಕಿಮಠದ ಧರ್ಮಕಾರ್ಯಗಳಿಗಾಗಿ ಈ ಮಠದ ಗುರುಗಳಾದ ವಿಶ್ವೇಶ್ವರ ಶಿವಾಚಾರ್ಯರಿಗೆ ಹಳ್ಳಿಗಳನ್ನು ದಾನವಿತ್ತ ವಿಚಾರ ಬಂದಿದ್ದು, ಇದರಲ್ಲಿ ಕಾಕತೀಯ ದೊರೆಗಳ ವಂಶಾವಳಿಯೂ ಗೋಳಕಿಮಠದ ಆಚಾರ್ಯರ ಪರಂಪರೆಯು ವಿವರಣವೂ ಇದ್ದು ಈ ಗುರುಗಳಲ್ಲಿ ಒಂದನೆಯವರು ವಿಶ್ವೇಶ್ವರದೇಶಿಕೇಂದ್ರರು. ಮೂರನೆಯವರು ಕಲಚುರಿಗಳಿಂದ ಆರಾಧಿಸಲ್ಪಟ್ಟ ಸೋಮಶಂಭು ಎಂಬವರು. ಒಂಬತ್ತನೆಯವರು ವಿಶ್ವೇಶ್ವರ ಶಂಭು ಅಥವಾ ವಿಶ್ವೇಶ್ವರ ಶಿವ ಅಥವಾ ವಿಶ್ವೇಶ್ವರದೇಶಿಕರೆಂಬವರು. ಈ ಒಂಬತ್ತನೆಯವರೇ ಕಾಕತೀಯ ಗಣಪತಿರಾಜ ಪೂಜಿತರು ಹಾಗೂ ಈ ರಾಜರ ದೀಕ್ಷಾಗುರುಗಳು ಅಲ್ಲದೆ ಕಲಚುರಿಕ್ಷ್ಮಾಪಾಲದೀಕ್ಷಾಗುರು ಮತ್ತು ಚೋಳ, ಗೌಡ, ಮಾಳವ ರಾಜರುಗಳಿಂದಲೂ ಪೂಜಿತರು. ಈ ಒಂಬತ್ತನೆಯವರಿಗೇ ಕಾಕತೀಯ ಗಣಪತಿರಾಜ ಮತ್ತು ಮಗಳು ರುದ್ರಮದೇವಿಯರೀರ್ವರೂ ದಾನವಿತ್ತಿರುವುದು. ಇವರು ಈ ಗುರುಪೀಳಿಗೆಯಲ್ಲಿನ ಮೂರನೆಯ ಸೋಮಶಂಭುವಿನಿಂದ ಏಳನೆಯ ತಲೆಯವರು. ಈ ಶಾಸನ ಕಾಲ ಶಕ 1183 ದುರ್ಮತಿ. ಈ ಶಾಸನದ 64ರಿಂದ 66ರ ಸಾಲುಗಳಲ್ಲಿ

"ಪ್ರಾಚೀನ ಪುಣ್ಯಪರಿಪಾಕವಶಾತ್ ಪ್ರಜಾನಾಮಾವಿರ್ಬಭೂವ
ಭಗವಾನಿಹ ಸೋಮಶಂಭುಃ ||
'ನಾಮ್ನಾ ನಿಜೇನ' ಸಕಲಾಗಮಸಿಂಧುಸೇತುಂ ಯಃ 'ಪದ್ಧತಿಂ'
ಕರುಣಯಾऽಪ್ರತಿಮಾಂ ಬಬಂಧ ||"

ಎಂದರೆ ಯಾರು ಕೃಪೆದೋರಿ ಸಕಲಾಗಮವೆಂಬ ಸಮುದ್ರಕ್ಕೆ ಸೇತುವಿನಂತಿರುವ 'ಪದ್ಧತಿಃ' ಎಂಬ ಅಸದೃಶವಾದ ಗ್ರಂಥವನ್ನು ತಮ್ಮ ಹೆಸರಿನಿಂದ ರಚಿಸಿದರೊ ಅಂತಹ ಭಗವಾನ್ ಸೋಮಶಂಭುವು ಪ್ರಜೆಗಳ ಪೂರ್ವಪುಣ್ಯ ಪರಿಪಾಕವಶದಿಂದ ಭೂಮಿಯಲ್ಲಿ ಅವತರಿಸಿದರು. ಅರ್ಥಾತ್ ಭಗವಾನ್ ಸೋಮಶಂಭುವು ತಮ್ಮ ಹೆಸರಿನಿಂದ ಸಕಲಾಗಮಸಾಗರಕ್ಕೆ ಸೇತುವಿನಂತಿರ್ಪ 'ಸೋಮಶಂಭು ಪದ್ಧತಿಃ' ಎಂಬ ಅಸದೃಶವಾದ ಗ್ರಂಥವನ್ನು ರಚಿಸಿದರು ಎಂದು ಹೇಳಿದೆ. ಕರ್ಮಕ್ರಿಯಾ ಕಾಂಡವನ್ನು ಸೋಮಶಂಭುವು ಕ್ರಿ. ಶ. 1073ರಲ್ಲಿ ಬರೆದು ಮುಗಿಸಿರುವನಷ್ಟೆ. ಆದ್ದರಿಂದ ಈ ಗ್ರಂಥದ ರಚನಾಕಾಲವೂ ಕ್ರಿ. ಶ. 11 ನೆಯ ಶತಮಾನದ ಉತ್ತರಾರ್ಧಕಾಲವೆಂದು ಇಟ್ಟುಕೊಳ್ಳಬಹುದಾಗಿದೆ.

## ಜ್ಯೋತಿರ್ನಾಥ ಮತ್ತು ಇವನ ಕಾಲಾದಿಗಳ ವಿಚಾರ

ಜ್ಯೋತಿರ್ನಾಥನು ತನ್ನ ಶೈವರತ್ನಾಕರ ಗ್ರಂಥದಲ್ಲಿ ಕೊಟ್ಟಿರುವ ತನ್ನ ವಂಶಾವಳಿಯ ಪ್ರಕಾರ—ಪ್ರಸಿದ್ಧ ಶರಣನಾದ ಓಹಿಲಾರ್ಯನು ಸೌರಾಷ್ಟ್ರ ಸೋಮನಾಥನಿಗೆ ನಿತ್ಯವೂ ತಪ್ಪದೆ ಗುಗ್ಗುಳವನ್ನರ್ಪಿಸುವ ಕಾಯಕ ಕೈಕೊಂಡಿದ್ದ ವೀರಮಾಹೇಶ್ವರ. ಉಪ್ಪಟ ಕಾವ್ಯದಲ್ಲಿ (ಆ. 11-109) ತಿಳಿಸಿರುವಂತೆ ಲಿಂಗಾಂಗಿ ಜ್ಯೋತಿರ್ನಾಥನು ಈ ಓಹಿಲಾರ್ಯನ ಸಂಪ್ರದಾಯಕ್ಕೆ ಸೇರಿದವನು. ಓಹಿಲಾರ್ಯನ ನಂತರ ಮೊದಲನೆಯ ಶಿವದೇವ ಮಹಾಯೋಗಿಯು ಈ ಸಂಪ್ರದಾಯ ದಲ್ಲಿ ಬಂದ ಮಹಿತ. ಇವನು ಸಮಾಧಿಹೊಂದಿದುದು ಶ್ರೀಶೈಲೋತ್ತರ ದಿಕ್ತಟದ ಮಹಾಶಿಲೆಯ ಒಳಗೆ ಎಂದರೆ ಗೊಪೆ (ಗುಹೆ)ಯ ಒಳಗೆ. ಈತನೇ ಗೊಪೆಯ ಶಿವದೇವಯೋಗಿ. ಈ ಪ್ರಥಮ ಶಿವದೇವಮಹಾಯೋಗಿಯ ಶಿಷ್ಯನು ಪ್ರಥಮ ಧರಣೀಧರಮುನಿ. ಈತನು ಶಿವದೇವಯೋಗಿಯ ಸಮಾಧಿಯಿದ್ದ ತಾಣ ದಲ್ಲಿ ಶಿವದೇವಪುರವನ್ನು ನಿರ್ಮಾಣಮಾಡಿ, ಶಿವದೇವಲಿಂಗಕ್ಕೆ ಮಂಟಪ ಪ್ರಾಸಾದ ಪ್ರಾಕಾರಾದಿಗಳನ್ನೂ ನಿರ್ಮಿಸಿ ವೈಭವದ ಪೂಜೆಗೆ ಏರ್ಪಾಡು ಮಾಡಿ, ತಾನೇ ಪೂಜಿಸುತ್ತಾ ಶಿವದೇವಪುರದ ಪೌರ ಕಾರ್ಯವನ್ನೂ ನಿರ್ವಹಿಸುತ್ತಿದ್ದನು. ಪ್ರಥಮ ಧರಣೀಮುನಿಯ ಮಗ ಅಪ್ಪಯಸುಧೀಮಣಿ. ಈತನ ಮಕ್ಕಳೇ ಮಲ್ಲಿನಾಥ ಮತ್ತು ಎರಡನೆಯ ಶಿವದೇವಗುರು ಎಂಬವರು. ಇವರಲ್ಲಿ ಮಲ್ಲಿನಾಥನಿಗೆ ಈರ್ವರು ಪುತ್ರರಾದರು. ಮೊದಲನೆಯ ಪುತ್ರನೇ ಎರಡನೆಯ ಧರಣೀಧರ ಯೋಗೀಂದ್ರನು. ದ್ವಿತೀಯ ಪುತ್ರನೇ ಈ ಶೈವರತ್ನಾಕರಕಾರನಾದ ಜ್ಯೋತಿ ರ್ನಾಥನು. ಇದು ಜ್ಯೋತಿರ್ನಾಥನು ತನ್ನ ಶೈವರತ್ನಾಕರ ಗ್ರಂಥದಲ್ಲಿ ತಿಳಿಸಿರುವ ತನ್ನ ಪರಂಪರೆ ಅಥವಾ ವಂಶಾವಳಿ. ಈ ಗ್ರಂಥದ ಆದಿಯಲ್ಲಿ ಇತರಸ್ತುತ್ಯಾದಿ ಗಳಿಲ್ಲವು. ಪ್ರತಿ ಅಧ್ಯಾಯಾಂತ್ಯದಲ್ಲಿಯೂ 'ಇತಿ ಶ್ರೀಸದ್ಗುರುಶಿವದೇವಲಿಂಗ ದಿವ್ಯಶ್ರೀಪಾದಪದ್ಮಾರಾಧಕಜ್ಯೋತಿರ್ನಾಥವಿರಚಿತೇ ಸಕಲಶ್ರುತಿಸ್ಮೃತೀತಿಹಾಸ' ಪುರಾಣಾಗಮಸಮ್ಮತೇ ಶ್ರೀಶೈವರತ್ನಾಕರೇ × × × × × ಪ್ರಥಮೋಽಧ್ಯಾಯಃ" ಈ ಗದ್ಯವಿದೆ. ಇಲ್ಲಿನ 'ಶ್ರೀಸದ್ಗುರು ಶಿವದೇವಲಿಂಗ' ಎಂಬುದು ಈ ಜ್ಯೋತಿರ್ನಾಥನ ಚಿಕ್ಕಪ್ಪನವರಾದ ಎರಡನೆಯ 'ಶಿವದೇವಗುರು' ಎಂಬವರೇ ಆಗಿರುವರು. S. A. 402 O.R. 1 ಹಸ್ತಪ್ರತಿ ನೋಡಿ. ಈ ಹಸ್ತಪ್ರತಿಯು 21/30/9— (19)08ರಲ್ಲಿ ಪ್ರತಿಯಾಗಿ O.R.I.ಗೆ ಸೇರಿದೆ.)

ಜ್ಯೋತಿರ್ನಾಥನು ಈ ತನ್ನ ಗ್ರಂಥದಲ್ಲಿ ಕೊಟ್ಟಿರುವ ವಂಶಾವಳಿಯಿಂದ ಸೌರಾಷ್ಟ್ರ ಸೋಮನಾಥನಿಗೆ ನಿತ್ಯವೂ ಗುಗ್ಗುಳವನ್ನರ್ಪಿಸುವ ವ್ರತವನ್ನು ಕೈಕೊಂಡ ಓಹಿಲಾರ್ಯನೆಂಬ ಶರಣನ ಸಂಪ್ರದಾಯದವನು. ಈ ವೀರಮಾಹೇಶ್ವರ

ನಾದ ಓಹಿಲಾರ್ಯನು ಲಿಂಗಾಂಗಿ ಎಂದು ಉದ್ಭಟ ಕಾವ್ಯದಲ್ಲಿ ಸೋಮ ರಾಜನು ತಿಳಿಸಿರುವನು. ಈ ಓಹಿಲಾರ್ಯನ ಸಂಪ್ರದಾಯದಲ್ಲಿ ಬಂದವನು ಮೊದಲನೆಯ ಶಿವದೇವಮಹಾಯೋಗಿಯು ಅಥವಾ ಗೊಪೆಯ ಶಿವದೇವನು. ಈ ಶಿವದೇವನು ವಚನಕಾರನಾದ ಸಕಲೇಶ ಮಾದರಸರ ಕೃಪಾಪಾತ್ರ. ಬಸವೇಶನ ಐಕ್ಯವನ್ನು ಕೂಡಲಸಂಗಮದಲ್ಲಿ ಕಣ್ಣಾರೆ ಕಂಡು ಬಸವೇಶನಂ ಅಭಿವರ್ಣಿಸಿ ಅಲ್ಲಿ ನೆರೆದಿರ್ದ ಶರಣಸಮೂಹಕ್ಕೆ ಕೈಮುಗಿದು, ನಂತರ ಶ್ರೀಶೈಲ ದಲ್ಲಿನ ತನ್ನ ಪರ್ವತಾಶ್ರಮಕ್ಕೆ ಹಿಂತಿರುಗುವಾಗ ದಾರಿಯಲ್ಲಿ ಶಿಷ್ಯನಾದ ಈ ಗೊಪೆಯ ಶಿವದೇವನಲ್ಲಿಗೆ ಬಂದು ಬಸವಣ್ಣನ ಐಕ್ಯ ವಿಚಾರವನ್ನು ತಿಳಿಸಿ ಶಿವದೇವನಿಗೆ ಅನುಗ್ರಹವಿತ್ತು ಮುಂದೆ ಸಾಗಿ ಶ್ರೀಶೈಲದಲ್ಲಿನ ತನ್ನ ಪರ್ವತಾ ಶ್ರಮದತ್ತ ಪ್ರಯಾಣ ಬೆಳಸಿದನು ಎಂದು ಕುಮಾರಪದ್ಮರಸನ ಸಾನಂದಚರಿತೆ ಪಾಲ್ಕುರಿಕೆ ಸೋಮೇಶ್ವರನ ಬಸವಪುರಾಣ ಭೀಮಕವಿಯ ಬಸವಪುರಾಣ ಪದ್ಮಣಾಂಕನ ಪದ್ಮರಾಜಪುರಾಣಾದಿಗಳಲ್ಲಿ * ಸಂಕ್ಷಿಪ್ತವಾಗಿಯೂ ವಿಸ್ತೃತ ರೂಪವಾಗಿಯೂ ತಿಳಿಸಿರುವರು. ಶಿವದೇವಪುರದಲ್ಲಿನ ಗೊಪೆಯ ಶಿವದೇವ ಮಹಾಯೋಗಿಯ ಹಾಗೂ ಸಕಲೇಶ ಮಾದರಸರ ಕಾಲ ಸು. ಕ್ರಿ. ಶ. 1150. ಈ ಮೊದಲನೆಯ ಗೊಪೆಯ ಶಿವದೇವ ಮಹಾಯೋಗಿಯಿಂದ ಜ್ಯೋತಿರ್ನಾಥನು ಐದನೆಯ ತಲೆಮಾರಿನವನಾಗಿರುತ್ತಾನೆ. ವೀರಮಾಹೇಶ್ವರಾಚಾರಸಂಗ್ರಹಕಾರನು

'ಶೈವರತ್ನಾಕರಂ ನಾಮ ಗ್ರಂಥಂ ಯಃ ಕೃತವಾನ್ ಪುರಾ ।
ಜಗದ್ಧಿತಾರ್ಥಂ ಕೃಪಯಾ ಜ್ಯೋತಿರ್ನಾಥಂ ನಮಾಮಿ ತಮ್' (1.18)

ಎಂಬಲ್ಲಿ ಈ ಗ್ರಂಥವು ಪ್ರಾಚೀನನೆಂಬುದನ್ನು 'ಪುರಾ' ಎಂದು ತಿಳಿಸಿ ಜ್ಯೋತಿರ್ನಾಥ ನಿಗೆ ಮಣಿದಿರುವನು. ಇಷ್ಟು ವಿಚಾರಮಥನದಿಂದ ಜ್ಯೋತಿರ್ನಾಥನ ಕಾಲವು ಸುಮಾರು ಕ್ರಿ. ಶ. 1150ರಿಂದೀಚಿನದಾಗಿದೆಯೆಂಬುದು ಸ್ಪಷ್ಟ.

## ವ್ಯಾಖ್ಯಾಕಾರನಾದ ಶ್ರೀಧರಾಂಕನ ಕಾಲನಿರ್ಣಯ

ವ್ಯಾಖ್ಯಾನಕಾರನಾದ ಶ್ರೀಧರಾಂಕನು, ಲಕ್ಕಣ್ಣದಂಡೇಶನ (ಕ್ರಿ. ಶ. 1440) ಶಿವತತ್ತ್ವಚಿಂತಾಮಣಿಯ ಸಂಧಿ 38 ಪದ್ಯ 121 ರಲ್ಲಿ ಬಂದಿರುವ ತನ್ನ ಸಮಕಾಲೀನ ನೂತನ ಶರಣರನ್ನು ಹೇಳುವಲ್ಲಿ 'ಗೊರಗೋಡ ಬೊಪ್ಪಯ್ಯ'ನ ಹೆಸರು ಬಂದಿದೆ. ಈ ಗೊರಗೋಡ ಬೊಪ್ಪಯ್ಯನೇ ವ್ಯಾಖ್ಯಾಕಾರನು ಗ್ರಂಥಾಂತ್ಯ

---

* ಭೀಮಕವಿಯ ಬಸವಪುರಾಣದ ಸಂಧಿ 63-31, 63-32. ಪದ್ಮರಾಜಪುರಾಣ ದಲ್ಲಿ ಸಂಧಿ 2-26, 2-27, 28, 29, 30, 31ನ್ನೂ ಮತ್ತು ಸಾನಂದಚರಿತೆಯ 9-32, 9-49, 9-51ನ್ನೂ ನೋಡಿರಿ.

ದಲ್ಲಿ ಹೇಳಿರುವ ಗೊರಗೋಡಪುರವರಾಧೀಶ್ವರನಾದ ಬೊಪ್ಪಣದೇಶಿಕೇಂದ್ರನಾಗಿದ್ದಲ್ಲಿ ಈ ಬೊಪ್ಪಣದೇಶಿಕೇಂದ್ರನ ಕಾಲವೂ ಕ್ರಿ. ಶ. 1440 ಆಗಬೇಕಾಗುತ್ತದೆ. ಈ ಬೊಪ್ಪಣ ದೇಶಿಕೇಂದ್ರನ ತನೂಭವನಾದ ಮಲ್ಲಿಕಾರ್ಜುನಾಚಾರ್ಯನ ಆಜ್ಞಾನುಸಾರವಾಗಿ ಕನ್ನಡ ವ್ಯಾಖ್ಯಾನ ಬರೆದಿರುವುದಾಗಿ ತಿಳಿಸಿರುವ ಶ್ರೀಧರಾಂಕನ ಕಾಲವನ್ನು ಸು. ಕ್ರಿ. ಶ. 1460ಕ್ಕೆ ಹಾಕಬಹುದೆಂದು ಪ್ರಬುದ್ಧ ಕರ್ಣಾಟಕ ಪತ್ರಿಕೆಯಲ್ಲಿ (ಸಂಪುಟ 30, ಸಂಚಿಕೆ 4 ಪುಟ 105, 106 149) ಲಿಂ|| ಹೆಚ್ ದೇವೀರಪ್ಪನವರು ಊಹಿಸಿರುವುದು ಸರಿಯೆಂದು ತೋರುತ್ತದೆ. ವ್ಯಾಖ್ಯಾನಕಾರನಾದ ಶ್ರೀಧರಾಂಕನ ಕಾಲವನ್ನು ಕ್ರಿ. ಶ. 1460 ಎಂದು ಇಟ್ಟುಕೊಳ್ಳಬಹುದಾಗಿದೆ. ಕನ್ನಡ ಕವಿಚರಿತೆ, ಭಾಗ 1, ಪುಟ 474 ರಲ್ಲಿ ಅಮರಕೋಶಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆದಿರುವ ನಾಚಿರಾಜನ ಕಾಲವನ್ನು ಸು. ಕ್ರಿ.ಶ-1300 ಎಂದು ನಿರ್ಧರಿಸಿರುವರು. ಈ ನಾಚಿರಾಜೀಯವನ್ನು ಶ್ರೀಧರಾಂಕನು ಉಲ್ಲೇಖಿಸಿರುವುದರಿಂದ—ಈ ಕಾಲಕ್ಕೆ ಈಚಿನವನಾಗಿ ಕ್ರಿ. ಶ. 1460 ಎಂದು ಇಟ್ಟುಕೊಳ್ಳುವುದೇ ಸರಿಯೆಂದು ಕಾಣುತ್ತದೆ. ಗೊರಕೋಡ ಎಂಬ ಪಾಠಾಂತರವೂ ಶಿವತತ್ತ್ವಚಿಂತಾಮಣಿಯಲ್ಲಿ ಬಂದಿದೆ.

## ವೀರಮಾಹೇಶ್ವರಾಚಾರ ಸಂಗ್ರಹದ ಸಿಂಹಾವಲೋಕನ

ಸಿಂಹಾವಲೋಕನದಂತೆ ಈ ವೀರಮಾಹೇಶ್ವರಾಚಾರಸಂಗ್ರಹವೆಂಬ ಬೃಹದ್ಗ್ರಂಥದ ಸಮಗ್ರ ಸ್ಥೂಲ ಪರಿಚಯಕ್ಕಾಗಿ ಈ ಗ್ರಂಥದ ಎಲ್ಲಾ ಅಧ್ಯಾಯಗಳ ವಿಷಯಾನುಕ್ರಮಣಿಕೆಯನ್ನು ಈ ಕೆಳಗೆ ಕೊಟ್ಟಿರುತ್ತದೆ. ಇದರಿಂದ ಓದುಗರಿಗೆ ಈ ಬೃಹದ್ಗ್ರಂಥದ ಸ್ವರೂಪವು ವಿದಿತವಾಗುತ್ತದೆ.

| ಅಧ್ಯಾಯ | ವಿಷಯ | ಶ್ಲೋಕ |
|---|---|---|
| ೧ | ಶ್ರೀಗುರುನುತಿ | ೧ |
| | ಮುಳ್ಳಾಯಿಸೋಮೇಶಗುರು ನುತಿ | ೨ |
| | ಕಪಿಲಸಿದ್ಧ ಮಲ್ಲಿಕಾರ್ಜುನಮೂರ್ತಿ ನುತಿ | ೩ |
| | ಶ್ರೀನಂದಿನಾಥ ನುತಿ | ೪ |
| | ಭೃಂಗಿನಾಥ ನುತಿ | ೫ |
| | ವೀರಭದ್ರ ನುತಿ | ೬ |
| | ಶರಭೇಶ ನುತಿ | ೭ |
| | ಅಸಂಖ್ಯಾತಮಹಾಗಣ ನುತಿ | ೮ |
| | ಬಸವರಾಜ ನುತಿ | ೯ |

| ಅಧ್ಯಾಯ | ವಿಷಯ | ಶ್ಲೋಕ |
|---|---|---|
| ೧ | ಚೆನ್ನಬಸವನುತಿ | ೧೦ |
| | ಪ್ರಭುನುತಿ | ೧೧ |
| | ಸಿದ್ಧರಾಮನುತಿ | ೧೨ |
| | ಪಂಡಿತಾರಾಧ್ಯನುತಿ | ೧೩ |
| | 'ಶಿವಜ್ಞಾನದೀಪಿಕಾ'ಕಾರ ಮಲ್ಲಪಾರ್ಯಗುರುನುತಿ | ೧೪ |
| | 'ಸಾರೋದ್ಧಾರ' ಕಾರ ಲಕ್ಷ್ಮೀದೇವಗುರುನುತಿ | ೧೫ |
| | 'ಸಾನಂದಚರಿತ'ಕಾರ ಪದ್ಮರಾಜನುತಿ | ೧೬ |
| | 'ಬಸವರಾಜೀಯ'ಕಾರ ಪಾಲ್ಕುರಿಕೆ ಸೋಮನಾಥನುತಿ | ೧೭ |
| | 'ಶೈವರತ್ನಾಕರ' ಕಾರ ಜ್ಯೋತಿರ್ನಾಥನುತಿ | ೧೮ |
| | 'ಶಿವಜ್ಞಾನಸಮುಚ್ಚಯಃ' ಕಾರ ಜಗದಾರಾಧ್ಯನಾಗೇಶಗುರುನುತಿ | ೧೯ |
| | ಪುರಾತನ ಚಾರಿತ್ರ (ದೇಶಭಾಷೆಯಲ್ಲಿ)ಕಾರ ಸಂಪಾಹರೀಶ್ವರನುತಿ | ೨೦ |
| | ೬೩ ಪುರಾತನರು-ಪುರಾತನ ಲಿಂಗಾಂಗಿಗಳ ನುತಿ | ೨೧ |
| | ಹಿಂದಿನ-ಇಂದಿನ-ಮುಂದಿನ ಶಿವಭಕ್ತರ ನುತಿ | ೨೨ |
| | ಗ್ರಂಥಕಾರನ ಪ್ರತಿಜ್ಞೆ | ೨೩-೨೬ |
| | ಸಮಗ್ರಗ್ರಂಥದ ವಿಷಯಾನುಕ್ರಮಣಿಕಾ | ೨೭-೫೮ |

| ಅಧ್ಯಾಯ | ವಿಷಯ |
|---|---|
| ೨ | ಧರ್ಮಾಧರ್ಮಭೇದಕಥನಂ |
| ೩ | ನರಕಯಾತನಾನಿರೂಪಣಂ |
| ೪ | ಪಿಂಡೋತ್ಪತ್ತಿಕಥನಂ |
| ೫ | ಸಂಸಾರಹೇಯತ್ವಕಥನಂ |
| ೬ | ವೀರಮಾಹೇಶ್ವರದೀಕ್ಷಾವಿಧಾನಂ |
| ೭ | ಗುರುಶುಶ್ರೂಷಾಕ್ರಮಃ |
| ೮ | ಪಂಚಾಕ್ಷರೀಮಾಹಾತ್ಮ್ಯಂ |
| ೯ | ಸಾನಂದಚರಿತಮ್ |
| ೧೦ | ಮಹಾಲಿಂಗ (ಶಿವಲಿಂಗ) ಪ್ರಾದುರ್ಭಾವಃ |
| ೧೧ | ಶಿವರಾಜ್ಯಕ್ರಮಃ |
| ೧೨ | ಶಿವಾಜ್ಞಾಪ್ರಭಾವಃ |
| ೧೩ | ಬ್ರಹ್ಮಶಿರೋಹರಣಲೀಲಾ |
| ೧೪ | ಭಿಕ್ಷಾಟನಲೀಲಾ |
| ೧೫ | ದಕ್ಷಶಾಪಕ್ರಮಃ |
| ೧೬ | ದಕ್ಷಾಧ್ವರಧ್ವಂಸನಂ |
| ೧೭ | ಶರಭಲೀಲಾ |

| ಅಧ್ಯಾಯ | ವಿಷಯ |
| --- | --- |
| ೧೮ | ಕಾಮದಹನಲೀಲಾ |
| ೧೯ | ಗಿರಿಜಾವಿವಾಹಲೀಲಾ |
| ೨೦ | ಸ್ಕಂದೋತ್ಪತ್ತಿ ಸೂಚನಾ |
| ೨೧ | ಸ್ಕಂದೋತ್ಪತ್ತಿಃ—ತಾರಕವಧಃ |
| ೨೨ | ತ್ರಿಪುರದಹನ ನಿಮಿತ್ತ ರಥನಿರ್ಮಾಣ ನಿರೂಪಣಂ |
| ೨೩ | ತ್ರಿಪುರದಹನಲೀಲಾ |
| ೨೪ | ಜಲಂಧರವಧಲೀಲಾ |
| ೨೫ | ಅಂಧಕಾಸುರವಧಲೀಲಾ |
| ೨೬ | ಗಜಾಸುರಚರ್ಮಧಾರಣಲೀಲಾ |
| ೨೭ | ವೃಷೇಂದ್ರವಾಹನಾಹ್ಯಸ್ಥಿಭಸ್ಮಾಜಿನಧಾರಣಲೀಲಾ |
| ೨೮ | ಗಂಗಾಧರಲೀಲಾ |
| ೨೯ | ಕಾಲಕೂಟವಿಷಸಂಹರಣಲೀಲಾ |
| ೩೦ | ನಂದೀಶೋತ್ಪತ್ತಿ-ತದಾ್ಗಣಾಪತ್ಯಪ್ರದಾನಂ |
| ೩೧ | ಶಂಖಚಕ್ರಾದ್ಯುತ್ಪತ್ತಿಃ—ತತ್ಪ್ರದಾನಂ |
| ೩೨ | ಪುನರಪಿ ವಿಷ್ಣೋಶ್ಚಕ್ರಾದಿಪ್ರದಾನಂ |
| ೩೩ | ಕೃಷ್ಣಸ್ಯ ಪುತ್ರಾದಿವರಪ್ರದಾನಂ |
| ೩೪ | ಸತ್ಯಸಂಧಸ್ಯ ಮುಕ್ತಿಪ್ರದಾನಂ |
| ೩೫ | ವಿಷ್ಣು-ಸನತ್ಕುಮಾರಸಂವಾದಃ |
| ೩೬ | ವ್ಯಾಸಭುಜಸ್ತಂಭನಂ ತದ್ವಿಮೋಚನಂ |
| ೩೭ | ವೇದಾನಾಂ ವರಪ್ರದಾನಂ |
| ೩೮ | ಬ್ರಹ್ಮಗೀತಾ |
| ೩೯ | ಸೂತಗೀತಾ |
| ೪೦ | ಶಿವನಾಮಸ್ಮರಣಮಾಹಾತ್ಮ್ಯಂ |
| ೪೧ | ಶಿವನಾಮೋಚ್ಚಾರಣಮಾಹಾತ್ಮ್ಯಂ |
| ೪೨ | ಶಿವಲಿಂಗದರ್ಶನಮಾಹಾತ್ಮ್ಯಂ |
| ೪೩ | ಶಿವಲಿಂಗಪೂಜಾಮಾಹಾತ್ಮ್ಯಂ |
| ೪೪ | ವೀರಮಾಹೇಶ್ವರ ಗ್ರಾಹ್ಯಧರ್ಮನಿರ್ಣಯಃ |
| ೪೫ | ಉಪಮನ್ಯುಚರಿತಮ್ |
| ೪೬ | ಕರಕಮಲಪೀಠಕಥನಂ |
| ೩೭ | ಶಿವಷಣ್ಮುಖಸಂವಾದೇ ವೀರಶೈವಸದಾಚಾರಕಥನಂ |
| ೪೮ | ಷಟ್ಸ್ಥಲಕ್ರಮನಿರೂಪಣಂ |
| ೪೯ | ಶ್ರೀಮದ್ವಿಭೂತಿಕಲ್ಪತತ್ಸ್ನಾನೋದ್ಧೂಲನತನ್ಮಾಹಾತ್ಮ್ಯಂ |
| ೫೦ | ತ್ರಿಪುಂಡ್ರವಿಧಿಃ-ತನ್ಮಾಹಾತ್ಮ್ಯಂ |

ಅಧ್ಯಾಯ ವಿಷಯ

೫೧ ರುದ್ರಾಕ್ಷಧಾರಣವಿಧಿಃ-ತನ್ಮಾಹಾತ್ಮ್ಯಕಥನಂ
೫೨ ಪೂಜಾಸಾಧನದ್ರವ್ಯನಿರ್ಣಯೇಗಾರನಿರ್ಮಾಣತತ್ಸಂಮಾರ್ಜನ-ಮಾಹಾತ್ಮ್ಯಂ
೫೩ ಅನುಲೇಪನ– ವರ್ಣಕವಿಧಿ - ಪೂಜಾಗೃಹಾಲಂಕರಣಕ್ರಮಸ್ತನ್ಮಾ-ಹಾತ್ಮ್ಯಂ
೫೪ ಪೂಜಾಸಾಧನದ್ರವ್ಯನಿರ್ಣಯಾರ್ಘ್ಯಾದಿಪ್ರದಾನತನ್ಮಾಹಾತ್ಮ್ಯಂ
೫೫ ಸ್ನಾನಕ್ರಮಸ್ತನ್ಮಾಹಾತ್ಮ್ಯಂ
೫೬ ವಸ್ತ್ರೋಪವೀತಾಭರಣಗಂಧಾಕ್ಷತತಿಲಪ್ರದಾನಂ
೫೭ ಪುಷ್ಪಲಕ್ಷಣಂ–ತತ್ಪ್ರಶಂಸಾ
೫೮ ಪತ್ರಲಕ್ಷಣಂ ತನ್ಮಾಹಾತ್ಮ್ಯಂ
೫೯ ಧೂಪಲಕ್ಷಣಂ-ತನ್ಮಾಹಾತ್ಮ್ಯಂ
೬೦ ದೀಪಲಕ್ಷಣಂ ತನ್ಮಾಹಾತ್ಮ್ಯಂ
೬೧ ಘಂಟಾಶಂಖ ಪಂಚಮಹಾಶಬ್ದಾದಿಲಕ್ಷಣಂ ತನ್ಮಾಹಾತ್ಮ್ಯಂ
೬೨ ನೈವೇದ್ಯ-ಮುಖವಾಸ ತಾಂಬೂಲಲಕ್ಷಣಂ ತನ್ಮಾಹಾತ್ಮ್ಯಂ
೬೩ ನೀರಾಜನ–ದರ್ಪಣ ಫಲಛತ್ರ ಚಾಮರವ್ಯಜನ ಲಕ್ಷಣಂ-ತನ್ಮಾಹಾತ್ಮ್ಯಂ
೬೪ ಗೀತವಾದ್ಯನೃತ್ಯಪುರಾಣಪಠನಸ್ತೋತ್ರನಮಸ್ಕಾರಲಕ್ಷಣಂ–ತನ್ಮಾಹಾತ್ಮ್ಯಂ
೬೫ ಪೂಜಾಸಾಧನದ್ರವ್ಯಪೂಜಾಂಗಪ್ರಶಂಸಾಯಾಂ ಸಾವಿತ್ರ್ಯ-ರುಂಧತೀಸಂವಾದಃ
೬೬ ಲಿಂಗಧಾರಿಣಾಂ ನಿತ್ಯಲಿಂಗಾರ್ಚನಾವಿಧಾನಾಂ ಕಥನಂ
೬೭ ಪಾದೋದಕಾದಿಮಾಹಾತ್ಮ್ಯಂ
೬೮ ತ್ರಿವಿಧಪ್ರಸಾದಮಾಹಾತ್ಮ್ಯಂ
೬೯ ಲಿಂಗಾರ್ಚನಮಾಹಾತ್ಮ್ಯಕಥನಂ
೭೦ ಲಿಂಗಾರ್ಚನಾಮಾಹಾತ್ಮ್ಯಕಥನೇ ಮಾರ್ಕಂಡೇಯಚರಿತ್ರಮ್
೭೧ ಶಿವರಾತ್ರಿಪ್ರಾದುರ್ಭಾವಃ ತದ್ವ್ರತವಿಧಾನಂ
೭೨ ಶಿವರಾತ್ರಿವ್ರತಮಾಹಾತ್ಮ್ಯಕಥನೇ ಸುಕುಮಾರಸ್ಯ ಗಣೇಶತ್ವಪ್ರದಾನಂ
೭೩ ಶಿವರಾತ್ರಿಮಾಹಾತ್ಮ್ಯಕಥನೇ ಯಮ–ಶಂಕರಸಂವಾದಃ

ಅಧ್ಯಾಯ ವಿಷಯ
೭೪ ಶಿವರಾತ್ರಿಮಾಹಾತ್ಮ್ಯಕಥನೇ ಶಿವಭಕ್ತಪ್ರಶಂಸಾ
೭೫ ಶಿವಭಕ್ತಪ್ರಶಂಸಾಯಾಂ ಕ್ಷುಪ-ದಧೀಚಸಂವಾದಃ
೭೬ ,, ವಿಷ್ಣುಶಾಪನಿರೂಪಣಂ
೭೭ ಶಿವಭಕ್ತಪೂಜಾಮಾಹಾತ್ಮ್ಯಮ್
೭೮ ಶಿವಭಕ್ತಪೂಜಾಮಾಹಾತ್ಮ್ಯಕಥನೇ ಶ್ರೀಮದೀಶ್ವರ-ಸ್ಕಂದಸಂವಾದಃ

ಇಂತಿಷ್ಟು ಈ ವೀರಮಾಹೇಶ್ವರಾಚಾರಸಂಗ್ರಹದಲ್ಲಿರುವ ವಿಷಯಾನುಕ್ರಮಣಿಕೆ

# ಪ್ರಾಣಲಿಂಗಧಾರಿಗಳಾದ ವೀರಶೈವರ ಸಂಸ್ಕೃತಿ ಆಗಮಸಂಸ್ಕೃತಿ ಎಂಬ ವಿಚಾರ

## ವೇದಗಳ ಬಗೆಗೆ ವೀರಮಾಹೇಶ್ವರರ ನಿಲವು

ಅಗ್ನಿಪೂಜಕರಾದ ವೈದಿಕರಿಗೆ ವೇದಗಳು, ವೀರವೈಷ್ಣವರಿಗೆ ಪಾಂಚರಾತ್ರ ಆಗಮಗಳು, ಜೈನ–ಬೌದ್ಧರಿಗೆ ಜೈನ–ಬೌದ್ಧಾಗಮಗಳು ಹೇಗೋ ಹಾಗೆಯೇ ತಮಿಳುನಾಡಿನ ಶುದ್ಧಶೈವರಿಗೂ ಕಾಶ್ಮೀರದ ಮಾಹೇಶ್ವರರಿಗೂ ಕರ್ಣಾಟಕದ ವೀರಮಾಹೇಶ್ವರರಿಗೂ ಮತ್ತು ಉಳಿದ ಶೈವರೆಲ್ಲರಿಗೂ ಕಾಮಿಕಾದಿ ವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳೂ ಪರಮಪ್ರಮಾಣಗಳು, ಸ್ವತಃ ಪ್ರಮಾಣಗಳು ಹಾಗೂ ವೇದಾಧಿಕ ಪ್ರಮಾಣಗಳು. ಈ ಆಗಮಗಳ ಆಧಾರದ ಮೇಲಿಂದ ಶಿವಸೂತ್ರಗಳು, ಪಾಶುಪತಸೂತ್ರಂ, ಅಗಸ್ತ್ಯಸೂತ್ರಂ, (ಶಕ್ತಿಸೂತ್ರಂ) ನಾಗಾನಂದಿಸೂತ್ರಂ, ರೌರವಸೂತ್ರಂ, ಸ್ವಾಯಂಭುವಸೂತ್ರಂ ಇತ್ಯಾದಿಗಳೂ ಹೊರಬಂದಿವೆ. ಶಿವೋಕ್ತಗಳಾದ 28 ಶಿವಾಗಮಗಳಲ್ಲಿನ ಧರ್ಮಕ್ಕೆ 'ಶಿವಧರ್ಮ'ವೆಂಬ, ಈ ಧರ್ಮವನ್ನು ಆಚರಿಸುವವರಿಗೆ ಶಿವಧರ್ಮಿಯರೆಂಬ ವ್ಯವಹಾರವು ಸಮಸ್ತ ಶೈವಸಾಧಾರಣವಾದುದಾಗಿದೆ. ವೇದಗಳು ಕ್ರಿಯಾ–ಜ್ಞಾನಕಾಂಡಗಳಾಗಿ ವೇದ–

-ವೇದಾಂತಗಳೆಂದು ವಿಭಕ್ತವಾಗಿ ವೈದಿಕರು-ವೇದಾಂತಿಗಳು ಎಂಬ ವ್ಯವಹಾರ ಉಂಟಾಗಿರುವಂತೆ ಕ್ರಿಯಾಪಾದ ಚರ್ಯಾಪಾದ ಜ್ಞಾನಪಾದ ಯೋಗಪಾದ ಗಳೆಂಬ ಚತುಷ್ಪಾದಾತ್ಮಕಗಳಾದ ಶಿವಾಗಮಗಳ ಕ್ರಿಯಾ-ಚರ್ಯಾಪಾದಗಳು ಆಗಮಪೂರ್ವಭಾಗವೆನಿಸಿ ಸ್ಥಿರಲಿಂಗಾರ್ಚಕರಾದ (ಸ್ಥಾವರಲಿಂಗಾರ್ಚಕರಾದ) ಶಿವಧರ್ಮೀಯರಿಗೂ ಎಂದರೆ ಷಡ್ವಿಧಶೈವರಿಗೂ, ಜ್ಞಾನ-ಯೋಗಪಾದಗಳು ಶಿವಾಗಮಗಳ ಉತ್ತರಭಾಗವೆನಿಸಿ 'ಶಿವಧರ್ಮೋತ್ತರ' ವೆಂದೂ 'ಅಂತೇ ಸಿದ್ಧಃ ಸಿದ್ಧಾಂತಃ' ಎಂಬಂತೆ ಶಿವಾಗಮಗಳ ಕೊನೆಯ ಭಾಗಗಳಲ್ಲಿ ಶಿವನಿಂದ ನಿರ್ಣಯಿ-ಸಲ್ಪಟ್ಟುದಾಗಿ 'ಶಿವಸಿದ್ಧಾಂತ' ವೆಂದೂ ವೀರಶೈವರ ಷಟ್ಸ್ಥಲಸಿದ್ಧಾಂತವು ಈ ಭಾಗಗಳಲ್ಲಿರುವುದರಿಂದಾಗಿ 'ವೀರಶೈವಾಗಮ' ವೆಂದೂ ಪರಿಗಣಿತವಾಗಿ ಚರಲಿಂಗಾ-ರ್ಚಕರಾದ ಎಂದರೆ ಲಿಂಗ (ಪ್ರಾಣಲಿಂಗ) ಧಾರಿಗಳಾಗಿ ಕರಪೀಠಾರ್ಚಕರಾದ ವೀರಮಾಹೇಶ್ವರರೆನಿಸಿದ ಶಿವಧರ್ಮೀಯರಿಗೂ ವಿಶಿಷ್ಟಗಳೆನಿಸಿವೆ. ಆದರೂ ಶೈವ-ರೆಲ್ಲರೂ ಲಿಂಗಪೂಜಕರೇ ಆದುದರಿಂದ ಲಿಂಗಪೂಜಾದಿಗಳಿಗಾಗಿ ಕ್ರಿಯಾ-ಚರ್ಯಾ-ಪಾದಗಳೂ ಸರ್ವಸಾಮಾನ್ಯಗಳೆನಿಸಿ ಪರಮಪ್ರಮಾಣಗಳಾಗಿರುತ್ತವೆ. ಶಿವಧರ್ಮಕ್ಕೆ ಈ 28 ಶಿವಾಗಮಗಳೇ ಮೂಲ ಆಕರಗಳು.

## ವೀರಶೈವರ ಲಿಂಗಪೂಜಾ ವೈಶಿಷ್ಟ್ಯ

ಎಲ್ಲ ಶೈವರೂ ಲಿಂಗೋಪಾಸಕರೇ ಆದರೂ ಲಿಂಗ (ಪ್ರಾಣಲಿಂಗ) ಧಾರಿಗಳಾದ ವೀರಮಾಹೇಶ್ವರರ ಲಿಂಗೋಪಾಸನೆಯು ವಿಶಿಷ್ಟವಾದುದು. ಶಿವದೀಕ್ಷಾ ಸಂಸ್ಕಾರಪೂರ್ವಕವಾಗಿ ಶ್ರೀ ಗುರುವು

'ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್ ।
ತಲ್ಲಿಂಗಂ ತಸ್ಯ ತು ಪ್ರಾಣೇ ಸ್ಥಾಪಯೇದೇಕಭಾವತಃ' ॥

ಎಂಬಂತೆ ಶಿಷ್ಯನ ಪ್ರಾಣಕಲೆಯನ್ನು ಲಿಂಗದಲ್ಲಿಯೂ ಲಿಂಗಕಲೆಯನ್ನು ಶಿಷ್ಯನ ಪ್ರಾಣದಲ್ಲಿಯೂ ಪ್ರತಿಷ್ಠಿಸಿ ಪ್ರಾಣಲಿಂಗರೂಪವಾದ ಇಷ್ಟಲಿಂಗವನ್ನು ಶಿಷ್ಯನ ಕರಕ್ಕೆ ಕೊಟ್ಟು

"ತಲ್ಲಿಂಗಂ ದಾಪಯೇತ್ ಶಿಷ್ಯೇ 'ಪ್ರಾಣಲಿಂಗಮಿದಂ' ತವ ।
ಏವಮುಕ್ತ್ವಾ ಸದಾ ಲಿಂಗಂ ನ ಕದಾಚಿತ್ ವಿಯೋಜಯೇತ್ ॥

ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ ।
ಕದಾಚಿತ್ ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ॥

ಯದಿ ಪ್ರಮಾದಾತ್ ಪತಿತೇ ಲಿಂಗೇ ದೇಹಾತ್ ಮಹೀತಲೇ ।
ಪ್ರಾಣಾನ್ ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ॥

ಎಂದರೆ ಈ ಇಷ್ಟಲಿಂಗವು ನಿನ್ನ ಪ್ರಾಣಲಿಂಗವು. ಈ ಪ್ರಾಣಲಿಂಗವನ್ನು ಎಲ್ಲಿಯೂ ಯಾವಾಗಲೂ ದೇಹದಿಂದ ಅಗಲಿಸಬಾರದು. ಈ ಪ್ರಾಣಲಿಂಗವು ಅಕಸ್ಮಾತ್ ದೇಹದಿಂದ ಭೂಮಿಗೆ ಕಳಚಿ ಬಿದ್ದರೆ ಕೂಡಲೇ ಪ್ರಾಣಬಿಡಬೇಕು. ಈ ಲಿಂಗನಿಷ್ಠೆಯಿಂದ, ಈ ವೀರವ್ರತದಿಂದ ಮೋಕ್ಷಸಂಪದ ದೊರಕುತ್ತದೆ.

"ಉತ್ತಮಾಂಗೇ ಗಲೇ ಕಕ್ಷೇ ತಥಾ ವಕ್ಷಸ್ಥಲೇಽಪಿ ವಾ ।
ತಥಾ ಹಸ್ತಸ್ಥಲೇ ವಾಽಪಿ ಪ್ರಾಣಲಿಂಗಂ ಧರೇತ್ ಸುಧೀಃ ॥

ನಾಭೇರಧೋ ಲಿಂಗಧಾರೀ ಪಾಪ್ಮನಾ ಚ ಸ ಯುಜ್ಯತೇ"

ಎಂದರೆ ಈ ಪ್ರಾಣಲಿಂಗ (ಇಷ್ಟಲಿಂಗ)ವನ್ನು ಶಿರಸ್ಸು, ಕೊರಳು, ಕಕ್ಷ, ಹೃದಯ, ಹಸ್ತಗಳಲ್ಲಿ ಧರಿಸಬೇಕು. ಹೊಕ್ಕುಳದಿಂದ ಕೆಳಭಾಗದಲ್ಲಿ ಧರಿಸಬಾರದು.

"ಅಪವರ್ಗೇಪ್ಸುರೀಶಾನಂ ಗಲೇ ಭಕ್ತಿಪರಾಯಣಃ ।
ಈಶ್ವರೇಣಾವಿನಾಭಾವಸಂಬಂಧಂ ಕರ್ತುಮಾತ್ಮನಃ ॥

ಮೂರ್ಧ್ನಿ ವಾ ಧಾರಯೇಲ್ಲಿಂಗಂ ನ ಕದಾಚಿತ್ ವಿಯೋಜಯೇತ್ ।
ಶಿವಸ್ಯ ನಿತ್ಯಸಂಯೋಗಪರಯಾ ನಿಜನಿಷ್ಠಯಾ ॥

ವಕ್ತ್ರೇ ವಾ ಧಾರಯೇತ್ ಲಿಂಗಂ ಮತ್ಪ್ರಭಾವಂ ವಿಭಾವಯೇತ್ ।
ತಸ್ಮಿನ್ ಸನ್ನಿಹಿತೇ ಕಿಂಚಿತ್ ನೋಚ್ಛಿಷ್ಟಮಿತಿ ನಿಶ್ಚಿತಮ್ ॥"

ಎಂದರೆ ಮೋಕ್ಷಬೇಕೆಂದಲ್ಲಿ ಕೊರಳಲ್ಲಿ ಧರಿಸಬೇಕು. ತನಗೂ ಶಿವನಿಗೂ ಅವಿನಾಭಾವಸಂಬಂಧವಿರುವಂತೆ ಮಾಡಲು ಶಿರಸ್ಸಿನಲ್ಲಿ ಈ ಲಿಂಗವನ್ನು ಧರಿಸಬೇಕು. ಯಾವಾಗಲೂ ಅಗಲಿರಬಾರದು. ತನ್ನ ನಿಜನಿಷ್ಠೆಯಿಂದ ನಿತ್ಯಸಂಯೋಗವಿರಬೇಕೆಂಬುದಾದರೆ ಬಾಯಲ್ಲಿಯಾದರೂ ಧರಿಸಬಹುದು. ಲಿಂಗಸಾನ್ನಿಧ್ಯದಿಂದಾಗಿ ಉಚ್ಛಿಷ್ಟವೆನಿಸುವುದಿಲ್ಲ. ಪ್ರಾಣಲಿಂಗಧರರು (ಲಿಂಗಧಾರಿಗಳು) ಮೃತರಾದಾಗಲೂ ಈ ಲಿಂಗವನ್ನು ಬೇರ್ಪಡಿಸಬಾರದು ಮತ್ತು ದಹನಸಂಸ್ಕಾರವನ್ನೂ ಮಾಡಬಾರದು. ಕೇವಲ ಖನನ ಮಾಡಿ ಲಿಂಗಸಮೇತವಾಗಿ ಸಮಾಧಿಗೈಯಬೇಕು.

'ಸ್ತ್ರೀ ವಾಽಥ ಪುರುಷಃ ಷಂಡಃ ಚಂಡಾಲೋ ದ್ವಿಜವಂಶಜಃ ।
ನ ಜಾತಿಭೇದೋ ಲಿಂಗಾರ್ಚೇ ಸರ್ವೇ ರುದ್ರಸಮಾಃ ಸ್ಮೃತಾಃ ॥'

ಎಂದರೆ ಸ್ತ್ರೀಯಾಗಲಿ ಪುರುಷನಾಗಲಿ ಷಂಡನಾಗಿರಲಿ, ಬ್ರಾಹ್ಮಣನಾಗಿರಲಿ ಯಾರೇ ಆಗಿರಲಿ ಲಿಂಗಪೂಜೆಗೆ ಲಿಂಗಧಾರಣೆಗೆ ಜಾತಿಭೇದವಿಲ್ಲ. ಅಷ್ಟೇ ಅಲ್ಲ ಲಿಂಗಾರ್ಚಕರಾದ ಈ ಎಲ್ಲ ಶಿವಭಕ್ತರೂ ರುದ್ರಸಮರೆನಿಸುವರು. 'ಪೂಜಾಲೋಪೋ ನ ಕರ್ತವ್ಯಃ ಸೂತಕೇ ಮೃತಕೇಽಪಿ ವಾ' ಎಂದರೆ ಜನನಸೂತಕ ಮರಣಸೂತಕ ಕಾಲಗಳಲ್ಲಿಯೂ ಸಹ ಲಿಂಗಪೂಜೆಯನ್ನು ನಿಲ್ಲಿಸಬಾರದು.

ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋರಮಂ ।
ಅರ್ಚಯೇತ್ ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥

ಎಂದರೆ, ತ್ರಿಕಾಲವಲ್ಲಿಯೂ ಸದಾ ಶುಚಿರ್ಭೂತನಾಗಿ ತನ್ನ ಇಷ್ಟಲಿಂಗವನ್ನು ಕರಪೀಠದಲ್ಲಿಟ್ಟುಕೊಂಡೇ ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ಲಿಂಗಗುಣಗಳನ್ನು ತನ್ನ ಅಂಗದಲ್ಲಿ ಅಳವಡಿಸಿಕೊಳ್ಳುತ್ತಾ ಶಿವಯೋಗಸಾಧನೆಯಿಂದ ಶಿವನಲ್ಲಿ ಜೀವತ್ವನಿವೃತ್ತಿ ಪೂರ್ವಕವಾಗಿ ಶಿವನಲ್ಲಿ ಅವಿನಾಭಾವದಿಂದ ಬೆರೆತು ಶಿವತ್ವಪ್ರಾಪ್ತಿ ಸಾಧಿಸಬೇಕು. ಇಂತಾಗಲು ಪಂಚಮಪುರುಷಾರ್ಥವೆಂದು ಶಿವಧರ್ಮೀಯರು ಪರಿಗಣಿಸಿರುವ ಶಿವಭಕ್ತಿಯೊಂದೇ ಪರಮಸಾಧನ. ಈ ಸಾಧನದಿಂದ ಪಂಚಾಚಾರಪರಾಯಣನಾಗಿ ಅಷ್ಟಾವರಣನಿಷ್ಠಾಗರಿಷ್ಠನಾಗಿ ಷಟ್ಸ್ಥಲವನ್ನು ಸಾಧಿಸಿಕೊಳ್ಳಬೇಕು. ಸರ್ವಜೀವಾವಳಿಗೂ ಲೇಸುಂಟಾಗುವ ರೀತಿಯಲ್ಲಿ ನೈತಿಕವಾಗಿ ನಡೆದುಕೊಳ್ಳಬೇಕು. ಇತ್ಯಾದಿ ಬೋಧೆಯಿತ್ತು ಅನುಗ್ರಹಿಸಿದ ಇಷ್ಟಲಿಂಗ (ಪ್ರಾಣಲಿಂಗ) ವನ್ನು ಸದಾ ಧರಿಸಿ ಕರಪೀಠದಲ್ಲಿಯೇ ಅರ್ಚನೆ ಹಾಗೂ ಶಿವಯೋಗಾನುಸಂಧಾನ (ನಿಬ್ಬೆರಗಿನ ಲಿಂಗದೃಷ್ಟಿ) ಮಾಡುವ ವೀರಮಾಹೇಶ್ವರರಿಗೆ ಈ ಶಿವಾಗಮೋತ್ತರ ಭಾಗಗಳಾದ ಜ್ಞಾನ-ಯೋಗಪಾದಗಳು ಪ್ರಧಾನವಾಗಿ ಸಂಬಧಿಸಿದವುಗಳಾಗಿ ಶಿವಧರ್ಮೋತ್ತರ, ಶಿವಸಿದ್ಧಾಂತ, ವೀರಶೈವಾಗಮಗಳೆನಿಸಿ ಪ್ರಥಿತವಾಗಿವೆ.

## ವೇದಗಳ ಬಗೆಗೆ ವೀರಮಾಹೇಶ್ವರರಾದ ಶಿವಾಗಮಿಕರ ನಿಲವು

ವೇದಗಳಿಗೂ-ಶಿವಾಗಮಗಳಿಗೂ ಬಹಳ ಅಂತರವಿದೆ. ವೇದ ಸಂಸ್ಕೃತಿ ಆಗಮ ಸಂಸ್ಕೃತಿಗಳು ಭಿನ್ನ ಭಿನ್ನಗಳು. ವೇದಗಳಿಗಿಂತಲೂ ಹಿಂದಿನ ಭಾರತೀಯರ ಸಂಸ್ಕೃತಿ ಶಿವಾಗಮಸಂಸ್ಕೃತಿ. ವೇದಗಳು ಶಿವನ ನಿಃಶ್ವಾಸ (ಅಸ್ಫುಟವಾಣಿ)ಗಳೆಂದೂ ಶಿವಾಗಮಗಳು ಶಿವನ ಸ್ಫುಟವಾಣಿಗಳೆಂದೂ ವೇದಕ್ಕೂ ಹಿಂದಿನ ಭಾರತೀಯರ ಜ್ಞಾನರಾಶಿಯೆಂದೂ ಅನಾದಿಕಾಲದಿಂದಲೂ ಶಿವಭಕ್ತರು ಭಾವಿಸಿ ವೇದಗಳಿಗೆ ಪರತಃ ಪ್ರಾಮಾಣ್ಯವನ್ನೂ ಶಿವಾಗಮಗಳಿಗೆ ಸ್ವತಃ ಪ್ರಾಮಾಣ್ಯವನ್ನೂ ಸಾಧಿಸುತ್ತಾ ಆಗಮ-ಪ್ರಾಣರಾಗಿರುವರು. ಈ ಶಿವಾಗಮಗಳಿಗೆ ತಂತ್ರಗಳೆಂಬ ಪರ್ಯಾಯ

ನಾಮವೂ ಉಂಟು. ಭಾರತೀಯರಲ್ಲಿ ತಾಂತ್ರಿಕರು, ವೈದಿಕರು, ವೈದಿಕ-ತಾಂತ್ರಿಕರು ತಾಂತ್ರಿಕವೈದಿಕರು ಎಂದು ನಾಲ್ಕು ಬಗೆಗಳಿರುತ್ತವೆ. ಇವುಗಳಲ್ಲಿ ವೀರಮಾಹೇಶ್ವರರು ಅಥವಾ ಪ್ರಾಣಲಿಂಗ (ಇಷ್ಟಲಿಂಗಧಾರಿ) ಧಾರಿಗಳಾದ ವೀರಶೈವರು ತಾಂತ್ರಿಕ-ವೈದಿಕರೆನಿಸಿ ವೇದಾಗಮೋಭಯಪ್ರೀತರಾಗಿರುವರು. ತಾಂತ್ರಿಕ ವೈದಿಕರೆಂದರೆ ತಂತ್ರಕ್ಕೆ ಎಂದರೆ ಶಿವಾಗಮಕ್ಕೆ ಹೆಚ್ಚು ಪ್ರಾಧಾನ್ಯತೆಯನ್ನೂ ವೇದಕ್ಕೆ ತಕ್ಕಮಟ್ಟಿನ ಗೌರವವನ್ನೂ ತೋರಿಸತಕ್ಕವರು. ಉದಾಹರಣೆಗೆ ವೀರಮಾಹೇಶ್ವರ ಮತೋದ್ಧಾರಕರಾದ ಶ್ರೀ ಬಸವಣ್ಣನವರು ವೇದಗಳ ಬಗೆಗೆ 'ವೇದವೆಂಬುದನರಿಯಿರಿ. ಕೊಲ್ಲು ಎಂದು ಹೇಳಿತ್ತೇ ವೇದ?' ಎಂದು ಪಶುಬಲಿ ಮುಂತಾದ ಕರ್ಮಕಾಂಡವಾದ ವೇದದ ಪೂರ್ವಭಾಗವನ್ನು ಖಂಡಿಸಿದ್ದರೂ 'ಕೂಡಲಸಂಗಮದೇವನೊಬ್ಬನಲ್ಲದೆ ಇಲ್ಲ ಎಂದಿತ್ತು ಆ ವೇದ' ಎಂಬಲ್ಲಿ ವೇದದ ಉತ್ತರ ಭಾಗವಾದ ಜ್ಞಾನಕಾಂಡಾತ್ಮಕ ವೇದಾಂತಭಾಗದ ಶಿವಾಗಮಗಳಿಗೆ ಅವಿರೋಧಗಳಾದ 'ಶಿವ ಏಕೋ ಧ್ಯೇಯಃ ಸರ್ವಮನ್ಯತ್ಪರಿತ್ಯಜ್ಯ' 'ಈಶಾವಾಸ್ಯಮಿದಗ್ಂ ಸರ್ವಂ' 'ವಿಶ್ವತಶ್ಚಕ್ಷುರುತ ವಿಶ್ವತೋ ಮುಖೋ' ಇತ್ಯಾದಿ ವೇದಾಂತ ಭಾಗಗಳನ್ನು ತಮ್ಮ ವಚನದಲ್ಲಿ ಸ್ವೀಕರಿಸಿ ಉದಾಹರಿಸುತ್ತಾರೆ.

'ವೇದಾಂತಜನ್ಯಂ ಯತ್ ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।
ತಸ್ಯಾಂ ರಮಂತೇ ಯೇ ಶೈವಾಃ ವೀರಶೈವಾಸ್ತು ತೇ ಮತಾಃ ॥'

ಎಂದು ಸಿದ್ಧಾಂತಶಿಖಾಮಣ್ಯಾದಿಗಳಲ್ಲಿ ಹೇಳಿರುವಂತೆ ಜ್ಞಾನಭಾಗವಾದ ವೇದವನ್ನು ಮಾತ್ರ ಪುರಸ್ಕರಿಸುವರು.

'ಶಿವಾರ್ಥೇ ದೇಹಸಂಶೋಷಃ ತಪಃ, ಕೃಚ್ಛ್ರಾದಿ ನೋ ಮತಂ ।
ಶಿವಾರ್ಚಾ ಕರ್ಮವಿಜ್ಞೇಯಂ, ಬಾಹ್ಯಂ ಯಾಗಾದಿ ನೋಚ್ಯತೇ ।
ಜಪಃ ಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವ ವಾ ।
ರುದ್ರಾಧ್ಯಾಯಾದಿಕಾಭ್ಯಾಸೋ ನ ವೇದಾಧ್ಯಯನಾದಿಕಂ ।
ಧ್ಯಾನಂ ಶಿವಸ್ಯ ರೂಪಾದಿಚಿಂತಾ ನಾತ್ಮಾದಿಚಿಂತನಂ ।
ಶಿವಾಗಮಾರ್ಥವಿಜ್ಞಾನಂ ಜ್ಞಾನಂ, ನಾನ್ಯಾರ್ಥವೇದನಂ ।
ಇತಿ ಪಂಚಪ್ರಕಾರೋಽಯಂ ಶಿವಯಜ್ಞಃ ಪ್ರಕೀರ್ತಿತಃ ॥'

ಎಂದರೆ ಶಿವಾರ್ಥಕ್ಕಾಗಿ ದೇಹವನ್ನು ದಂಡಿಸುವುದೇ ತಪವಲ್ಲದೆ, ವ್ರತಾದಿಗಳಿಂದ ದೇಹವನ್ನು ಕೃಶಪಡಿಸುವುದು ತಪವೆನಿಸದು. ಶಿವಪೂಜಾಕರ್ಮವೇ ಕರ್ಮವಲ್ಲದೆ ಇನ್ನಿತರ ವೈದಿಕರ ಯಾಗಾದಿ ಕರ್ಮಗಳು ಕರ್ಮಗಳೆನಿಸವು. ಆ ಕರ್ಮಗಳು

ಆಗಮಿಕರಿಗೆ ನಿಷಿದ್ಧಗಳು. ಜಪವೆಂದರೆ ಶಿವಪಂಚಾಕ್ಷರೀ ಮಂತ್ರವೇ ಜಪ, ಅಥವಾ ಪ್ರಣವೋಪಾಸನೆ ಜಪ. ಬೇರಾವೂ ಜಪಗಳಲ್ಲ. ವೇದದಲ್ಲಿ ರುದ್ರಾಧ್ಯಾಯಾದಿಗಳ ಅಭ್ಯಾಸಮಾತ್ರವೇ ಅಭ್ಯಾಸ. ಉಳಿದ ವೇದಾಧ್ಯಯನ ನಿಷಿದ್ಧ. ಶಿವನ ರೂಪಾದಿ ಚಿಂತನ ೯ ಧ್ಯಾನವಲ್ಲದೆ ಆತ್ಮಾದಿಚಿಂತನೆಯು ಧ್ಯಾನವೆನಿಸದು. ಶಿವಾಗಮಗಳನ್ನರಿಯುವುದೇ ಜ್ಞಾನ. ಇತರ ಶಾಸ್ತ್ರಾರ್ಥಗಳ ಜ್ಞಾನವು ಜ್ಞಾನವಲ್ಲ. ಹೀಗೆ ಶಿವಭಕ್ತರಿಗೆ ಪಂಚಪ್ರಕಾರವಾದ ಶಿವಯಜ್ಞವು ವಿಧಾಯಕವಾಗಿದೆ. ಈ ಪಂಚಪ್ರಕಾರಾತ್ಮಕವಾದ ಶಿವಯಜ್ಞವು ಎಲ್ಲ ಶಿವಾಗಮಾನುಯಾಯಿಗಳ ನಿಲವು. ವೀರಮಾಹೇಶ್ವರರ ನಿಲವೂ ಇದೇ. ಶಿವವಿದ್ಯೆಯು ಮುಂದೆ ವೇದವಿದ್ಯೆಯು ಸಲ್ಲ. ಪಾಲ್ಕುರಿಕೆ ಸೋಮನಾಥನು ತನ್ನ ಬಸವರಾಜೀಯಂ ಎಂಬ ಭಾಷ್ಯದಲ್ಲಿ ವೇದ ಮತ್ತು ಆಗಮಗಳ ಬಗೆಗೆ

'ವೇದಶಾಸ್ತ್ರಪುರಾಣಾದ್ಯಾಃ ಜ್ಞೇಯಾ ವೇಶ್ಯಾವಧೂರಿವ ।
ಯಾ ಪುನಶ್ಯಾಂಕರೀ ವಿದ್ಯಾ ಗುಪ್ತಾ ಕುಲವಧೂರಿವ ॥"

ಎಂದು ಕಟುವಾಗಿಯೇ ತಿಳಿಸಿ ಶಿವಾಗಮಸ್ಥ ಶಿವಜ್ಞಾನವು ವೇದಜ್ಞಾನಕ್ಕಿಂತಲೂ ಮಿಗಿಲು ಹಾಗೂ ಶುದ್ಧ ಎಂಬುದನ್ನು ಸಾರಿದ್ದಾನೆ. ವೀರಮಾಹೇಶ್ವರರ ಸಿದ್ಧಾಂತದಲ್ಲಿ ವರ್ಣಾಶ್ರಮವನ್ನು ಒಪ್ಪುವುದಿಲ್ಲ. ಇವರು ಅತಿವರ್ಣಾಶ್ರಮಿಗಳು, ಶಿವಾಶ್ರಮಿಗಳು. ಜಾತಿ ಭೇದಗಳನ್ನು ತೊಡೆದುಹಾಕಿ ಸರ್ವರಿಗೂ ಸಮಾನತೆಯನ್ನಿತ್ತು ಸೋದರತ್ವವನ್ನೂ ಕಾರುಣ್ಯವನ್ನೂ ಸಾಧಿಸಿ ಸರ್ವರಿಗೂ ಲಿಂಗೋಪಾಸನಾಧಿಕಾರ ಲಿಂಗಧಾರಣಾಧಿಕಾರ ಕೊಟ್ಟು ಕಾಯಕತತ್ವವನ್ನು ಕಡ್ಡಾಯಗೊಳಿಸಿ ಸಂಪೂರ್ಣವಾಗಿ ನೀತಿಯ ನೆಲಗಟ್ಟಿನ ಮೇಲೆ ಶಿವಧರ್ಮದಲ್ಲಿ ಸರ್ವರನ್ನೂ ನಿಲ್ಲಿಸಿತು. ಈ ಶಿವಾಗಮಾನುಯಾಯಿಗಳಾದ ವೀರಮಾಹೇಶ್ವರರ ವೈಶಿಷ್ಟ್ಯವೆಂದರ ಲಿಂಗಧಾರಣೆ. ಅದೂ ಪ್ರಾಣಲಿಂಗಧಾರಣೆ. ಈ ಲಿಂಗವನ್ನು ಸದಾ ಮೈಮೇಲೆ ಅಗಲದಂತೆ ಧರಿಸಿ ಕರಪೀಠದಲ್ಲಿಯೇ ಅರ್ಚಿಸಿ-ಕರಪೀಠದ ಲಿಂಗದ ಮೂಲಕವೇ ಶಿವಯೋಗಸಾಧನೆ ಮಾಡಿ ಶಿವತ್ವ ಗಳಿಸುವುದು. ಇಂತಹ ವೀರಮಾಹೇಶ್ವರರ ಲಕ್ಷಣಗಳೇನು ? ಅವರ ಆಚರಣೆಗಳು ಹೇಗಿರಬೇಕು ? ಇವರ ಸಿದ್ಧಾಂತವೆಂತಹುದು? ಇವರ ಮನೋಭಾವಗಳು ಎಂತಿರುವುವು ? ಎಂಬುದನ್ನು ಸಮನ್ವಯ ದೃಷ್ಟಿಯಿಟ್ಟುಕೊಂಡು ವೇದ-ಆಗಮ-ಪುರಾಣೇತಿಹಾಸಾದಿಗಳಿಂದ ಈ ವೀರಮಾಹೇಶ್ವರಾಚಾರಸಂಗ್ರಹ ಗ್ರಂಥವನ್ನು ನಿರೂಪಿಸಿರುವನು. ಹೆಚ್ಚು ಸದಾಚಾರಕ್ಕೆ ಒತ್ತು ಕೊಟ್ಟು ರಚಿಸಿರುತ್ತಾನೆ. ಗ್ರಂಥದ ಹೆಸರೂ ಅನ್ವರ್ಥಕವಾಗಿಯೇ ಇದೆ.

## ಲಿಂಗೋಪಾಸನೆ ಶೈವಾಗಮ ಸಂಸ್ಕೃತಿ ಮತ್ತು ಅದರ ಪ್ರಾಚೀನತೆ

ಶಿವಾಗಮಗಳು ಸರ್ವರನ್ನೂ ಲಿಂಗಪೂಜಕರನ್ನಾಗಿಸಿ ಶಿವಂಕರ ಶಿವಮಾರ್ಗ ವನ್ನು ಸರ್ವರಿಗೂ ಸಮಾನತೆ-ಸೋದರತೆ-ಕಾರುಣ್ಯ-ಮುಂತಾದ ಸಕಲ ಜೀವಾವಳಿಗೆ ಲೇಸುಂಟುಮಾಡಿ, ತಾನೂ ಶಿವಾನುಗ್ರಹ ಪಡೆದು ಮುಕ್ತವಾಗುವಂತಹ ವೈಶಾಲ್ಯ ಮನೋಭಾವದ ಶಿವಜ್ಞಾನವನ್ನು ಬೋಧಿಸುತ್ತವೆ. ಅವರಿವರೆನ್ನದೆ ಸ್ತ್ರೀ-ಪುರುಷ ಚಂಡಾಲ-ಬ್ರಾಹ್ಮಣ ಯಾರೇ ಆಗಿರಲಿ ಎಲ್ಲರಿಗೂ ಸಮಾನ ಧರ್ಮಾವಕಾಶ ವನ್ನು ಈ ಶಿವಧರ್ಮವು ಅನಾದಿಯಿಂದಲೂ ಕೊಟ್ಟಿದೆ ಎಂಬುದಕ್ಕೆ ಸರ್ವರೂ ಸ್ವಹಸ್ತಗಳಿಂದಲೇ ಪೂಜಿಸಿಕೊಂಡು ಬಂದಿರುವ, ಈಗಲೂ ಪೂಜಿಸುತ್ತಿರುವ ಭಾರತಾದ್ಯಂತ ಶ್ರೀಶೈಲ-ಕಾಶೀ ಮುಂತಾದ ಕ್ಷೇತ್ರಗಳಲ್ಲಿರುವ ದ್ವಾದಶಜ್ಯೋತಿ-ರ್ಲಿಂಗಗಳೇ ಇವುಗಳ ಉಪಾಸನೆಯೇ ಈ ಶಿವಾಗಮಧರ್ಮದ ಮನೋವೈಶಾಲ್ಯಕ್ಕೆ, ಲೋಕಕಾರುಣ್ಯಕ್ಕೆ, ವಿಶ್ವಭ್ರಾತೃತ್ವಕ್ಕೆ ಮಹಾಸಾಕ್ಷೀಭೂತಗಳಾಗಿವೆ. ಅಲ್ಲದೆ ಈ ಲಿಂಗೋಪಾಸನೆಯು ಒಂದಾನೊಂದು ಕಾಲಕ್ಕೆ ಪ್ರಪಂಚಾದ್ಯಂತ ಹರಡಿತ್ತು ಎಂಬುದಕ್ಕೆ ಪ್ರಾಚೀನ ಇತಿಹಾಸದ ಸಾಕ್ಷಿಗಳೂ ಸಾಕಷ್ಟಿವೆ. ಈ ಶಿವಾಗಮ ಸಂಸ್ಕೃತಿಯೇ ಮೂಲ ಭಾರತೀಯ ಸಂಸ್ಕೃತಿ. ಈ ದೇಶಕ್ಕೆ ವಲಸೆ ಬಂದುದು ವೈದಿಕಸಂಸ್ಕೃತಿ. ಈ ಎರಡು ಸಂಸ್ಕೃತಿಗಳಲ್ಲಿ ಮಹದಂತರಗಳಿವೆ. ಇವ್ವರೂ ಈಗ ಭಾರತದಲ್ಲಿ ವೇದಸಂಸ್ಕೃತಿಯ ಮಿಶ್ರವಾದ ಶೈವಸಂಸ್ಕೃತಿಯನ್ನು ಕಾಣು ತ್ತೇವೆ.

## ಶಿವಾಗಮಗಳ ಉಜ್ಜೀವನ ಕಾರ್ಯ

ಈ ಶಿವಾಗಮ ಸಂಸ್ಕೃತಿಯು ಭಾರತದಲ್ಲಿ ಕಾಶ್ಮೀರ-ತಮಿಳುನಾಡು-ಕರ್ಣಾಟಕಗಳಲ್ಲಿ ತಮ್ಮ ಪ್ರಾಂತೀಯ ಭಾಷೆಗಳಲ್ಲಿಯೂ ಮತ್ತು ಸಂಸ್ಕೃತ ದಲ್ಲಿಯೂ ಉಜ್ಜೀವಿತವಾಗಿದೆ ಎಂಬುದಕ್ಕೆ ಕಾಶ್ಮೀರ ವಿಬುಧರ ಕಾಶ್ಮೀರಿ ಹಾಗೂ ಸಂಸ್ಕೃತ ಭಾಷಾಗ್ರಂಥಗಳೂ, ತಮಿಳಿನಲ್ಲಿರುವ ಒಂಭತ್ತು ಶಿವಾಗಮಾಧಾರಗಳ ಮೇಲೆ 3000 ಪದ್ಯಾತ್ಮಕವಾಗಿ ರಚಿಸಿರುವ ತಿರುಮೂಲರ್ ಎಂಬ ಪ್ರಸಿದ್ಧ ಶೈವಾಚಾರ್ಯರ 'ತಿರುಮಂದಿರಂ' ಎಂಬ ಮಹಾಕೃತಿ. ಮೆಯಕಂಡ ದೇವರ್ ಅವರು ರೌರವಾಗಮದ 12 ಸೂತ್ರಾಧಾರಗಳಿಂದ ರಚಿಸಿರುವ ಶಿವಜ್ಞಾನಬೋಧೆ ಎಂಬ ದ್ರಾವಿಡ ಕೃತಿ, ಅಘೋರಶಿವಾಚಾರ್ಯಕೃತ ಸಂಸ್ಕೃತದ 'ಮೃಗೇಂದ್ರಾಗಮ ವೃತ್ತಿದೀಪಿಕಾ' ಸೋಮಶಂಭುವಿನ ಸಕಲಾಗಮಸೇತುವೆನಿಸಿರ್ಪ 'ಸೋಮ ಶಂಭುಪದ್ಧತಿಃ, ಜ್ಯೋತಿರ್ನಾಥನ 'ಶೈವರತ್ನಾಕರಃ' ಕರ್ಣಾಟಕದ ಶಿವಶರಣರ ಕನ್ನಡ ವಚನಶಾಸ್ತ್ರ, ಪಾಲ್ಕುರಿಕೆ ಸೋಮನಾಥನ ಸಮಗ್ರ ಕೃತಿಗಳು, ಶಿವಯೋಗಿ

ಕೃತ ಸರ್ವಾಗಮಸಾರಭೂತವಾದ 'ಸಿದ್ಧಾಂತಶಿಖಾಮಣಿಃ,' ಜಕ್ಕಣಾರ್ಯಕೃತ 'ಏಕೋತ್ತರಶತಸ್ಥಲೀ' ಮೊಗ್ಗೆಯ ಮಾಯಿದೇವನ ಸಮಗ್ರಕೃತಿಗಳು, ನೀಲಕಂಠ ಶಿವಾಚಾರ್ಯನ 'ಕ್ರಿಯಾಸಾರಃ,' ವಿರಕ್ತತೋಂಟದಾರ್ಯನ 'ಕೈವಲ್ಯಸಾರಃ' ಲಕ್ಕಣ್ಣದಂಡೇಶನ 'ಶಿವತಾಂತ್ರಿಕರ ಚರಣಾಂಬುಜಕ್ಕೆ ಶರಣು' ಎಂದು ಶೈವಾಗಮಿಕರಾದ ವೀರಮಾಹೇಶ್ವರರಿಗೆ ಮಣಿಯುತ್ತಬರೆದಿರುವ 'ಶಿವತತ್ತ್ವಚಿಂತಾಮಣಿ,' ಇತ್ಯಾದಿ ಶಿವಾಗಮ ಸಾಹಿತ್ಯ ವಿಪುಲವಾಗಿ ಬೆಳೆದುಬಂದಿದ್ದರೂ, 28 ಶಿವಾಗಮಗಳ ಸಮಗ್ರಪರಿಚಯಾತ್ಮಕ ಗ್ರಂಥ ಭಾರತದೇಶದಲ್ಲಿ ಸಂಸ್ಕೃತದಲ್ಲೂ ಭಾರತೀಯ ಇತರ ಭಾಷೆಗಳಲ್ಲಿಯೂ ದೊರೆತಿಲ್ಲ. ವ್ಯಷ್ಟಿಯಾಗಿ ಪರಿಚಯಿಸುವ ಕೃತಿಗಳು ಹಲವಿದ್ದರೂ ಸಮಷ್ಟಿಯಾಗಿ 28 ಶಿವಾಗಮಗಳನ್ನು ಸ್ಥೂಲವಾಗಿ ಪರಿಚಯ ಮಾಡಿಕೊಡುವ ಕೃತಿಯೆಂದರೆ ಕನ್ನಡ ನಾಡಿನ ಶ್ರೀ ನಿಜಗುಣಶಿವಯೋಗಿಗಳ 'ವಿವೇಕ ಚಿಂತಾಮಣಿ' ಎಂಬ ಕನ್ನಡಗ್ರಂಥ ಮಾತ್ರವಾಗಿದೆ. ಇದು ಕನ್ನಡದಲ್ಲಿನ ವಿಶ್ವಕೋಶದಂತಿದ್ದು ಒಂದು ಪ್ರಕರಣದಲ್ಲಿ ಸ್ಥೂಲವಾಗಿ ಸಮಗ್ರ ಶಿವಾಗಮಗಳ ಪರಿಚಯವನ್ನು ಕೊಡತಕ್ಕ ಅಖಂಡ ಭಾರತದಲ್ಲಿನ ಏಕೈಕ ಗ್ರಂಥವಾಗಿದೆ. ಈ ಅಂಶವನ್ನು ಕಪಟರಾಳ್ ಕೃಷ್ಣರಾಯರು ತಮ್ಮ 'ಲಾಕುಳಶೈವರ ಇತಿಹಾಸ'ವೆಂಬ ಗ್ರಂಥದಲ್ಲಿ ತಿಳಿಸಿರುವರು.

ಕಾಮಿಕಾದಿವಾತುಲಾಂತಗಳಾದ ಇಪ್ಪತ್ತೆಂಟು ಶಿವಾಗಮಗಳ ಮೂಲಕ ಶಿವಪ್ರತಿಷ್ಠಿತವಾದ ಈ ಶಿವಧರ್ಮವನ್ನು ನಂದ್ಯಾದಿಪ್ರಮಥರೂ ಶ್ವೇತಾಚಾರ್ಯಾದಿ ಲಕುಲೀಶಾಂತಯೋಗಾಚಾರ್ಯರೂ ರುರು ಉಪಮನ್ಯು ದಧೀಚಿ ದುರ್ವಾಸ ಗೌತಮ ಅಗಸ್ತ್ಯಾದಿ ಋಷಿಪುಂಗವರೂ ಸಾನಂದಶಿವಯೋಗಿ ಮುಂತಾದ ಮುನಿಗಳೂ ಕಾಶ್ಮೀರದ ವಿಬುಧರೂ ತಮಿಳುನಾಡಿನ ಶೈವಾಚಾರ್ಯರೂ ಕರ್ಣಾಟಕದ ಬಸವಾದಿ ಶಿವಶರಣ - ಶರಣೆಯರೂ ಬೆಳೆಸಿಕೊಂಡು ಬಂದು ಅವಿಸ್ಮರಣೀಯರಾಗಿರುವರು. ಆದರಲ್ಲೂ ಶ್ರೀಲಕುಲೀಶ ಮಹಾಯೋಗಿಯ ಪ್ರಭಾವ ವಂತೂ ಭಾರತಾದ್ಯಂತ ಪ್ರಭಾವಶಾಲಿಯಾಗಿ ಸಮಸ್ತ ಶಿವಧರ್ಮೀಯರ ಮೇಲೆ ಅಚ್ಚಳಿಯದಂತೆ ಕ್ರಿ.ಶ. 17ನೆಯ ಶತಕದವರೆಗೂ ಅಚ್ಚೊತ್ತಿದ್ದಂತೆ ನಿಂತಿದೆ ಯೆಂಬುದಕ್ಕೆ ಶೈವಶಾಸನಾಧಾರಗಳೂ ಶೈವಸಾಹಿತ್ಯಾಧಾರಗಳೂ ವಿಪುಲವಾಗಿವೆ. ಅಗಸ್ತ್ಯನಷ್ಟೇ ಶಿವಾಗಮಗಳಿಗೆ ಶೈವಧರ್ಮಕ್ಕೆ ಇತ್ತಿರುವ ಕೊಡುಗೆ ಅಪಾರ ಅವಿಸ್ಮರಣೀಯ.

## ಚಾರಿತ್ರಿಕವಾಗಿ ಲಿಂಗಧಾರಣೆಯ ಸಮೀಕ್ಷೆ

ಇನ್ನು ಈ ಲಿಂಗಧಾರಿಗಳಾದ ವೀರಮಾಹೇಶ್ವರರ ಲಿಂಗಧಾರಣೆಯನ್ನು ಚಾರಿತ್ರಿಕವಾಗಿ ಕಾಣಲು—

1. ಕ್ರಿ.ಶ. 2-3-4ನಲ್ಲಿ ಶಿವಸಮುತ್ಪಾದಿತ ರಾಜವಂಶದವರಾಗಿ ಹಿಂದೂಧರ್ಮ ಸಂರಕ್ಷಕರಾಗಿ ಶಿವಧರ್ಮೋದ್ಧಾರಕರಾಗಿ ಸಮ್ರಾಟರೆನಿಸಿ ಬಾಳಿದ ನಾಗವಂಶೀಯರಾದ-ಭವನಾಗಾದಿ ಭಾರಶಿವರಾಜರುಗಳು ಲಿಂಗಧಾರಿಗಳಾಗಿದ್ದರೆನ್ನಲು — 'ಅಂಸಭಾರ ಸನ್ನಿವೇಶಿತಶಿವಲಿಂಗೋದ್ವಹನಶಿವಪರಿತುಷ್ಟಸಮುತ್ಪಾದಿತರಾಜವಂಶಾನಾಮ್' ಎಂಬ ಅವರ ಶಾಸನಸ್ಥ ವಾಕ್ಯವು ಭಾರಶಿವರು ಲಿಂಗಧಾರಿಗಳಾಗಿದ್ದರೆಂದು ಸ್ಪಷ್ಟಪಡಿಸುತ್ತದೆ.

2. ಕ್ರಿ.ಶ. 4-5. ಇದೇ ಭಾರಶಿವರ ಬೀಗರಾಗಿ ಭಾರಶಿವರ ಪುತ್ರಿಯ ಸಂಬಂಧ ಮಾಡಿ ಭಾರಶಿವರ ಸಮ್ರಾಟ್ ಗಿರಿಯನ್ನೂ ಭಾರಶಿವರು ತಾವಾಗಿಯೇ ವಾಕಾಟಕ ಸಾಮ್ರಾಜ್ಯದಲ್ಲಿ ವಿಲೀನ ಮಾಡಿಕೊಟ್ಟುದರಿಂದ—ಮಹಾ ಸಮ್ರಾಟರೆನಿಸಿ ಭಾರಶಿವರಂತೆಯೇ ಮುಂದುವರಿದು—ಉತ್ತರ ಭಾರತದಲ್ಲಿ ಶೈವಧರ್ಮವನ್ನು ನೆಲೆಗೊಳಿಸಿ ಹಿಂದೂ ಧರ್ಮರಕ್ಷಕರಾಗಿ ಉಜ್ವಲವಾಗಿ ರಾಜ್ಯಭಾರ ಮಾಡಿದ ವಾಕಾಟಕರಾಜನಾದ ಪ್ರವರಸೇನನ ಶಾಸನದಲ್ಲಿಯೂ ಮೇಲಿನ ಭಾರಶಿವರ ವರ್ಣನೆಯಂತೆಯೇ 'ಅಂಸಭಾರ × × ×" ಎಂದೂ 'ಮಹಾಭೈರವಭಕ್ತಸ್ಯ' 'ಅತ್ಯಂತ-ಮಾಹೇಶ್ವರಸ್ಯ' 'ಪರಮಮಾಹೇಶ್ವರಮಹಾರಾಜಶ್ರೀಪ್ರವರಸೇನಸ್ಯ ವಚನಾತ್' ಇತ್ಯಾದಿ ಮಾದ ಶಾಸನದಲ್ಲಿ ಇವರೂ ಲಿಂಗಧಾರಿಗಳೆಂಬ ವಿಚಾರವು ವಿದಿತವಾಗುತ್ತದೆ.

3. ಕ್ರಿ.ಶ. 567ರಲ್ಲಿ ಇದೇ ವಾಕಾಟಕವಂಶದ ಕಿರುಶಾಖೆಯವರಾಗಿದ್ದ ಪಲ್ಲವರು ದಕ್ಷಿಣ ಭಾರತದಲ್ಲಿ ಕಾಂಚಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಸಮ್ರಾಟರಾಗಿ ದಕ್ಷಿಣಭಾರತವನ್ನೆಲ್ಲಾ ಶೈವವನ್ನಾಗಿಸಿ ಶಿವಧರ್ಮಕ್ಕೆ ಒತ್ತುಕೊಟ್ಟರು. ಉನ್ನತ ರೀತಿಯಲ್ಲಿ ಮಹಾಸಾಮ್ರಾಜ್ಯವನ್ನೂ ಆಳಿದರು. ಈ ಚಕ್ರವರ್ತಿಗಳಲ್ಲಿ ರಾಜಸಿಂಹನೆಂಬ ಚಕ್ರವರ್ತಿಯು—ಶಿವಲಿಂಗಧಾರಿಯಾಗಿದ್ದನೆನ್ನಲು ಡಾ. ಹುಲ್ಷ್‌ರವರು ಸಂಪಾದಿಸಿ ಪ್ರಕಟಿಸಿರುವ (South Indian Inscriptions(Tamil & Sanskrit Vol I) ಗ್ರಂಥದಲ್ಲಿನ—ನಂ, 18,19,21, 22 ರಲ್ಲಿ ಬಂದಿರುವ

'ಯಸ್ಯಾಂಗುಷ್ಠಭರಾಕ್ರಾನ್ತಃ ಕೈಲಾಸಸ್ಸದಶಾನನಃ |
ಪಾತಾಲಮಗಮನ್ಮೂರ್ಧ್ನಾ ಶ್ರೀನಿಧಿಸ್ತಂ ಬಿಭರ್ತ್ಯಜಮ್ ||
ಭಕ್ತಿಪ್ರಹ್ವೇಣ ಮನಸಾ ಭವಂ ಭೂಷಣಲೀಲಯಾ
ದೋಷ್ಣಾ ಚ ಯೋ ಭುವೋ ಭಾರಂ ಜೀಮೂತ್ ಸ ಶ್ರೀಭರಶ್ಶಿರಮ್ ||

ಶ್ರೀಮತೋಽತ್ಯನ್ತಕಾಮಸ್ಯ× × ।
ಶ್ರೀನಿಧೇಃ × × ಹರಾರಾಧನಸಂಗಿನಃ
ಅಭಿಷೇಕಜಲಾಪೂರ್ಣೇ ಚಿತ್ರರತ್ನಾಂಬುಜಾಕರೇ ।
'ಆಸ್ತೇ ವಿಶಾಲೇ ಸುಮುಖಃ ಶಿರಸ್ಸರಸಿ ಶಂಕರಃ ॥

ನಂ 24, 31ರಲ್ಲಿನ—

ರಾಜಸಿಂಹೋ ರಣಜಯಃ ಶ್ರೀಭರಶ್ಚಿತ್ರಕಾರ್ಮುಕಃ
ಏಕವೀರಶ್ಚಿರಂ ಪಾತು ಶಿವಚೂಡಾಮಣಿರ್ಮಹೀಮ್ ॥

ನಂ. 33ರಲ್ಲಿನ—

'ಗುಣಭರನಾಮನಿ ರಾಜನ್ಯನೇನ ಲಿಂಗೇನ ಲಿಂಗಿನಿ ಜ್ಞಾನಮ್
ಪ್ರಥತಾಚ್ಚಿರಾಯ ಲೋಕೇ ವಿಪಕ್ಷವೃತ್ತೇಃ ಪರಾವೃತ್ತಮ್ ॥'

ಚಂಗಲ್‌ಪೇಟೆ. ಡಿ॥ ವಾಯಲೂರು ಗ್ರಾಮದ (ಸರ್ಕಾರದವರು 1903ರಲ್ಲಿ ಮುದ್ರಿಸಿರುವ) ಶಾಸನದಲ್ಲಿನ—

"ಜೀಯಾನ್ಮಹೇಶ್ವರಶಿಖಾಮಣಿದೀಪ್ತಮೌಲಿಃ"

ಎಂಬ ವಿಶೇಷಣವೂ ಇತ್ಯಾದಿಯಾಗಿ ಈ ಪಲ್ಲವ ಚಕ್ರವರ್ತಿಯು ಲಿಂಗಧಾರಿಯಾಗಿದ್ದನೆಂಬುದನ್ನು ಚಮತ್ಕಾರವಾಗಿ, ಶ್ಲೇಷದಿಂದಲೂ, ತಾರ್ಕಿಕರೀತಿಯಿಂದಲೂ ವರ್ಣಿಸಿದೆ.

ನಂ 34ರ ಶಾಸನದಲ್ಲಿ ಈ ಲಿಂಗಧಾರಣೆಯು ಪ್ರಾಣಲಿಂಗರೂಪವೇ ಆಗಿರುವದೆಂಬುದನ್ನು ವಿಶದವಾಗಿ ಈ ರೀತಿ ತಿಳಿಸುತ್ತದೆ—

'ಶಿವಂ ಶಿರಸಿ ಧಾರಯತಾತ್ಮಸಂಸ್ಥಂ'

ಎಂಬಲ್ಲಿ ಆತ್ಮಸಂಸ್ಥಂ ಶಿವಂ ಶಿರಸಿ ಧಾರಯತಾ ಗುಣಭರನೃಪತಿನಾ' ಎಂಬುದ—ಶೈವಾಗಮರೀತ್ಯಾ ಶ್ರೀಗುರುವು ದೀಕ್ಷಾಕಾಲಕ್ಕೆ ಸಂಸ್ಕರಿಸಿ ಶಿಷ್ಯನ ಪ್ರಾಣಕಲೆಯನ್ನೂ ಲಿಂಗದಲ್ಲಿಯೂ, ಲಿಂಗಕಲೆಯನ್ನು ಶಿಷ್ಯನ ಪ್ರಾಣದಲ್ಲಿಯೂ ನೆಲೆಗೊಳಿಸಿ ಶಿಷ್ಯನ ಕರಕ್ಕೆ ಕೊಟ್ಟು ಉಪದೇಶಿಸುವಾಗ

ಪ್ರಾಣವದ್ಧಾರಣೀಯಂ ತತ್ ಪ್ರಾಣಲಿಂಗಮಿದಂ ತವ ।
ಕದಾಚಿತ್ ಕುತ್ರಚಿದ್ವಾಪಿ ನ ವಿಯೋಜಯ ದೇಹತಃ ।'

ಎಂದು ಈ ಇಷ್ಟಲಿಂಗವು ಪ್ರಾಣಲಿಂಗವು ಪ್ರಾಣಲಿಂಗರೂಪ. ಇದು ನಿನ್ನ ಪ್ರಾಣಲಿಂಗ

ಇತ್ಯಾದಿ ಹೇಳಿರುವಂತೆ, ಈ ಅಂಶವನ್ನೇ ಶಾಸನದಲ್ಲಿ ಈ ರಾಜನು ಶಿರಸ್ಸಿನಲ್ಲಿ ಧರಿಸಿಕೊಂಡಿರುವ ಲಿಂಗವು ಪ್ರಾಣಲಿಂಗವೆಂಬುದನ್ನು 'ಆತ್ಮಸಂಸ್ಥಂ ಶಿವಂ ಶಿರಸಿ ಧಾರಯತಾ' ಎಂಬ ವಾಕ್ಯದಿಂದ ಚಿತ್ರಿಸಿದ್ದಾನಾಗಿ ಈ ಪಲ್ಲವ ಚಕ್ರವರ್ತಿಯೂ ಲಿಂಗಧಾರಿಯಾದ ವೀರಶೈವನಾಗಿದ್ದನೆಂಬಂಶವು ಸರಳವಾಗಿ ತಿಳಿಯುತ್ತದೆ. ಅಲ್ಲದೆ—ಈತನಿಗೆ ಶ್ರೀಕಾರಸಹಿತವಾಗಿ ಬರೆದಿರುವ ವಿಶೇಷಣಗಳು ಅದೇ ರಾಜಸಿಂಹೇಶ್ವರ ದೇವಾಲಯದಲ್ಲಿ ಸುಮಾರು 274 ಇದ್ದು ಅವುಗಳಲ್ಲಿ "ಶ್ರೀ ಆಗಮಪ್ರಮಾಣಃ ಶ್ರೀಆಗಮಾನುಸಾರೀ, ಶ್ರೀಇಲಾಪರಮೇಶ್ವರಃ, ಶ್ರೀಈಶಾನಶರಣಃ ಶ್ರೀಈಶ್ವರಭಕ್ತಃ ಶ್ರೀಶಂಕರಭಕ್ತಃ, ಶ್ರೀಋಷಭ-ಲಾಂಛನಃ' ಇತ್ಯಾದಿ ವಿಶೇಷಣಗಳೂ ಇದ್ದು ವೀರಮಾಹೇಶ್ವರನಿವನು, ಎಂಬುದು ಸಿದ್ಧವಾಗುತ್ತದೆ.

4. ಹರಿಭದ್ರಸೂರಿಯು (ಕ್ರಿ.ಶ. 700–770) ತನ್ನ ಷಡ್ದರ್ಶನ ಸಮುಚ್ಚಯದಲ್ಲಿ 'ಅಥ ನೈಯಾಯಿಕಾನಾಂ ಯೌಗಪದಾಭಿಧಾನಾಂ ಲಿಂಗಾದಿವ್ಯಕ್ತಿರುಚ್ಯತೇ' ಎಂದು ಹೇಳುವಲ್ಲಿ 'ಕರೇ ಜಟಾದೌ ಚ ಪ್ರಾಣಲಿಂಗಧರಾಶ್ಚಾಪಿ ಭವಂತಿ' ಎಂದು ಪ್ರಾಣಲಿಂಗಧರರ ಉಲ್ಲೇಖ ಮಾಡಿರುವನು.

5. ಪಾಲ್ಕುರಿಕೆ ಸೋಮನಾಥನು ತನ್ನ ಬಸವಪುರಾಣದ (ಆ. )ಲ್ಲಿ ಗಣಪಾಲು (ಕಲಿಗಣನಾಥ) ಕಥಾ ಎಂಬುದಾಗಿ ಹೇಳುವಲ್ಲಿ ಗಣಪಾಲು ಎಂಬ ಅಥವಾ (ಕಲಿಗಣನಾಥನೆಂಬ) ಪ್ರಾಚೀನ ಶಿವಭಕ್ತನೊಬ್ಬನು 'ಶಿವನಿಗೂ ಶಿವದೀಕ್ಷೆಯಿತ್ತು ಲಿಂಗಧಾರಣ ಮಾಡಿದನು' ಎಂದು ಹೇಳಿದೆ.

6. ಭಾರಶಿವರು-ವಾಕಾಟಕರು ತಮ್ಮ ಭುಜಗಳಲ್ಲಿ ಲಿಂಗವನ್ನು ಧರಿಸಿಕೊಂಡಂತೆ ಸಾಕ್ಷಾತ್ ಶಿವನೂ ತನ್ನ ಭುಜದ ಮೇಲೆ ಲಿಂಗವನ್ನು ಧರಿಸಿ, ಉಮಾಸಮೇತನಾಗಿ ಗೋಡೆಯ ಗೂಡು (ದೇವಕೋಷ್ಠ)ಗಳಲ್ಲಿ ಮಂಡಿಸಿರುವ ಶಿವನ ಮೂರ್ತಿ ಶಿಲ್ಪಗಳೂ ದಕ್ಷಿಣ ಭಾರತದಲ್ಲಿ ಅನೇಕ ಸ್ಥಳಗಳಲ್ಲಿ ದೊರಕುತ್ತವೆ. ಉದಾಹರಿಸಬೇಕೆಂದರೆ, ಎಲ್ಲೋರದ ಕೈಲಾಸಗವಿಯ ಒಳಗೆ ಇಂತಹ ಲಿಂಗಧಾರೀ ಶಿವನ ಎರಡು ಮೂರ್ತಿಗಳಿವೆ. ಮತ್ತು ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿಯೂ ಲಿಂಗಧಾರಿಯಾದ ಶಿವನ ಮೂರ್ತಿಯಿರುತ್ತದೆ. ಹೀಗೆ ಸಾಕ್ಷಾತ್ ಶಿವನೇ ಲಿಂಗಧಾರಿಯಾಗಿ ಈ ಲಿಂಗಧಾರಣೆಯ ಪದ್ಧತಿಯ ಪ್ರಚಾರಕನೆಂಬಂತೆ ಈ ಶಿಲ್ಪಗಳು ಮೂಡಿಬಂದಿವೆ. ಈ ಲಿಂಗಧಾರಣ ಸಂಸ್ಕೃತಿಯು ಮುಂದೆ ಕರ್ನಾಟಕದಲ್ಲಿ ಶ್ರೀ ಬಸವೇಶಾದಿ ಶಿವಶರಣರ ಆಂದೋಲನದಿಂದಾಗಿ ಹೆಚ್ಚು ಪ್ರಚಾರಕ್ಕೆ ಬಂದು ಸ್ತ್ರೀ-ಪುರುಷರೆಲ್ಲರೂ ಕರಡಿಗೆ ಅಥವಾ ವಸ್ತ್ರಗಳಲ್ಲಿ

ಲಿಂಗವನ್ನು ಕೊರಳಲ್ಲಿ ಧರಿಸಿರುವ ವೀರಮಾಹೇಶ್ವರರ ಸಂಸ್ಕೃತಿಯು ದಕ್ಷಿಣ ಭಾರತದಲ್ಲಿ ವರ್ಧಿಸಿತು.*

7. ಇನ್ನು ಪ್ರಾಣಲಿಂಗಧರರ ಸಂಸ್ಕೃತಿಯನ್ನು ಅರ್ಥಾತ್ ಶಿವಧರ್ಮೋತ್ತರದಲ್ಲಿನ ವೀರಮಾಹೇಶ್ವರರ ಷಟ್ಸ್ಥಲ ಸಿದ್ಧಾಂತವನ್ನು ಉದ್ಧರಿಸಿದ ಮಹಾನುಭಾವನು ಬಸವೇಶ್ವರನು. ಮಡಿವಾಳ ಮಾಚಿದೇವರು ಬಸವಣ್ಣನವರನ್ನು ಚಿತ್ರಿಸುವಾಗ—'ಎತ್ತೆತ್ತ ನೋಡಿದಡತ್ತತ್ತ ಬಸವನೆಂಬ ಬಳ್ಳಿ, ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು' ಎಂಬಂತೆ ಸರ್ವರಿಗೂ ಲಿಂಗಧಾರಣೆಗೆ ಅವಕಾಶವಿತ್ತು ಶೈವಾಗಮ ಧರ್ಮದ ಹೆಚ್ಚಳವನ್ನು ಮಾತೃಭಾಷೆಯಲ್ಲಿ ಬೋಧಿಸಿದನು. ಈತನ ಕ್ರಾಂತಿಗೆ ಓಗೊಟ್ಟು ಕಾಶ್ಮೀರ-ಓಢ್ರ, ಸೌರಾಷ್ಟ್ರ-ಆಂಧ್ರ-ತಮಿಳುಪ್ರಾಂತ ಇತ್ಯಾದಿಗಳಿಂದ ಬಂದು ಪ್ರಾಣಲಿಂಗಧರರಾಗಿ ತಾವೂ ಕನ್ನಡ ಕಲಿತು ವಚನಶಾಸ್ತ್ರದ್ರಷ್ಟಾರರಾಗಿ ಶಿವಧರ್ಮಕ್ಕೆ ಮೆರಗುಕೊಟ್ಟರು. ಬಸವಣ್ಣನವರ ಸಮಕಾಲಕ್ಕೇ ವಚನಶಾಸ್ತ್ರವನ್ನು ಕೊಟ್ಟಿರುವ ಶರಣಶರಣೆಯರ, ಲಿಂ|| ಹಳಕಟ್ಟಿಯವರ ಸಂಶೋಧನ ಪ್ರಕಾರವಾಗಿ ಸಿಕ್ಕಿರುವ ವಚನಕಾರರ ಸಂಖ್ಯೆ 200ಕ್ಕೂ ಹೆಚ್ಚಿದೆ. ಈ ವಚನಗಳು ಉಪನಿಷತ್ತುಗಳಿಗಿಂತಲೂ ಹೊಳಪುಳ್ಳವುಗಳಾಗಿ ಶಿವಧರ್ಮಪ್ರತಿಷ್ಠಾಪಕಗಳಾಗಿವೆ. ಪಾಲ್ಕುರಿಕೆ ಸೋಮನಾಥನನು ತನ್ನ ಬಸವಪುರಾಣದಲ್ಲಿ ಬಸವಣ್ಣನವರು ಶೈಶವಲೀಲೆಯಲ್ಲಿ ಎದ್ದು ನಿಲ್ಲುವ ಅಭ್ಯಾಸ ಮಾಡುತ್ತಿದ್ದುದನ್ನು "ನಾ ವೀರಮಾಹೇಶ್ವರಾಚಾರಮೆಲ್ಲ | ಬೋವ ಈ ನಿಲ್ಚಿನ ಪೋಲ್ಕಿ ನಿಲ್ವುಂಡು" ಎಂದರೆ ವೀರಮಾಹೇಶ್ವರಾಚಾರವನ್ನು ನಾನು ಹೀಗೆ ಎತ್ತಿ ನಿಲ್ಲಿಸುವೆನೆಂಬುದನ್ನು ಸೂಚಿಸುವನೋ ಎಂಬಂತೆ ಬಸವಣ್ಣನು ಎದ್ದೆದ್ದು ನಿಲ್ಲುತ್ತಿದ್ದನಂತೆ.

ಈ ಬಸವಮಹಾನುಭಾವನೇ ಪ್ರಾಣಲಿಂಗಧರರಾದ ವೀರಮಾಹೇಶ್ವರರ ಸಿದ್ಧಾಂತೋದ್ಧಾರಕ ಮಹಾನುಭಾವನಾಗಿ ಪೂಜ್ಯತೆಸಿಸಿ ಮೆರೆಯುತ್ತಿರುವನು. ಈ ಬಸವಣ್ಣನನ್ನು ಕರ್ಣಾಟಕದ ಲಕುಲೀಶನೆನ್ನಬಹುದು.

---

* ವಿಶ್ವೇಶ್ವರಾನಂದ ಇಂಡೋಲಾಜಿಕಲ್ ಜರ್ನಲ್ ಭಾಗ II p.i (ಮಾರ್ಚಿ 1964) ಇಲ್ಲಿ ಬಂದಿರುವ 'LAKULISA AND LINGA POLYMORPHISM' ಎಂಬ ಹೋಷಿಯಾರ್‌ಪುರ ಸನ್ಮಾನ್ಯ (K. V. SOUNDARARAJAN) ಕೆ. ವಿ. ಸೌಂದರರಾಜನ್ ಸೂಪರಿ; ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯ, ಬರೋಡ ಇವರ ಲೇಖನ. p. 115-122 ನೋಡಿರಿ.

## ವೈದಿಕ ಸಂಸ್ಕೃತಿ ಮತ್ತು ಆಗಮ (ತಂತ್ರ) ಸಂಸ್ಕೃತಿಗಳ ತುಲನೆ

ಭಾರತದಲ್ಲಿ ವೈದಿಕಧರ್ಮವೆಂಬುದು ಮೊದಲಿನಿಂದಲೂ ಸ್ವತಂತ್ರವಾಗಿ ಉಳಿದುಕೊಂಡು ಬಂದಿಲ್ಲ. ಬಹುಕಾಲದಿಂದಲೂ ಭಾರತದಲ್ಲಿ ಶೈವ, ವೈಷ್ಣವ, ಜೈನ, ಬೌದ್ಧ ಮತಗಳು ಚತುಸ್ಸಮಯಗಳೆಂದು ಪ್ರಸಿದ್ಧಿ ಹೊಂದಿವೆ. ಈಗ ಭಾವಿಸಿರುವಂತೆ ಹಿಂದೂ ಜನರೆಂದರೆ, ಶೈವರು ಅಥವಾ ವೈಷ್ಣವರು ಎಂಬ ಎರಡು ಭಾಗಗಳಲ್ಲಿ ವಿಲೀನರಾಗಿ ಹೋಗಿರುವರು. ಹಿಂದೂಧರ್ಮದಿಂದ (ವೇದ-ಆಗಮಗಳಿಂದ) ಸಿಡಿದುಹೋದ ಜೈನ-ಬೌದ್ಧ ಮತಗಳಲ್ಲಿ ಜೈನಧರ್ಮವು ಮಾತ್ರ ಅತೀವ ಅಲ್ಪಸಂಖ್ಯಾತವಾಗಿ ಉಳಿದಿದೆ. ಬೌದ್ಧಧರ್ಮವು ಭಾರತದಿಂದಲೇ ದೂರವಾಗಿ ಪರದೇಶಿಯಾಗಿ ಹೆಸರಿಗೆ ಮಾತ್ರ ಅಹಿಂಸಾವಾದಿಯಾಗಿ ಬೆಳೆದು ನಿಂತಿದೆ. ಇಂದು ಭಾರತದಲ್ಲಿ ಅಲ್ಪಸಂಖ್ಯಾತರಾಗಿರುವ ಪಾರ್ಸಿ ಜನರು (ಇರಾನಿಯನ್ನರು ಅಥವಾ ಆರ್ಯರು) ಮಾತ್ರ ನಿತ್ಯಾಗ್ನಿ ಪೂಜಕರಾಗಿ ಸ್ವತಂತ್ರ ಸಮಯದವರಾಗಿರುವರೇ ವಿನಾ ಸನಾತನ ವೈದಿಕರೆಂಬ ಭಾರತೀಯರೆಲ್ಲರೂ ಹೆಸರಿಗೆ ಮಾತ್ರ ವಿಶೇಷ ಸಂದರ್ಭಗಳಲ್ಲಿ ಮಾತ್ರ ಅಗ್ನಿಪೂಜಕರೆನಿಸಿದರೂ ನಿತ್ಯವೂ ಶಿವ-ವಿಷ್ಣು ಪೂಜಕರೇ ಆಗಿದ್ದು ಶಿವ-ವಿಷ್ಣುಮೂರ್ತಿಗಳನ್ನು ಸಂಪುಟಗಳಲ್ಲಿಟ್ಟುಕೊಂಡು ಮನೆಗಳಲ್ಲಿಯೂ ಅಥವಾ ಶಿವದೇವಾಲಯ ಇಲ್ಲವೇ ವಿಷ್ಣುಮಂದಿರಗಳಲ್ಲಿನ ಸ್ಥಾವರ ದೈವಗಳಲ್ಲಿ ಭಕ್ತಿಮಾಡುತ್ತಾ ಶೈವರು ಅಥವಾ ವೈಷ್ಣವರು ಎನಿಸಿರುತ್ತಾರೆ. ಇದು ಆಗಮ ಸಂಸ್ಕೃತಿಯ ಪ್ರಭಾವ.

ಸರ್ ರಾಧಾಕೃಷ್ಣನ್‌ರವರು ತಮ್ಮ (ಭಾರತಧರ್ಮ ಭಾಗ II ಉಪನ್ಯಾಸ I ಪುಟ 17-18) 'ಇದೇ ಹಿಂದೂ ಜನರ ಮೂಲವು; ಆರ್ಯ-ದ್ರಾವಿಡರ ಸಂಪರ್ಕವು; ವೇದಾಗಮ (ತಂತ್ರ)ಗಳು' ಎಂಬ ಶೀರ್ಷಿಕೆಯಲ್ಲಿ ತಿಳಿಸಿರುವುದೇನೆಂದರೆ–

'ಭಾರತ ಚರಿತ್ರೆಯನ್ನು ಎಲ್ಲಿಂದ ನೋಡಿದರೂ, ಇಲ್ಲಿನ ಜ್ಞಾನವನ್ನೇ ತೆಗೆಯಿರಿ (ತೆಗೆದುಕೊಳ್ಳಿರಿ) ಕರ್ಮವನ್ನೇ ತೆಗೆಯಿರಿ, ಯಾವುದನ್ನು ತೆಗೆದರೂ ಸರಿಯೇ. ಇಲ್ಲಿನ ನಾಯಕರು ಸತತವೂ ಹೊಸಹೊಸ ಆಚಾರವ್ಯವಹಾರಗಳನ್ನು ಪರೀಕ್ಷಿಸುತ್ತಲೂ, ಮತ್ತು ಹೊಸಹೊಸದಾಗಿ ಬರುವ ಆಯಾಕಾಲದ ದೇಶ ಸ್ಥಿತಿಗತಿಗಳಿಗೆ ತಕ್ಕಂತೆ ತಮ್ಮ ಆದರ್ಶಗಳನ್ನು ಸರಿಯಾಗಿ ಕ್ರಮಪಡಿಸುತ್ತಲೂ ಮುಂದುವರಿದಿದ್ದಾರೆ. ಈ ಅಭಿವೃದ್ಧಿಕಾರ್ಯ "ಆರ್ಯರು ಈ ದೇಶದ ಪೂರ್ವನಿವಾಸಿಗಳೊಡನೆ ಕಲೆತಾಗ ಇವರ ಪ್ರಥಮ ಪರಿಚಯವನ್ನೂ ತಮ್ಮೆಲ್ಲರ ಶ್ರೇಯೋಭಿವೃದ್ಧಿಗೆ ಬೇಕಾದ ಕಾರ್ಯೋತ್ಸಾಹ (FIRST IMPULSE TO PROGRESS)ವನ್ನೂ ಪಡೆದರು. ಹೀಗೆಯೇ ಈ ಆರ್ಯರು ಗಂಗಾನದಿಯ ಬಯಲಿಗೆ ಬಂದಾಗ ಸಾಂಪ್ರದಾಯಿಕ ಧರ್ಮಕ್ಕೆ ವಿರೋಧ ಮಾರ್ಗಗಳಾದ ಬೌದ್ಧ-ಜೈನ

ಮಾರ್ಗಗಳು ಇವರಲ್ಲಿಯೇ ತಲೆಯೆತ್ತಿಕೊಂಡವು. ಮತ್ತಿನವರು ಶ್ರೇಷ್ಠ ನಾಗರಿಕತೆಯನ್ನು ಪಡೆದಿದ್ದ ದ್ರಾವಿಡಜನರೊಡನೆ ಬೆರೆತಾಗ ಇವರ ವೇದಧರ್ಮವು ಸೇಶ್ವರಮತ (THEISTIC RELIGION) ರೂಪವನ್ನು ಹೊಂದಿತು.'

"ವೇದಸಂಸ್ಕೃತಿಯು ಹೋಮರ್ ಕವಿಯ ಗ್ರೀಕ್ ಜನರಲ್ಲಿಯೂ ಕ್ರಿಸ್ತಶಕದ ಮೊದಲಿನಲ್ಲಿದ್ದ ಐರ್ಲೆಂಡ್ ದೇಶದ ಕೆಲ್ಟ್ ಜನಗಳಲ್ಲಿಯೂ ಮತ್ತು ಕ್ರಿಸ್ತಪೂರ್ವದಲ್ಲಿದ್ದ ಟ್ಯೂಟನ್ ಮತ್ತು ಸ್ಲಾವ್ ಜನಗಳ ಸಂಸ್ಕೃತಿಯನ್ನು ಹೋಲುವುದಲ್ಲದೆ ನಮ್ಮ ಇತಿಹಾಸ ಗ್ರಂಥಗಳಲ್ಲಿ ಈ ವೇದದ ಸಂಸ್ಕೃತಿಯು ಇಲ್ಲಿನ ದ್ರಾವಿಡ ಜನರ ಸಂಯೋಗದಿಂದ 'ಹಿಂದೂ ಸಂಸ್ಕೃತಿ'ಯಾಗಿ ಪರಿಣಾಮ ಹೊಂದಿತು. ಬಹುಪೂರ್ವದಲ್ಲಿ ಆರ್ಯಪೂಜಾ ಪದ್ಧತಿಯು ಏನಾಗಿದ್ದಿತೆಂದರೆ, ನಮ್ಮ ತಲೆಯ ಮೇಲಿರುವ ಸ್ವರ್ಗಲೋಕಾಧಿದೇವನಾದ ದ್ಯೌಃಪಿತೃವನ್ನೂ ಇಲ್ಲವೆ ಬೇರೊಬ್ಬ ದೇವತೆಯನ್ನು ಕರೆದು ಯಜ್ಞಕರ್ತೃವನ್ನು ಪ್ರೀತಿಯಿಂದ ಕಾಣಬೇಕೆಂದು ಪ್ರಾರ್ಥಿಸಿ ಈ ಕರ್ತೃವಿನಿಂದ ಹವ್ಯ ಪಾನೀಯ ಭಿಕ್ಷಾದಿ ಬಲಿಗಳನ್ನು ಸ್ವೀಕರಿಸಬೇಕೆಂಬುದೇ ಆಗಿತ್ತು. ಆದರೆ ಸ್ವಲ್ಪಕಾಲದಲ್ಲಿಯೇ ಇಂಥಾ ಯಜ್ಞಹೋಮಾದಿಗಳು ತಪ್ಪಿಹೋಗಿ ಇವುಗಳ ಸ್ಥಾನದಲ್ಲಿ ಪೂಜಾರ್ಚನಾದಿಗಳು ಬಂದು ನೆಲೆಗೊಂಡುವು. ಇದರಂತೆಯೇ ದ್ರಾವಿಡಜನರ ಭಕ್ತಿಯಲ್ಲಿ ಮುಖ್ಯವಾಗಿದ್ದ ವಿಗ್ರಹಾರಾಧನೆಯನ್ನು ಆರ್ಯರು ತಮ್ಮ ಧರ್ಮದಲ್ಲಿ ಸೇರಿಸಿಕೊಂಡರು. ಮತ್ತು ಹೀಗೆಯೇ ಅಹಿಂಸಾ ಸಾತ್ವಿಕಾಹಾರಾದಿಧರ್ಮಗಳೂ ಕೂಡ ನಮ್ಮಲ್ಲಿ ವೃದ್ಧಿಯಾಗುತ್ತ ಬಂದವು. ಅಲ್ಲದೆ ವೇದಮಾರ್ಗವು ಆಗಮ (ತಂತ್ರ) ಮಾರ್ಗಗಳಿಂದ ಆವರಿಸಲ್ಪಟ್ಟು ಈಗ ನಮ್ಮ ಹಿಂದೂಧರ್ಮದ ಸಂಪ್ರದಾಯವು ಕೇವಲ ವೇದೋಕ್ತವಾಗಿರುವುದಲ್ಲದೇ ಬಹಳಮಟ್ಟಿಗೆ ಆಗಮಯುಕ್ತವೂ ಆಗಿದೆ. ಅಂದರೆ ಈಗಿನ ಹಿಂದೂಧರ್ಮದಲ್ಲಿ ಆರ್ಯ-ದ್ರಾವಿಡ ಸಂಪ್ರದಾಯಗಳು ಬೇರೆಬೇರೆಯೆಂದು ಗೊತ್ತಾದ ರೀತಿಯಲ್ಲಿ ಕಾಣುತ್ತವೆ ಎಂದಲ್ಲ. ಮತ್ತು ಕೇವಲ ಸಂಯೋಗಕೃತವಾಗಲ್ಲದೆ (RESULTANT) ಅಭಿವೃದ್ಧಿಯುಕ್ತವಾದ (EMERGENT) ಪ್ರತ್ಯೇಕ ಧಾರ್ಮಿಕ ರಚನೆಯೊಂದರಲ್ಲಿ ಸೇರಿಸಲ್ಪಟ್ಟಿದೆ. ಇದರಿಂದ ಹಿಂದೂ ಮತದ ಅಭಿವೃದ್ಧಿ ಮಾರ್ಗದಲ್ಲಿ ವೇದಾಗಮ ಸಂಪ್ರದಾಯಗಳಲ್ಲಿ ವೈಷಮ್ಯ (FRICTION) ಕಂಡುಬಂದರೂ ಕೊನೆಯಲ್ಲಿ ಇವೆರಡೂ ಸಾಕಾದಷ್ಟು ಮಟ್ಟಿಗೆ ಸಮರಸದಿಂದ ಕೂಡಿ ಒಂದಾಗಿವೆ."* (—ಭಾರತಧರ್ಮ ಭಾಗ II ಉಪನ್ಯಾಸ II ಪುಟ. 47-48 (1929) NSS ಬೆಂಗಳೂರು)

* ಇದೇ ರಾಧಾಕೃಷ್ಣನ್‌ರವರು ತಮ್ಮ Indian Philosophy part. II p. 73, footnote ನಲ್ಲಿ ಹೀಗೆ ಹೇಳಿರುವರು—"ಕೈಲಾಸನಾಥ temple at ಕಾಂಚೀಪುರಂ

ಇದರಿಂದ—ವೈದಿಕಸಂಸ್ಕೃತಿಯೂ ಭಾರತೀಯರ ಮೂಲ ವಾಙ್ಮಯವಾದ ಆಗಮಸಂಸ್ಕೃತಿಯಲ್ಲಿ ಲೀನವಾಯಿತು ಎಂಬುದು ತಿಳಿದು ಬರುತ್ತದಲ್ಲದೆ ಈ ಆಗಮ ಸಂಸ್ಕೃತಿಯ ಮಹತ್ವವೂ ಪ್ರಭಾವವೂ ವಿದಿತವಾಗುತ್ತದೆ.

## ಶಿವಧರ್ಮೀಯರ ಇತಿಹಾಸ ತಿಳಿಯಲು ಇವರಿಗಿರುವ ಪರ್ಯಾಯ ನಾಮಗಳ ಅರಿವು ಅತ್ಯವಶ್ಯ

ಈ ವೀರಮಾಹೇಶ್ವರರ ಮತ್ತು ಸಮಸ್ತ ಶೈವರ ಇತಿಹಾಸವನ್ನು ಇತಿಹಾಸ ಪುರಾಣಾದಿಗಳಲ್ಲಿ ಗುರುತಿಸಿಕೊಳ್ಳಬೇಕಾದರೆ ಇವರಿಗೆ ಆಗಮಗಳಲ್ಲಿ–ಆಗಮೋಕ್ತ ಶಿವಧರ್ಮೀಯರ ಗ್ರಂಥಗಳಲ್ಲಿ ವ್ಯವಹರಿಸಿರುವ ಪರ್ಯಾಯ ನಾಮಗಳ ಅರಿವು ಅವಶ್ಯ ಬೇಕಾಗುತ್ತದೆ. ಅವುಗಳು ಹೀಗಿರುತ್ತವೆ.

## ಆಗಮೋಕ್ತ ಶಿವಧರ್ಮಗ್ರಂಥೋಕ್ತ ಪರ್ಯಾಯ ನಾಮಗಳು

| | |
|---|---|
| ಭೂರುದ್ರರು | ಜಂಗಮರು |
| ಅಸಂಖ್ಯಾತರು | ಪ್ರಮಥರು |
| ಲಿಂಗಿಗಳು | ಗಣಂಗಳು |
| ಲಿಂಗಾಂಗಿಗಳು | ಶಿವಭಕ್ತರು |
| ಲಿಂಗಾಯತ್ತರು | ಚರಮಶರೀರಿಗಳು |
| ವೀರಶೈವರು | ಲೋಕಪಾವನರು |
| ವೀರಮಾಹೇಶ್ವರರು | ಶಿವಕುಲೀನರು |
| ಮಹಾವ್ರತಿಗಳು | ಶಿವಗೋತ್ರೀಯರು |
| ಶಿರೋವ್ರತಿಗಳು | ಶಿವತಾಂತ್ರಿಕರು |
| ಶಿವವ್ರತಿಗಳು | ಆಗಮಿಕರು |
| ಮಹಾಪಾಶುಪತರು | ಶಿವಭಾಗವತರು |
| ಶಿವಾಚಾರ್ಯರು | ಶಿವಾಗಮಾನುಯಾಯಿಗಳು |

---

we have the earliest record of 28 Saivagamas in which ಪಲ್ಲವ king ರಾಜಸಿಂಹವರ್ಮ of the 5th century states his faith. ಎಂದರೆ ಕಾಂಚಿಯಲ್ಲಿರುವ ಕೈಲಾಸನಾಥ ದೇವಾಲಯದಲ್ಲಿ 28 ಶಿವಾಗಮಗಳ ಉಲ್ಲೇಖವನ್ನು ಮೊಟ್ಟಮೊದಲನೆಯದಾಗಿ ಕಾಣುತ್ತೇವೆ. ಆ ಶಾಸನದಲ್ಲಿ 5ನೆಯ ಶತಮಾನದ ರಾಜಸಿಂಹವರ್ಮನು ಶಿವಾಗಮದಲ್ಲಿ ನಂಬಿಕೆಯಿಟ್ಟಿದ್ದನೆಂದೂ ತಿಳಿಸುತ್ತದೆ." ಎಂದೂ ತಿಳಿಸಿರುವರು.

ಪರಮಮಾಹೇಶ್ವರರು
ಶಿವಯೋಗಿಗಳು
ಷಟ್ಸ್ಥಲಬ್ರಹ್ಮಿಗಳು
ಅಪ್ರಾಕೃತರು
ಅಯೋನಿಜರು
ಲಿಂಗೋದ್ಭವರು
ಲಿಂಗೈಕ್ಯರು
ಶಿವಶರಣರು
ಪ್ರಾಣಲಿಂಗಧರರು
ಶಿವಧರ್ಮೀಯರು
ಕರಪೀಠಾರ್ಚಕರು
ಶೀಲವಂತರು
ಶಿವಾನುಭಾವೀಪ್ರಸಾದಿಗಳು
ಪ್ರಾಣಲಿಂಗಿಗಳು
ಸದಾಶುಚಿಗಳು
ಅತ್ಯಾಶ್ರಮಿಗಳು
ಶಿವಾಶ್ರಮಿಗಳು
ಮಹಾಮಾಹೇಶ್ವರರು
ಲಿಂಗಧಾರಿಗಳು
ಸರ್ವೋತ್ತಮವ್ರತಿಗಳು
ಜಂಗಮಲಿಂಗಿಗಳು
ಚರಲಿಂಗಾರ್ಚಕರು
ಶಿವಾದ್ವೈತಿಗಳು
ಶಿವಸಿದ್ಧಾಂತಿಗಳು
ಶಿವಾಚಾರದವರು
ದ್ವೈತಾದ್ವೈತಿಗಳು
ಶೈವರು
ಶಿವದೀಕ್ಷಿತರು—ಇತ್ಯಾದಿ

## ಶೈವವು ಸಪ್ತವಿಧ

ಅನಾದಿಶೈವ
ಆದಿಶೈವ
ಅನುಶೈವ
ಮಹಾಶೈವ
ಯೋಗಶೈವ
ಜ್ಞಾನಶೈವ
ವೀರಶೈವ

## ಶೈವಷಡ್ದರ್ಶನಗಳು

ಶೈವ
ಪಾಶುಪತ
ಕಾಳಾಮುಖ
ಮಹಾವ್ರತಿ
ಸಂನ್ಯಾಸಿ
ಕಾಲ

## ಶೈವಪ್ರಭೇದಗಳು

ವಾಮಶೈವ
ದಕ್ಷಿಣಶೈವ
ಮಿಶ್ರಶೈವ
ಭೈರವಶೈವ

ಲಾಕುಳಶೈವ
ಪಾಶುಪತಶೈವ
ರಸೇಶ್ವರಶೈವ
ಕಾಪಾಲಿಕಶೈವ
ಶುದ್ಧಶೈವ
ಮಾಹೇಶ್ವರ

## ಆಧಾರ ಗ್ರಂಥಗಳು

28 ಶಿವಾಗಮಗಳು (ತಂತ್ರಗಳು)
ಉಪಾಗಮಗಳು
ಪಾಶುಪತಸೂತ್ರ
ಅಗಸ್ತ್ಯಸೂತ್ರ
ಶಿವಸೂತ್ರಗಳು
ನಾಗಾನಂದಿಸೂತ್ರ
ರೌರವಾಗಮಸೂತ್ರಗಳು
ಸ್ವಾಯಂಭುವಸೂತ್ರಗಳು
ಮಾಹೇಶ್ವರಸೂತ್ರಗಳು

## ಸಂಪಾದನೆಯ ಕಾರ್ಯದಲ್ಲಿ ಬಳಸಿಕೊಂಡಿರುವ ಮಾತೃಕೆಗಳ ವಿವರ

(1) (ಚ) ಪ್ರತಿ (ಓ.ಆರ್.ಐ.)

ಇದು ಚಿತ್ರದುರ್ಗದ ಮುರುಘಾ ಮಠದ ಪ್ರತಿ. ಬೃಹದೋಲೆ. ವ್ಯಾಖ್ಯಾ ಸಹಿತ. 21.7''×1.11''. ಪತ್ರಗಳು 1 ರಿಂದ 388. ಸಾಲು 10. ಅಕ್ಷರ 130. ಶಕಟರೇಫವಿದೆ. ಸಮಗ್ರ ಭಾಷೆ ಸಂಸ್ಕೃತ. ವ್ಯಾಖ್ಯಾನ ಕನ್ನಡ. ಅಧ್ಯಾಯ 78. ಗ್ರಂಥ 8000.

ಅನುಕ್ರಮಣಿಕಾಧ್ಯಾಯ

ಆದಿ—ಶ್ರೀಮದ್ಗುರು ಬೋಳಮಲ್ಲಿಕಾರ್ಜುನದೇವಾಯ ನಮಃ.
ಬಸವೇಶ್ವರಚೆನ್ನಬಸವೇಶ್ವರ ಅಲ್ಲಮಪ್ರಭುವೇ ನಮಃ ॥
ನೀಲಕಂಠನಾಗನಾಥಾಚಾರ್ಯ್ಯನು ವಿರಚಿಸಿದಂಥ ವೀರಮಾಹೇಶ್ವರಾಚಾರ ಸಂಗ್ರಹದ ವ್ಯಾಖ್ಯಾನದ ಪುಸ್ತಕಕ್ಕೆ ನಿರ್ವಿಘ್ನಮಸ್ತು ॥

ಅಂತ್ಯ—ಪ್ರಸ್ತಾವನೆಯಲ್ಲಿ ವ್ಯಾಖ್ಯಾನಕಾರನ ಹೇಳಿಕೆಯಲ್ಲಿ ಅಂತ್ಯಭಾಗವನ್ನು ಈ (ಚ) ಪ್ರತಿಯಿಂದಲೇ ಉದ್ಧರಿಸಿದೆ.

'ಇದು ಶಿವಭಕ್ತ ಜಾತಕಚಯಕ್ಕೆ ××× ಭೂತಳಾಗ್ರದೊಳ್ ॥೬॥'
ಇಲ್ಲಿಯವರೆಗೆ ಕೊಟ್ಟಿದೆಯಷ್ಟೆ. ಇದು ವ್ಯಾಖ್ಯಾನಕಾರನು ಹೇಳಿಕೊಂಡಿರುವುದು. ಇದಾದ ನಂತರ ಪ್ರತಿಮಾಡಿದವನು ಈ ರೀತಿ ಬರೆದುಕೊಂಡಿರುವನು—

'ಶ್ರೀಮತ್ ಸಜ್ಜನ ಶುದ್ಧ ಶಿವಾಚಾರಸಂಪನ್ನರಾದ ಪಂಚಾಚಾರಾಷ್ಟಾವರಣಸಂಯುಕ್ತರಾದ ಶಿವಲಿಂಗಾರ್ಚನೆಯಲ್ಲಿ ತತ್ಪರರಾದ ಬೆಳಕವಾಡಿ ಬೋಳಮಲ್ಲಿಕಾರ್ಜುನಸ್ವಾಮಿಯ ಸುಹಸ್ತದ ಬರಹವನಭ್ಯಾಸಿಸಿ, ಚಿಕ್ಕೈಯ ದೇವರ ಸನ್ನಿಧಿಯಲ್ಲಿರ್ದ ವಿರಕ್ತ ಅಂನದಾನದೇವರ ಸುಹಸ್ತದಲ್ಲಿ ವೀರಮಾಹೇಶ್ವರಾಚಾರಸಂಗ್ರಹದ ಪುಸ್ತಕವಂ ಬರಇಸಿ, ಸಮಸ್ತ ಸದ್ಭಕ್ತ ವೀರಮಾಹೇಶ್ವರರುಗಳು ಬರದೋದಿ ಮಹಾನುಭಾವನಂ ಕರ್ನ್ನಪೂರಿತವಾಗೊಲ್ದು ಕೇಳಿ ಶಿವನೊಳ್ಕೂಡಿ ಸುಖಸಂತೋಷದಿಂದೊಪ್ಪುತ್ತಿರಲಿ ಯೆಂದು ಸಚ್ಚಿದಾನಂದ ನಿತ್ಯಪರಿಪೂರ್ನ್ನ ನಿರಂಜನಸ್ವಯ ಜ್ಯೋತಿಸ್ವರೂಪ ಷಟ್ಸ್ಥಲಾಚಾರ್ಯ ಸಂಪಂನ ವೀರಮಾಹೇಶ್ವರಾಚಾರಾಗ್ರಗಣ್ಯ ಸಕಲಸದ್ಭಕ್ತ ಮಾಹೇಶ್ವರರಲ್ಲಿ ಪರಿಪೂಜ್ಯವಾಗಿ ಕವಿತಾಚಾತುರ್ಯದಿಂ ಪ್ರಖ್ಯಾತಿಯಾದ ಮರಿರಾಚವಟ್ಟಸ್ವಾಮಿಯ ಕೃಪಾಮೃತಕಟಾಕ್ಷ ನಿರೀಕ್ಷಣೆಯಿಂ ವರ್ದ್ಧನವಾದ ಚಿಕ್ಕೈಯದೇವರು ತಂಮ ಕರುಣ ಕೃಪೆ ಇಂದಂ ಯೋಚಿಸಿ ನೋಡುತ್ತಿರಲಾ ಶಿವಾನುಭಾವವೆಂಬ ಪರಮಾಂಮೃತರಸಂ ತೊಟ್ಟಿಡುತ್ತಿರಲು ಯಿಂತಿದೆ ಕ್ಕೊಂದಾಶ್ರಯುವಂ ನಿರ್ಮಿಸಲಿಚ್ಛೈಸಿ, ಪಡುವಣದೆಸೆಯಿಂದೊಪ್ಪುತಿರ್ದ ಲವಣಾಂಬುಧಿಗೆ ಪುಬುರ್ಮಂ ಪುಟ್ಟಿದ ಠಾಂಗಿರ್ದ್ದ ಗಟ್ಟದ ಸರೋವರಂಗಳಲ್ಲೇಕಪಾದ ಚರ (?) ಕೆದಜಾದ ಮುಂಡೆ, ಮೌನವ್ರತದಿಂದೊಪ್ಪುತ್ತಿರ್ದ್ದ ದಿವ್ಯತಾಳಾಪತ್ರವಂ ತಂದು ದ್ವಿತೀಯ ರಂಧ್ರವಂ ಮಾಡಿ ಬಂಗದ ಹೊರೆಯೆಂತೊಂಡೊಂದು ಪೊಂದಿಸಿಕ್ಕೆಲದಲುಭಯಂ ಪಲಗೆಯಷ್ಟಲೋವೆಯಷ್ಟಮೂಲೆಗಳಿಂದತ್ಯಂತಲಂಕರವಾಗಿ ಕಣ್ಗೆ ಚೆಲ್ವಾಗೊಪ್ಪಲ್ಪಟ್ಟ ದಿವ್ಯ ಶಿವಾಲಯುವಂ ನಿರ್ಮಿಸಿದಿಂತಿರಬಾರದೆಂದು ಬಿಂದು ವಿಸರ್ಗ್ಗಂ ದಡ್ಡತೆ ಪೊಂದಿದಾ ವೃತ್ತೋರ್ಧ್ವರೇಫೆ ದೀರ್ಗ್ಗ ಹ್ರಸ್ವದಿಂದೊಪ್ಪುತ್ತಿರ್ದ್ದ ಅಕ್ಷರಮೂರ್ತ್ತಿಗಳಂ ಲೇಖನವಂ ಮಾಡೆಂದು ಚಿಕ್ಕೈಯನವರು ದಿವ್ಯ ಅಲೇಖವುಂ ಷಟ್ಸ್ಥಲಜ್ಞಾನಸಂಪನ್ನರಾದ ವಿರಕ್ತ ಅಂನದೇವರ ಹಸ್ತದಲ್ಲಿ ಪಾಲಿಸಲು, ಯಿಂತೀ ಶಿವಗಣಂಗಳ ನಿರೂಪವಂ ಕೈಕೊಂಡು ಬರಉದಕ್ಕೆ ಯಂನ ಕಂಗಳು ಜಿಹ್ವೆ ಕರಕರ್ನ್ನಂಗಳು ಗತಿಮತಿಚೈತನ್ಯಕ್ಕೆ ಸಮಸ್ತ ಸದ್ಭಕ್ತ ವೀರಮಾಹೇಶ್ವರರುಗಳೇ ಕರ್ತರಾದ ಕಾರಣ ಯಿಂತಿವರ ಕರುಣಪ್ರಸಾದವಂ ಕೈಕೊಂಡು ಈ ವೀರಮಾಹೇಶ್ವರಾಚಾರಸಂಗ್ರಹವ ಬರೆದೆನಲ್ಲದೆ ನನ್ನಿಚ್ಛೆಯೊಳಂ ನಾ ಬರದುದಿಲ್ಲ ‖

ಯಾದೃಶಂ ಪುಸ್ತಕಂ ದೃಷ್ಟ್ವಾ ತಾದೃಶಂ ಲಿಖಿತಂ ಮಯಾ ।
ಅಬದ್ಧೋ ವಾ ಸುಬದ್ಧೋ ವಾ ಮಮ ದೋಷಂ ನ ವಿದ್ಯತೇ ‖

ಇಂತೆಂದುದಾಗಿ ಈ ಪುಸ್ತ್ರಕವ ಬರದ ಸ್ಥಿತಿಯೆಂತೆಂದಡೆ—ಸ್ವಸ್ತಿ ಶ್ರೀ ವಿಜಯಾಭ್ಯುದಯ ವಿಧಿಷ್ಟಶಖ ವಿಕ್ರಮಶಖಯೊ ದ್ವಿತೀಯಶಖಸಂದದು ೪೦೦೦ ವರುಷ । ಸಾಲಿವಾಹನ ಶಖ ಸಂದದು ೧೫೮೩ ವರುಷ ಸಂದು ವರ್ತ್ತಮಾನವಾದ ‖

ಸಾರ್ವರಿ ಸಂವತ್ಸರದ ಚೈತ್ರಮಾಸದ ಶುಕ್ಲಪಕ್ಷದ ರೇವತಿ ನಕ್ಷತ್ರದ ಶುದ್ಧ ದಶಮಿ ಶಶಿವಾರದಲ್ಲು ಬರದ ವಿರಕ್ತ ಅಂನದಾನದೇವರು ಆಚಾರ್ಯ ಚಿಕ್ಕೈಯ ದೇವರಿಗೆ ನೀಲಕಂಠನಾಗನಾಥಾಚಾರ್ಯ್ಯರು ವಿರಚಿಸಿದಂಥಾ ವೀರಮಾಹೇಶ್ವರಾಚಾರ ಸಂಗ್ರಹವೆಂಬ ಬಾಹುಲ್ಯವಾದ ವ್ಯಾಖ್ಯಾನಶಾಸ್ತ್ರವ ಬರದು ಸಂಪೂರ್ನ್ನವಾಯಿತ್ತು ಯಿಂತೀ ಪುಸ್ತಕಕ್ಕೈಶ್ವರ್ಯಮಸ್ತು ಶುಭಮಸ್ತು ನಿರ್ವಿಘ್ನಮಸ್ತು ಅಜೀರ್ನ್ನ-ಮಸ್ತು ಆಯೊರಾರೋಗ್ಯಮಸ್ತು ಚಂದ್ರಾರ್ಕತಾರಾನಭವುಳ್ಳನಕಂ ಸ್ಥಾಯಿ ಯಸ್ತು ||

ಭಗ್ನಪೃಷ್ಟಕಟಿಗ್ರೀವಬದ್ಧದೃಷ್ಟಿರಧೋಮುಖಂ ||
ಕಷ್ಟೇನ ಲಿಖಿತಂ ಶಾಸ್ತ್ರಂ ಯತ್ನೇನ ಕೃತ ಪಾಲಯ ||

ಇಂತೆಂದುದಾಗಿ | ಈ ಪುಸ್ತಕವಂ ಬರವರ್ಗ್ಗಂ ಓದುವರ್ಗಂ ಶಿವಾನುಭಾವವಂ ನಿರೂಪಿಸುವರ್ಗಂ ಲಾಲಿಸುವರ್ಗ್ಗಂ ಸಹಸ್ರಕೋಟಿ ನಮಸ್ಕಾರವಂ ಮಾಡು ತ್ತಿರ್ದೇನೆ. ಯಂನ ಬಿಂನಪವನವಧರಿಸಿ ಯಿದಂ ಬರದ ನಿಂಮ ಕರುಣದ ಕಂದನಿಗೆ ನಿಂಮ ಕೃಪಾಮೃತರಸವನೆಱಮ ನೋಡಿ ಸಲಹಿ ನಿಮ್ಮ ಶ್ರೀಪಾದಪದ್ಮಾರಾಧನೆಯಂ ಯೆಂಪೆಂದು ಪಿಂಗದಂತೆ ಮಾಡಯ್ಯಾ ಲಿಂಗತಂದೆ ಶರಣು ಶರಣಾರ್ತ್ಥಿ ||

ಪುಸ್ತಕಂ ವನಿತ ವಿತ್ತಂ || ಪರಹಸ್ತಗತಾಗತಂ |
ಆಯಾಸಂ ಪುನರಾಯಾಸಂ ಭ್ರಸ್ಟಭ್ರಷ್ಟಾ ಚ ಭ್ರಸ್ಟಯೋ ||
ಜಲಾದ್ರಕ್ಷ ತೈಲಾದ್ರಕ್ಷ | ದ್ರಕ್ಷಮುಸ್ಥಾಗ್ಯಬಂಧನಾತ್ |
ಅವಸ್ಯಂ ಯಾಚಕದ್ರಕ್ಷ ಮಮ ರಕ್ಷಂತು ಪುಸ್ತಕಂ ||

ನೀಲಕಂಠನಾಗನಾಥಾಚಾರ್ಯರು ವಿರಚಿತೇ |
ವೀರಮಾಹೇಶ್ವರಾಚಾರ ಸಂಗ್ರಹಂ ಸಂಪೂರ್ಣಂ ಮಂಗಳ ಮಹಾ
ಶ್ರೀ ಶ್ರೀ ಶ್ರೀ ಶ್ರೀ ಶ್ರೀ

ಈ ಪ್ರತಿಯ (ಚ) ಆದಿಮ ಪತ್ರದಲ್ಲಿ ಗ್ರಂಥಾರಂಭಕ್ಕೆ ಮೊದಲು ಇರುವ ಓಲೆಯ ಪತ್ರದಲ್ಲಿ 10 ಶೀರ್ಷಿಕೆಗಳಲ್ಲಿ ವಿಷಯಾನುಕ್ರಮಣಿಕೆಯನ್ನು ಓಲೆ ಸಂಖ್ಯಾ ಸಹಿತವಾಗಿ ಬರೆದಿರುತ್ತದೆ.

(2) (ಕ) ಪ್ರತಿ (ಓ.ಆರ್.ಐ.)

K 474. 34.5″ × 2.1″ ಪತ್ರಗಳು 365. ಸಾಲು 10. ಅಕ್ಷರ 140. ವ್ಯಾಖ್ಯಾನಸಹಿತ. ಸಮಗ್ರ.
ಆದಿ—ಶುಭಮಸ್ತು ವೀರಮಾಹೇಶ್ವರಾಚಾರಸಂಗ್ರಹದ ವ್ಯಾಖ್ಯಾನ ||
ಯಸ್ಸಂಸಾರಾತ್ × × × ×

ಅಂತ್ಯ—(ಚ) ಪ್ರತಿಯಲ್ಲಿರುವಂತೆಯೇ ವ್ಯಾಖ್ಯಾಕಾರನ ಹೇಳಿಕೆಯಿದೆ.

'ಇದು ಶಿವಭಕ್ತ ಚಾತಕಚಯಕ್ಕೆ × × × ಭೂತಳಾಗ್ರದೊಳ್'

ಆದನಂತರ ಪ್ರತಿಮಾಡಿದವನ ಹೇಳಿಕೆ—

'ಶ್ರೀವೀರ..........ಸಿದವರು ಸೆಜ್ಜೆ ರೇವಣಸಿದ್ಧೇಶ್ವರನು |

ಈ ಪುಸ್ತಕ ಎಲ್ಲಾ ವೀರಮಾಹೇಶ್ವರರ ಪುಸ್ತಕ ಸಮಾಪ್ತ ಮಂಗಲಮಹಾ ॥

ಶ್ರೀ ಶ್ರೀ ಶ್ರೀ ಶ್ರೀ ಶುಭಮಸ್ತು ನಿರ್ವಿಘ್ನಮಸ್ತು | ಮಳವಳ್ಳಿಯ ನೋಟದ ಮಲ್ಲೇದೇವರ ಮಗ ಮಲ್ಲಿಕಾರ್ಜುನನು ಬರೆದನು ಶುಭಮಸ್ತು ನಿರ್ವಿಘ್ನಮಸ್ತು ॥

× × × ಪುತ್ರಿಕೆಯೆಂದು ತೆಕ್ಕೊಂಡ ಂದಾವರು ಶಿವಭಕ್ತರು ತಂಮ ಜನನಿ × × × ಅಳಿಪಿದ ಹಾಂಗೆ × ×

(3) (ಖ) ಪ್ರತಿ

K 167. 21.4″ × 1.3″ ಒಟ್ಟು 432 ಪತ್ರ. ಸಾಲು 12. ಅಕ್ಷರ 120. ವ್ಯಾಖ್ಯಾಯುತ. ಅಲ್ಲಲ್ಲಿ ತ್ರುಟಿತ ಪತ್ರಗಳು. 17 ರಿಂದ 432 ಮತ್ತೆ 3 ಪತ್ರಗಳು. ಕೊನೆಯ 432ನೆಯ ಪತ್ರವೂ ತ್ರುಟಿತವಾಗಿ ಮುಕ್ತಾಯ ಭಾಗವಿದೆ. 'ಇದು ಶಿವಭಕ್ತ ಚಾತಕ–ಚಯಕ್ಕೆ × ಭೂತಳಾಗ್ರದೊಳ್' ಎಂಬುದಿದ್ದು, ಇತಿ ಶ್ರೀ ನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ಸದಾಚಾರ ನಿರೂಪ ....ಶ್ರೀಮದೀಶ್ವರ–ಸ್ಕಂದಸಂವಾದೋ ನಾಮಾಷ್ಟಸಪ್ತತಿತಮೋಽಧ್ಯಾಯಃ ಶ್ರೀ ಶ್ರೀ ಶ್ರೀ ಎಂದು ಮುಕ್ತಾಯವಾಗಿದೆ.

ಆದಿ—ಶ್ರೀ ಗುರುಬಸವಲಿಂಗಾಯ ನಮಃ ॥

ವೀರಮಾಹೇಶ್ವರಾಚಾರಸಂಗ್ರಹದ ವ್ಯಾಖ್ಯಾನವು ॥

ಯಸ್ಸಂಸಾರಾತ್ × × × ಶ್ರೀಗುರವೇ ನಮಃ ॥

ಕಾಲಾದಿಗಳು ಈ 'ಖ' ಪ್ರತಿಯಲ್ಲಿರುವುದಿಲ್ಲ.

(4) (ಗ) ಪ್ರತಿ (ಓ.ಆರ್.ಐ.)

S. A. 564. 381 ಪತ್ರಗಳು. ಕನ್ನಡ ಲಿಪಿ. ಕಾಗದ ಪ್ರತಿ. ಮೂಲ ಮಾತ್ರ.

ಆದಿ—ಶ್ರೀ ಶ್ರೀರಸ್ತು ಪರಬ್ರಹ್ಮಣೇ ನಮಃ. ಶ್ರೀಗುರುಸ್ವತಂತ್ರಸಿದ್ಧಲಿಂಗೇಶ್ವ–ರಾಯನಮಃ. ಶ್ರೀವೀರಮಾಹೇಶ್ವರಾಚಾರಸಂಗ್ರಹೋ ಲಿಖ್ಯತೇ. ಲಿಖಿತಮ–ವಿಘ್ನಮಸ್ತು. 'ಯಸ್ಸಂಸಾರಾತ್ × × ಇತ್ಯಾದಿ.' ಈ ಎಲ್ಲ ಪ್ರತಿಗಳೂ ಸಾಮಾನ್ಯವಾಗಿ 'ಕ' ಪ್ರತಿಯನ್ನೇ ಹೋಲುವುವು.

ಅಂತ್ಯ—ಶ್ರೀ ಕಲಿಯುಗೇ ಪಶ್ಚಾದ್ಭೂತಾನಾಂ ೪೯೬೪ ವರ್ಷಾಣಾಂ ಮಂತ್ಯಸ್ಯ ಶೋಭನಸಂವತ್ಸರಸ್ಯ ಮಾಘಕೃಷ್ಣಚತುರ್ದಶಿ ಭಾನುಜವಾಸರೇ ಶ್ರೀನೀಲಕಂಠ-ನಾಗನಾಥಾಚಾರ್ಯವರ್ಯವಿರಚಿತೋಯಂ ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹಃ ಶ್ರೀಮಲ್ಲೀಲಾಖ್ಯ ಮುರಿಗಾಖ್ಯ ಶಿವಯೋಗಿನಾ ಲಿಖಿತ್ವಾ ಪರಿಸಮಾಪ್ತಃ ॥ ಮಂಗಳಮಸ್ತು ಶುಭಮಸ್ತು ನಿರ್ವಿಘ್ನಮಸ್ತು ಆಯುರಾರೋಗ್ಯಮಸ್ತು ॥ ಶ್ರೀಗುರು ಸ್ವತಂತ್ರಸಿದ್ಧಲಿಂಗದೇಶಿಕೇಂದ್ರಾಯ ನಮಃ। ಶ್ರೀಗರಳಪುರಾಧೀಶ್ವರಶ್ರೀಕಂಠಾಯ ನಮಃ। ಶ್ರೀಮಲ್ಲಿಕಾರ್ಜುನೇಶ್ವರಾಯ ನಮಃ ॥ ಶ್ರೀ॥ ಸಮಗ್ರ ಮೂಲಮಾತ್ರ.

(5) (ಘ) ಪ್ರತಿ. ಮುದ್ರಿತಪ್ರತಿ (3 ಭಾಗಗಳು)

ಗ್ರಂಥಕಾರನು ಈ ಗ್ರಂಥವನ್ನು ಭಾಗಗಳನ್ನಾಗಿ ವಿಭಜಿಸಿರುವುದಿಲ್ಲ. ಸೌಕರ್ಯ ದೃಷ್ಟಿಯಿಂದ ಮಾತ್ರ ಈ ಬೃಹದ್ ಗ್ರಂಥವನ್ನು ಮರಾಠೀ ಗದ್ಯಾನುವಾದ ಸಹಿತವಾಗಿ ಸೊಲ್ಲಾಪುರದಲ್ಲಿ ರಾವ್‌ಸಾಹೇಬ್ ಮಲ್ಲಪ್ಪಾ ಬಸಪ್ಪಾ ವಾರದ ಇವರು ಮೂರು ಭಾಗಗಳಾಗಿ ವಿಭಜಿಸಿ 1906 ರಲ್ಲಿ 1ರಿಂದ 16 ಅಧ್ಯಾಯಗಳನ್ನೊಳಗೊಂಡ ಪ್ರಥಮ ಭಾಗವನ್ನೂ 1907ರಲ್ಲಿ 17ರಿಂದ 45 ಅಧ್ಯಾಯಗಳನ್ನೊಳಗೊಂಡ ದ್ವಿತೀಯಭಾಗವನ್ನು ಮತ್ತು 46 ರಿಂದ 78 ಅಧ್ಯಾಯಗಳನ್ನೊಳಗೊಂಡ ತೃತೀಯ ಭಾಗವನ್ನೂ ಮುದ್ರಿಸಿರುವರು. * ಈ ಗ್ರಂಥದ ಆಂಧ್ರಾನುವಾದವನ್ನು ಪರಿಶೀಲಿಸಲಾಗಿದೆ. ಹೀಗೆ ಆರು ಮಾತೃಕೆಗಳನ್ನು ಸಂಪಾದನೆಯ ಕಾರ್ಯಕ್ಕೆ ಬಳಸಲಾಗಿದೆ. ಕ. ಗ. ಚ. ಪ್ರತಿಗಳು ಮೈಸೂರು ಜಿಲ್ಲೆಯ ಪ್ರತಿಗಳೆಂದೂ ಪ್ರತಿಕಾರರ ಬರವಣಿಗೆಗಳಿಂದ ವಿದಿತವಾಗುತ್ತದೆ. ಇಷ್ಟು ಮಾತೃಕೆಗಳ ವಿಚಾರ.

## ಮುದ್ರಣವಿಚಾರ

ಈ ಗ್ರಂಥವನ್ನು ಶ್ರೀಧರಾಂಕನ ಕನ್ನಡ ವ್ಯಾಖ್ಯಾನಸಹಿತವಾಗಿ ಆದಿಮ ಇಪ್ಪತ್ತು ಅಧ್ಯಾಯಗಳನ್ನು ಪ್ರಥಮಭಾಗವಾಗಿ ಮೈಸೂರು ವಿಶ್ವವಿದ್ಯಾನಿಲಯದ

---

*ಲಿಂ ॥ ನಿರ್ದೇಶಕರಾದ—ಹೆಚ್. ದೇವೀರಪ್ಪನವರು—

9-11-56ರಲ್ಲಿ ಕಾಶೀಜಂಗಮವಾಡೀ ಮಠದಿಂದ ಪರಿಶೀಲನೆಗಾಗಿ ತಂದಿದ್ದ—ಪರ್ವತ ಮಂತ್ರಿ ಲಿಂಗನಾಮಾತ್ಯನು ದ್ವಿಪದ ಕಾವ್ಯವಾಗಿ 10 ಆಶ್ವಾಸಗಳಲ್ಲಿ ಅನುವಾದ ಮಾಡಿರುವ ವೀರಮಾಹೇಶ್ವರಾಚಾರ ಸಂಗ್ರಹವು ಎಂಬ ಗ್ರಂಥದ ಮೂರು ಓಲೆಗಳಲ್ಲಿ ಒಂದು ಓಲೆ (199 ಪತ್ರಗಳಿದ್ದ 2 ಗೇಣುದ್ದ 12 ಅಂಗುಲ ಅಗಲದ) ಮಾತ್ರ ಶುದ್ಧವಾಗಿಯೂ ಸಮಗ್ರವಾಗಿಯೂ ಇದ್ದು ಉಳಿದ ಎರಡು ಓಲೆಗಳು ಅಸಮಗ್ರಗಳಾಗಿಯೂ, ತ್ರುಟಿತಗಳಾಗಿಯೂ ಇದ್ದುವು. ಆ ಕಾಲಕ್ಕೆ ನಾನು ಪರಿಶೀಲಿಸಿ ಬರೆದುಕೊಂಡಿದ್ದ ಟಿಪ್ಪಣಿಗಳಿಂದ—ಈ ಆಂಧ್ರ ಭಾಷೆಯ ಹಸ್ತಪ್ರತಿಯ ಸ್ಥೂಲ ವಿವರಣೆಯನ್ನು ಪ್ರಸ್ತಾವನೆಯಲ್ಲಿ ಬರೆದಿರುತ್ತೇನೆ.

ಪ್ರಾಚ್ಯವಿದ್ಯಾಸಂಶೋಧನಾಲಯದ ವತಿಯಿಂದ ಹೊರತರುತ್ತಿರಲಾಗಿದೆ. ನಿವೃತ್ತ ನಾಗುವ ಮುನ್ನ ನನ್ನಿಂದ ಸಂಪಾದಿತವಾಗಿದ್ದ ಈ ಪ್ರಥಮ ಭಾಗವು ನನ್ನ ನಿವೃತ್ತಿಯ ನಂತರ ಹೊರಬರುತ್ತಿರುವುದು ಸಂಪಾದಿಸಿದ ನನಗೆ ಸಂತಸವನ್ನುಂಟು ಮಾಡಿದೆ. ಪ್ರಕಟಪಡಿಸಲು ಸರ್ವಸಹಕಾರವಿತ್ತ ಸಂಸ್ಥೆಯ ನಿರ್ದೇಶಕರಾದ ಸನ್ಮಾನ್ಯ ಡಾ. ಕೆ. ರಾಜಗೋಪಾಲಾಚಾರ್ ಅವರಿಗೂ ಮತ್ತು ಉಪನಿರ್ದೇಶಕರಾದ ವೇದಾಂತಭೂಷಣಂ ವಿದ್ವಾನ್ ಆರ್. ಜಿ. ಮಾಳಗಿ ಅವರಿಗೂ ಮುದ್ರಣದ ಕರಡಚ್ಚನ್ನು ಸಮಗ್ರವಾಗಿ ನೋಡಿ ಸಹಕರಿಸಿದ ವಿದ್ವನ್ಮಣಿಗಳೂ ಸನ್ಮಿತ್ರರೂ ಆದ ಪ್ರಾಚ್ಯಸಂಶೋಧನಪಂಡಿತ ಹೆಚ್. ಎಸ್. ಫಾಟಕ್, ಎಂ.ಎ., ಇವರಿಗೂ ಅನೇಕ ರೀತಿಯಿಂದ ನೆರವಾದ ಸಂಸ್ಥೆಯ ಸಹೋದ್ಯೋಗಿಗಳಾದ ವಿದ್ವಾಂಸರಿಗೂ ನಾನು ಕೃತಜ್ಞನಾಗಿರುವೆನು.

ಇತಿ ವಿದ್ವಜ್ಜನವಿಧೇಯ

**ವಿದ್ವಾನ್ ಎಂ. ಎಸ್. ಬಸವರಾಜಯ್ಯ**

ನಿವೃತ್ತ ಹಿರಿಯ ಸಂಶೋಧಕ

ಪ್ರಾಚ್ಯವಿದ್ಯಾಸಂಶೋಧನಾಲಯ

ಮೈಸೂರು ವಿಶ್ವವಿದ್ಯಾನಿಲಯ

ಮೈಸೂರು

# ವೀರಮಾಹೇಶ್ವರಾಚಾರ ಸಂಗ್ರಹದ ಪ್ರಥಮಭಾಗ

## ವಿಷಯಾನುಕ್ರಮಣಿಕಾ


| ಅಧ್ಯಾಯ | | ಪುಟ |
|---|---|---|
| ೧ | ರಲ್ಲಿ ಎಪ್ಪತ್ತೆಂಟು ಅಧ್ಯಾಯಾತ್ಮಕವಾದೀ ಗ್ರಂಥದಲ್ಲಿನ ಸಮಗ್ರ ವಿಷಯಾನುಕ್ರಮಣಿಕೆ | 1 |
| ೨ | ಧರ್ಮಾಧರ್ಮಭೇದ ಕಥನ | 18 |
| ೩ | ನರಕಯಾತನಾ ನಿರೂಪಣ | 46 |
| ೪ | ಪಿಂಡೋತ್ಪತ್ತಿ ಕಥನ | 110 |
| ೫ | ಸಂಸಾರಹೇಯ ಕಥನ | 141 |
| ೬ | ವೀರಮಾಹೇಶ್ವರದೀಕ್ಷಾವಿಧಾನ | 177 |
| ೭ | ಗುರುಶುಶೂಷಾ ಕ್ರಮಃ | 203 |
| ೮ | ಪಂಚಾಕ್ಷರೀ ಮಾಹಾತ್ಮ್ಯ ಕಥನ | 228 |
| ೯ | ಸಾನಂದ ಚರಿತಮ್ | 245 |
| ೧೦ | ಮಹಾಲಿಂಗ (ಶಿವಲಿಂಗ) ಪ್ರಾದುರ್ಭಾವ ಕಥನ | 289 |
| ೧೧ | ಶಿವರಾಜ್ಯಕ್ರಮ ಕಥನ | 325 |
| ೧೨ | ಶಿವಾಜ್ಞಾಪ್ರಭಾವ ಕಥನ | 336 |
| ೧೩ | ಬಹ್ಮಶಿರಚ್ಛೇದನ ಲೀಲಾ ಕಥನ | 315 |
| ೧೪ | ಭಿಕ್ಷಾಟನ ಲೀಲಾ ಕಥನ | 419 |
| ೧೫ | ಪರಮೇಶ್ವರದತ್ತ ದಕ್ಷಶಾಪಕ್ರಮ ಕಥನ | 369 |
| ೧೬ | ದಕ್ಷಾಧ್ವರಧ್ವಂಸನ ಕಥನ | 438 |
| ೧೭ | ಶರಭಲೀಲಾ | 505 |
| ೧೮ | ಕಾಮದಹನಲೀಲಾ | 545 |
| ೧೯ | ಗಿರಿಜಾವಿವಾಹಲೀಲಾ | 571 |
| ೨೦ | ಸ್ಕಂದೋತ್ಪತ್ತಿಸೂಚನ | 638 |



# ಶ್ರೀ ನೀಲಕಂಠನಾಗನಾಥಾಚಾರ್ಯವಿರಚಿತಃ
# ವೀರಮಾಹೇಶ್ವರಾಚಾರಸಂಗ್ರಹಃ
### ಶ್ರೀಧರಾಂಕಪ್ರಣೀತಕರ್ಣಾಟಭಾಷಾವಿವರಣೋಪೇತಃ

## ಪ್ರಥಮೋಽಧ್ಯಾಯಃ
### (ಗುರುವಂದನಮ್)

ಯಸ್ಸಂಸಾರಾನ್ಮಹಾಘೋರಾನ್ಮೋಚಯ[1]ತ್ಯಾಶ್ರಿತಾನ್[1] ಜನಾನ್ ।
ಕೃಪಾಕಟಾಕ್ಷಪಾತೇನ ತಸ್ಮೈ ಶ್ರೀಗುರವೇ ನಮಃ ॥ ೧ ॥
ಆನತಾಖಿಲಸದ್ಭಕ್ತಕಾಮಿತಾರ್ಥಪ್ರದಾಯಿನೇ
ನಮೋ ಮಹಾ[2]ಯ[2]ಸೋಮೇಶಗುರವೇ ಕರುಣಾಬ್ಧಯೇ ॥ ೨ ॥

---

ವ್ಯಾಖ್ಯಾ ॥ ಯಃ = ಆವ[3]ನಾ[3]ನೊಬ್ಬ ಗುರುರಾಯನು ಆಶ್ರಿತಾನ್ = ಆಶ್ರಯಿಸಿದಂಥಾ ಜನಾನ್ = ಜನರುಗಳನು ಕೃಪಾಕಟಾಕ್ಷಪಾತೇನ = [4]ಕರುಣ[4] ಕಟಾ[5]ಕ್ಷ[5] ಬೀಳುವದರಿಂದ ಮಹಾಘೋರಾತ್ = [6]ಅತಿ[6]ಭಯಂಕರ[7]ವಹಂಥ[7] ಸಂಸಾರಾತ್ = [8]ಸಂಸಾರದ[8] ದೆಸೆಯಿಂದ ಮೋಚಯತಿ = ಬಿಡಿಸುತ್ತ[9]ಇಹನು[9] ತಸ್ಮೈ = ಅಂಥಾ [10]ಶ್ರೀ[10] ಗುರವೇ = ಶ್ರೀಗುರುವಿಂಗೋಸ್ಕರ ನಮಃ = ನಮಸ್ಕಾರವು. ॥ ೧ ॥

ಆನತಾಖಿಲಸದ್ಭಕ್ತಕಾಮಿತಾರ್ಥಪ್ರದಾಯಿನೇ = ಆನತ - ನಮಸ್ಕರಿಸಲ್ಪಟ್ಟ ಅಖಿಲಸದ್ಭಕ್ತ-ಸಮಸ್ತಸದ್ಭಕ್ತರುಗಳ ಕಾಮಿತಾರ್ಥ- ಇಷ್ಟಾರ್ಥಂಗಳ ಪ್ರದಾಯಿನೇ- ಕೊಡು[11]ತ್ತಂವಿದ್ದಂಥಾ[11] ಕರುಣಾಬ್ಧಯೇ = ಕರು[12]ಣಕ್ಕೆ[12] ಸಮುದ್ರ[13]ನಹಂಥಾ[13]

---

1 ತ್ಯಖಿಲಾನ್ (ಕ ಘ) ಮೂಲಪಾಠ 2 ಯ (ಕ) 3 (ಕ) ದಲ್ಲಿಲ್ಲ. 4 ಇಲ್ಲ (ಕ). 5 ಕ್ಷದ (ಕ) 6 ಬಹು (ಕ) 7 ವಾದ (ಕ) 8 ಜಗತ್ತಿನ (ಕ) 9 ಯಿಹನೋ (ಕ) 10 ಇಲ್ಲ (ಕ) 11 ತ್ತಲಿರುವಂಥಾ (ಕ) 12 ಣಿಗೆ (ಕ) 13 ದಂತಿರುವ (ಕ)

ನಮಃ ಕಪಿಲಸಂಸಿದ್ಧಮಲ್ಲಿಕಾರ್ಜುನಮೂರ್ತಯೇ
ಅದ್ವಿತೀಯಾಯ ನಿತ್ಯಾಯ ಶಿವಾಯ ಶಿವದಾಯಿನೇ ॥ ೩ ॥

ಶಿವಭಕ್ತ್ಯಮೃ[1]ತಾಸ್ವಾದಚೇತಸೇ ಶಿವಜನ್ಮನೇ
ನಮಶ್ಶ್ರೀನಂದಿನಾಥಾಯ ಶಂಕರಾಪರಮೂರ್ತಯೇ ॥ ೪ ॥

ಸರ್ವಂ ಶಕ್ತ್ಯಂಶಮುತ್ಸೃಜ್ಯ ಶಿವಮೇಕಮಶಿಶ್ರಿಯತ್
ಯಸ್ತಸ್ಮೈ ಭೃಂಗಿನಾಥಾಯ ನಮಃ ಕಲ್ಯಾಣರೂಪಿಣೇ ॥ ೫ ॥

ದಕ್ಷಯಜ್ಞಶಿರೋಹರ್ತ್ರೇ ಸುರದರ್ಪಾಪಹಾರಿಣೇ
ವೀರಭದ್ರಾಯ ರೌದ್ರಾಯ ನಮೋ ವಿಕ್ರಮಶಾಲಿನೇ ॥ ೬ ॥

---

ಮುಖ್ಯಾಯ[2]ಸೋಮೇಶಗುರವೇ = ಮುಖ್ಯ[3]ವಾಗಿಲ್ಪ ಸೋಮೇಶ್ವರ ಗುರುರಾಯ ಗೋಸ್ಕರ ನಮಃ = ನಮಸ್ಕಾರವು. ॥ ೨ ॥

ಕಪಿಲಸಂಸಿದ್ಧಮಲ್ಲಿಕಾರ್ಜುನಮೂರ್ತಯೇ = ಕಪಿಲ ಸಿದ್ಧಮಲ್ಲಿಕಾರ್ಜುನ ಮೂರ್ತಿಯಹಂಥಾ ಅದ್ವಿತೀಯಾಯ = ಏಕನಹಂಥಾ ನಿತ್ಯಾಯ = ನಿತ್ಯನಹಂಥಾ ಶಿವದಾಯಿನೇ = ಮಂಗಳವನು ಕೊಡುತ್ತಂವಿದ್ದಂಥಾ ಶಿವಾಯ = ಶಿವಂಗೋಸ್ಕರ ನಮಃ = ನಮಸ್ಕಾರವು. ॥ ೩ ॥

ಶಿವಭಕ್ತ್ಯಮೃತಾಸ್ವಾದಚೇತಸೇ = ಶಿವಭಕ್ತಿಯೆಂಬ ಅಮೃತವನು ಸ್ವಾದಿಸು[4]ತ್ತಂ[4]ವಿದ್ದ ಚಿತ್ತವನುಳ್ಳಂಥಾ ಶಿವಜನ್ಮನೇ = ಶಿವನಿಂದ ಉತ್ಪತ್ತಿಯನುಳ್ಳಂಥಾ ಶಂಕರಾಪರಮೂರ್ತಯೇ = ಪರಮೇಶ್ವರನ ಅಪರಾವತಾರವಹಂಥಾ ಶ್ರೀನಂದಿನಾಥಾಯ = ಶ್ರೀನಂ[5]ದಿಕೇ[6]ಶ್ವರಂಗೋಸ್ಕರ ನಮಃ = ನಮಸ್ಕಾರವು. ॥ ೪ ॥

ಯಃ = ಆವ[6]ನಾ[6]ನೊಬ್ಬ ಭೃಂಗೀಶ್ವರನು ಸರ್ವಂ = ಸಮಸ್ತವಹಂಥಾ ಶಕ್ತ್ಯಂಶಂ = ಶಕ್ತಿಯ ಅಂಶವನು ಉತ್ಸೃಜ್ಯ = ಬಿಟ್ಟು ಏಕಂ ಶಿವಂ = ಒಬ್ಬ ಶಿವನನು ಅಶಿಶ್ರಿಯತ್ = ಆ[7]ಶ್ರಯಿ[7]ಸಿದನು, ಕಲ್ಯಾಣರೂಪಿಣೇ = ಮಂಗಳ ಸ್ವರೂಪನಹಂಥಾ ತಸ್ಮೈ ಭೃಂಗಿನಾಥಾಯ = ಆ ಭೃಂಗೀಶ್ವರಂಗೋಸ್ಕರ ನಮಃ = ನಮಸ್ಕಾರವು. ॥ ೫ ॥

ದಕ್ಷಯಜ್ಞಶಿರೋಹರ್ತ್ರೇ = ದಕ್ಷನ ಯಜ್ಞದ ಶಿರಸ್ಸನ್ನು ಸಂಹರಿಸಿದಂಥಾ ಸುರದರ್ಪಾಪಹಾರಿಣೇ = ದೇವರ್ಕಗಳ ಗರ್ವವ ತಗ್ಗಿಸಿದಂಥಾ ರೌದ್ರಾಯ = ರೌದ್ರನ

---

1 ತ (ಕ) 2 ಯ (ಕ) 3 ಖ್ಯಾಯ (ಕ) 4 ತಂ (ಕ) 5 ನಂದೀ (ಕ) 6 ಇಲ್ಲ (ಕ)
7 ಶ್ರೈಸಿ (ಕ)

ಜಗತ್ಸಂ[1]ಹರ[1]ಣೋದ್ಯುಕ್ತನೃಸಿಂಹಾಜಿನ[2]ಹಾರಿಣೇ[2]
ನಮಃ ಶ್ರೀಶರಭೇಶಾಯ ಪದಾಷ್ಟಕವಿಭಾಸಿನೇ ||೭||

ಏವಮಾದೀನ್ಮಹಾಶೂರಾನಸಂಖ್ಯಾತಾನ್ಮಹಾಗಣಾನ್
ನಮಾಮಿ ಶಿವಸದ್ಭಕ್ತಿಸಾಗರೇ ಮಗ್ನಮಾನಸಾನ್ ||೮||

ನಮೋ ಬಸವರಾಜಾಯ ವೃಷೇಂದ್ರಾಪರಮೂರ್ತಯೇ
ಚರಾರ್ಚನೈಕನಿಷ್ಠಾಯ ಶಿವಾಚಾರಪ್ರವರ್ತಿನೇ ||೯||

ಶಿವತತ್ತ್ವಾಮೃತಾಸ್ವಾದಚೇತಸೇ ಯೋಗಿನೇ ನಮಃ
ಶ್ರೀಚೆನ್ನಬಸವೇಶಾಯ ಷಟ್ಸ್ಥಲಬ್ರಹ್ಮವಾದಿನೇ ||೧೦||

---

ಹಂಥಾ ವಿಕ್ರಮಶಾಲಿನೇ = ಪರಾಕ್ರಮದಿಂದ ಒಪ್ಪು[3]ತಂ[3]ವಿದ್ದಂಥಾ ವೀರಭದ್ರಾಯ = ವೀರಭದ್ರಂಗೋಸ್ಕರ ನಮಃ ನಮಸ್ಕಾರವು. ||೬||

ಜಗತ್ಸಂಹರಣೋದ್ಯುಕ್ತನೃಸಿಂಹಾಜಿನಹಾರಿಣೇ = ಲೋಕಂಗಳ ಸಂಹರಿಸು[4]ವಲ್ಲಿ[4] ಉದ್ಯೋಗವನುಳ್ಳ ನರಸಿಂಹನ ಚರ್ಮವ ತೆಗೆದಂಥಾ ಪದಾಷ್ಟಕ ವಿಭಾಸಿನೇ = ಪಾದ ವೆಂಟ[5]ಱಿಂ[5]ದೊಪ್ಪುತಂವಿದ್ದಂಥಾ ಶ್ರೀಶರಭೇಶಾಯ = ಶ್ರೀಶರಭೇಶ್ವರಂಗೋಸ್ಕರ ನಮಃ = ನಮಸ್ಕಾರವು. ||೭||

ಏವಮಾದೀನ್ = ಇವರು ಮೊದಲಾಗಿ ಇದ್ದಂಥಾ ಮಹಾಶೂರಾನ್ = ಮಹಾ ಪರಾಕ್ರಮಿಗಳಹಂಥಾ ಶಿವಸದ್ಭಕ್ತಿಸಾಗರೇ = ಶಿವ[6]ನ[6] ಸದ್ಭಕ್ತಿಯೆಂಬ ಸಮುದ್ರದಲ್ಲಿ ಮಗ್ನಮಾನಸಾನ್ = ಮುಳುಗ[7]ಲುಪ[7]ಟ್ಟ ಮನಸ್ಸನ್ನುಳ್ಳಂಥಾ ಅಸಂಖ್ಯಾತಾನ್ = ಅಸಂಖ್ಯಾತರಹಂಥಾ ಮಹಾಗಣಾನ್ = ಮಹಾಗಣೇಶ್ವರರುಗಳನು ನಮಾಮಿ = ನಮಸ್ಕರಿಸುತಂವಿದ್ದೇನು. ಣಮು ಪ್ರಹ್ವೀಭಾವೇ ಎಂಬ ಧಾತುವಿಂಗೆ ಲಟ್ಪರಸ್ಮೈಪದ ಉತ್ತಮಪುರುಷೈಕವಚನವು. ||೮||

ಚರಾರ್ಚನೈಕನಿಷ್ಠಾಯ = ಜರಲಿಂಗದ ಅರ್ಚನೆಯಲ್ಲಿ ಏಕನಿಷ್ಠೆಯನುಳ್ಳಂಥಾ ಶಿವಾಚಾರಪ್ರವರ್ತಿನೇ = ಶಿವಾಚಾರದಲ್ಲಿ ವರ್ತನೆಯನುಳ್ಳಂಥಾ ವೃಷೇಂದ್ರಾಪರ-ಮೂರ್ತಯೇ = ವೃಷಭೇಶ್ವರನ ಎರಡನೆಯ ಮೂರ್ತಿ[8]ಯಾದಂಥಾ[8] ಬಸವರಾಜಾಯ = ಬಸವದಂಡೇಶ್ವರಂಗೋಸ್ಕರ ನಮಃ = ನಮಸ್ಕಾರವು. ||೯||

ಶಿವತತ್ತ್ವಾಮೃತಾಸ್ವಾದಚೇತಸೇ = ಶಿವತತ್ತ್ವಾಮೃತವ ಸ್ವಾದಿಸುತ್ತಂವಿದ್ದ ಚಿತ್ತವನುಳ್ಳಂಥಾ ಯೋಗಿನೇ = ಶಿವಯೋಗೀಶ್ವರನಹಂಥಾ ಷಟ್ಸ್ಥಲ ಬ್ರಹ್ಮವಾದಿನೇ

---

[1] ಹಾರ (ಖ.ಚ.) [2] ಧಾರಿಣೇ (ಕ.ಖ.) [3] ತ್ತ ಇ (ಕ) [4] ಇಲ್ಲ (ಕ) [5] ೦೦ (ಕ)
[6] ಕ–ದಲ್ಲಿಲ್ಲ [7] ಲ್ಪ (ಕ) [8] ಯಹಂ (ಕ)

[1]ಬಸವೇಶಾದಿ ಸರ್ವೇಷಾಂ[1] ಗಣಾನಾಂ ಜ್ಞಾನದಾಯಿನೇ
ಯೋಗೀಂದ್ರಾಯ ನಮಸ್ತಸ್ಮೈ ಪ್ರಭವೇ ಶಿವಮೂರ್ತಯೇ ॥೧೧॥

ಶಿವಯೋಗಾಮೃತಾಂಭೋಧಿಮಗ್ನಮಾನಸವೃತ್ತಯೇ
ವಂದೇ ಶ್ರೀಸಿದ್ಧರಾಮಾಯ [2]ಭಕ್ತ[2]ಸಂಪತ್ಪ್ರಮೋದಿನೇ ॥೧೨॥

ನಮಃ ಶ್ರೀಪಂಡಿತಾರಾಧ್ಯಗುರವೇ ಸರ್ವವೇದಿನೇ
ಮಹೇಶಚರಣಾಂಭೋಜಪರಿನಿಷ್ಠಿತಚೇತಸೇ ॥೧೩॥

ಪುರಾ ವ್ಯಾಹೃತವಾನ್ಯಸ್ತು 'ಶ್ರೀಶಿವಜ್ಞಾನದೀಪಿಕಾಂ'
ಮಲ್ಲ[3]ಪಾ[3]ರ್ಯಗುರುಂ ನೌಮಿ ಮಲ್ಲಿಕಾರ್ಜುನವಲ್ಲಭಮ್ ॥೧೪॥

---

= ಷಟ್ಸ್ಥಲಬ್ರಹ್ಮವಾದಿಯುಹಂಥಾ ಶ್ರೀ ಚೆನ್ನಬಸವೇಶಾಯ = [4]ಒಪ್ಪುತ್ತಂವಿದ್ದ[4] ಚೆನ್ನಬಸವೇಶ್ವರಂಗೋಸ್ಕರ ನಮಃ = ನಮಸ್ಕಾರವು. ॥೧೦॥

ಬಸವೇಶಾದಿ ಸರ್ವೇಷಾಂ ಗಣಾನಾಂ = ಬಸವೇಶ್ವರನೇ ಮೊದಲಾದಂಥಾ ಸಮಸ್ತ ಗಣೇಶ್ವರರುಗಳಿಗೆ ಜ್ಞಾನದಾಯಿನೇ = ಜ್ಞಾನವನ್ನು ಕೊಡುತ್ತಂ ವಿದ್ದಂಥಾ ಶಿವಮೂರ್ತಯೇ = ಶಿವಮೂರ್ತಿ ಅಹಂಥಾ ಯೋಗೀಂದ್ರಾಯ = ಶಿವಯೋಗೀಂದ್ರನಹಂಥಾ ತಸ್ಮೈ ಪ್ರಭವೇ = ಆ ಪ್ರಭುವಿಂಗೋಸ್ಕರ ನಮಃ = ನಮಸ್ಕಾರವು. ॥೧೧॥

ಶಿವಯೋಗಾಮೃತಾಂಭೋಧಿಮಗ್ನಮಾನಸವೃತ್ತಯೇ = ಶಿವಯೋಗವೆಂಬ ಅಮೃತ ಸಮುದ್ರದಲ್ಲಿ ಮುಳುಗಲ್ಪ[5]ಟ್ಟ[5] ಚಿತ್ತ[6]ದ[6] ವರ್ತನೆಯುಳ್ಳಂಥಾ ಭಕ್ತಸಂಪತ್ಪ್ರಮೋದಿನೇ = ಶಿವಭಕ್ತರ ಸಂಪತ್ತಿಗೆ ಸಂತೋಷಿಸುತ್ತಂವಿದ್ದಂ[7]ಥಾ[7] ಶ್ರೀ ಸಿದ್ಧರಾಮಾಯ = ಒಪ್ಪುತ್ತಂವಿದ್ದ ಸಿದ್ಧರಾಮಂಗೋಸ್ಕರ ವಂದೇ = ನಮಸ್ಕರಿಸುತ್ತಂ ವಿದ್ದೇನು. ವದಿ ಅಭಿವಾದನಸ್ತುತ್ಯೋಃ ಎಂಬ ಧಾತುವಿಂಗೆ ಲಡಾತ್ಮನೇ ಪದ ಉತ್ತಮ ಪುರುಷೈಕವಚನವು. ॥೧೨॥

ಸರ್ವವೇದಿನೇ = ಸರ್ವವನು ಬಲ್ಲಂಥಾ ಮಹೇಶಚರಣಾಂಭೋಜಪರಿನಿಷ್ಠಿತ-ಚೇತಸೇ = ಪರಮೇಶ್ವರನ ಚರಣ ಕಮಲದಲ್ಲಿ ನಿಷ್ಠೆಯುಳ್ಳ ಚಿತ್ತವನುಳ್ಳಂಥಾ ಶ್ರೀ ಪಂಡಿತಾರಾಧ್ಯಗುರವೇ = ಒಪ್ಪು[8]ತ್ತಂ[8]ವಿದ್ದ ಪಂಡಿತಾರಾಧ್ಯಗುರುವಿಂಗೋಸ್ಕರ ನಮಃ = ನಮಸ್ಕಾರವು. ॥೧೩॥

ಪುರಾ = ಪೂರ್ವದಲ್ಲಿ ಯಃ = [9]ಆವನಾನೊರ್ವ[9] ಆಚಾರ್ಯನು ಶ್ರೀಶಿವಜ್ಞಾನ

---

[1] ಸರ್ವೇಷಾಂ ಬಸವಾದೀನಾಂ (ಗ) [2] ಭಕ್ತಿ (ಕ) [3] ಯಾ (ಘ–ಮುದ್ರಿತಪಾಠ)
[4] ಕ–ದಲ್ಲಿಲ್ಲ [5] ಟ್ಟಂಥಾ (ಕ) [6] ಕ–ದಲ್ಲಿಲ್ಲ. [7] ಕ–ದಲ್ಲಿಲ್ಲ [8] ತಂ (ಖ)
[9] ಯಾವನಾನೊಬ್ಬ (ಕ).

ವೇದಶಾಸ್ತ್ರಪುರಾಣೇಷು ಸಾರಮುದ್ಧೃತ್ಯ ಶಾಂಕರಮ್
'ಸಾರೋದ್ಧಾರಃ' ಕೃತೋ ಯೇನ ಲಕ್ಷ್ಮೀದೇವಗುರುಂ ಭಜೇ ||೧೫||

'ಸಾನಂದಚರಿತಂ' ನಾಮ ಗ್ರಂಥಂ ಚಕ್ರೇಽತಿಯತ್ನತಃ
ಯಸ್ತಸ್ಮೈ ಪದ್ಮರಾಜಾಯ ನಮೋ ದುರ್ವಾದದಾಹಿನೇ ||೧೬||

ಯಸ್ಸರ್ವವಾದಾನ್ನಿರ್ಜಿತ್ಯ ವೀರಮಾಹೇಶ್ವರೋಚಿತಮ್
'ಶ್ರೀಮದ್ಬಸವರಾಜೀಯ[ಂ]' ನಾಮ ಗ್ರಂಥಮಚೀಕರತ್
[1]ಪಾಲ್ಕು[ರ್ಕಿ][1]ಸೋಮನಾಥಾಯ ನಮಸ್ತಸ್ಮೈ ಸುಶೀಲಿನೇ ||೧೭||

---

ದೀಪಿಕಾಂ = ಒಪ್ಪುತ್ತಂನಿದ್ದ ಶಿವಜ್ಞಾನದೀಪಿಕೆಯೆಂಬ ಶಾಸ್ತ್ರವನು ತು = ವಿಶೇಷವಾಗಿ ವ್ಯಾಹೃತವಾನ್ = ಮಾಡಿದನು. ಮಲ್ಲಿಕಾರ್ಜುನವಲ್ಲಭಃ = ಮಲ್ಲಿಕಾರ್ಜುನಲಿಂಗಕ್ಕೆ ಮನೋಹರವಹಂಥಾ ಮಲ್ಲಣಾರ್ಯಗುರುಂ = ಮಲ್ಲಣಾಚಾರ್ಯಗುರುವನು ಸೌಮಿ = ನಮಸ್ಕರಿಸುತ್ತಂ ಇದ್ದೇನು. ೧೪

ಯೇನ = [2]ಆವನೋರ್ವ[2] ಆಚಾರ್ಯನಿಂದ ವೇದಶಾಸ್ತ್ರಪುರಾಣೇಷು = ವೇದ ಶಾಸ್ತ್ರ ಪುರಾಣಂಗಳಲ್ಲಿ ಶಾಂಕರಂ = ಶಿವಸಂಬಂಧವಹಂಥಾ ಸಾರಂ = ಸಾರವಹ ಗ್ರಂಥವನು ಉದ್ಧೃತ್ಯ = ತೆಗೆದು ಸಾರೋದ್ಧಾರಃ = ಸಾರೋದ್ಧಾರವೆಂಬ ಗ್ರಂಥವು ಕೃತಃ = ಮಾಡಲ್ಪಟ್ಟಿತ್ತು [ತಂ—ಆ] ಲಕ್ಷ್ಮೀದೇವಗುರುಂ = ಲಕ್ಷ್ಮೀದೇವಗುರುವನು ಭಜೇ = ಭಜಿಸುತ್ತಂವಿದ್ದೇನು. ೧೫

ಯಃ = ಆವನಾನೊ[3]ರ್ವ[3] ಮಹಾತ್ಮನು ಸಾನಂದಚರಿತಂ ನಾಮ = ಸಾನಂದ ಚರಿತೆಯೆಂಬ ಹೆಸರನ್ನುಳ್ಳಂಥಾ ಗ್ರಂಥಂ = ಗ್ರಂಥವನು ಅತಿಯತ್ನತಃ = ಅತಿ ಪ್ರಯತ್ನದ ದೆಸೆಯಿಂದ ಚಕ್ರೇ = ಮಾಡಿದನು. ದುರ್ವಾದದಾಹಿನೇ = ದುರ್ವಾದ ವನು ದಹಿಸುತ್ತಂವಿಪ್ಪಂಥಾ ತಸ್ಮೈ ಪದ್ಮರಾಜಾಯ = ಆ ಪದ್ಮರಸರಿಂಗೋಸ್ಕರ ನಮಃ = ನಮಸ್ಕಾರವು. ೧೬

ಯಃ = ಆವನಾನೊರ್ವ ಮಹಾತ್ಮನು ಸರ್ವವಾದಾನ್ = ಸಮಸ್ತವಾದಂಗಳನು ನಿರ್ಜಿತ್ಯ = ಗೆದ್ದು ವೀರಮಾಹೇಶ್ವರೋಚಿತಂ = ವೀರಮಾಹೇಶ್ವರಕ್ಕೆ ಉಚಿತವಹಂಥಾ ಶ್ರೀಮದ್ಬಸವರಾಜೀಯನಾಮಗ್ರಂಥಂ = ಒಪ್ಪುತ್ತಂವಿದ್ದ ಬಸವರಾಜೀಯವೆಂಬ ಹೆಸರನುಳ್ಳ ಗ್ರಂಥವನು ಅಚೀಕರತ್ = ಮಾಡಿದನು. ಸುಶೀಲಿನೇ = ಮನೋಹರವಹ ಶೀಲಸಂಪಾದನೆಯನುಳ್ಳಂಥಾ ತಸ್ಮೈ = ಆ ಪಾಲ್ಕುರ್ಕಿಸೋಮನಾಥಾಯ = ಪಾಲ್ಕು-ರಿಕೆಯ ಸೋಮೇಶ್ವರಾಚಾರ್ಯಂಗೋಸ್ಕರ ನಮಃ = ನಮಸ್ಕಾರವು. ೧೭

---

[1] ಪಾಲ್ಕುರಿಚಿಕೆ (ಕ.ಖ.) ಪಾಲ್ಕುರಿಕೀ (ಗ) ಪಾಲಕುರಿಕೆ (ಘ) [2] ನಾನೊಬ್ಬ (ಚ)
[3] ಬ್ಬ (ಕ)

'ಶೈವರತ್ನಾಕರಂ' ನಾಮ ಗ್ರಂಥಂ ಯಃ ಕೃತವಾನ್ ಪುರಾ
ಜಗದ್ಧಿತಾರ್ಥಂ ಕೃಪಯಾ ಜ್ಯೋತಿರ್ನಾಥಂ ನಮಾಮಿ ತಮ್ ||೧೮||

ವ್ಯಾಕರೋದ್ಯಃ 'ಶಿವಜ್ಞಾನ ಸಮುಚ್ಚಯ'ಮಕಲ್ಮಷಮ್
ಜಗದಾರಾಧ್ಯನಾಗೇಶಗುರುಂ ತಂ ಸತತಂ ಭಜೇ ||೧೯||

ಯಃ ಪುರಾತನಚಾರಿತ್ರಂ ಕೃತವಾನ್ ದೇಶಭಾಷಯಾ
ಪಂಪಾಹರೀಶ್ವರಂ ನೌಮಿ ಸಂಪಾದಿತಶಿವಾಸ್ಪದಂ ||೨೦

ಶೈವಶಾಸ್ತ್ರಾರ್ಥತತ್ತ್ವಜ್ಞಾನೇತಾನನ್ಯಾನ್ಪುರಾತನಾನ್
ತ್ರಿಷಷ್ಟಿಗಣ[1]ಮುಖ್ಯಾಂಸ್ತು[1]ನೌಮಿ ಲಿಂಗಾಂಗಸಂಗಿನಃ ||೨೧||

---

ಯಃ = ಆವನಾನೊಬ್ಬ ಮಹಾತ್ಮನು ಕೃಪಯಾ = ಕೃಪೆಯಿಂದಂ ಜಗದ್ಧಿತಾರ್ಥಂ = ಲೋಕದ ಹಿತಕ್ಕೋಸ್ಕರ ಪುರಾ = ಪೂರ್ವದಲ್ಲಿ ಶೈವರತ್ನಾಕರಂ = ಶೈವರತ್ನಾಕರ[2]ವೆಂಬಂಥಾ[2] ಗ್ರಂಥಂ = ಗ್ರಂಥವನು ನಾಮ = ಪ್ರಸಿದ್ಧವಾಗಿ ಕೃತವಾನ್ = ಮಾಡಿದನು ತಂ = ಆ ಜ್ಯೋತಿರ್ನಾಥಂ = ಜ್ಯೋತಿರ್ನಾಥಾಚಾರ್ಯನನು ನಮಾಮಿ = ನಮಸ್ಕರಿಸುತ್ತಂವಿದ್ದೇನು. ೧೮

ಯಃ = ಆವನಾನೊಬ್ಬ ಮಹಾತ್ಮನು ಅಕಲ್ಮಷಂ = ನಿರ್ದೋಷವಹೆಂಥಾ ಶಿವಜ್ಞಾನಸಮುಚ್ಚಯಂ = 'ಶಿವಜ್ಞಾನ ಸಮುಚ್ಚಯವೆಂಬ ಗ್ರಂಥವನು *ವ್ಯಾಕರೋತ್ = ಮಾಡಿದನು ತಂ = ಆ ಜಗದಾರಾಧ್ಯನಾಗೇಶಗುರುಂ = ಜಗದಾರಾಧ್ಯ ನಾಗೇಂದ್ರ ಗುರುವನು ಸತತಂ = ಆವಾಗ[3]ವೂ[3] ಭಜೇ = ಭಜಿಸುತ್ತಂವಿದ್ದೇನು. ೧೯

ಯಃ = ಆವನಾನೊಬ್ಬ ಮಹಾತ್ಮನು ದೇಶಭಾಷಯಾ = [4]ಕರ್ಣಾಟದೇಶದ ಭಾಷೆಯಿಂದ[4] ಪುರಾತನಚಾರಿತ್ರಂ = ಪುರಾತನ ಗಣಂಗಳ ಚಾರಿತ್ರವನು ಕೃತವಾನ್ = ಮಾಡಿದನು (ತಂ = ಆ) ಸಂಪಾದಿತಶಿವಾಸ್ಪದಂ = ಸಂಪಾದಿಸಲ್ಪಟ್ಟ ಶಿವನ ಸ್ಥಾನವನುಳ್ಳಂಥಾ ಪಂಪಾಹರೀಶ್ವರಂ = ಹಂಪೆಯ ಹರೀಶ್ವರನನು ನೌಮಿ = ನಮಸ್ಕರಿ[5]ಸುತ್ತಂವಿದ್ದೇನು.[5] ೨೦

ಶೈವಶಾಸ್ತ್ರಾರ್ಥತತ್ತ್ವಜ್ಞಾನ್ = ಶೈವಶಾಸ್ತ್ರಂಗಳ ಅರ್ಥಂಗಳನು ನಿಶ್ಚಯವಾಗಿ

---

1 ಮುಖ್ಯಾಂಸ್ತಾನ್ (ಕ) 2 ವೆಂಬ (ಖ.ಚ.) 3 ಲೂ (ಕ) 4 ಕನ್ನಾಟದೇಶದ ಭಾಷೆಯಿಂದ (ಖ) ದೇಶಭಾಷೆಯಿಂದ (ಕ). 5 ಸುತ್ತೇನೆ. (ಖ).

* ವ್ಯಾಕರೋತ್–ಮಾಡಿದನು. ಶಿವಜ್ಞಾನ ಸಮುಚ್ಚಯದೆಂಬ ಗ್ರಂಥವನ್ನು ರಚಿಸಿದನೋ ಅಥವಾ ಆ ಗ್ರಂಥಕ್ಕೆ ವ್ಯಾಖ್ಯಾನ ಮಾಡಿದನೋ ? ಎಂಬಂತ ಪರಿಶೀಲನಾರ್ಹ—'ವ್ಯಾಕರೋತ್' ಎಂಬ ಪದ ಮತ್ತು ವ್ಯಾಖ್ಯಾನಗಳಿಂದ ವಿಚಾರ ಸಂದಿಗ್ಧವಾಗಿದೆ.

ಪುರಾ ಯೇಽಪೂಜಯನ್ ಶಂಭುಂ ಪುರಾರಾತಿಂ ಪುರಾತನಾಃ
ಇದಾನೀಂ ಶಿವಲಿಂಗಂ ತು ಪೂಜಯಂತೀಹ ಯೇ ನರಾಃ ||೨೨||

( ಗ್ರಂಥಕೃತ್ಪ್ರತಿಜ್ಞಾ )

ಪೂಜಯಿಷ್ಯಂತಿ ಯೇ ಭಕ್ತ್ಯಾ ಶ್ರೀವಿಶ್ವೇಶಮತಂದ್ರಿತಾಃ
ಏತಾನ್ ಮಾಹೇಶ್ವರಾನ್ ಸರ್ವಾನ್ ನತ್ವಾ ತತ್ತತ್ಪ್ರಸಾದತಃ ||೨೩||

ತತ್ಸಂಗೃಹೀತಾನ್ ಗ್ರಂಥಾಂಶ್ಚ ಶ್ರುತಿಸ್ಮೃತಿಶಿವಾಗಮಾನ್
ಇತಿಹಾಸಪುರಾಣಾದೀನಾಲೋಕ್ಯಾತಿಪ್ರಯತ್ನತಃ ||೨೪||

---

ಬಲ್ಲಂಥಾ ಏತಾ್ ಪುರಾತನಾ್ = ಈ ಪೂರ್ವದ ಗಣೇಶ್ವರರುಗಳನು ಲಿಂಗಾಂಗ ಸಂಗಿನಃ = ಲಿಂಗಾಂಗ ಸಂಬಂಧವುಳ್ಳಂಥಾ ಅನ್ಯಾನ್ = ಮತ್ತೆ ಕೆಲಬರಹಂಥಾ ತ್ರಿಷಷ್ಟಿ ಗಣಮುಖ್ಯಾನ್ = ಅಱುವತ್ತು ಮೂವರು ಗಣಮುಖ್ಯರುಗಳನು ತು = ವಿಶೇಷವಾಗಿ ನೌಮಿ = ನಮಸ್ಕರಿಸುತ್ತಂವಿದ್ದೇನು. ೨೧

ಪುರಾ = ಮುನ್ನ ಯೇ = ಆರು ಕೆಲಬರು ಪುರಾತನಾಃ = ಪೂರ್ವದ ಗಣಂಗಳು ಪುರಾರಾತಿಂ = [1]ತ್ರಿಪುರಾರಿಯಹಂಥಾ[1] ಶಂಭುಂ = [2]ಸುಖವನು ಮಾಡುತ್ತಂ ವಿದ್ದಂಥಾ ಪರಮೇಶ್ವರನನು[2] ಅಪೂಜಯನ್ = ಪೂಜಿಸಿದ[3]ರು[3] ಇದಾನೀಂ = ಈಗಲು ಇಹ = [4]ಈ ಲೋಕದಲ್ಲಿ[4] ಯೇ = ಆರು ಕೆಲಬರು ನರಾಃ = ಮನುಷ್ಯರುಗಳು ಶಿವಲಿಂಗಂ ತು = ಶಿವಲಿಂಗವನು ಪೂಜಯಂತಿ = ಪೂಜಿಸುತ್ತಂ ವಿದ್ದಾರು. ||೨೨||

ಯೇ = ಆರು ಕೆಲಬರು ಅತಂದ್ರಿತಾಃ = ಮಱವೆಯಿಲ್ಲದವರುಗಳಾಗಿ ಭಕ್ತ್ಯಾ = ಭಕ್ತಿಯಿಂದ ಶ್ರೀ ವಿಶ್ವೇಶಂ = ಶ್ರೀವಿಶ್ವೇಶ್ವರನನು ಪೂಜಯಿಷ್ಯಂತಿ = ಪೂಜಿಸಿಯಾರು ಏತಾನ್ = ಈ ಸರ್ವಾನ್ = ಸಮಸ್ತರಹಂಥಾ ಮಾಹೇಶ್ವರಾನ್ = ವೀರಮಾಹೇಶ್ವರರುಗಳನು ನತ್ವಾ = ನಮಸ್ಕರಿಸಿ ತತ್ತತ್ಪ್ರಸಾದತಃ = ಅವರವರುಗಳ ಪ್ರಸನ್ನತಿಕೆಯ ದೆಸೆಯಿಂದ, ||೨೩||

ತತ್ಸಂಗೃಹೀತಾನ್ = ಆ ಮಹಾತ್ಮರುಗಳಿಂದ ಸಂಗ್ರಹಿ[5]ಸಲುಪ[5]ಟ್ಟಂಥಾ ಗ್ರಂಥಾಂಶ್ಚ = ಗ್ರಂಥಂಗಳನು ಶ್ರುತಿಸ್ಮೃತಿ ಶಿವಾಗಮಾನ್ = ಶ್ರುತಿಸ್ಮೃತಿಶಿವಾಗಮಂಗಳನು ಇತಿಹಾಸಪುರಾಣಾದೀನ್ = ಇತಿಹಾಸ ಪುರಾಣ ಮೊದಲಾಗಿದ್ದಂಥಾ ಅವನು ಆಲೋಕ್ಯ = ನೋಡಿ ಅತಿಪ್ರಯತ್ನತಃ = ಅತ್ಯಂತ ಪ್ರಯತ್ನದ ದೆಸೆಯಿಂದ, ||೨೪||

---

1 ತ್ರಿಪುರಂಗಳಿಗೆ ಶತ್ರುವಾದ (ಕ) 2 ಶಿವನನ್ನು (ಕ) 3 ರೋ (ಕ) 4 ಇಹದಲ್ಲಿ (ಕ)
5 ಸಲ್ಪ (ಕ)

ತತ್ರ ಸಾರತರಾನ್ ಶ್ಲೋಕಾನ್ ವೀರಮಾಹೇಶ್ವರೋಚಿತಾನ್
ಆದಾಯ ತಾನ್ನೀಲಕಂಠನಾಗನಾಥಾರ್ಯಧೀಮತಾ
ಶ್ರೀಮನ್ಮ[1]ಳ್ವಾಯಿ[1]ಸೋಮೇಶಪಾದಾಬ್ಜಾಹಿತಚೇತಸಾ ||೨೫||

ಹಿತಾಯ ಶಿವಭಕ್ತಾನಾಂ ಸದಾಚಾರಾನುವರ್ತಿನಾಮ್
"ವೀರಮಾಹೇಶ್ವರಾಚಾರಸಂಗ್ರಹಃ" ಕ್ರಿಯತೇ ಮಹಾನ್ ||೨೬||

( ಗ್ರಂಥಾನುಕ್ರಮಣಿಕಾ )

ವೀರಮಾಹೇಶ್ವರಾಚಾರಸಂಗ್ರಹೇಽಸ್ಮಿನ್ ಶಿವಾಶ್ರಯೇ
ಅಧ್ಯಾಯಾನಾಂ ಕ್ರಮೇಣೈವ ಪ್ರೋಚ್ಯತೇಽನುಕ್ರಮೋಽಧುನಾ ||

ಆದಾವನುಕ್ರಮಸ್ತಾವದ್ಯಥಾವತ್ ಸಮುದೀರಿತಃ
ಧರ್ಮಾಧರ್ಮಪ್ರಭೇದಸ್ತು ತತೋ ನರಕಯಾತನಾ ||೨೮||

ತತ್ರ=ಅಲ್ಲಿ ಸಾರತರಾನ್=ಅತ್ಯಂತ ಸಾರವಹಂಥಾ ವೀರಮಾಹೇಶ್ವರೋಚಿತಾನ್=ವೀರಮಾಹೇಶ್ವರ ಶಾಸ್ತ್ರಕ್ಕೆ ಉಚಿತವಹಂಥಾ ತಾನ್ ಶ್ಲೋಕಾನ್ = ಆ ಶ್ಲೋಕಂಗಳನು ಆದಾಯ=ತೆಗೆದುಕೊಂಡು ಶ್ರೀಮನ್ಮಳ್ವಾಯಿಸೋಮೇಶ ಪಾದಾಬ್ಜಾಹಿತಚೇತಸಾ = ಒಪ್ಪುತ್ತಂವಿದ್ದ ಮುಳುವಾಗಿಲ ಸೋಮೇಶ್ವರಲಿಂಗದ ಪಾದ ಕಮಲದಲ್ಲಿ ಇರಿಸಲುಪಟ್ಟ ಚಿತ್ತವನುಳ್ಳಂಥಾ ನೀಲಕಂಠನಾಗನಾಥಾರ್ಯಧೀಮತಾ ನೀಲಕಂಠನಾಗನಾಥಾಚಾರ್ಯನೆಂಬ ವಿದ್ವಾನ್ನುವಿನಿಂದ, ||೨೫||

ಸದಾಚಾರಾನುವರ್ತಿನಾಂ=ಸದಾಚಾರದಲ್ಲಿ ಬಳಿವಿಡಿದು ವರ್ತಿಸುತ್ತಂವಿದ್ದಂಥಾ ಶಿವಭಕ್ತಾನಾಂ=ಶಿವಭಕ್ತರುಗಳ ಹಿತಾಯ=ಹಿತಕ್ಯೋಸ್ಕರ ಮಹಾನ್ = ದೊಡ್ಡಿತ್ತಹಂಥಾ ವೀರಮಾಹೇಶ್ವರಾಚಾರ ಸಂಗ್ರಹಃ = ವೀರಮಾಹೇಶ್ವರಾಚಾರ ಸಂಗ್ರಹವೆಂಬ ಈ ಶಾಸ್ತ್ರವು ಕ್ರಿಯತೇ=ಮಾಡಲುಪಟ್ಟುತ್ತು. ಕುಳಕಂಗಳು. ||೨೬||

ಶಿವಾಶ್ರಯೇ=ಶಿವನನಾ[2]ಶ್ರೈಸಿದಂಥಾ ಅಸ್ಮಿನ್= ಈ ವೀರಮಾಹೇಶ್ವರಾಚಾರಸಂಗ್ರಹೇ = ವೀರಮಾಹೇಶ್ವರಾಚಾರ ಸಂಗ್ರಹದಲ್ಲಿ ಅಧುನಾ = ಈಗಳು ಕ್ರಮೇಣೈವ=ಕ್ರಮದಿಂದವೆ ಅಧ್ಯಾಯಾನಾಂ=ಅಧ್ಯಾಯಂಗಳ ಅನುಕ್ರಮಃ= ಬಳಿವಿಡಿಯಲುಪಟ್ಟ ಕ್ರಮವು ಪ್ರೋಚ್ಯತೆ=ಹೇಳಲು ಪಡುತ್ತಿದ್ದೂದು. ||೨೭||

ತಾವತ್=ಅಂನಬರ ಆದೌ = ಮೊದಲಲ್ಲಿ ಅನುಕ್ರಮಃ = ಅನುಕ್ರಮಣಿಕಾಧ್ಯಾಯವು ಯಥಾವತ್=ಯಥಾವತ್ತಾಗಿ ಸಮುದೀರಿತಃ=ಲೇಸಾಗಿ ಹೇಳಲುಪಟ್ಟುತ್ತು. ತತಃ=ಅನಂತರದಲ್ಲಿ ಧರ್ಮಾಧರ್ಮಪ್ರಭೇದಸ್ತು = ಧರ್ಮಾಧರ್ಮ

[1] ಯ (ಘ) [2] ಶ್ರಯಿ (ಕ)

ಪಿಂಡೋತ್ಪತ್ತಿಶ್ಚ ತದನು ತತಃ ಸಂಸಾರಹೇಯತಾ
ಮಾಹೇಶ್ವರೋಚಿತಾ ದೀಕ್ಷಾ ಗುರುಶುಶ್ರೂಷಣಕ್ರಮಃ ||೨೯||

ಪಂಚಾಕ್ಷರೀ ಪ್ರಭಾವಶ್ಚ ಸಾನಂದಚರಿತಂ ತತಃ
ಮಹಾಲಿಂಗೋದ್ಭವಶ್ಚಾಥ ಶಿವರಾಜ್ಯಕ್ರಮಸ್ತತಃ ||೩೦||

ಶಿವಾಜ್ಞಾಯಾಃ ಪ್ರಭಾವಶ್ಚ ಶಿರಸಶ್ಛೇದನಂ ವಿಧೇಃ
ಭಿಕ್ಷಾಟನಸುಲೀ[1]ಲಾಚ ತತಃ ಪರಮುದಾಹೃತಾ ||೩೧||

ದಕ್ಷಶಾಪಕ್ರಮಶ್ಚೈವ ದಕ್ಷಾಧ್ವರವಿನಾಶನಮ್
ತತಃ ಶರಭಲೀಲಾ ಚ ಕಾಮದಾಹಸ್ತ್ವನಂತರಮ್ ||೩೨||

---

ಪ್ರಭೇದಾಧ್ಯಾಯವು ತತಃ = ಅನಂತರದಲ್ಲಿ ನರಕಯಾತನಾ = ನರಕಯಾತನಾಧ್ಯಾಯವು, ||೨೮||

ತದನು = ಅವಜಿ ತಱುವಾಯಲ್ಲಿ ಪಿಂಡೋತ್ಪತ್ತಿಶ್ಚ = ಪಿಂಡೋತ್ಪತ್ತಿಯ ಅಧ್ಯಾಯವು ತತಃ = ಅನಂತರದಲ್ಲಿ ಸಂಸಾರಯೇತಾ ಸಂಸಾರಹೇಯತ್ವವು ಮಾಹೇಶ್ವರೋಚಿತಾ = ವೀರಮಾಹೇಶ್ವರತ್ವಕ್ಕೆ ಉಚಿತವಹಂಥಾ ದೀಕ್ಷಾ = ದೀಕ್ಷಾಧ್ಯಾಯವು ಗುರುಶುಶ್ರೂಷಣ ಕ್ರಮಃ = ಗುರುಶುಶ್ರೂಷಣ ಕ್ರಮಾಧ್ಯಾಯವು, ||೨೯||

ಪಂಚಾಕ್ಷರೀಪ್ರಭಾವಶ್ಚ = ಪಂಚಾಕ್ಷರೀ ಪ್ರಭಾವಾಧ್ಯಾಯವು ತತಃ = ಅನಂತರದಲ್ಲಿ ಸಾನಂದಚರಿತಂ = ಸಾನಂದಚರಿತಾಧ್ಯಾಯವು ಅಥ = ಅನಂತರದಲ್ಲಿ ಮಹಾಲಿಂಗೋದ್ಭವಃ = ಮಹಾಲಿಂಗೋತ್ಪತ್ತಿಯ ಅಧ್ಯಾಯವು ತತಃ = ತಱುವಾಯಲ್ಲಿ ಶಿವರಾಜ್ಯಕ್ರಮಃ = ಶಿವರಾಜ್ಯ ಕ್ರಮಾಧ್ಯಾಯವು, ||೩೦||

ಶಿವಾಜ್ಞಾಯಾಃ ಪ್ರಭಾವಶ್ಚ = ಶಿವಾಜ್ಞಾಪ್ರಭಾವಾಧ್ಯಾಯವು ವಿಧೇಃ = ಬ್ರಹ್ಮನ ಶಿರಸಃ = ಶಿರಸ್ಸಿನ ಛೇದನಂ = ಛೇದನವಹಂಥಾ ಅಧ್ಯಾಯವು ತತಃಪರಂ = ಅನಂತರದಲ್ಲಿ ಭಿಕ್ಷಾಟನಸುಲೀಲಾಚ = ಭಿಕ್ಷಾಟನ ಲೀಲಾಧ್ಯಾಯವು ಉದಾಹೃತಾ ಹೇಳಲು[1]ಪಟ್ಟು[2]ತ್ತು. ||೩೧||

ದಕ್ಷಶಾಪಕ್ರಮಶ್ಚೈವ = ಪರಮೇಶ್ವರದತ್ತ ದಕ್ಷಶಾಪಕ್ರಮಾಧ್ಯಾಯವು ದಕಾಧ್ವರವಿನಾಶನಂ = ದಕ್ಷಾಧ್ವರಧ್ವಂಸಾಧ್ಯಾಯವು ತತಃ = ಅನಂತರದಲ್ಲಿ ಶರಭಲೀಲಾಚ

---

1 ಶೀ (ಖ) 2 ಪಟ್ಟ

ಗಿರಿಜಾಯಾ ವಿವಾಹಶ್ಚ ಸ್ಕಂದೋತ್ಪತ್ತೇಶ್ಚ ಸೂಚನಾ
ಉತ್ಪನ್ನೇನ ಕುಮಾರೇಣ ತಾರಕಸ್ಯ ವಧಕ್ರಮಃ ||೩೩||

ಪುರತ್ರಯವಿನಾಶಾಯ ರಥಕರ್ಮನಿರೂಪಣಮ್
ದಹನಂ ತ್ರಿಪುರಸ್ಯಾಥ ಜಲಂಧರವಧಸ್ತತಃ ||೩೪||

ಅಂಧಕಸ್ಯ ಗಣೇಶತ್ವಪ್ರತಿಪಾದನಮೇವ ಚ
ಗಜಾಸುರ ಮಹಾಕೃತ್ತಿಧಾರಣಂ ತದನಂತರಮ್ ||೩೫||

ವೃಷೇಂದ್ರವಾಹನಾಹ್ಯಸ್ಥಿಭಸ್ಮಾದ್ಯಾದಾನಕಾರಣಮ್
ಗಂಗಾಧರಣಲೀಲಾ ಚ ವಿಷಸಂಹರಣಂ ತತಃ ||೩೬||

---

= ಶರಭಲೀಲಾಧ್ಯಾಯವು ಅನಂತರಂ = ತಱುವಾಯಲ್ಲಿ ಕಾಮದಾಹಸ್ತು = ಕಾಮ ಧಹನಾಧ್ಯಾಯವು, ||೩೨||

ಗಿರಿಜಾಯಾಃ = ಪಾರ್ವತೀದೇವಿಯ ವಿವಾಹಶ್ಚ = ವಿವಾಹಾಧ್ಯಾಯವು ಸ್ಕಂದೋತ್ಪತ್ತೇಃ = ಸ್ಕಂದನ ಉತ್ಪತ್ತಿಯ ಸೂಚನಾ ಚ = ಸೂಚನಾಧ್ಯಾಯವು ಉತ್ಪನ್ನೇನ = ಹುಟ್ಟಿದಂಥಾ ಕುಮಾರೇಣ = ಸ್ವಾಮಿಕುಮಾರನಿಂದ ತಾರಕಸ್ಯ = ತಾರಕಾಸುರನ ವಧಕ್ರಮಃ = ವಧಿಸಿದಂಥಾ ಅಧ್ಯಾಯವು- ||೩೩||

ಪುರತ್ರಯವಿನಾಶಾಯ = ತ್ರಿಪುರವ ಸಂಹರಿಸಲೋಸ್ಕರ ರಥಕರ್ಮನಿರೂಪಣಂ = ರಥವ ಮಾಡುವ ಪ್ರಕಾರವ ಹೇಳುವಂಥಾ ಅಧ್ಯಾಯವು ಅಥ = ಅನಂತರದಲ್ಲಿ ತ್ರಿಪುರಸ್ಯ = ತ್ರಿಪುರದ ದಹನಂ = ದಹಿಸುವಂಥಾ ಅಧ್ಯಾಯವು ತತಃ = ಅನಂತರದಲ್ಲಿ ಜಲಂಧರವಧಃ = ಜಲಂಧರಾಸುರನ ವಧಿಸಿದಂಥಾ ಅಧ್ಯಾಯವು, ||೩೪||

ಅಂಧಕಸ್ಯ = ಅಂಧಕಾಸುರಂಗೆ ಗಣೇಶತ್ವಪ್ರತಿಪಾದನಮೇವ ಚ = ಗಣೇಶತ್ವವ ಕೊಟ್ಟಂಥಾ ಅಧ್ಯಾಯವು ತದನಂತರಂ = ಅದಱ ತಱುವಾಯಲ್ಲಿ ಗಜಾಸುರಮಹಾ ಕೃತ್ತಿಧಾರಣಂ = ಗಜಾಸುರನ ಮಹತ್ತಹ ಚರ್ಮವ ಧರಿಸಿದಂಥಾಧ್ಯಾಯವು, ||೩೫||

ವೃಷೇಂದ್ರವಾಹನಾಹ್ಯಸ್ಥಿಭಸ್ಮಾದ್ಯಾದಾನ ಕಾರಣಂ = [1]ವೃಷಭ[1]ವಾಹನ ಸರ್ಪ ಅಸ್ಥಿ ವಿಭೂತಿ ಮೊದಲಾಗಿ ಧರಿಸುವ ಕಾರಣವಹಂಥಾ ಅಧ್ಯಾಯವು ಗಂಗಾಧರಣ ಲೀಲಾ ಚ = ಗಂಗೆಯ ಧರಿಸಿದ ಲೀಲೆಯ ಅಧ್ಯಾಯವು ತತಃ = ಅನಂತರದಲ್ಲಿ ವಿಷ ಸಂಹರಣಂ = ಕಾಳಕೂಟವಿಷವ ತಗ್ಗಿಸಿದಂಥಾ ಅಧ್ಯಾಯವು,

---

[1] ವೃಷೇಂದ್ರ (ಕ)

ಶ್ರೀಮನ್ನಂದೀಶ್ವರೋತ್ಪತ್ತಿಸ್ತದ್ಗಾಣಾಪತ್ಯವರ್ಣನಂ[1]
ಚಕ್ರಾದುತ್ಪತ್ತಿತದ್ದಾನಂ ವಿಷ್ಣವೇ ಸರ್ವಜಿಷ್ಣವೇ ||೩೭||

ಪುನಶ್ಚಕ್ರಾದಿದಾನಂ ಚ ವಿಷ್ಣವೇ ಶರಣಾರ್ಥಿನೇ
ಯಾದವೇಂದ್ರಾಯ ಕೃಷ್ಣಾಯ ಪುತ್ರಾದಿಪ್ರತಿ[2]ಪಾದ[2]ನಮ್ ||೩೮||

ಸತ್ಯಸಂಧಾಖ್ಯವಿಪ್ರಸ್ಯ ವಿಮುಕ್ತಿಪ್ರತಿಪಾದನಮ್
ವಿಷ್ಣೋಃ ಸನತ್ಕುಮಾರಸ್ಯ ಸಂವಾದ[3]ಸ್ಸಮ[3]ನಂತರಮ್ ||೩೯||

ತತೋ ವ್ಯಾಸಭುಜಸ್ತಂಭಸ್ತದ್ವಿಮೋಚನಮೇವ ಚ
ವರಪ್ರದಾನಂ ವೇದಾನಾಂ[1]ಯಾಥಾರ್ಥ್ಯಂ[4] ಬ್ರುವತಾಂ ತತಃ ||೪೦||

---

ಶ್ರೀಮನ್ನಂದೀಶ್ವರೋತ್ಪತ್ತಿಃ = ಒಪ್ಪುತಂವಿದ್ದ ನಂದಿಕೇಶ್ವರನ ಉತ್ಪತ್ತಿಯು ತದ್ಗಾಣಾಪತ್ಯವರ್ಣನಂ = ಆ [5]ನಂದಿಕೇ[5]ಶ್ವರಂಗೆ ಗಣೇಶ್ವರತ್ವವ ಕೊಟ್ಟ ವರ್ಣನೆಯ ಅಧ್ಯಾಯವು ಚಕ್ರಾದ್ಯುತ್ಪತ್ತಿ = ಚಕ್ರವೊದಲಾಗಿದ್ದವಱ ಉತ್ಪತ್ತಿಯು ಸರ್ವಜಿಷ್ಣವೇ = ಸರ್ವರನು ಗೆದ್ದಂಥಾ ವಿಷ್ಣವೇ = ವಿಷ್ಣುವಿಂಗೋಸ್ಕರ ತದ್ದಾನಂ = ಆ ಚಕ್ರ ವೊದಲಾ[6]ದಂಥಾ[6] ಅವನು ಕೊಟ್ಟಂಥಾ ಅಧ್ಯಾಯವು, ||೩೭||

ಶರಣಾರ್ಥಿನೇ = ನಮಸ್ಕರಿಸಿದಂಥಾ ವಿಷ್ಣವೇ = ವಿಷ್ಣುವಿಂಗೋಸ್ಕರ ಪುನಃ = ಮರಳಿ ಚಕ್ರಾದಿದಾನಂಚ = ಚಕ್ರವೊದಲಾಗಿದ್ದದನು ಕೊಟ್ಟಂಥಾ ಅಧ್ಯಾಯವು ಯಾದವೇಂದ್ರಾಯ = ಯಾದವರಿಗೆ ಒಡೆಯನಹಂಥಾ ಕೃಷ್ಣಾಯ = ಕೃಷ್ಣಂಗೋಸ್ಕರ ಪುತ್ರಾದಿಪ್ರತಿಪಾದನಂ = ಪುತ್ರ ವೊದಲಾದ ವರವ ಕೊಟ್ಟಂಥಾ ಅಧ್ಯಾಯವು, ||೩೮||

ಸತ್ಯಸಂಧಾಖ್ಯವಿಪ್ರಸ್ಯ = ಸತ್ಯಸಂಧನೆಂಬ ಹೆಸರನುಳ್ಳ ಬ್ರಾಹ್ಮಣಂಗೆ ವಿಮುಕ್ತಿ ಪ್ರತಿಪಾದನಂ = ಮುಕ್ತಿಯ ಕೊಟ್ಟಂಥಾ ಅಧ್ಯಾಯವು ಸಮನಂತರಂ = ಅನಂತರದಲ್ಲಿ ವಿಷ್ಣೋಃ = ವಿಷ್ಣುವಿನ ಸನತ್ಕುಮಾರಸ್ಯ = ಸನತ್ಕುಮಾರನ ಸಂವಾದಃ = ಸಂವಾದವ ವೆಹಂಥಾ ಅಧ್ಯಾಯವು, ||೩೯||

ತತಃ = ಅನಂತರದಲ್ಲಿ ವ್ಯಾಸಭುಜಸ್ತಂಭಃ = ವ್ಯಾಸನ ಭುಜ ಸ್ತಂಭವು ತದ್ವಿಮೋಚನಮೇವ ಚ = ಆ ಭುಜಸ್ತಂಭವ ಬಿಟ್ಟಂಥಾ ಅಧ್ಯಾಯವು ತತಃ = ತಱು

---

[1] ನಾ ( ಕ. ಖ. ಚ. ) [2] ಪಾದನಾ (ಗ) [3] ಸ್ತದ (ಖ) [4] ಯಥಾರ್ಥ್ಯಂ ( ಖ. ಚ. ) ಯಾಥಾರ್ಥಂ (ಘ) [5] ನಂದೀಕೇ (ಕ) [6] ಗ್ಗಿದಂಥಾ (ಖ. ಚ.)

ಬ್ರಹ್ಮಗೀತಾ ತತಃ ಪ್ರೋಕ್ತಾ ಸೂತಗೀತಾ ತತಃ ಪರಮ್
ಶಿವಸ್ಮೃತಿ ಪ್ರಭಾವಶ್ಚ ನಾಮೋಚ್ಚಾರಣಶಂಸನಮ್ ||೪೧||

ತತಸ್ತು ಶಿವಲಿಂಗಸ್ಯ [1]ದರ್ಶನ ಸ್ಪರ್ಶನೇ ಫಲಮ್
ಶಿವಲಿಂಗಸ್ಯ ಪೂಜಾಯಾ ಮಾಹಾತ್ಮ್ಯಂ ತದನಂತರಮ್ ||೪೨||

ವೀರಮಾಹೇಶ್ವರಗ್ರಾಹ್ಯಧರ್ಮನಿರ್ಣಯ ಉತ್ತಮಃ
ಉಪಮನ್ಯುಮುನೀಂದ್ರಸ್ಯ ಚರಿತಂ ಕಥಿತಂ ತತಃ ||೪೩||

ಶ್ರೀಮತ್ಕರಾಬ್ಜಪೀಠಸ್ಯ ನಿರ್ಣಯಸ್ತದನಂತರಮ್
ಶಿವಷಣ್ಮುಖಸಂವಾದಃ ಷಟ್ಸ್ಥಲಾನಾಂ ಕ್ರಮಸ್ತತಃ ||೪೪||

---

ವಾಯಲ್ಲಿ ಯಾಥಾರ್ಥ್ಯಂ = ಯಥಾರ್ಥವನು ಬ್ರುವತಾಂ = ನುಡಿದಂಥಾ ವೇದಾನಾಂ ವೇದಂಗಳಿಗೆ ವರಪ್ರದಾನಂ = ವರವಕೊಟ್ಟಂಥಾ ಅಧ್ಯಾಯವು, ||೪೦||

ತತಃ = ಅನಂತರದಲ್ಲಿ ಬ್ರಹ್ಮಗೀತಾ = ಬ್ರಹ್ಮಗೀತೆ ಪ್ರೋಕ್ತಾ = ಹೇಳಲ್ಪಟ್ಟಿತ್ತು ತತಃಪರಂ = ಅದಱಿಂದ ಮೇಲೆ ಸೂತಗೀತಾ = ಸೂತಗೀತೆ ಹೇಳಲುಪಟ್ಟಿತ್ತು. ಶಿವಸ್ಮೃತಿಪ್ರಭಾವಶ್ಚ = ಶಿವ[2]ಸ್ಮರಣೆಯ ಸಾಮರ್ಥ್ಯಾಧ್ಯಾಯವು ನಾಮೋಚ್ಚಾರಣ ಶಂಸನಂ = ಶಿವನಾಮೋಚ್ಚಾರಣೆಯ ಮಹಿಮೆಯ ಹೇಳುವಂಥಾ ಅಧ್ಯಾಯವು ||೪೧||

ತತಸ್ತು = ಅನಂತರದಲ್ಲಿ ಶಿವಲಿಂಗಸ್ಯ = ಶಿವಲಿಂಗದ ದರ್ಶನಸ್ಪರ್ಶನೇ = ದರ್ಶನ ಸ್ಪರ್ಶನದಲ್ಲಿ ಫಲಂ = ಫಲವ = ಹೇಳುವಂಥಾ ಅಧ್ಯಾಯವು ತದನಂತರಂ = ಆ ತಱುವಾಯಲ್ಲಿ ಶಿವಲಿಂಗಸ್ಯ = ಶಿವಲಿಂಗದ ಪೂಜಾಯಾಃ = ಪೂಜೆಯ ಮಾಹಾತ್ಮ್ಯಂ = ಮಹಿಮೆಯ ಹೇಳುವಂಥಾ ಅಧ್ಯಾಯವು, ||೪೨||

ಉತ್ತಮಃ = ಉತ್ತಮವಹಂಥಾ ವೀರಮಾಹೇಶ್ವರಗ್ರಾಹ್ಯಧರ್ಮನಿರ್ಣಯಃ = ವೀರಮಾಹೇಶ್ವರ[3]ರು ಗ್ರಹಿಸಲು ಯೋಗ್ಯವಹಂಥಾ[3] ಧರ್ಮನಿರ್ಣಯವ ಹೇಳುವಂಥಾ ಅಧ್ಯಾಯವು ತತಃ = ಅನಂತರದಲ್ಲಿ ಉಪಮನ್ಯುಮುನೀಂದ್ರಸ್ಯ = ಉಪಮನ್ಯುಮುನೀಶ್ವರನ ಚರಿತಂ = ಚಾರಿತ್ರವು ಕಥಿತಂ = ಹೇಳಲುಪಟ್ಟಿತ್ತು

ತದನಂತರಂ = ಅದಱ ತಱುವಾಯಲ್ಲಿ ಶ್ರೀಮತ್ಕರಾಬ್ಜಪೀಠಸ್ಯ = ಒಪ್ಪುತ್ತಂ ವಿದ್ದ ಕರಕಮಲಪೀಠದ ನಿರ್ಣಯಃ = ನಿರ್ಣಯವ ಹೇಳುವಂಥಾ ಅಧ್ಯಾಯವು

---

[1] ದರ್ಶನಾತ್ ಸ್ಪರ್ಶನೇ (ಖ. ಚ) [2] ಸ್ಮೃತಿಯ (ಕ) [3] (ಕ) ದಲ್ಲಿ ಲುಪ್ತ.

ವಿಭೂತಿಕಲ್ಪತತ್ಸ್ನಾನೋದ್ಧೂಳನಾನಾಂ ಫಲಂ ತತಃ
ತ್ರಿಪುಂಡ್ರವಿಧಿಮಾಹಾತ್ಮ್ಯಂ ರುದ್ರಾಕ್ಷವಿಧಿತತ್ಫಲಮ್ ||೪೫||

ಪೂಜಾಗಾರಸುನಿರ್ಮಾಣತತ್ಸಮ್ಮಾರ್ಜನಶಂಸನಾ
ತತೋಽನುಲೇಪನೇ[1] ಚೈವ ವರ್ಣಕಸ್ಯ [2]ವಿಧೌ ತಥಾ[2] ||೪೬||

ಪೂಜಾಗೃಹಾಲಂಕರಣೇ ಕ್ರಮಸ್ತತ್ಫಲಶಂಸನಮ್[3]
ಅರ್ಘ್ಯಾದಿದಾನಮಾಹಾತ್ಮ್ಯಂ ತದನಂತರಮೀರಿತಮ್ ||೪೭||

ತತೋ ನಾನಾವಿಧಸ್ನಾನಕ್ರಮಸ್ತತ್ಫಲಸೂಚನಾ

---

ತತಃ = ಅನಂತರದಲ್ಲಿ ಶಿವಷಣ್ಮುಖಸಂವಾದಃ = [4]ಶಿವನಷಣ್ಮುಖರ ಸಂವಾದವ[4] ಹೇಳುವಂಥಾ ಅಧ್ಯಾಯವು ಷಟ್ಸ್ಥಲಾನಾಂ = ಷಟ್ಸ್ಥಲಂಗಳ ಕ್ರಮಃ = ಕ್ರಮವ ಹೇಳುವಂಥಾ ಅಧ್ಯಾಯವು ||೪೪||

ತತಃ = ಅನಂತರದಲ್ಲಿ ವಿಭೂತಿಕಲ್ಪತತ್ಸ್ನಾನೋದ್ಧೂಳನಾನಾಂ = ವಿಭೂತಿಯ ಕಲ್ಪ ಆ ವಿಭೂತಿಯ ಸ್ನಾನ ಉದ್ಧೂಳನಂಗಳ ಫಲಂ = ಫಲವ ಹೇಳುವಂಥಾ ಅಧ್ಯಾಯವು ತ್ರಿಪುಂಡ್ರವಿಧಿಮಾಹಾತ್ಮ್ಯಂ = ತ್ರಿಪುಂಡ್ರದ ವಿಧಾನವ ಮಹಿಮೆಯು ಹೇಳುವಂಥಾ ಅಧ್ಯಾಯವು ರುದ್ರಾಕ್ಷವಿಧಿ ತತ್ಫಲಂ = ರುದ್ರಾಕ್ಷಿಯ ವಿಧಾನ ಅದರ ಫಲವ ಹೇಳುವಂಥಾ ಅಧ್ಯಾಯವು ||೪೫||

ಪೂಜಾಗಾರಸುನಿರ್ಮಾಣ ತತ್ಸಮ್ಮಾರ್ಜನಶಂಸನಾ = ದೇವಪೂಜಾ ಗೃಹವ ನಿರ್ಮಿಸುಹ ಅದರ ಸಮ್ಮಾರ್ಜನೆಯ ಪ್ರಕಾರವ ಹೇಳುವಂಥಾ ಅಧ್ಯಾಯವು ತತಃ = ಅನಂತರದಲ್ಲಿ ಅನುಲೇಪನೇ ಚೈವ = ಸಾರಿಸುವಲ್ಲಿಯೂ ಮತ್ತು ತಥಾ = ಹಾಂಗೆ ವರ್ಣಕಸ್ಯ = ಪಂಚವರ್ಣಿಗೆಯ ವಿಧೌ = ವಿಧಾನದಲ್ಲಿಯೂ, ||೪೬||

ಪೂಜಾಗೃಹಾಲಂಕರಣೇ = ದೇವಪೂಜಾ ಗೃಹವ ಅಲಂಕರಿಸುವಲ್ಲಿಯೂ ಕ್ರಮಃ ತತ್ಫಲಶಂಸನಂ = ಕ್ರಮವು ಅದರ ಫಲವ ಹೇಳುವಂಥಾ ಅಧ್ಯಾಯವು ತದನಂತರಂ = ಅದರ ತರುವಾಯಲ್ಲಿ ಅರ್ಘ್ಯಾದಿದಾನಮಾಹಾತ್ಮ್ಯಂ = ಅರ್ಘ್ಯ ಮೊದಲಾದ ದಾನದ ಮಹಿಮೆಯು ಈರಿತಂ = ಹೇಳಲುಪಟ್ಟಂಥಾ ಅಧ್ಯಾಯವು,

ತತಃ = ಅನಂತರದಲ್ಲಿ ನಾನಾವಿಧಸ್ನಾನಕ್ರಮಃ ತತ್ಫಲಸೂಚನಾ = ನಾನಾ ಪ್ರಕಾರವಹಂಥಾ ಸ್ನಾನದ ಕ್ರಮವು ಅದರ ಫಲವ ಹೇಳುವಂಥಾ ಅಧ್ಯಾಯವು,

---

1 ನ (ಕ) 2 ವಿಧಿಸ್ತಥಾ (ಖ. ಚ.) 3 ನಾ (ಖ) 4 ಶಿವನ ಷಣ್ಮುಖನ ಸಂಭಾಷಣೆಯು (ಖ. ಚ)

ವಸ್ತ್ರೋಪವೀತಾಭರಣಗಂಧಾಕ್ಷತತಿಲಾರ್ಪಣೇ
ಕ್ರಮಸ್ತತ್ಫಲಶಂಸಾ ಚ ತತಸ್ತು ಪರಿಕೀರ್ತಿತಾ ||೪೮||

ನಾನಾವಿಧಾನಾಂ ಪುಷ್ಪಾಣಾಂ ಲಕ್ಷಣಾರ್ಪಣತತ್ಫಲಮ್
ಪತ್ರಾಣಾಂ ಶಿವಯೋಗ್ಯಾನಾಂ ಲಕ್ಷಣಾಶಂಸನಂ ತತಃ ||೪೯||

ಧೂಪಲಕ್ಷಣಮಾಹಾತ್ಮ್ಯಂ ದೀಪಲಕ್ಷಣತತ್‌ಸ್ತುತಿಃ
ಘಂಟಾಪಂಚಮಹಾಶಬ್ದಲಕ್ಷಣಾರ್ಪಣತತ್ಫಲಮ್ ||೫೦||

ನೈವೇದ್ಯಮುಖಸದ್ವಾಸತಾಂಬೂಲಾನಾಮನುಕ್ರಮಾತ್
ಲಕ್ಷಣಾರ್ಪಣಮಾಹಾತ್ಮ್ಯಂ ತತಃಪರಮುದೀರಿತಮ್ ||೫೧||

ನೀರಾಜನಾದರ್ಶಫಲಚ್ಛತ್ರಾಣಾಂ ತದನಂತರಮ್
ಚಾಮರವ್ಯಜನಾನಾಂ ಚ ಲಕ್ಷಣಾರ್ಪಣತತ್‌ಸ್ತುತಿಃ ||೫೨||

---

ತತಸ್ತು = ಅನಂತರದಲ್ಲಿ ವಸ್ತ್ರೋಪವೀತಾಭರಣಗಂಧಾಕ್ಷತತಿಲಾರ್ಪಣೇ = ವಸ್ತ್ರ ಯಜ್ಞೋಪವೀತ ಆಭರಣ ಗಂಧ ಅಕ್ಷತೆ ತಿಲಂಗಳ ಸಮರ್ಪಿಸುವಲ್ಲಿಯ ಕ್ರಮಃ ತತ್ಫಲಶಂಸಾ ಚ = ಕ್ರಮವು ಅವರ ಫಲವ ಹೇಳುವಂಥಾ ಅಧ್ಯಾಯವೂ ಪರಿಕೀರ್ತಿತಾ= ಹೇಳಲ್ಪಟ್ಟಿತ್ತು. ||೪೮||

ತತಃ = ಅನಂತರದಲ್ಲಿ ನಾನಾವಿಧಾನಾಂ = ನಾನಾಪ್ರಕಾರವಹಂಥಾ ಪುಷ್ಪಾಣಾಂ = ಪುಷ್ಪಂಗಳ ಲಕ್ಷಣಾರ್ಪಣ ತತ್ಫಲಂ = ಲಕ್ಷಣವು ಸಮರ್ಪಣವು ಅವಱ ಫಲವ ಹೇಳುವಂಥಾ ಅಧ್ಯಾಯವು ಶಿವಯೋಗ್ಯಾನಾಂ = ಶಿವಂಗೆ ಯೋಗ್ಯವಹಂಥಾ ಪತ್ರಾಣಾಂ = ಪತ್ರೆಗಳ ಲಕ್ಷಣಾಶಂಸನಂ = ಲಕ್ಷಣವ ಹೇಳುವಂಥಾ ಅಧ್ಯಾಯವು, ||೪೯||

ಧೂಪಲಕ್ಷಣಮಾಹಾತ್ಮ್ಯಂ= ಧೂಪಲಕ್ಷಣಮಹಿಮೆಯ ಹೇಳುವ ಅಧ್ಯಾಯವು ದೀಪಲಕ್ಷಣತತ್‌ಸ್ತುತಿಃ= ದೀಪಲಕ್ಷಣವು ಅದಱ ಮಹಿಮೆಯ ಹೇಳುವ ಅಧ್ಯಾಯವು ಘಂಟಾಪಂಚಮಹಾಶಬ್ದಲಕ್ಷಣಾರ್ಪಣತತ್ಫಲಂ= ಘಂಟೆ ಪಂಚಮಹಾಶಬ್ದದ ಲಕ್ಷಣ ಸಮರ್ಪಣ ಅವಱ ಫಲವ ಹೇಳುವ ಅಧ್ಯಾಯವು, ||೫೦||

ತತಃ ಪರಂ = ಅಷ್ಟರ ಮೇಲೆ ಅನುಕ್ರಮಾತ್ = ಅನುಕ್ರಮದಿಂದವೆ ನೈವೇದ್ಯಮುಖಸದ್ವಾಸತಾಂಬೂಲಾನಾಂ = ನೈವೇದ್ಯ ಮುಖವಾಸನೆ ತಾಂಬೂಲಂಗಳ ಲಕ್ಷಣಾರ್ಪಣಮಾಹಾತ್ಮ್ಯಂ = ಲಕ್ಷಣ ಸಮರ್ಪಣಂಗಳ ಮಾಹಾತ್ಮ್ಯೆಯ ಹೇಳುವ ಅಧ್ಯಾಯವು ಉದೀರಿತಂ = ಹೇಳಲ್ಪಟ್ಟಿತ್ತು.

ತದನಂತರಂ = ಅದಱ ತಱುವಾಯಲ್ಲಿ ನೀರಾಜನಾದರ್ಶಫಲಛತ್ರಾಣಾಂ=

[1]ಗೀತೇ ವಾದ್ಯೇ[1] ತಥಾ [2]ನೃತ್ಯೇ ಪುರಾಣ[2]ಪಠನೇ ಸ್ತುತೌ
ನಮಸ್ಕಾರೇ [3]ತಥೈತೇಷು[3] ಕ್ರಮಸ್ತನ್ಮಹಿಮಸ್ತುತಿಃ ||೩೩||
ಸಾವಿತ್ರ್ಯರುಂಧತೀವಾದೋ ಲಿಂಗಾರ್ಚನವಿಧಿಸ್ತತಃ
ಪಾದೋದಕಾದಿಮಾಹಾತ್ಮ್ಯಂ ಪ್ರಸಾದಸ್ಯ ಪ್ರಶಂಸ[4]ನಾ[4] ||೩೪||
ಶ್ವೇತೋಪಾಖ್ಯಾನಮನಘಂ ಮಾರ್ಕಂಡೇಯಚರಿತ್ರಕಮ್
ಶಿವರಾತ್ರಿವ್ರತೋತ್ಪತ್ತಿಸ್ತದ್ವಿಧಾನಂ ಸವಿಸ್ತರಮ್ ||೩೫||
ತತಸ್ತು ಸುಕುಮಾರಸ್ಯ ಗಣತ್ವಪ್ರಾಪ್ತಿಸೂಚನಾ
ಯಮಶಂಕರಸಂವಾದಃ ಶಿವಭಕ್ತಪ್ರಶಂಸ[5]ನಾ[5] ||೩೬||

---

ಆರತಿ ಕನ್ನಡಿ ಹಣ್ಣುಗಳು ಸತ್ತಿಗೆಗಳ, ಚಾಮರವ್ಯಜನಾನಾಂ ಚ = ಚವರಬೀಸಣಿಗೆಗಳ ಲಕ್ಷಣಾರ್ಪಣತತ್‌ಸ್ತುತಿಃ = ಲಕ್ಷಣ ಸಮರ್ಪಣ ಅವಜಿ ಫಲವ ಹೇಳುವ ಅಧ್ಯಾಯವು, ||೩೨||

ಗೀತೇ = ಗೀತದಲ್ಲಿಯುಂ ವಾದ್ಯೇ = ವಾದ್ಯದಲ್ಲಿ ತಥಾ = ಹಾಂಗೆ ನೃತ್ಯೇ = ನೃತ್ಯದಲ್ಲಿ ಪುರಾಣಪಠನೇ = ಪುರಾಣವನೋದುವಲ್ಲಿ ಸ್ತುತೌ = ಸ್ತೋತ್ರದಲ್ಲಿ ತಥಾ = ಹಾಂಗೆ ನಮಸ್ಕಾರೇ = ನಮಸ್ಕಾರದಲ್ಲಿ ಏತೇಷು = ಹೇಳಿದಂಥಾ ಇವಱಲ್ಲಿ ಕ್ರಮಸ್ತನ್ಮಹಿಮಸ್ತುತಿಃ = ಕ್ರಮವು ಅವಱ ಮಹಿಮೆಯ ಹೇಳುವ ಅಧ್ಯಾಯವು.

ತತಃ = ಅನಂತರದಲ್ಲಿ ಸಾವಿತ್ರ್ಯರುಂಧತೀವಾದಃ = ಸಾವಿತ್ರೀದೇವಿ ಅರುಂಧತೀದೇವಿ ಇಬ್ಬರು ಸಂಭಾಷಣೆಯ ಮಾಡಿದಂಥಾ ಅಧ್ಯಾಯವು ಲಿಂಗಾರ್ಚನವಿಧಿಃ = ಲಿಂಗಾರ್ಚನೆಯ ವಿಧಾನದ ಅಧ್ಯಾಯವು ಪಾದೋದಕಾದಿಮಾಹಾತ್ಮ್ಯಂ = ಪಾದತೀರ್ಥ ಮೊದಲಾಗಿದ್ದಂಥಾ ಅವಱ ಮಹಿಮೆಯ ಅಧ್ಯಾಯವು ಪ್ರಸಾದಸ್ಯ = ಪ್ರಸಾದದ ಪ್ರಶಂಸನಾ = ಮಹತ್ವದ ಅಧ್ಯಾಯವು.

ಅನಘಂ = ನಿರ್ದೋಷವಹಂಥಾ ಶ್ವೇತೋಪಾಖ್ಯಾನಂ = ಶ್ವೇತೋಪಾಖ್ಯಾನವು ಮಾರ್ಕಂಡೇಯಚರಿತ್ರಕಂ = ಮಾರ್ಕಂಡೇಯ ಚರಿತ್ರವು ಶಿವರಾತ್ರಿವ್ರತೋತ್ಪತ್ತಿಃ = ಶಿವರಾತ್ರಿ ವ್ರತದ ಉತ್ಪತ್ತ್ಯವು ಸವಿಸ್ತಾರಂ = ವಿಸ್ತಾರವಹಂಥಾ ತದ್ವಿಧಾನಂ = ಆ ಶಿವರಾತ್ರಿಯ ವ್ರತದ ವಿಧಾನವ ಹೇಳುವ ಅಧ್ಯಾಯವು.

ತತಸ್ತು = ಅನಂತರದಲ್ಲಿ ಸುಕುಮಾರಸ್ಯ = ಸುಕುಮಾರಂಗೆ ಗಣತ್ವಪ್ರಾಪ್ತಿ

---

1 ಗೀತವಾದ್ಯೇ(ಘ). 2 ನೃತ್ತಪುರಾಣ(ಘ) 3 ತದಂತೇಷು (ಘ) 4 ನಂ(ಘ) 5 ನಂ (ಘ)

ದಧೀ[1]ಚ[1]ಕ್ಷುಪಸಂವಾದೋ ವಿಷ್ಣುಶಾಪನಿರೂಪಣಮ್
ಶಿವಭಕ್ತಸ್ಯ ಪೂಜಾಯಾಃ ಫಲವೈಶಿಷ್ಟ್ಯಸೂಚ[1]ನಾ[2] ||೫೭||

ಈಶ್ವರಸ್ಕಂದಸಂವಾದಃ ಶಿವಭಕ್ತಾರ್ಚ[1]ನಾಂ [2]ಪ್ರತಿ
ಅಷ್ಟಸಪ್ತತಿ ಸಂಖ್ಯಾಕಾ ಅಧ್ಯಾಯಾಶ್ಚಾತ್ರ ದರ್ಶಿತಾಃ ||೫೮||

ಏವಂತ್ವನುಕ್ರಮಾಧ್ಯಾಯೋ ಯಥಾವತ್ಸಂಪ್ರಕಾಶಿತಃ
ಯಃ ಪಠೇದಿಮಮಧ್ಯಾಯಮನುಕ್ರಮಣಿಕಾಹ್ವಯಮ್
ಸ ಸಮ್ಯಕ್ ಜ್ಞಾನವಾನ್ ಭೂತ್ವಾ ಶಿವಸಾಯುಜ್ಯಮಾಪ್ನುಯಾತ್ ||

---

ಸೂಚನಾ = ಗಣತ್ವವಾದುದ ಹೇಳುವ ಅಧ್ಯಾಯವು ಯಮಶಂಕರವಾದಃ = ಯಮನ ಈಶ್ವರನ ಸಂಭಾಷಣೆಯ ಅಧ್ಯಾಯವು ಶಿವಭಕ್ತಪ್ರಶಂಸನಾ = ಶಿವಭಕ್ತರ ಮಹಿಮೆಯ ಕೊಂಡಾಡುವ ಅಧ್ಯಾಯವು.

ದಧೀಚಕ್ಷುಪಸಂವಾದಃ = ದಧೀಚ ಋಷಿಯ ಕ್ಷುಪನ ಸಂವಾದವ ಹೇಳುವ ಅಧ್ಯಾಯವು ವಿಷ್ಣುಶಾಪನಿರೂಪಣಂ = ವಿಷ್ಣುವಿಂಗೆ ಶಾಪವ ಕೊಟ್ಟಂಥ ಅಧ್ಯಾಯವು ಶಿವಭಕ್ತಸ್ಯ = ಶಿವಭಕ್ತನ ಪೂಜಾಯಾಃ = ಪೂಜೆಯ ಫಲವೈಶಿಷ್ಟ್ಯ ಸೂಚನಾ = ಫಲವಿಶೇಷವ ಹೇಳುವ ಅಧ್ಯಾಯವು.

ಶಿವಭಕ್ತಾರ್ಚನಾಂ = ಶಿವಭಕ್ತನ ಅರ್ಚನೆಯನು ಪ್ರತಿ = ಕುರಿತು ಈಶ್ವರಸ್ಕಂದಸಂವಾದಃ = ಈಶ್ವರನ ಸ್ಕಂದನ ಸಂಭಾಷಣೆಯ ಅಧ್ಯಾಯವು ಅತ್ರ = ಈ ವೀರಮಾಹೇಶ್ವರಾಚಾರಸಂಗ್ರಹ ಶಾಸ್ತ್ರದಲ್ಲಿ ಅಷ್ಟಸಪ್ತತಿಸಂಖ್ಯಾಕಾಃ = ಎಪ್ಪತ್ತೆಂಟು ಸಂಖ್ಯೆಯನುಳ್ಳಂಥಾ ಅಧ್ಯಾಯಾಶ್ಚ = ಅಧ್ಯಾಯಂಗಳು ದರ್ಶಿತಾಃ = ತೋರಿಸಲು ಪಟ್ಟವು.

ಏವಂ = ಈ ಪ್ರಕಾರದಲ್ಲಿ ಅನುಕ್ರಮಾಧ್ಯಾಯಃ = ಅನುಕ್ರಮಣಿಕಾಧ್ಯಾಯವು ಯಥಾವತ್ = ಯಥಾವತ್ತಾಗಿ ತು = ವಿಶೇಷದಿಂದ ಸಂಪ್ರಕಾಶಿತಃ = ಲೇಸಾಗಿ ಹೇಳಲು ಪಟ್ಟಿತ್ತು. ಯಃ = ಆವನಾನೊಬ್ಬಾತನು ಇಮಂ = ಈ ಅನುಕ್ರಮಣಿಕಾಹ್ವಯಂ = ಅನುಕ್ರಮಣಿಕೆಯೆಂಬ ಹೆಸರನುಳ್ಳಂಥಾ ಅಧ್ಯಯಂ = ಅಧ್ಯಾಯವನು ಪಠೇತ್ = ಪಠಿಸುವನು ಸಃ = ಆತನು ಸಮ್ಯಕ್‌ಜ್ಞಾನವಾನ್ = ಸಮ್ಯಕ್‌ಜ್ಞಾನವನುಳ್ಳಾತನು ಭೂತ್ವಾ = ಆಗಿ ಶಿವಸಾಯುಜ್ಯಂ = ಶಿವಸಾಯುಜ್ಯವನು ಆಪ್ನುಯಾತ್ = ಎಯ್ದುವನು.

---

[1] ಚಿ(ಘ) [2] ನಂ (ಘ)

ಇತಿ ಶ್ರೀ ನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ [1]ವೀರಶೈವಾಗಮ-
ಸುಧಾರ್ಣವಪೂರ್ಣಚಂದ್ರಸ್ಯ ಗೊರಗೋಡಪುರವರಾ-
ಧೀಶ್ವರಮಲ್ಲಿಕಾರ್ಜುನಾಚಾರ್ಯಸ್ಯಾನುಜ್ಞಯಾ
ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾ-
ವಿವರಣೇ ' ಅನುಕ್ರಮಣಸೂಚನಾನಾಮ '
ಪ್ರಥಮೋಽಧ್ಯಾಯಃ *

---

ಇತಿ ಶ್ರೀ ನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ-
ಪೂರ್ಣಚಂದ್ರಸ್ಯ ಗೋರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾ
ವಿವರಣೇ 'ಅನುಕ್ರಮಣಸೂಚನಾನಾಮ' ಪ್ರಥಮೋಽಧ್ಯಾಯಃ
ಅಧ್ಯಾಯ ೧ಕ್ಕೆ ೫೯ ಶ್ರೀ

---

1 ಶಿವಾಧಿಕ್ಯಕಥನೇ (ಘ).

*ಇತಿ ಶ್ರೀಮನ್ನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ಶಿವಾಧಿಕ್ಯಕಥನೇ ಅನುಕ್ರಮಣಿಕಸೂಚನಾ ನಾಮ ಪ್ರಥಮೋಽಧ್ಯಾಯಃ (ಘ)

# ದ್ವಿತೀಯೋಽಧ್ಯಾಯಃ
## ( ಧರ್ಮಾಧರ್ಮಭೇದಃ )

ಶಿವಧರ್ಮೋತ್ತರೇ

ಜ್ಞಾನಶಕ್ತಿಧರಂ ಶಾಂತಂ ಕುಮಾರಂ ಶಂಕರಾತ್ಮಜಮ್
ದೇವಾರಿಸೂದನಂ ಸ್ಕಂದಮಗಸ್ತ್ಯಃ ಪರಿಪೃಚ್ಛತಿ ||೧||

ಅಗಸ್ತ್ಯ ಉವಾಚ

ಧರ್ಮಾಧರ್ಮಪ್ರಭೇದಾಶ್ಚ ಕಿಯಂತಃ ಪರಿಕೀರ್ತಿತಾಃ
ತತ್ಸಾಧನಾನಿ ಕತಿ ವಾ ಗತಯಶ್ಚ ತದಾತ್ಮಿಕಾಃ ||೨||

ಸಂಸಾರಸಾಗರಾದ್ಘೋರಾದ್ಧರ್ಮಾಧರ್ಮೋರ್ಮಿಸಂಕುಲಾತ್
ಗರ್ಭಾದಿದುಃಖಫೇನಾಢ್ಯಾನ್ಮುಚ್ಯಂತೇ ದೇಹಿನಃ ಕಥಮ್ ||೩||

---

ಶಿವಧರ್ಮೋತ್ತರೇ = ಶಿವಧರ್ಮೋತ್ತರದಲ್ಲಿ

ಶಂಕರಾತ್ಮಜಂ = ಪರಮೇಶ್ವರನ ಪುತ್ರನಹಂಥಾ ಕುಮಾರಂ = ಚಿಕ್ಕವಯಸ್ಸನುಳ್ಳಂಥಾ ಜ್ಞಾನಶಕ್ತಿಧರಂ = ಜ್ಞಾನಶಕ್ತಿಯ ಧರಿಸಿದಂಥಾ ಶಾಂತಂ = ಶಾಂತನಹಂಥಾ ದೇವಾರಿಸೂದನಂ = ದೇವರ್ಕಳ ಶತ್ರುಗಳಹ ರಾಕ್ಷಸರ ಮರ್ದಿಸಿದಂಥಾ ಸ್ಕಂದಂ = ಸ್ಕಂದನನು ಅಗಸ್ತ್ಯಃ = ಅಗಸ್ತ್ಯ ಋಷೀಶ್ವರನು ಪರಿಪೃಚ್ಛತಿ = ಬೆಸಗೊಳುತ್ತಂವಿದ್ದಾನು. ಪ್ರಚ್ಛ ಜ್ಞೀಪ್ಸಾಯಾಂ ಎಂಬ ಧಾತುವಿಂಗೆ ಕರ್ತರಿ ಲಟ್ ಪರಸ್ಮೈಪದವು. ||೧||

ಅಗಸ್ತ್ಯಃ = ಅಗಸ್ತ್ಯಋಷಿ ಉವಾಚ = ನುಡಿದನು.

ಧರ್ಮಾಧರ್ಮಪ್ರಭೇದಾಶ್ಚ = ಧರ್ಮಾಧರ್ಮಭೇದಂಗಳು ಕಿಯಂತಃ = ಎಷ್ಟು ಪ್ರಕಾರಂಗಳಾಗಿ ಪರಿಕೀರ್ತಿತಾಃ = ಹೇಳಲುಪಟ್ಟವು. ತತ್ಸಾಧನಾನಿ = ಆ ಪುಣ್ಯಪಾಪಂಗಳಿಗೆ ಸಾಧನಂಗಳು ಕತಿ ವಾ = ಎಷ್ಟು ಪ್ರಕಾರಂಗಳು ತದಾತ್ಮಿಕಾಃ = ಅವರ ಸ್ವರೂಪವಹಂಥಾ ಗತಯಶ್ಚ = ಗತಿಗಳು ಎಷ್ಟು ಪ್ರಕಾರಂಗಳು. ||೨||

ಧರ್ಮಾಧರ್ಮೋರ್ಮಿ ಸಂಕುಲಾತ್ = ಪುಣ್ಯಪಾಪಂಗಳೆಂಬ ತೆರೆಗಳ ಸಮೂಹವನುಳ್ಳಂಥಾ ಗರ್ಭಾದಿದುಃಖಫೇನಾಢ್ಯಾತ್ = ಗರ್ಭವೊದಲಾಗಿಹ ದುಃಖಂಗಳೆಂಬ

ಇತಿ ಸಂಚೋದಿತಃ ಸ್ಕಂದಃ ಸರ್ವಪ್ರಶ್ನಾರ್ಥಸಾಧಕಃ
ಪ್ರತ್ಯುವಾಚ ಮಹಾಸೇನೋ ನಮಸ್ಕೃತ್ವಾ ಮಹೇಶ್ವರಮ್ ||೪||
ಸ್ವರ್ಗಾಪವರ್ಗಫಲದಂ ನರಕಾರ್ಣವತಾರಣಮ್

ಸ್ಕಂದ ಉವಾಚ

ಪುರಾಣಂ ಭಾರತಂ ವೇದಾಃ ಶಾಸ್ತ್ರಾಣಿ ಸುಬಹೂನಿ ಚ
ಆಯುಷಃ ಕ್ಷಪಣಾಯೈವ ಧರ್ಮೋಽಲ್ಪಗ್ರಂಥಸಂಸ್ಥಿತಃ ||೫||
ಪುತ್ರದಾರಾದಿಸಂಸಾರಃ ಪುಂಸಾಂ ಸಂಮೂಢಚೇತಸಾಮ್
ವಿದುಷಾಂ ಶಾಸ್ತ್ರಸಂಸಾರಃ ಸ ಯೋಗಾಭ್ಯಾಸವಿಘ್ನಕೃತ್ ||೬||

---

ನೊರೆಗಳ ಬಹಳವನುಳ್ಳಂಥಾ ಘೋರಾತ್ = ಭಯಂಕರವಹಂಥಾ ಸಂಸಾರ ಸಾಗರಾತ್ = ಸಂಸಾರವೆಂಬ ಸಮುದ್ರದ ದೆಸೆಯಿಂದ ದೇಹಿನಃ = ಪ್ರಾಣಿಗಳು ಕಥಂ = ಹೇಂಗೆ ಮುಚ್ಯಂತೇ = ಬಿಡಲುಪಡುತ್ತಂವಿಹರು. ||೩||

ಇತಿ = [1]ಈ ಪ್ರಕಾರದಲ್ಲಿ[2] ಸಂಚೋದಿತಃ = ಬಿನ್ನೈಸಿಕೊಳಲುಪಟ್ಟಂಥಾ ಸರ್ವಪ್ರಶ್ನಾರ್ಥಸಾಧಕಃ = [3]ಸಮಸ್ತ[3] ಪ್ರಶ್ನೆಗಳ ಅರ್ಥಂಗಳ ಸಾಧಿಸುತ್ತಂವಿದ್ದಂಥಾ ಮಹಾಸೇನಃ = ಬಹಳವಹ ಸೇನೆಯನುಳ್ಳಂಥಾ ಸ್ಕಂದಃ = ಸ್ಕಂದನು ಸ್ವರ್ಗಾಪವರ್ಗ ಫಲದಂ = ಸ್ವರ್ಗದ ಮೋಕ್ಷಂಗಳ ಫಲವ ಕೊಡುತ್ತಂವಿದ್ದಂಥಾ ನರಕಾರ್ಣವತಾರಣಂ = ನರಕವೆಂಬ ಸಮುದ್ರವ ದಾಂಟಿಸುತ್ತಂವಿದ್ದಂಥಾ ಮಹೇಶ್ವರಂ = ಪರಮೇಶ್ವರನನು ನಮಸ್ಕೃ[4]ತ್ವಾ[4] = ನಮಸ್ಕರಿಸಿ ಪ್ರತ್ಯುವಾಚ = ಮರಳಿ ನುಡಿದನು. ||೪||

ಸ್ಕಂದ ಉವಾಚ = ಸ್ಕಂದನ ವಾಕ್ಯವು.

ಪುರಾಣಂ = ಪುರಾಣವು ಭಾರತಂ = ಭಾರತವು ವೇದಾಃ = ವೇದಂಗಳು ಸುಬಹೂನಿ = ಅತಿ ಬಹಳವಹಂಥಾ ಶಾಸ್ತ್ರಾಣಿ ಚ = ಶಾಸ್ತ್ರಂಗಳು ಆಯುಷಃ = ಆಯುಷ್ಯದ ಕ್ಷಪಣಾಯೈವ = ಕ್ಷಯಕ್ಕೋಸ್ಕರವೇ. ಧರ್ಮಃ = ಧರ್ಮವು ಅಲ್ಪಗ್ರಂಥ ಸಂಸ್ಥಿತಃ = ಅಲ್ಪಗ್ರಂಥದಲ್ಲಿ ಇರಲುಪಟ್ಟುತ್ತು. ||೫||

ಸಂಮೂಢಚೇತಸಾಂ = ಮೂಢಚಿತ್ತವನುಳ್ಳಂಥಾ ಪುಂಸಾಂ = ಪುರುಷರುಗಳಿಗೆ ಪುತ್ರದಾರಾದಿಸಂಸಾರಃ = ಪುತ್ರ ಸ್ತ್ರೀ ಮೊದಲಾದ ಸಂಸಾರವು. ವಿದುಷಾಂ = ವಿದ್ವಾಂಸರುಗಳಿಗೆ ಶಾಸ್ತ್ರಸಂಸಾರಃ = ಶಾಸ್ತ್ರವೇ ಸಂಸಾರವು. ಸಃ = [5]ಆ ಸಂಸಾರವು[5] ಯೋಗಾಭ್ಯಾಸವಿಘ್ನಕೃತ್ = ಯೋಗಾಭ್ಯಾಸಕ್ಕೆ ವಿಘ್ನವ ಮಾಡುವಂಥಾದು. ||೬||

---

[1] ಷ್ಯ (ಕ). [2] ಹೀಂಗೆ (ಕ). [3] ಸರ್ವ (ಕ). [4] ತ್ಯ (ಕ). [5] ಅದು (ಕ).

ಇದಂ ಜ್ಞೇಯಮಿದಂ ಜ್ಞೇಯಂ ಯಸ್ಸರ್ವಂ ಜ್ಞಾತುಮಿಚ್ಛತಿ
ಅಪಿ ವರ್ಷಸಹಸ್ರಾಯುಃ ಶಾಸ್ತ್ರಾಂತಂ ನಾಧಿಗಚ್ಛತಿ ||೭||

ವಿಜ್ಞಾಯಾಕ್ಷರತನ್ಮಾತ್ರಂ ಜೀವಿತಂ ಚಾಪಿ ಚಂಚಲಮ್
ವಿಹಾಯ ಶಾಸ್ತ್ರಜಾಲಾನಿ ಪಾರಲೌಕಿಕಮಾಚರೇತ್ ||೮||

ಪಂಡಿತೇನಾಪಿ ಕಿಂ ತೇನ ಸಮರ್ಥೇನ ಚ ದೇಹಿನಾ
ಯಃ ಪುಣ್ಯಭಾರಮುದ್ವೋಢುಮಶಕ್ತಃ ಪಾರಲೌಕಿಕಮ್ ||೯||

ಪಂಡಿತೋಽಪಿ ಸ ಮೂರ್ಖಸ್ಸ್ಯಾಚ್ಛಕ್ತಿಯುಕ್ತೋಽಪ್ಯಶಕ್ತಿಮಾನ್
ಯಸ್ಸಂಸಾರಾತ್ಸ್ವಮಾತ್ಮಾನಮುತ್ತಾರಯಿತುಮಕ್ಷಮಃ ||೧೦||

---

ಯಃ = ಆವನೊಬ್ಬನು ಇದಂ = ಇದು ಜ್ಞೇಯಂ = ಅರಿಯಲು ಯೋಗ್ಯವು ಇದಂ = ಇದು ಜ್ಞೇಯಂ = ಅರಿಯಲು ಯೋಗ್ಯವೆಂದು ಸರ್ವಂ = ಸಮಸ್ತವನು ಜ್ಞಾತುಂ = ಅರಿಯಲೋಸ್ಕರ ಇಚ್ಛತಿ = ಇಚ್ಛೈಸುತ್ತಿಹನು ವರ್ಷಸಹಸ್ರಾಯುಃ ಅಪಿ = ವರ್ಷಂಗಳ ಸಹಸ್ರಾಯುಷ್ಯವಾಯಿತ್ತಾದರೂ ಶಾಸ್ತ್ರಾಂತಂ = ಶಾಸ್ತ್ರಗಳ ಕಡೆಯನು ನಾಧಿಗಚ್ಛತಿ = ಎಯ್ದುವುದಿಲ್ಲ ವಿರನು. ||೭||

ಜೀವಿತಂ ಚ = ಜೀವಿತವು ಚಂಚಲಮಪಿ = ಚಂಚಲವಹೆಂಥಾ ಅದು ಅಕ್ಷರ ತನ್ಮಾತ್ರಂ = ಅಕ್ಷರ ಮಾತ್ರವನು ವಿಜ್ಞಾಯ = ಅರಿದು ಶಾಸ್ತ್ರಜಾಲಾನಿ = ಶಾಸ್ತ್ರ ಸಮೂಹಂಗಳನು ವಿಹಾಯ = ಬಿಟ್ಟು ಪಾರಲೌಕಿಕಂ = ಪರಲೋಕಸಂಬಂಧವಹೆಂಥಾ ಧರ್ಮವನು ಆಚರೇತ್ = ಆಚರಿಸೂದು. ||೮||

ಯಃ = ಆವನಾನೊಬ್ಬನು ಪಾರಲೌಕಿಕಂ = ಪರಲೋಕಸಂಬಂಧವಹೆಂಥಾ ಪುಣ್ಯಭಾರಂ = ಪುಣ್ಯದ ಭಾರವನು ಉದ್ವೋಢುಂ = ಧರಿಸಲು ಅಶಕ್ತಃ = ಶಕ್ತನಲ್ಲ. ಸಮರ್ಥೇನ = ಸಮರ್ಥನಹಂಥಾ ಪಂಡಿತೇನ = ವಿದ್ವಾಂಸನುವಹೆಂಥಾ ತೇನ ದೇಹಿನಾಪಿ ಚ = ಆ ಪ್ರಾಣಿಯಿಂದಲು ಕಿಂ = ಏನು ಪ್ರಯೋಜನವು ? ||೯||

ಯಃ = ಆವನಾನೊಬ್ಬನು ಸಂಸಾರಾತ್ = ಸಂಸಾರದ ದೆಸೆಯಿಂದ ಸ್ವಂ = ತನ್ನ ಸಂಬಂಧವಹೆಂಥಾ ಆತ್ಮಾನಂ = ಸ್ವರೂಪವನು ಉತ್ತಾರಯಿತುಂ = ದಾಂಟಿಸಲು ಅಕ್ಷಮಃ = ಸಮರ್ಥನಲ್ಲ ಸಃ = ಆತನು ಪಂಡಿತೋಽಪಿ = ವಿದ್ವಾಂಸನುವಾಯಿತ್ತಾದರೂ ಮೂರ್ಖಃ = ಮೂರ್ಖನು ಸ್ಯಾತ್ = ಅಹನು ಶಕ್ತಿಯುಕ್ತೋಽಪಿ = ಸಾಮರ್ಥ್ಯ ದಿಂದ ಕೂಡಲ್ಪಟ್ಟಾತನಾಯಿತ್ತಾದರೂ ಅಶಕ್ತಿಮಾನ್ = ಸಾಮರ್ಥ್ಯವಿಲ್ಲದಾತನು.

ತಸ್ಮಾತ್ಸ ಪಂಡಿತಶ್ಶಕ್ತಸ್ಸ ತಪಸ್ವೀ ಜಿತೇಂದ್ರಿಯಃ
ಯಶ್ಶಿವಜ್ಞಾನಸದ್ಭಾವಮಾಲೋಕಯಿತುಮುದ್ಯತಃ ||೧೧||

ಅಪಿ ಶ್ಲೋಕಂ ತದರ್ಧಂ ವಾ ಶಿವಜ್ಞಾನಸ್ಯ ಯಃ ಪಠೇತ್
ವಾಚಯೇಚ್ಚಿಂತಯೇದ್ವಾಪಿ ಲಿಖೇದ್ವಾ ಲೇಖಯೇತ[1] ವಾ ||೧೨||

ಶೃಣುಯಾದೇಕಚಿತ್ತಶ್ಚ ತದರ್ಥಂ ಚ ವಿಚಾರಯೇತ್
ಅನ್ಯೇಭ್ಯಃ ಶ್ರಾವಯೇದ್ಯಸ್ತು ತಸ್ಯ ಪುಣ್ಯಫಲಂ ಶೃಣು ||೧೩||

ತ್ರಿಃ ಪ್ರದಾಯ ಮಹೀಂ ಪೂರ್ಣಾಂ ಸರ್ವರತ್ನೈಸ್ತು ಯತ್ಫಲಮ್।
ಶ್ಲೋಕಾರ್ಧಮೀಶ್ವರಜ್ಞಾನಂ ಪಠನ್ ತತ್ಫಲಮಾಪ್ನುಯಾತ್ ||೧೪||

---

ಯಃ = ಆವನಾನೊಬ್ಬಾತನು ಶಿವಜ್ಞಾನಸಧ್ಭಾವಂ = ಶಿವಜ್ಞಾನದ ಸದ್ಭಾವವನು ಆಲೋಕಯಿತುಂ = ನೋಡಲು ಉದ್ಯತಃ = ಉದ್ಯುಕ್ತನಹನು ತಸ್ಮಾತ್ = ಅದುಕಾರಣ ಸಃ = ಆತನು ಪಂಡಿತಃ = ವಿದ್ವಾಂಸನು, ಶಕ್ತಃ = ಸಮರ್ಥನು. ಸಃ = ಆತನು ತಪಸ್ವೀ = ತಪಸ್ವಿಯಹಂಥಾ ಆತನು. ಜಿತೇಂದ್ರಿಯಃ = ಜೀತೇಂದ್ರಿಯನು. ||೧೧||

ಯಃ = ಆವನಾನೊಬ್ಬನು ಶಿವಜ್ಞಾನಸ್ಯ = ಶಿವಜ್ಞಾನ ಶಾಸ್ತ್ರದ ಶ್ಲೋಕಮಪಿ = ಒಂದು ಶ್ಲೋಕವನಾದರೂ ತದರ್ಧಂವಾ = ಆ ಶ್ಲೋಕದ ಅರ್ಧವನಾಯಿತ್ತಾದರೂ ಪಠೇತ್ = ಪಠಿಸುವನು ವಾಚಯೇತ್ = ಓದುವನು ಚಿಂತಯೇತ್ = ಚಿಂತನೆಯ ಮಾಡುವನು [2]ವಾಪಿ[2] = ಅಲ್ಲಾ ಲಿಖೇದ್ವಾ = ಬರೆವನು ವಾ = ಅಲ್ಲಾ ಲೇಖಯೇತ = ಬರಸುವನು. ||೧೨||

ಯಃ = ಆವನಾನೊಬ್ಬನು ಏಕಚಿತ್ತಶ್ಚ = ಏಕಚಿತ್ತನಾಗಿಯೂ ಶೃಣುಯಾತ್ = ಕೇಳುವನು ತದರ್ಥಂ ಚ = ಆ ಶಿವಜ್ಞಾನ ಶಾಸ್ತ್ರದ ಅರ್ಥವನು ವಿಚಾರಯೇತ್ = ವಿಚಾರಿಸುವನು ಅನ್ಯೇಭ್ಯಃ = ಮತ್ತೆ ಕೆಲವರಿಗೋಸ್ಕರ ಶ್ರಾವಯೇತ್ = ಕೇಳಿಸುವನು ತಸ್ಯ = ಅದಱ ಪುಣ್ಯಫಲಂ = ಪುಣ್ಯದ ಫಲವನು ಶೃಣು = ಕೇಳು. ||೧೩||

ಸರ್ವರತ್ನೈಸ್ತು = ಸರ್ವರತ್ನಂಗಳಿಂದಲೂ ಪೂರ್ಣಾಂ = ತುಂಬಿಕೊಂಡಿದ್ದಂಥಾ ಮಹೀಂ = ಭೂಮಿಯನು ತ್ರಿಃ ಪ್ರದಾಯ = ಮೂಱುಬಾರಿ ದಾನವ ಕೊಡಲಾಗಿ ಯತ್ಫಲಂ = ಅವುದಾನೊಂದು ಫಲವುಂಟೋ ಈಶ್ವರಜ್ಞಾನಂ = ಶಿವಜ್ಞಾನವಹಂಥಾ

---

[1]ಯಾತ (ಖ). ಯೀತ (ಗ). [2] ಅಪಿ (ಕ).

ಸಂಸಾರಬೀಜಮಜ್ಞಾನಂ ಸಂಸಾರ್ಯಜ್ಞಃ ಪುಮಾನ್ ಯತಃ
ಅಜ್ಞಾನೇ ಸತಿ ರಾಗಾದ್ಯಾಃ ಧರ್ಮಾಧರ್ಮೌ ಚ ತದ್ವಶೌ ||೧೫||

ಧರ್ಮಾಧರ್ಮವಶಾತ್ಪುಂಸಾಂ ಶರೀರಮುಪಜಾಯತೇ
ಶರೀರೇ ಸತಿ [1]ಸಂಕ್ಲೇಶೈಃ[1] ಸರ್ವೈಃ ಸಂಯುಜ್ಯತೇ ನರಃ ||೧೬||

ಧರ್ಮರಜ್ಜ್ವಾ ವ್ರಜೇದೂರ್ಧ್ವಂ ಪಾಪರಜ್ಜ್ವಾ ವ್ರಜೇದಧಃ
[2]ದ್ವಯಂ ಜ್ಞಾ[2]ನಾಸಿನಾ ಛಿತ್ವಾ ವಿದೇಹಃ ಶಾಂತಿಮೃಚ್ಛತಿ ||೧೭||

---

ಶ್ಲೋಕಾರ್ಥಂ=ಶ್ಲೋಕದ ಅರ್ಥವನು ಪಠನ್=ಪಾಠವ ಮಾಡುವಾತನು ತತ್ಫಲಂ =[3]ಆ[3] ಫಲವನು ಆಪ್ನುಯಾತ್=ಎಯ್ದುವನು. ||೧೪||

ಅಜ್ಞಾನಂ=ಅಜ್ಞಾನವು ಸಂಸಾರಬೀಜಂ = ಸಂಸಾರಕ್ಕೆ ಬೀಜವಹಂಥಾದು ಯತಃ = ಆವುದಾದೊಂದು ಕಾರಣವಾಗಿ ಸಂಸಾರೀ = ಸಂಸಾರಿಯಹಂಥಾ ಪುಮಾನ್=ಪುರುಷನು ಅಜ್ಞಃ = ಅಜ್ಞಾನಿಯಹಂಥಾ ಆತನು ಅಜ್ಞಾನೇ ಸತಿ = ಅಜ್ಞಾನವಾಗುತ್ತಂವಿರಲು ರಾಗಾದ್ಯಾಃ = ರಾಗ ದ್ವೇಷ ಮೊದಲಾದಂಥಾವಹವು ಧರ್ಮಾಧರ್ಮೌ ಚ = ಪುಣ್ಯಪಾಪಂಗಳು ತದ್ವಶೌ = ಆ ರಾಗದ್ವೇಷಂಗಳ ಅಧೀನಂಗಳು. ||೧೫||

ಧರ್ಮಾಧರ್ಮವಶಾತ್=ಪುಣ್ಯಪಾಪಂಗಳಾಧೀನದ ದೆಸೆಯಿಂದ ಪುಂಸಾಂ= ಪುರುಷರುಗಳಿಗೆ ಶರೀರಂ = ಶರೀರವು ಉಪಜಾಯತೇ = [4]ಹುಟ್ಟಲುಪಡುತ್ತಂ[4] ವಿಹುದು. ಶರೀರೇ ಸತಿ = ಶರೀರವಾಗುತ್ತಂ ವಿರಲು . ಸ ನರಃ = ಆ ಮನುಷ್ಯನು ಸರ್ವೈಃ ಸಂಕ್ಲೇಶೈಃ=ಸಮಸ್ತ ಕ್ಲೇಶಂಗಳಿಂದ ಸಂಯುಜ್ಯತೇ=ಕೂಡಲುಪಡುತ್ತಂ ವಿಹನು. ||೧೬||

ಧರ್ಮರಜ್ಜ್ವಾ = ಧರ್ಮವೆಂಬ ರಜ್ಜುವಿನಿಂದ ಊರ್ಧ್ವಂ = ಸ್ವರ್ಗವನು ವ್ರಜೇತ್=ಎಯ್ದುವನು. ಪಾಪರಜ್ಜ್ವಾ=ಪಾಪವೆಂಬ ಹಗ್ಗದಿಂದ ಅಧಃ=ನರಕವನು ವ್ರಜೇತ್=ಎಯ್ದುವನು ದ್ವಯಂ = ಪುಣ್ಯ ಪಾಪಂಗಳೆಂಬ ಎರಡು ರಜ್ಜುವನು ಜ್ಞಾನಾಸಿನಾ=ಜ್ಞಾನವೆಂಬ ಖಡ್ಗದಿಂದ ಛಿತ್ವಾ = ಛೇದಿಸಿ ವಿದೇಹಃ = ದೇಹವಿಲ್ಲದಾತನಾಗಿ ಶಾಂತಿಂ = ಮೋಕ್ಷವನು ಋಚ್ಛತಿ = ಎಯ್ದುತ್ತಂವಿಹನು. ಋ+ಗತೌ ಎಂಬ ಧಾತು. ||೧೭||

---

1 ಸಕ್ಲೇಶೈಃ (ಖ.ಗ.ಚ.). 2 ದ್ವಯೋಃಜ್ಞಾ (ಕಖಗಘ) 3 ಅವನ (ಖ). 4 ಆಗುತ್ತಂ (ಕ).

ಸದ್ಧರ್ಮಾಶ್ಚ ಶಿವೇನೋಕ್ತಾಃ ಶಿವಧರ್ಮಾಗಮೋತ್ತರೇ
ಜ್ಞೇಯಾ ಬಹುವಿಧಾಸ್ತೇ ಚ ಕರ್ಮಯೋಗಪ್ರಭೇದತಃ ||೧೮||

ಅಥಾಹಿಂಸಾ ಕ್ಷಮಾ ಸತ್ಯಂ ಹ್ರೀಶ್ಶ್ರದ್ಧೇಂದ್ರಿಯನಿಗ್ರಹಃ
ದಾನಂ ವಿದ್ಯಾ ತಪೋ ಧ್ಯಾನಂ 'ದಶಕಂ ಧರ್ಮಲಕ್ಷಣಮ್' ||೧೯||

ಅಧರ್ಮಭೇದಾ ವಿಜ್ಞೇಯಾಶ್ಚಿತ್ತವೃತ್ತಿಪ್ರಭೇದತಃ
ಸ್ಥೂಲಾಃ ಸೂಕ್ಷ್ಮಾಃ ಸುಸೂಕ್ಷ್ಮಾಶ್ಚ ಕೋಟಿಭೇದೈರನೇಕಧಾ ||೨೦||

ತತ್ರ ಯೇ ಪಾಪನಿಚಯಾಃ ಸ್ಥೂಲಾ ನರಕಹೇತವಃ
ತೇಽಸಮಾಸೇನ[1] ಕಥ್ಯಂತೇ ಮನೋವಾಕ್ಕಾಯಸಾಧನೈಃ ||೨೧||

---

ಶಿವೇನ = ಪರಮೇಶ್ವರನಿಂದ ಶಿವಧರ್ಮಾಗಮೋತ್ತರೇ = ಶಿವಧರ್ಮಾಗಮೋತ್ತರದಲ್ಲಿ ಸದ್ಧರ್ಮಾಶ್ಚ = ಒಪ್ಪುತ್ತಿರುವಂಥಾ ಧರ್ಮಂಗಳು ಉಕ್ತಾಃ = ಹೇಳಲು ಪಟ್ಟವು. ತೇ ಚ = ಆ ಧರ್ಮಂಗಳು ಕರ್ಮಯೋಗಪ್ರಭೇದತಃ = ಕ್ರಿಯಾಯೋಗದ ಭೇದದ ದೆಸೆಯಿಂದ ಬಹುವಿಧಾಃ = ಹಲವು ಪ್ರಕಾರಂಗಳಾಗಿ ಜ್ಞೇಯಾಃ = ಅಱಿಯಲು ಯೋಗ್ಯಂಗಳು. ||೧೮||

ಕ್ರಿಯಾಯೋಗದ ಧರ್ಮದಲಕ್ಷಣವ ಹೇಳುತ್ತಿರುವಿದ್ದಾರು —

ಅಥ = ಅನಂತರದಲ್ಲಿ ಅಹಿಂಸಾ = ಹಿಂಸೆಯ ಮಾಡದಿರುಹವು ಕ್ಷಮಾ = ಶಾಂತಿ ಸತ್ಯಂ = ಸತ್ಯವು ಹ್ರೀಃ = ಲಜ್ಜೆ ಶ್ರದ್ಧಾ = ನಿಶ್ವಾಸವು ಇಂದ್ರಿಯನಿಗ್ರಹಃ = ಇಂದ್ರಿಯಂಗಳ ನಿಗ್ರಹಿಸುಹವು ದಾನಂ = ದಾನವು ವಿದ್ಯಾ = ವಿದ್ಯಾಭ್ಯಾಸವು ತಪಃ = ತಪಸ್ಸು ಧ್ಯಾನಂ = ಧ್ಯಾನವು ದಶಕಂ = ಈ ಹತ್ತು ಧರ್ಮಲಕ್ಷಣಂ = ಧರ್ಮದ ಲಕ್ಷಣವು. ||೧೯||

ಅಧರ್ಮಭೇದಾಃ = ಪಾಪಂಗಳ ಭೇದಂಗಳು ಚಿತ್ತವೃತ್ತಿ ಪ್ರಭೇದತಃ = ಚಿತ್ತದ ವರ್ತನೆಯ ಭೇದದ ದೆಸೆಯಿಂದ ಅನೇಕಧಾ = ಹಲವು ಪ್ರಕಾರವಹಂಥಾ ಕೋಟಿ ಭೇದೈಶ್ಚ = ಕೋಟಿಭೇದಂಗಳಿಂದ ಸ್ಥೂಲಾಃ = ಸ್ಥೂಲಂಗಳು ಸೂಕ್ಷ್ಮಾಃ = ಸೂಕ್ಷ್ಮಂಗಳು ಸುಸೂಕ್ಷ್ಮಾಃ = ಅತಿಸೂಕ್ಷ್ಮಂಗಳಾಗಿ ಜ್ಞೇಯಾಃ = ಅಱಿಯಲು ಯೋಗ್ಯಂಗಳು. ||೨೦||

ತತ್ರ = ಅಲ್ಲಿ ಯೇ = ಆವವು ಕೆಲವು ಸ್ಥೂಲಾಃ = ದೊಡ್ಡಿತ್ತಹಂಥಾ ಪಾಪನಿಚಯಾಃ = ಪಾಪಸಮೂಹಂಗಳು ನರಕಹೇತವಃ = ನರಕಕ್ಕೆ ಕಾರಣಂಗಳು

---

1 ಸಮಾಸೇನ (ಘ).

ಪರಸ್ತ್ರೀದ್ರವ್ಯಸಂಕಲ್ಪಶ್ಚೇತಸಾಽನಿಷ್ಟಚಿಂತನಮ್
ಅಕಾರ್ಯಾಭಿನಿವೇಶಶ್ಚ ಚತುರ್ಧಂ ಕರ್ಮ ಮಾನಸಮ್ ॥೨೨॥

ಅನಿಬದ್ಧಪ್ರಲಾಪಿತ್ವಮಸತ್ಯಂ ಚಾಪ್ರಿಯಂ ಚ ಯತ್
ಪರಾಪವಾದಪೈಶುನ್ಯಂ ಚತುರ್ಧಂ ಕರ್ಮ ವಾಚಿಕಮ್ ॥೨೩॥

ಅಭಕ್ಷ್ಯಭಕ್ಷಣಂ ಹಿಂಸಾ ಮಿಥ್ಯಾ[1]ಕಾಮಸ್ಯ ಸೇವನಮ್[1]
ಪರಸ್ವಾನಾಮುಪಾದಾನಂ ಚತುರ್ಧಂ ಕರ್ಮ ಕಾಯಿಕಮ್ ॥೨೪॥

---

ತೇ = ಆ ಪಾಪಂಗಳು [ಅ] ಸಮಾಸೇನ = ವಿಸ್ತರದಿಂದ ಮನೋವಾಕ್ಕಾಯಸಾಧನೈಃ ಮನಸ್ಸು ವಾಕ್ಯ ಕಾಯಂಗಳ ಸಾಧನಂಗಳಿಂದ ಕಥ್ಯಂತೇ = ಹೇಳ[2]ಲು ಪಡುತ್ತಿದ್ದಾವು. ॥೨೧॥

ಪರಸ್ತ್ರೀದ್ರವ್ಯಸಂಕಲ್ಪಃ = ಪರಸ್ತ್ರೀ ಪರದ್ರವ್ಯವ ನೆನಹವು ಅನಿಷ್ಟಚಿಂತನಂ = ಹಿತವಲ್ಲದಂಥಾದ ಚಿಂತಿಸುಹವು ಅಕಾರ್ಯಾಭಿನಿವೇಶಶ್ಚ = ಮಾಡಬಾರದಂಥಾ ಅದರಲ್ಲಿ ಆಗ್ರಹವ [3]ಕೊಳುಹವು[3] ಚತುರ್ಧಂ = ಈ ನಾಲ್ಕು ಮಾನಸಂ = ಮನಸ್ಸಿನ ಸಂಬಂಧವಹಂಥಾ ಕರ್ಮ = ವ್ಯಾಪಾರವು. ॥೨೨॥

ಅನಿಬದ್ಧಪ್ರಲಾಪಿತ್ವಂ = ನಿಬದ್ಧಿಯುಲ್ಲದ ನುಡಿಯ ನುಡಿಹವು, ರಪ ಲಪ-ವ್ಯಕ್ತಾಯಾಂ ವಾಚಿ ಎಂಬ ಧಾತುವಿನಲ್ಲಿ ಹುಟ್ಟಿದ ಪದವು. ಅಸತ್ಯಂ ಚ = ಹುಸಿಯ ನುಡಿಹವು ಯತ್ = ಆವುದಾನೊಂದು ಅಪ್ರಿಯಂ ಚ = ನಿಷ್ಠುರವಾಕ್ಯವು ಪರಾಪವಾದ ಪೈಶುನ್ಯಂ = ಪರರ ನಿಂದೆಯನಾಡು[4]ಹವು ಚತುರ್ಧಂ = ಈ ನಾಲ್ಕು ವಾಚಿಕಂ = ವಾಕ್ಯದ ಸಂಬಂಧವಹಂಥಾ ಕರ್ಮ = ವ್ಯಾಪಾರವು.[4] ॥೨೩॥

ಅಭಕ್ಷ್ಯಭಕ್ಷಣಂ = ಮೆಲ್ಲಬಾರದಂಥಾದ ಮೆಲ್ಲುಹವು ಹಿಂಸಾ = ಕೊಲುಹವು ಮಿಥ್ಯಾಕಾಮಸ್ಯ = ಮಿಥ್ಯವಹ ಬಯಕೆಯ ಸೇವನಂ = ಸೇವಿಸುಹವು ಮಾಡು[5]ಹವೆಂ[5]ಬುದರ್ಥ. ಪರಸ್ವಾನಾಂ = ಪರರಲ್ಲಿ ಇದ್ದಂಥಾ ವಸ್ತುಗಳ ಉಪಾದಾನಂ = ತೆಗೆದು ಕೊಳುಹವು ಚತುರ್ಧಂ = ಈ ನಾಲ್ಕು ಕಾಯಿಕಂ = ಕಾಯದ ಸಂಬಂಧವಹಂಥಾ ಕರ್ಮ = ವ್ಯಾಪಾರವು. ॥೨೪॥

---

1 ಕಾರ್ಯನಿವೇಶಸಂ (ಘ) ದಲ್ಲಿ ಮೂಲಪಾಠ. 'ಕಾಮಸ್ಯ ಸೇವನಂ' ಪಾಠಾಂತರ (ಘ).
2 ಲ್ಪ (ಕ.ಖ.ಚ.).
3 ಕೊಳುತಿಹವು (ಖ.ಚ.) ಆಗ್ರಹವಣಿಳುಹವು (ಕ) 4 (ಕ) ದಲ್ಲಿ ಲುಪ್ತ ಭಾಗ
5 ವುದೆಂ (ಕ).

ಯೇ ಶಿವಾಯತನಾರಾಮವಾಪೀಕೂಪಮಠಾಂಗಣಮ್
ಉಪದ್ರವಂತಿ ಪಾಪಿಷ್ಠಾ ನೃಪಾಸ್ತತ್ರ ವಸಂತಿ ಚ ||೧೮೫||

ವ್ಯಾಯಾಮೋದ್ವರ್ತನಾಭ್ಯಂಗಸ್ನಾನಪಾನಾನ್ನಭೋಜನಮ್
ಕ್ರೀಡನಂ ಮೈಥುನಂ [1]ದ್ಯೂತಂ[1]ಶೌಚಾದ್ಯಂ ಚಾಚರಂತಿ ಚ ||೧೮೬||

ತೇ ವಧೈರ್ವಿವಿಧೈರ್ಘೋರೈಃ ಇಕ್ಷುಯಂತ್ರಾದಿಪೀಡನೈಃ
ನಿರಯಾಗ್ನಿಷು ಪಚ್ಯಂತೇ ಯಾವದಾಚಂದ್ರತಾರಕಮ್ ||೧೮೭||

ಶಿವಾಯತನಪರ್ಯಂತೇ ಶಿವಾರಾಮೇ ಚ ಕುತ್ರಚಿತ್
ಸಮುತ್ಸೃಜಂತಿ ಯೇ ಮೂಢಾ ಪುರೀಷಂ ಮೂತ್ರಮೇವ ವಾ ||

---

ಯೇ=ಆರು ಕೆಲಬರು ಪಾಪಿಷ್ಠಾಃ=ಪಾಪಿಗಳಹಂಥಾ ನೃಪಾಃ=ಅರಸುಗಳು ಶಿವಾಯತನಾರಾಮವಾಪೀಕೂಪಮಠಾಂಗಣಂ = ಶಿವಾಲಯ ಶಿವನ ಉದ್ಯಾನವನ ಕೊಣ ಬಾವಿ ಮಠಂಗಳ ಸಮೂಹವನು ಉಪದ್ರವಂತಿ=ಉಪದ್ರವ ಮಾಡುತ್ತಿಹರು. ತತ್ರ=ಅಲ್ಲಿ ವಸಂತ ಚ=ಇರುತ್ತಿಹರು. ||೧೮೫||

ವ್ಯಾಯಾಮೋದ್ವರ್ತನಾಭ್ಯಂಗಸ್ನಾನಪಾನಾನ್ನಭೋಜನಂ = ಹರಿದಾಡುತ್ತಿಹ ತಿಗುರಸಿಕ್ಕಿಸಿಕೊಳುಹ ಎಣ್ಣೆಮಜ್ಜನವ ಮಾಡುಹ ಉದಕವ ಕುಡಿಹ ಊಟವ ಮಾಡುಹವನು ಕ್ರೀಡನಂ = ಕೆಲದಾಡುಹವನು ಮೈಥುನಂ = ಸ್ತ್ರೀಸಂಗವನು ದ್ಯೂಂತಂ = ಜೂಜನು ಶೌಚಾದ್ಯಂ ಚ = ಶೌಚಮೊದಲಾದಂಥಾ ಅವನು ಆಚರಂತಿ=ಮಾಡುತ್ತಿಹರು. ||೧೮೬||

ತೇ = ಅವರುಗಳು ವಿವಿಧೈಃ = ನಾನಾ ಪ್ರಕಾರವಹಂಥಾ ಘೋರೈಃ = ಭಯಂಕರವಹಂಥಾ ಇಕ್ಷುಯಂತ್ರಾದಿಪೀಡನೈಃ = ಕಬ್ಬಿನಾಲೆ ಮೊದಲಾದ ಬಾಧೆಗಳನುಳ್ಳಂಥಾ ವಧೈಃ ವಧೆಗಳಿಂದ ನಿರಯಾಗ್ನಿಷು=ನರಕಾಗ್ನಿಗಳಲ್ಲಿ ಪಚ್ಯಂತೇ= ಬೇವುತ್ತಿಹರು. ಯಾವತ್=ಎಲ್ಲಿ ಪರಿಯಂತರವೆಂದರೆ ಆಚಂದ್ರತಾರಕಂ=ಚಂದ್ರ ತಾರಕಿ ಉಳ್ಳಲ್ಲಿ ಪರಿಯಂತರವು. ||೧೮೭||

ಯೇ ಮೂಢಾಃ = ಆರು ಕೆಲಬರು ಮೂರ್ಖರುಗಳು ಶಿವಾಯತನಪರ್ಯಂತೇ = ಶಿವಾಲಯದ ಚತುಸ್ಸೀಮೆಯಲ್ಲಿ ಶಿವಾರಾಮೇ ಚ =ಶಿವನ ತೋಟದಲ್ಲಿಯೂ ಕುತ್ರಚಿತ್=ಒಂದು ಬಾರಿಯಾಯಿತ್ತಾದರೂ ಪುರೀಷಂ=ಮಲವನು ವಾ=ಅಲ್ಲಾ ಮೂತ್ರಮೇವ=ಮೂತ್ರವನೇ ಸಮುತ್ಸೃಜಂತಿ=ಬಿಡುತ್ತಿಹರು. ||೧೮೮||

---

[1] ದಾತ್ಯಂ (ಘ).

*ತೇಷಾಂ ಶಿಶ್ನಂ ಸವೃಷಣಂ ಚೂರ್ಣ್ಯತೇ ಲೋಹಮುದ್ಗರೈಃ
ಸೂಚೀಭಿರಗ್ನಿವರ್ಣಾಭಿಸ್ತತಶ್ಚಾಪೂರ್ಯತೇ ಪುನಃ ||೧೮೯||

‡ಲೋಹದಂಡಶ್ಚ ಸುಮಹಾನಗ್ನಿವರ್ಣಃ ಸಕಂಟಕಃ
ಆರೋಪ್ಯತೇ ಗುದೇ ತೇಷಾಂ ಯಾವನ್ಮೂರ್ಧ್ನಿ ವಿನಿರ್ಗತಃ ||೧೯೦||

§ತತಃ ಕ್ಷಾರೇಣ ಮಹತಾ [1]ತಾಮ್ರೇಣ[1] ತ್ರಪುಣಾ ಪುನಃ
[2]ದ್ರುತೇನಾಽಪೂರ್ಯತೇ ಗಾಢಂ ಗುದಂ ಶಿಶ್ನಂ ಚ ದೇಹಿನಾಮ್ ||

ಮನಸ್ಸರ್ವೇಂದ್ರಿಯಾಣಾಂ ಚ ಯಸ್ಮಾದುಕ್ತಂ ಪ್ರವರ್ತಕಮ್
ತಸ್ಮಾದಿಂದ್ರಿಯದುಃಖೇನ ಜಾಯತೇ ತತ್ಸುದುಃಖಿತಮ್ ||೧೯೧||

---

ತೇಷಾಂ = ಆ ದುರಾತ್ಮರುಗಳ ಸವೃಷಣಂ = ವೃಷಣಂಗಳಿಂದ ಸಹಿತವಹಂಥಾ ಶಿಶ್ನಂ = ಶಿಶ್ನೆಯು ಲೋಹಮುದ್ಗರೈಃ = ಕಬ್ಬುನದ ಡಾಣೆಗಳಿಂದ ಚೂರ್ಣ್ಯತೇ = ಚೂರ್ಣವ ಮಾಡಲುಪಡುತ್ತಿಹುದು. ತತಶ್ಚ = ಅಷ್ಟಱ ಮೇಲೆ ಪುನಃ = ಮರಳಿ ಅಗ್ನಿವರ್ಣಾಭಿಃ = ಅಗ್ನಿಯ ವರ್ಣವನುಳ್ಳಂಥಾ ಸೂಚೀಭಿಃ = ಸೂಜಿಗಳಿಂದ ಆಪೂರ್ಯತೇ = ಬೆಟ್ಟಲುಪಡುತ್ತಿಹುದು. ||೧೮೯||

ತೇಷಾಂ = ಆವರುಗಳ ಗುದೇ = ಗುದದಲ್ಲಿ ಅಗ್ನಿವರ್ಣಃ = ಆಗ್ನಿಯೋಪಾದಿ ವರ್ಣವನುಳ್ಳಂಥಾ ಸಕಂಟಕಃ = ಮೊಳೆಗಳಿಂದ ಸಹಿತವಹಂಥಾ ಸುಮಹಾನ್ = ದೊಡ್ಡಿತ್ತಹಂಥಾ ಲೋಹದಂಡಶ್ಚ = ಕಬ್ಬುನದ ಹಾರೆಯು ಆರೋಪ್ಯತೇ = ಏಱಿಸಲುಪಡುತ್ತಿಹುದು. ಯಾವತ್ = ಎಲ್ಲಿ ಪರಿಯಂತರವೆಂದಡೆ ಮೂರ್ಧ್ನಿ = ನೆತ್ತಿಯಲ್ಲಿ ವಿನಿರ್ಗತಃ = ಮೂಡುವಲ್ಲಿ ಪರಿಯಂತರವವೂ. ||೧೯೦||

ತತಃ = ಅನಂತರದಲ್ಲಿ ದೇಹಿನಾಂ = ದೇಹಿಕರಹಂಥಾ ಪಾಪಿಗಳ ಗುದಂ = ಗುದವು ಶಿಶ್ನಂ = ಶಿಶ್ನವು ದ್ರುತೇನ = ಕರಗಿದಂಥಾ ಕ್ಷಾರೇಣ = ಉಪ್ಪಿನ ರಸದಿಂದ ಮಹತಾ = ಬಹಳವಹಂಥಾ ತಾಮ್ರೇಣ = ತಾಮ್ರದಿಂದ ತ್ರಪುಣಾ = ತವರದಿಂದ ಗಾಢಂ = ಬಹಳವಾಗಿ ಪುನಃ = ಮರಳಿ ಆಪೂರ್ಯತೇ = ತುಂಬಲು ಪಡುತ್ತಿಹುದು. ||೧೯೧||

ಯಸ್ಮಾತ್ = ಆವುದಾನೊಂದು ಕಾರಣದ ದೆಸೆಯಿಂದ ಮನಃ = ಮನಸ್ಸು

---

* ಈ ಶ್ಲೋಕಾನಂತರ (ಘ) ದಲ್ಲಿ 'ತತಃ ಕ್ಷಾರೇಣ ಮಹತಾ' ಎಂಬ ಮುಂದೆ ಉಕ್ತವಾಗಿರುವ ಶ್ಲೋಕ ಬಂದಿದೆ. ‡ ಈ ಶ್ಲೋಕ (ಘ) ದಲ್ಲಿ ಮಾತ್ರ ಇರುವುದಿಲ್ಲ.

§ ಈ ಶ್ಲೋಕ (ಘ)ದಲ್ಲಿ ಹಿಂದಿನ ಶ್ಲೋಕಕ್ಕೆ ಮೊದಲೇ ಬಂದಿದೆ.

1 ತೀವ್ರೇಣ (ಘ) 2 ದೃತೇನ (ಘ)

7

ಅನ್ನಪಾನಮದತ್ತಂ ಯೈರ್ಮೂರ್ಖೈರ್ನಾಪ್ಯನುಮೋದಿತಮ್
ಖಾದಂತಿ ಚ ಸ್ವಮಾಂಸಾನಿ ಪಿಬಂತಃ ಶೋಣಿತಂ ಸ್ವಕಮ್ ||೧೯೩||

ಇಕ್ಷುವತ್ಸಂಪ್ರಪೀಡ್ಯಂತೇ ಜರ್ಜರೀಕೃತ್ಯ ಮುದ್ಗರೈಃ
ಅಸಿತಾಲವನೈರ್ಘೋರೈಃ ಛಿದ್ಯಂತೇ ಖಂಡಖಂಡಶಃ ||೧೯೪||

ಸೂಚೀಭಿರ್ಭಿನ್ನಸರ್ವಾಂಗಾಸ್ತಪ್ತಶೂಲಪ್ರರೋಪಿತಾಃ
ಸಂಜಲ್ಪಮಾನಾ ಬಹುಶಃ [1]ಕ್ಷಿಪ್ರಂ ತೇ ನ ಮ್ರಿಯಂತಿ ಚ ||೧೯೫||

---

ಸರ್ವೇಂದ್ರಿಯಾಣಾಂ = [2]ಸಮಸ್ತೇಂದ್ರಿಯಂಗಳ ಪ್ರವರ್ತಕಂ ಚ = ದುಶ್ಚಾರಿತ್ರವಹಂಥಾ ವರ್ತನೆಯೂ ಉಕ್ತಂ = ಹೇಳಲುಪಟ್ಟಿತ್ತು. ತಸ್ಮಾತ್ = ಅದುಕಾರಣದ ದೆಸೆಯಿಂದ ಇಂದ್ರಿಯದುಃಖೇನ = ಮನಸ್ಸು ಮೊದಲಹಂಥಾ ಇಂದ್ರಿಯಂಗಳ ಕ್ಲೇಶದಿಂದ ಸುದುಃಖಿತಂ = ಅತಿ ದುಃಖವಹಂಥಾ ತತ್ = ಆ ಬಾಧೆಯು ಜಾಯತೇ = ಆಗುತ್ತಿಹುದು. ||೧೯೨||

ಯೈಃ ಮೂರ್ಖೈಃ = ಆರು ಕೆಲಬರು ಮೂರ್ಖರುಗಳಿಂದ ಅನ್ನಪಾನಂ = ಅನ್ನೋದಕವು ಅದತ್ತಂ = ದಾನವ ಮಾಡಲುಪಡದು. [ಅಪಿ] ಅನುಮೋದಿತಂ ನ = ಸಂತೋಷಿಸಲುಪಡದು. ಸ್ವಮಾಂಸಾನಿ ಚ = ತಮ್ಮ ತಮ್ಮ ಮಾಂಸಂಗಳನು ಖಾದಂತಿ = ಭಕ್ಷಿಸುತ್ತಿಹರು. ಸ್ವಕಂ = ತಮ್ಮ ಸಂಬಂಧವಹಂಥಾ ಶೋಣಿತಂ = ರಕ್ತವನು ಪಿಬಂತಃ = [3]ಕುಡಿವುತ್ತಿಹರು. ||೧೯೩||

ಇಕ್ಷುವತ್ = ಕಬ್ಬಿನ ಮೇಪಾದಿಯಲ್ಲಿ ಸಂಪ್ರಪೀಡ್ಯಂತೇ = ಆಲೆಯಾಡಿಸಿಕೊಳುತ್ತಿಹರು. ಮುದ್ಗರೈಃ = ಕಬ್ಬುನದ ದಾಣೆಗಳಿಂದ ಜರ್ಜರೀಕೃತ್ಯ = ಜರ್ಜರಿತವಾಗಿ ಮಾಡಿ ಘೋರೈಃ = ಭಯಂಕರವಹಂಥಾ ಅಸಿತಾಲವನೈಃ = ಅಸಿತಾಲವೆಂಬ ನರಕಂಗಳಿಂದ ಖಂಡಖಂಡಶಃ = ತುಂಡುತುಂಡಾಗಿ ಛಿದ್ಯಂತೇ = ಛೇದಿಸಿಕೊಳುತ್ತಿಹರು. ||೧೯೪||

ಸೂಚೀಭಿಃ = ಸೂಜಿಗಳಿಂದ ಭಿನ್ನಸರ್ವಾಂಗಾಃ = ಹೆಟ್ಟಲುಪಟ್ಟ ಸರ್ವಾಂಗವನುಳ್ಳಂಥಾ ಬಹುಶಃ = ಹಲವು ಪ್ರಕಾರವಾಗಿ ಸಂಜಲ್ಪಮಾನಾಃ = ಬೈಸಿಕೊಳುತಿದ್ದಂಥಾ ಅವರುಗಳಾಗಿ ಕ್ಷಿಪ್ರಂ = ಬೇಗ ತಪ್ತಶೂಲಪ್ರರೋಪಿತಾಃ = ಕಾದ ಶೂಲಗಳಲ್ಲಿ ಸೆಳಸಿಕೊಳುತ್ತಿಹರು. ತೇ ಚ = ಅವರುಗಳು ನ ಮ್ರಿಯಂತಿ = ಸಾವುತ್ತಿರರು.

---

1 ಕ್ಷಿಪಂತೇ (ಕ) ಮೂಲ.

2 ಸರ್ವೇಂದ್ರಿ (ಕ) 3 ಪಾನಮಾಡು (ಕ).

ದೇಹಾದುತ್ಪಾಟ್ಯತೇ ಮಾಂಸಂ ಭಿದ್ಯಂತೇಽಸ್ಥೀನಿ ಮುದ್ಗರೈಃ
[1]ದೃಷ್ಟಿ[1]ರಾಕೃಷ್ಯತೇ ತೂರ್ಣಂ ಯಮದೂತೈಃ ಬಲೋತ್ಕಟೈಃ ॥೧೯೬॥

ನಿರುಚ್ಛ್ವಾಸೇ ನಿರುಚ್ಛ್ವಾಸಾಃ ತಿಷ್ಠಂತಿ ನರಕೇ ಚಿರಮ್
ಉಚ್ಛ್ವಸಂತಃ ಸದೋಚ್ಛ್ವಾಸೇ* ವಾಲುಕೈರ್ವದನಾವೃತಾಃ ॥೧೯೭॥

ರೌರವೇ ರೋದಮಾನಾಶ್ಚ ಪೀಡ್ಯಂತೇ ವಿವಿಧೈರ್ವಧೈಃ
ಮಹಾರೌರವಪೀಡಾಭಿಃ ಮಹಾಂತೋಽಪಿ ರುದಂತಿ ಚ ॥೧೯೮॥

ಪಾದೇ ಚಾಸ್ಯೇ ಗುದೇ ಚಾಕ್ಷ್ಣೋಃ ಪಾಣ್ಯೋಃಶ್ಚೋರಸಿ ಮಸ್ತಕೇ
ನಿಖನ್ಯಂತೇ ಘನಾಸ್ತೀಕ್ಷ್ಣಾಃ ಸುತಪ್ತಾ ಲೋಹಶಂಕವಃ ॥೧೯೯॥

---

ಬಲೋತ್ಕಟೈಃ = ಸತ್ತ್ವದಿಂದ ಹೆಚ್ಚಿದಂಥಾ ಯಮದೂತೈಃ = ಯಮದೂತರುಗಳಿಂದ ದೇಹಾತ್ = ದೇಹದ ದೆಸೆಯಿಂದ ಮಾಂಸಂ = ಮಾಂಸವು ಉತ್ಪಾಟ್ಯತೇ = ಕೀಳಲುಪಡುತ್ತಿಹುದು. ಅಸ್ಥೀನಿ = ಎಲುವುಗಳನು ಮುದ್ಗರೈಃ = ಕಬ್ಬಿನದ ಡಾಣೆಗಳಿಂದ ಭಿದ್ಯಂತೇ = ನುಗ್ಗು ಮಾಡಲುಪಡುತ್ತಿಹುದು. ॥೧೯೬॥

ನಿರುಚ್ಛ್ವಾಸೇ = ನಿರುಚ್ಛ್ವಸವೆಂಬಂಥಾ ನರಕೇ = ನರಕದಲ್ಲಿ ನಿರುಚ್ಛ್ವಾಸಾಃ = ಉಸುರಿಕ್ಕದವರುಗಳಾಗಿ ಚಿರಂ = ಹಿರಿದುಕಾಲ ತಿಷ್ಠಂತಿ = ಇರುತ್ತಿಹರು. ಉಚ್ಛ್ವಾಸೇ = ಉಚ್ಛ್ವಸವೆಂಬ ನರಕದಲ್ಲಿ ಸದಾ = ಎಲ್ಲಾಗವೂ ಉಚ್ಛ್ವಸಂತಃ = ಉಚ್ಛ್ವಾಸವನುಳ್ಳವರುಗಳಾಗಿ ವಾಲುಕೈಃ = ಮಳಲುಗಳಿಂದ ವದನಾವೃತಾಃ = ಬಾಯೊಳಗೆ ಹೊಯಿಸಿಕೊಳ್ಳುತ್ತಿಹರು, ॥೧೯೭॥

ರೌರವೇ = ರೌರವ ನರಕದಲ್ಲಿ ರೋದಮಾನಾಶ್ಚ = ಅಳುತ್ತಿರ್ದ್ದಂಥಾ ಅವರುಗಳಾಗಿ ವಿವಿಧೈಃ ವಧೈಃ = ನಾನಾ ಪ್ರಕಾರವಹಂಥಾ ತಾಡನಂಗಳಿಂದ ಪೀಡ್ಯಂತೇ = ಬಾಧಿಸಿಕೊಳ್ಳುತ್ತಿಹರು. ಮಹಾರೌರವಪೀಡಾಭಿಃ = ಮಹಾರೌರವನರಕದ ಬಾಧೆಗಳಿಂದ ಮಹಾಂತೋಽಪಿ = ಮಹಾ ಹಿರಿಯರುಗಳಾಯಿತ್ತಾದರೂ ರುದಂತಿ ಚ = ಮೊಱೆಯಿಡುತ್ತಿಹರು. ॥೧೯೮॥

ಪಾದೇ ಚ = ಪಾದದಲ್ಲಿಯೂ ಆಸ್ಯೇ = ಮೋಱೆಯಲ್ಲಿಯೂ ಗುದೇ = ಗುದದಲ್ಲಿಯೂ ಅಕ್ಷ್ಣೋಶ್ಚ = ಕಣ್ಣುಗಳಲ್ಲಿಯೂ ಪಾಣ್ಯೋಃ = ಹಸ್ತಂಗಳಲ್ಲಿ ಉರಸಿ ಚ = ಎದೆಯಲ್ಲಿಯು ಮಸ್ತಕೇ = ನೆತ್ತಿಯಲ್ಲಿ ತೀಕ್ಷ್ಣಾಃ = [2]ಕೂರಿತ್ತಹಂಥಾ ಸುತಪ್ತಾಃ = ಅತ್ಯಂತ ಕಾಸಿದಂಥಾ ಘನಾಃ = ದೊಡ್ಡಿತ್ತಹಂಥಾ ಲೋಹಶಂಕವಃ = ಲೋಹದ ಮೊಳೆಗಳು ನಿಖನ್ಯಂತೇ = ಹೆಟ್ಟಲುಪಡುತ್ತಿಹವು. ॥೧೯೯॥

---

[1] ಧೃಷ್ಟ್ಯೈ (ಘ) [2] ಕರಿ (ಕ) * ವಾಲುಕಾ ಸ್ತ್ರೀಲಿಂಗ. ಇಲ್ಲಿ ಪುಲ್ಲಿಂಗ ಆರ್ಷ.

ಸುತಪ್ತವಾಲುಕಾಯಾಂ ಚ ಪ್ರ[1]ಯೋ[1]ಜ್ಯಂತೇ ಮುಹುರ್ಮುಹುಃ
ಜತುಪಂಕೇ ಭೃಶಂ ತಪ್ತೇ ಕ್ಷಿಪ್ತಾಃ ಕ್ರಂದಂತಿ ವಿಸ್ವರಂ ||೨೦೦||

ಧನೇ ಸತ್ಯಪಿ ಯೇ ದಾನಂ ನ ಪ್ರಯಚ್ಛಂತಿ ತೃಷ್ಣಯಾ
ಅತಿಥಿಂ ಚಾವಮನ್ಯಂತೇ [2]ಕಾಲ[2]ಪ್ರಾಪ್ತಂ ಶಿವಾಶ್ರಮೇ ||೨೦೧||

ತೇ ಲೋಹತೋರಣೇ ಬಧ್ವಾ ಹಸ್ತಪಾದಾವದಾರಿತಾಃ
ವಿಸ್ತಾರಿತಾಂಗಾಃ ಶುಷ್ಯಂತಿ ತಿಷ್ಠಂತ್ಯಬ್ದಶತಂ ನರಾಃ ||೨೦೨||

ಹಸ್ತಪಾದಲಲಾಟೇಷು ಕೀಲಿತಾ ಲೋಹಶಂಕುಭಿಃ
ನಿತ್ಯಂ [3]ಚ ವಿವೃತಂ ವಕ್ತ್ರಂ[3] ಕೀಲಕದ್ವಯಘಾಟಿತಮ್ ||೨೦೩||

---

ಮುಹುರ್ಮುಹುಃ = ಆಡಿಗಡಿಗೆ ಸುತಪ್ತವಾಲುಕಾಯಾಂ ಚ = ಅತ್ಯಂತ ಕಾಸಿದ ಮಳಲಲ್ಲಿಯೂ ಪ್ರಯೋಜ್ಯಂತೇ = ಕೂಡಲುಪಡುತ್ತಿಹರು. ತಪ್ತೇ = ಕುದಿಯುತ್ತಿದ್ದಂಥಾ ಜತುಪಂಕೇ = ಅರಗಿನೋಪಾದಿಯ ಕೆಸರಿನಲ್ಲಿ ಕ್ಷಿಪ್ತಾಃ = ನೂಕಿಸಿಕೊಳಲುಪಟ್ಟವರುಗಳಾಗಿ ವಿಸ್ವರಂ = ಗಾಬುಧ್ವನಿಯಾಗಿ ಭೃಶಂ = ಅತ್ಯಂತ ಕ್ರಂದಂತಿ = ವೊಱಱಯಿಡುತ್ತಿಹರು. ||೨೦೦||

ಯೇ = ಆರು ಕೆಲಬರು ಧನೇ ಸತ್ಯಪಿ = ಧನವುಂಟಾಗುತ್ತಂವಿರಲು ಕಾಲಪ್ರಾಪ್ತಂ = ತತ್ಕಾಲದಲ್ಲಿ ಬಂದಂಥಾ ಶಿವಾಶ್ರಮೇ = ಶಿವಾಶ್ರಮದಲ್ಲಿಯ ಅತಿಥಿಂ ಚ = ಅತಿಥಿಯನು ಕುಱಿತು ತೃಷ್ಣಯಾ = ಲೋಭದಿಂದ ದಾನಂ = ದಾನವನು ನ ಪ್ರಯಚ್ಛಂತಿ = ಕೊಡದೆ ಇಹರು ಅವಮನ್ಯಂತೇ = ಅವಮನ್ನಣೆಯು ಮಾಡುತ್ತಿಹರು. ||೨೦೧||

ತೇ ನರಾಃ = ಆ ಮನುಷ್ಯರುಗಳು ಲೋಹತೋರಣೇ = ಕಬ್ಬುನದ ತೋರಣದಲ್ಲಿ ಬಧ್ವಾ = ಕಟ್ಟಿಸಿಕೊಂಡು ಹಸ್ತಪಾದಾವದಾರಿತಾಃ = ಕೈಕಾಲುಗಳ ಕೊಯಿಸಿಕೊಳುತ್ತಿದ್ದಂಥಾ ಅವರುಗಳಾಗುತ್ತವು ವಿಸ್ತಾರಿತಾಂಗಾಃ = ಹರಹಲುಪಟ್ಟವಯುವಗಳನುಳ್ಳವರುಗಳಾಗಿ ಶುಷ್ಯಂತಿ = ಆಱಿಸಿಕೊಳುತ್ತಿಹರು. ಅಬ್ದಶತಂ = ನೂಱುವರುಷ ಪರ್ಯಂತ ತಿಷ್ಠಂತಿ = ಇರುತ್ತಿಹರು. ||೨೦೨||

ಹಸ್ತಪಾದಲಲಾಟೇಷು = ಕೈಕಾಲು ಹಣೆಗಳಲ್ಲಿ ಲೋಹಶಂಕುಭಿಃ = ಕಬ್ಬುನದ ಮೊಳೆಗಳಿಂದ ಕೀಲಿತಾಃ = ಕೀಲಿಸಲುಪಟ್ಟವು ನಿತ್ಯಂ ಚ = ಅವಾಗವು ವಿವೃತಂ = ತೆಱಱಯಲುಪಟ್ಟಂಥ ವಕ್ತ್ರಂ = ಬಾಯಿ ಕೀಲಕದ್ವಯಘಾಟಿತಂ = ಕೀಲೆರಡಱಿಂದ ಬೆಟ್ಟಲುಪಟ್ಟುತ್ತು. ||೨೦೩||

---

1 ಯು (ಕ) ಮೂಲ 2 ಕಾಲೇ (ಘ) 3 ವಿವೃತವಕ್ತ್ರಂ ಚ (ಘ)

ಕ್ರಿಮಿಭಿಃ ಪ್ರಾಣಿಭಿಶ್ಚೋಗ್ರೈಃ ಲೋಹತುಂಡೈಶ್ಚ ವಾಯಸೈಃ
ಉಪದ್ರವೈಃ ಬಹುವಿಧೈಃ ಮುಖಮಂತಃ ಪ್ರಪೀಡ್ಯತೇ ||೨೦೪||

ಜಿಹ್ವಾವೇಧ[1]ಪ್ರಬದ್ಧಶ್ಚ[1] ಗಾಢಂ ಶೃಂಖಲಯಾ ಪುನಃ
ತಿಷ್ಠತೇ ಲಂಬಮಾನಶ್ಚ ಲೋಹಭಾ[2]ರಃ[2] ಸುವರ್ತುಳಃ ||೨೦೫||

ಶಿಶ್ನೇ ಚ ವೃಷಣೇ ತದ್ವತ್ ಲೋಹಭಾರದ್ವಯಂ ಪುನಃ
ತಿಷ್ಠತೇ ಲಂಬಮಾನಶ್ಚ ಬಾಹುಭ್ಯಾಂ ಚ ಚತುರ್ಗುಣವ್ ||೨೦೬||

ತತಃ ಸ್ವಮಾಂಸಮುತ್ಕೃ[3]ಷ್ಯ[3] ತಿಲಮಾತ್ರಪ್ರಮಾಣತಃ
ಖಾದಿತುಂ ದೀಯತೇ ತೇಷಾಂ ಸೂಚ್ಯಗ್ರೇಣ ತು ಶೋಣಿತವ್ ||

ಕ್ರಿಮಿಭಿಃ = ಕ್ರಿಮಿಗಳಿಂದ ಉಗ್ರೈಃ = ಉಗ್ರವಹಂಥಾ ಪ್ರಾಣಿಭಿಃ = ವ್ಯಾಘ್ರಾದಿ ಪ್ರಾಣಿಗಳಿಂದ ಲೋಹತುಂಡೈಃ = [4]ಕಬ್ಬಿನ[4]ದೋಪಾದಿಕೊಕ್ಕನುಳ್ಳಂಥಾ ವಾಯಸೈಶ್ಚ = ಕಾಗೆಗಳಿಂದವೂ ಬಹುವಿಧೈಃ = ನಾನಾ ಪ್ರಕಾರವಹಂಥಾ ಉಪದ್ರವೈಃ = ಬಾಧೆಗಳಿಂದ ಮುಖಮಂತಃ = ಬಾಯೊಳಗೂ ಪ್ರಪೀಡ್ಯತೇ = ಬಾಧಿಸಿಕೊಳಲ್ಪಡುತ್ತಿಹುದು. ||೨೦೪||

ಪುನಃ = ಮರಳಿ ಶೃಂಖಲಯಾ ಚ = ಸಂಕಲೆಯಿಂದವೂ ಗಾಢಂ = ದೃಢವಾಗಿ ಜಿಹ್ವಾವೇಧಪ್ರಬದ್ಧಃ = ನಾಲಗೆಯ ಚುಚ್ಚಿ ಕಟ್ಟಿದಂಥಾ ಲಂಬಮಾನಃ = ನೇಲುತ್ತಿದ್ದಂಥಾ ಸುವರ್ತುಳಃ = ಅತಿಬಟುವನುಳ್ಳಂಥಾ ಲೋಹಭಾರಶ್ಚ = ಲೋಹದ ಗುಂಡೂ ತಿಷ್ಠ[5]ತೇ[5] = ಇರುತ್ತಿಹುದು. ||೨೦೫||

ಪುನಃ = ಮರಳಿ ಶಿಶ್ನೇ ಚ = ಶಿಶ್ನೆಯಲ್ಲಿಯೂ ವೃಷಣೇ ಚ = ವೃಷಣದಲ್ಲಿಯೂ ತದ್ವತ್ = ಆ ಮರ್ಯಾದೆಯಲಿ ಲೋಹಭಾರದ್ವಯಂ = ಲೋಹದ ಗುಂಡೆರಡು ಲಂಬಮಾನಶ್ಚ = ನೇಲುತ್ತಿದ್ದದಾಗಿ ತಿಷ್ಠತೇ = ಇರುತ್ತಿಹುದು. ಬಾಹುಭ್ಯಾಂ ಚ = ತೋಳುಗಳೆರಡಱಿಂದ ಚತುರ್ಗುಣಂ = ನಾಲ್ಕು ಲೋಹದ ಗುಂಡು ತಿಷ್ಠತೇ = ಇರುತ್ತಿಹುದು. ||೨೦೬||

ತತಃ = ಅಷ್ಟಱಮೇಲೆ ಸೂಚ್ಯಗ್ರೇಣ ತು = ಸೂಜಿಯ ಮೊನೆಯಿಂದವೂ ಸ್ವಮಾಂಸಂ = ತಮ್ಮ ಮಾಂಸವನು ತಿಲಮಾತ್ರ ಪ್ರಮಾಣತಃ = ಎಳ್ಳಷ್ಟು ಪ್ರಮಾಣವನು ಶೋಣಿತಂ = ರಕ್ತವನು ಸಮುತ್ಕೃಷ್ಯ = ತೆಗೆದು ತೇಷಾಂ = ಅವರುಗಳಿಗೆ ಖಾದಿತುಂ = ತಿನಿಸಲೋಸ್ಕರ ದೀಯತೇ = ಕೊಡಲುಪಡುತ್ತಿಹುದು. ||೨೦೭||

1 ಪ್ರಬಾಧಾಭಿಃ (ಘ) 2 ರೈ (ಘ) 3 ತ್ಯ (ಘ) ಮಾತ್ರ
4 ಕಬ್ಬಿಣ (ಕ) 5 ತಿ (ಕ)

ಯದಾ ನಿರ್ಮಾಂಸತಾಂ [1]ಪ್ರಾಪ್ತಾಃ ಕಾಲೇನ ಬಹುನಾ [2]ನರಾಃ
ತತಃ ಕ್ಷಾರೇಣ ದೀಪ್ತೇನ ತಚ್ಛರೀರಂ ಪ್ರಲಿಪ್ಯತೇ ||೨೦೮||

ಕ್ಲಿದ್ಯಂತೇ ವರ್ಷಧಾರಾಭಿಃ ಶೋಷ್ಯಂತೇ ವಾಯುನಾ ತತಃ
ಪುನಸ್ಸಿಚ್ಯಂತಿ ತೈಲೇನ ಸುತಪ್ತೇನ ಸಮಂತತಃ ||೨೦೯||

ಪಚ್ಯಂತೇ ವಹ್ನಿನಾ ಭೂಯೋ ದೂರಸ್ಥೇನ ಶನೈಶ್ಶನೈಃ
ಭೃಶಂ ಬುಭುಕ್ಷಯಾ ಪೀಡಾ ಕಷ್ಟಾಚ್ಚೈವ ಪಿಪಾಸಯಾ ||೨೧೦||

ಅತ್ಯುಷ್ಣೇನಾತಿಶೀತೇನ ಪಾಪಾನಾಂ ಮರಣೇನ ಚ
ನಿಶ್ಶೇಷಯಾತನಾಭಿಶ್ಚ ಪೀಡ್ಯಂತೇ ಕ್ರಮಶಃ ಪುನಃ ||೨೧೧||

---

ಯದಾ = ಎಂದಿಂಗೆ ನರಾಃ = ಮನುಷ್ಯರುಗಳು ಬಹುನಾ ಕಾಲೇನ = ಬಹಳ ಕಾಲದಿಂದ ನಿರ್ಮಾಂಸತಾಂ = ಮಾಂಸವಿಲ್ಲದೆಯಿಹತನವನು ಪ್ರಾಪ್ತಾಃ = ಎಯ್ದುವರು ತತಃ = ಅಷ್ಟರಿಮೇಲೆ ದೀಪ್ತೇನ ಕ್ಷಾರೇಣ = ಕಾದ ಉಪ್ಪಿನಿಂದ ತಚ್ಛರೀರಂ = ಅವರುಗಳ ಶರೀರವು ಪ್ರಲಿಪ್ಯತೇ = ಹೂಸಲುಪಡುತ್ತಿಹುದು. ||೨೦೮||

ತತಃ = ಅಷ್ಟರಿಮೇಲೆ ವರ್ಷಧಾರಾಭಿಃ = ಮಳೆಯ ಸಂತ [ತ]ಧಾರೆಗಳಿಂದ ಕ್ಲಿದ್ಯಂತೇ = ನೆನವುತ್ತಿಹರು. ಪುನಃ = ಮರಳಿ ವಾಯುನಾ = ವಾಯುವಿನಿಂದ ಶೋಷ್ಯಂತೇ = ಆರುತ್ತಿಹರು. ತತಃ = ಅಷ್ಟರಿಮೇಲೆ ಸುತಪ್ತೇನ ತೈಲೇನ = ಕಾದ ಎಣ್ಣೆಯಿಂದ ಸಿಚ್ಯಂತೇ = ಚೆಲ್ಲಿಸಿಕೊಳುತ್ತಿಹರು. ||೨೦೯||

ಭೂಯಃ = ಮರಳಿ ದೂರಸ್ಥೇನ = ದೂರದಲ್ಲಿ ಇದ್ದಂಥಾ ವಹ್ನಿನಾ = ಕಿಚ್ಚಿನಿಂದ ಶನೈಃ ಶನೈಃ = ಮೆಲ್ಲಮೆಲ್ಲನೆ ಪಚ್ಯಂತೇ = ಬೇವುತ್ತಿಹರು. ಬುಭುಕ್ಷಯಾ = ಹಸಿವಿನಿಂದ ಭೃಶಂ = ಅತ್ಯಂತ ಪೀಡಾ ಚ = ಬಾಧೆಯಹುದು. ಪಿಪಾಸಯಾ = ನೀರಡಿಕೆಯಿಂದ ಕಷ್ಟಾ ಚ್ಚೈವ = ಬಾಧೆಯಹುದು. ಅನ್ವಯ ಪದವು ಉಚಿತಾರ್ಥವ ನುಡಿವುದು. ||೨೧೦||

ಮರಣೇನ = ಕೊಲುವಂಥಾ [3]ಅತ್ಯುಷ್ಣೇನ = ಅತಿಉಷ್ಣದಿಂದ[3] ಅತಿಶೀತೇನ ಚ = ಅತಿಚಳಿಯಿಂದವೂ ನಿಶ್ಶೇಷಯಾತನಾಭಿಶ್ಚ = ಸಮಸ್ತ ಯಾತನೆಗಳಿಂದವೂ ಕ್ರಮಶಃ = ತಱುವಾಯಿಂದ ಪುನಃ = ಮರಳಿ ಪಾಪಾನಾಂ = ಪಾಪಿಗಳಿಗೆ ಪೀಡ್ಯಂತೇ = ಬಾಧೆಗಳಾಗುತ್ತಿಹವು. ||೨೧೧||

---

[1] ಪ್ರಾಪ್ತಃ (ಘ) [2] ನರಃ (ಘ) [3] ಲುಪ್ತ (ಕ).

ಇತಿ ಚಿತ್ರವಧೈರ್ಘೋರೈಃ ಬಾಧ್ಯಮಾನಾಃ ಸ್ವಕರ್ಮಭಿಃ
[1]ಮ್ರಿ[1]ಯಂತೇ ನೈವ ಪಾಪಿಷ್ಠಾಃ ಯಾವತ್ಪಾಪಸ್ಯ ಸಂಕ್ಷಯಃ ॥೨೧೨॥

ಪುತ್ರಮಿತ್ರಕಳತ್ರಾರ್ಥಂ ಯದಪುಣ್ಯಂ ಕೃತಂ ತ್ವಯಾ
ಏಕಾಕೀ ದಹ್ಯಸೇ ತೇನ ನ ತು ಪಶ್ಯಸಿ ತಾನಿಹ ॥೨೧೩॥

ಆತ್ಮನೈವ ಕೃತಂ ಪಾಪಂ ಭೋಕ್ತವ್ಯಂ ಧ್ರುವಮಾತ್ಮನಾ
[2]ತ[2]ತ್ಕಿಮಾತ್ಮೋಪಘಾತಾರ್ಥಂ ಮೂಢ ಪಾಪಂ ಕೃತಂ ತ್ವಯಾ ॥

ಪಾಪೇನ ಹಿ ಧ್ರುವಂ ಯಾಂತಿ ನರಕೇಷು ಸ್ವಯಂ ನರಾಃ
ಯಃ ಕರೋತಿ ನರಃ ಪಾಪಂ [3]ತಸ್ಯಾತ್ಮಾ ಧ್ರುವಮಪ್ರಿಯಃ[3] ॥೨೧೫॥

ಇತಿ = [4]ಈ ಪ್ರಕಾರದಲ್ಲಿ ಘೋರೈಃ = ಭಯಂಕರವಹಂಥಾ[4] ಚಿತ್ರವಧೈಃ = ನಾನಾ ಪ್ರಕಾರವಹಂಥಾ ಕೊಲೆಗಳಿಂದ ಪಾಪಿಷ್ಠಾಃ = ಪಾಪವ ಮಾಡಿದವರುಗಳು ಯಾವತ್ = ಎಲ್ಲಿ ಪರ್ಯಂತರ ಪಾಪಸ್ಯ = ಪಾಪದ ಸಂಕ್ಷಯಃ = ಲಯುವು ತಾವತ್ = ಅಲ್ಲಿ ಪರ್ಯಂತವು ಸ್ವಕರ್ಮಭಿಃ = ತಮ್ಮ ಕರ್ಮಂಗಳಿಂದ ಬಾಧ್ಯಮಾನಾಃ = ಬಾಧಿಸಿಕೊಳುತ್ತಿಹರು [5][ನೈವ][5]ಮ್ರಿಯಂತೇ = ಸಾಯರು. ॥೨೧೨॥

ಪುತ್ರಮಿತ್ರಕಳತ್ರಾರ್ಥಂ = ಮಗ ಸಂಗಡಿಗ ಹೆಂಡತಿ ನಿಮಿತ್ತವಾಗಿ ಯತ್ = ಆವುದಾನೊಂದು ಅಪುಣ್ಯಂ = ಪಾಪವು ತ್ವಯಾ = ನಿನ್ನಿಂದ ಕೃತಂ = ಮಾಡಲುಪಟ್ಟಿತ್ತು ತೇನ = ಆ ಪಾಪದಿಂದ ಏಕಾಕೀ = ಒಬ್ಬನೇ ದಹ್ಯಸೇ = ಬೇವುತ್ತಿದ್ದೆ. ಇಹ = ಈ ನರಕದಲ್ಲಿ ತಾನ್ = ಆ ಪುತ್ರ ಮಿತ್ರ ಕಳತ್ರಂಗಳನು ನ ಪಶ್ಯಸಿ = ಕಾಣುತ್ತಿರೆಯಲಾ. ॥೨೧೩॥

ಆತ್ಮನೈವ = ನಿನ್ನಿಂದವೇ ಪಾಪಂ = ಪಾಪವು ಕೃತಂ = ಮಾಡಲುಪಟ್ಟಿತ್ತು. ಆತ್ಮನಾ = ನಿನ್ನಿಂದವೇ ಭೋಕ್ತವ್ಯಂ = ಅನುಭವಿಸಬೇಕು. ಧ್ರುವಂ = ನಿಶ್ಚಯವು ತತ್ = ಆ ಪಾಪವು ಆತ್ಮೋಪಘಾತಾರ್ಥಂ = ನಿನ್ನ ಕೇಡಿಂಗೋಸ್ಕರವು. ಭೋ ಮೂಢ ! = ಎಲೆ ಮೂರ್ಖನೆ ! ತ್ವಯಾ = ನಿನ್ನಿಂದ ಪಾಪಂ = ಪಾಪವು ಕಿಂ = ಏನುಕಾರಣ ಕೃತಂ = ಮಾಡಲುಪಟ್ಟಿತ್ತು. ॥೨೧೪॥

ನರಾಃ = ಮನುಷ್ಯರುಗಳು ಸ್ವಯಂ = ತಾವೇ ಪಾಪೇನ = ಪಾಪದಿಂದ ನರಕೇಷು = ನರಕಂಗಳಲ್ಲಿ ಯಾಂತಿ ಹಿ = ಎಯ್ದುವರಲಾ. ಧ್ರುವಂ = ನಿಶ್ಚಯ. ಯಃ =

1 ಮ್ರೀ (ಘ) 2 ಯ (ಘ) 3 ತಸ್ಯ ಸ್ಯಾದ್ಧ್ರುವಮಪ್ರಿಯಂ (ಘ)
4 ಲುಪ್ತ (ಕ) 5 ನ (ಸರ್ವಪ್ರತಿಗಳ ಪಾಠ)

ಪಾಪಸ್ಯ ಹಿ ಫಲಂ ದುಃಖಂ ತದ್ಭೋಕ್ತವ್ಯಂ ತದಾತ್ಮನಾ
[1]ಕಥಂ ತೇ[1] ಪಾಪನಿರತಾ ನರಾ ರಾತ್ರಿಷು ಶೇರತೇ ||೨೧೬||

ಮರಣಾಂತರಿತಾ ಯೇಷಾಂ ನರಕೇ ತೀವ್ರಯಾತನಾಃ
ಏವಂ ದೂತೈರುಪಾಲಬ್ಧಾಃ ತಾನ್ ಪೃಚ್ಛಂತಿ ಪುನಃ ಪುನಃ ||೨೧೭||

ಕಿಯಂತಂ ಕೇನ ಪಾಪೇನ ಕಾಲಂ [2]ತ್ರ[2]ಸ್ಯಂತಿ ತೇ ನರಾಃ ||೨೧೮||

ದೂತಾಃ ಊಚುಃ—

ದೇವದ್ರವ್ಯವಿನಾಶೇನ ಗುರುದ್ರೋಹಾದಿಕರ್ಮಭಿಃ
ಕ್ರಮಾತ್ ಸರ್ವೇಷು ಪಚ್ಯಂತೇ ನರಕೇಷ್ವಾಮಹೀಕ್ಷ[3]ಯಾತ್[3] ||

ಆವನಾನೊಬ್ಬ ನರಃ=ಮನುಷ್ಯನು ಪಾಪಂ=ಪಾಪವನು ಕರೋತಿ=ಮಾಡುತ್ತಿಹನು ತಸ್ಯ=ಆತನ ಆತ್ಮಾ=ಬುದ್ಧಿ ಅಪ್ರಿಯಃ=ಒಳ್ಳೆಯದಲ್ಲ. ಧ್ರುವಂ=ನಿಶ್ಚಯವು. ||೨೧೫||

ಪಾಪಸ್ಯ=ಪಾಪದ ಫಲಂ=ಫಲವು ದುಃಖಂ ಹಿ=ದುಃಖವಲಾ ತದಾತ್ಮನಾ=ಆ ಪಾಪರೂಪಿಂದ ತತ್=ಆ ಪಾಪವು ಭೋಕ್ತವ್ಯಂ = ಅನುಭವಿಸಬೇಕು. ಪಾಪನಿರತಾಃ = ಪಾಪದಲ್ಲಿ ತತ್ಪರರಹಂಥಾ ತೇ ನರಾಃ = ಆ ಮನುಷ್ಯರುಗಳು ರಾತ್ರಿಷು = ರಾತ್ರಿಗಳಲ್ಲಿ ಕಥಂ = ಹೇಂಗೆ ಶೇರತೇ = ನಿದ್ದೆಗೆಯ್ಯುತ್ತಿಹರು ? ಪಾಪವ ಮಾಡಿದ್ದವರುಗಳು ಆ ಪಾಪವ ನೆನೆ ನೆನೆದು ನಿದ್ರೆಗೆಯ್ಯರೆಂಬುದರ್ಥ.

ಯೇಷಾಂ=ಆರು ಕೆಲಂಬರು ಪಾಪಿಗಳಿಗೆ ಮರಣಾಂತರಿತಾಃ=ಮರಣಾಂತರದಲ್ಲಿ ಎಯ್ದಿಸಲುಪಟ್ಟಂಥಾ ತೀವ್ರಯಾತನಾಃ = ಬಹಳ ಯಾತನೆಗಳು ನರಕೇ = ನರಕದಲ್ಲಿ ಅಹವು ಏವಂ=ಈ ಪ್ರಕಾರದಲ್ಲಿ ದೂತೈಃ = ಯಮದೂತರುಗಳಿಂದ ಉಪಾಲಬ್ಧಾಃ=ಎಯ್ದಲುಪಟ್ಟಂಥಾ ಪಾಪಿಗಳು ತಾನ್=ಆ ದೂತರುಗಳನು ಪುನಃ ಪುನಃ=ಮರಳಿ ಮರಳಿ ಪೃಚ್ಛಂತಿ=ಬೆಸಗೊಳುತ್ತಿಹರು. ||೨೧೭||

ತೇ ನರಾಃ = ಆ ಪಾಪಕರ್ಮಿಗಳು ಕೇನ ಪಾಪೇನ = ಆವ ಪಾಪದಿಂದ ಕಿಯಂತಂ ಕಾಲಂ=ಎಷ್ಟು ಕಾಲವನು ತ್ರಸ್ಯಂತಿ=ಕಳವರು ಎಂದು ಯಮದೂತರು ಬೆಸಗೊಳುತ್ತಿಹರು. ||೨೧೮||

ದೂತಾ ಊಚುಃ=ದೂತರು ನುಡಿದರು.

ದೇವದ್ರವ್ಯವಿನಾಶೇನ = ದೇವತಾ ದ್ರವ್ಯವ ಕೆಡಿಸಿದ್ದಱಿಂದ ಗುರುದ್ರೋಹಾದಿಕರ್ಮಭಿಃ = ಗುರುದ್ರೋಹ ಮೊದಲಾದಂಥಾ ಪಾಪಗಳಿಂದ ಸರ್ವೇಷು

[1] ಕಥ್ಯಂತೇ (ಘ) [2] ತ್ರಾ (ಚ) [3] ಕ್ಷಯಂ (ಘ)

ಮಹಾಪಾತಕಿನಶ್ಚಾಪಿ ಸರ್ವೇಷು ನರಕೇಷ್ವಿಹ
ಆಚಂದ್ರತಾರಕಂ [1]ಯಾ[1]ವತ್ ಪೀಡ್ಯಂತೇ ವಿವಿಧೈರ್ವಧೈಃ ॥೨೨೦॥

ತಥಾ ಪಾತಕಿನಸ್ಸರ್ವೇ ನಿರಯಾರ್ಣವಕೋಟಿಷು
ಚತುರ್ದಶಸು ಪಚ್ಯಂತೇ ಕಲ್ಪಾರ್ಧಂ ವಿವಿಧೈರ್ವಧೈಃ ॥೨೨೧॥

ಉಪಪಾತಕಿನಸ್ಸರ್ವೇ ತದರ್ಧಂ ಯಾಂತಿ ಮಾನವಾಃ
ಶೇಷೈಃ ಪಾಪೈಸ್ತದರ್ಧಂ ಚ ಕಾಲಂ ಚಾಪಿ ತಥಾವಿಧಮ್ ॥೨೨೨॥

ತಸ್ಮಾತ್ ಪಾಪಂ ನ ಕುರ್ವೀತ ಚಂಚಲೇ [2]ಜೀವಿತೇ ಸತಿ[2]
ಏವಂ ಕ್ಲಿಷ್ಟಾ ವಿಶುದ್ಧಾಶ್ಚ ಸಾವಶೇಷೇಣ ಕರ್ಮಣಾ ॥೨೨೩॥

---

ನರಕೇಷು = ಸಮಸ್ತ ನರಕಂಗಳಲ್ಲಿ ಕ್ರಮಾತ್ = ತಿರುವಾಯಿಂದವೆ ಆಮಹೀ-ಕ್ಷಯಾತ್ = ಭೂಮಿ ಲಯವಹಲ್ಲಿ ಪರ್ಯಂತವು ಪಚ್ಯಂತೇ = ಬೇವುತ್ತಿಹರು

ಮಹಾಪಾತಕಿನಶ್ಚಾಪಿ = ಮಹಾಪಾತಕಿಗಳು ಇಹ = ಈ ಯಮಲೋಕದಲ್ಲಿ ಸರ್ವೇಷು ನರಕೇಷು = ಸಮಸ್ತ ನರಕಂಗಳಲ್ಲಿ ವಿವಿಧೈಃ ವಧೈಃ = ನಾನಾ ಪ್ರಕಾರವಹ ವಧೆಗಳಿಂದ ಪೀಡ್ಯಂತೇ = ಬಾಧಿಸಿಕೊಳಲುಪಡುತ್ತಿಹರು. ಯಾವತ್ = ಎಲ್ಲಿ ಪರ್ಯಂತವೆಂದರೆ ಆ ಚಂದ್ರತಾರಕಂ = ಚಂದ್ರತಾರಕಿಗಳುಳ್ಳಂನಕವು.

ತಥಾ = ಹಾಂಗೆ ಸರ್ವೇ ಪಾತಕಿನಃ = ಸಮಸ್ತ ಪಾಪಿಗಳು ಚತುರ್ದಶ [ಸು] ನಿರಯಾರ್ಣವಕೋಟಿಸು = ಹದಿನಾಲ್ಕು ನರಕ ಸಮುದ್ರಂಗಳ ಕೋಟಿಗಳಲ್ಲಿ ಕಲ್ಪಾರ್ಧಂ = ಬ್ರಹ್ಮೆ ಕಲ್ಪದ ಅರ್ಧಪರಿಯಂತವು ವಿವಿಧೈಃ ವಧೈಃ = ನಾನಾ ಬಾಧೆ ಗಳಿಂದ ಪಚ್ಯಂತೇ = ಅತ್ಯಂತ ಬೇವುತ್ತಿಹರು. ॥೨೨೧॥

ಉಪಪಾತಕಿನಃ = ಉಪಪಾತಕವ ಮಾಡಿದಂಥಾ ಸರ್ವೇ ಮಾನವಾಃ = ಸಮಸ್ತ ಮನುಷ್ಯರುಗಳು ತದರ್ಧಂ = ಆದರ ಅರ್ಧವನು ಯಾಂತಿ = ಎಯ್ದು ತ್ತಿಹರು. ಶೇಷೈಃ ಪಾಪೈಃ = ಉಳಿದ ಪಾಪಂಗಳಿಂದ ತದರ್ಧಂ ಚ = ಆ ಹಿಂದೆ ಹೇಳಿ ದದರ ಅರ್ಧಕಾಲವನು ಯಾಂತಿ = ಎಯ್ದುತ್ತಿಹರು. ಕಾಲಂ ಚ = ಕಾಲದ ಪ್ರಮಾಣವು ತಥಾವಿಧಂ = ಆ ಹೇಳಿದ ಪ್ರಕಾರವೂ ॥೨೨೨॥

ತಸ್ಮಾತ್ = ಆದು ಕಾರಣದ ದೆಸೆಯಿಂದ ಜೀವಿತೇ = ಜೀವವು ಚಂಚಲೇ ಸತಿ = ಚಂಚಲವಾಗುತ್ತಿರಲು ಪಾಪಂ = ಪಾಪವನು ನ ಕುರ್ವೀತ = ಮಾಡಲಾಗದು.

---

[1] ತಾ (ಘ) [2] ಸತಿ ಜೀವಿತೇ (ಘ)

ತತಃ ಕ್ಷಿತಿಂ ಸಮಾಸಾದ್ಯ ಪುನರ್ಜಾಯಂತಿ ದೇಹಿನಃ
ಸ್ಥಾವರಾಃ ವಿವಿಧಾಕಾರಾಃ ತೃಣಗುಲ್ಮಾದಿಭೇದತಃ ||೨೨೪||

ತತ್ರಾನುಭೂಯ ದುಃಖಾನಿ ಜಾಯಂತೇ ಕೀಟಯೋನಿಷು
ನಿಷ್ಕ್ರಾಂತಾಃ ಕೀಟಯೋನಿಭ್ಯೋ ಜಾಯಂತೇ ಪಕ್ಷಿಣಃ ಕ್ರಮಾತ್||

ಸಂಕ್ಲಿಷ್ಟಾಃ ಪಕ್ಷಿಭಾವೇನ ಭವಂತಿ [1]ಮೃಗಜಾತಿಷು[1]
[2]ಮಾರ್ಗಂ ದುಃಖ[2]ಮತಿಕ್ರಮ್ಯ [3]ಜಾಯಂತೇ[3] ಪಶುಯೋನಿಷು || ೨೨೬

---

ಏವಂ = ಈ ಪ್ರಕಾರದಲ್ಲಿ ಕ್ಲಿಷ್ಟಾಃ = ಪಾಪವ ಮಾಡಿ ಕೆಟ್ಟವರುಗಳು ಸಾವಶೇಷೇಣ = [4]ಏನೂ ಉಳಿಯದೆ ಇಹದೆಱಿಂದ ಸಹಿತವಹಂಥಾ (?)[4] [ಉಳಿದಿರತಕ್ಕಂಥಾ] ಕರ್ಮಣಾ = ಕರ್ಮದಿಂದ ವಿಶುದ್ಧಾಃಶ್ಚ = ಶುದ್ಧರುಗಳಹರು. ||೨೨೩||

ತತಃ = ಅಪ್ಪಱಮೇಲೆ ದೇಹಿನಃ = ಪ್ರಾಣಿಗಳು ಪುನಃ = ಮರಳಿ ಕ್ಷಿತಿಂ = ಭೂಮಿಯನು ಸಮಾಸಾದ್ಯ = ಎಯ್ದಿ ವಿವಿಧಾಕಾರಾಃ = ನಾನಾಸ್ವರೂಪವಹಂಥಾ ಸ್ಥಾವರಾಃ = ಸ್ಥಾವರಂಗಳಾಗಿ ತೃಣಗುಲ್ಮಾದಿಭೇದತಃ = ಹುಲ್ಲುಗೆಂಡೆ ಮೊದಲಾದಂಥಾ ಅವಱ ಭೇದಂಗಳಿಂದ ಜಾಯಂತಿ = ಹುಟ್ಟುತ್ತಿಹರು. ತಸಿಲ್ ಪ್ರತ್ಯಯವು ನಾನಾ ವಿಭಕ್ತಿಯ ನುಡಿವುದು. ||೨೨೪||

ತತ್ರ = ಆ ವೃಕ್ಷ ತೃಣ ಗುಲ್ಮ ಮುಂತಾದ ಸ್ಥಾವರ ಜನ್ಮದಲ್ಲಿ ದುಃಖಾನಿ = ದುಃಖಗಳನು ಅನುಭೂಯ = ಅನುಭವಿಸಿ ಕೀಟಯೋನಿಷು = ಹುಳುಗಳ ಯೋನಿಗಳಲ್ಲಿ ಜಾಯಂತೇ = ಹುಟ್ಟುತ್ತಿಹರು. ಕೀಟಯೋನಿಭ್ಯಃ = ಕೀಟಯೋನಿಗಳ ದೆಸೆಯಿಂದ ನಿಷ್ಕ್ರಾಂತಾಃ = ಹೊಱವಂಟಂಥಾ ಅವರುಗಳು ಕ್ರಮಾತ್ = ಕ್ರಮದಿಂದ ಪಕ್ಷಿಣಃ = ಪಕ್ಷಿಗಳಾಗಿ ಜಾಯಂತೇ = ಹುಟ್ಟುತ್ತಿಹರು. ||೨೨೫||

ಪಕ್ಷಿಭಾವೇನ = ಪಕ್ಷಿಗಳ ಹುದಱಿಂದ ಸಂಕ್ಲಿಷ್ಟಾಃ = ಕ್ಲೇಶಿತರುಗಳಾಗಿ ಮೃಗಜಾತಿಷು = ಮೃಗಜಾತಿಗಳಲ್ಲಿ ಭವಂತಿ = ಆಗುತ್ತಿಹರು. ಮಾರ್ಗಂ = ಮೃಗಸಂಬಂಧವಹಂಥಾ ದುಃಖಂ = ದುಃಖವನು ಅತಿಕ್ರಮ್ಯ = ಮೀಱಿ ಪಶುಯೋನಿಷು = ಪಶುಗಳ ಯೋನಿಗಳಲ್ಲಿ ಜಾಯಂತೇ = ಹುಟ್ಟುತ್ತಿಹರು. ಮೃಗಾಣಾಂ ಸಂಬಂಧಿ ಮಾರ್ಗಂ ಇದು ಮಾರ್ಗಶಬ್ದದ ನಿರ್ವಚನ. ||೨೨೬||

---

1 ಮೃಗಯೋನಿಷು (ಕ) 2 ದುಃಖಂ ಮಾರ್ಗ (ಕ) ಮೂಲ
3 ಭವಂತಿ (ಕ) ಮೂಲಪಾಠ ಜಾಯಂತೇ (ಕ) ವ್ಯಾಖ್ಯಾಪಾಠ.
4 ಉಳಿದಿರತಕ್ಕಂಥಾ (ಕ ಖ ಚ)

ಕ್ರಮಾದ್ಗೋಯೋನಿಮಾಸಾದ್ಯ ಜಾಯಂತೇ ಮಾನುಷೇ ಪುನಃ
ಏವಂ ಯೋನಿಷು ಸರ್ವಾಸು ವ್ಯತಿಕ್ರಮ್ಯ ಕ್ರಮೇಣ ತು ॥೨೨೭॥

ಕಾಲಾಂತರವಶಾದ್ಯಾಂತಿ ಮಾನುಷ್ಯಮತಿದುರ್ಲಭಮ್
[1]ಕ್ರಮೇಣ ಚಾಪಿ[1] ಮಾನುಷ್ಯಂ ಪ್ರಾಪ್ಯತೇ ಪುಣ್ಯಗೌರವಾತ್ ॥೨೨೮॥

ವಿಚಿತ್ರಾ ಗತಯಃ ಪ್ರೋಕ್ತಾಃ ಕರ್ಮಣಾಂ ಗುರುಲಾಘವಾತ್
ಏವಮಾದಿಮಹಾಘೋರಾ ಯಾತನಾಃ ಪಾಪಕರ್ಮಿಣಾಮ್ ॥೨೨೯॥

ಏಕೈಕಂ ನರ[2]ಕಂ[3]ಜ್ಞೇ[3]ಯಾಃ[3] ಶತಶೋಽಥ ಸಹಸ್ರಶಃ
ಪ್ರತ್ಯೇಕಂ ಯಾತನಾಶ್ಚಿತ್ರಾಃ ಸರ್ವೇಷು ನರಕೇಷ್ವಪಿ ॥೨೩೦॥

---

ಗೋಯೋನಿಂ = ಗೋವುಗಳ ಯೋನಿಯನು ಆಸಾದ್ಯ = ಎಯ್ದಿ ಕ್ರಮಾತ್ = ಕ್ರಮದಿಂದ ಪುನಃ = ಮರಳಿ ಮಾನುಷೇ = ಮನುಷ್ಯಯೋನಿಯಲ್ಲಿ ಜಾಯಂತೇ = ಹುಟ್ಟುತ್ತಿಹರು. ಏವಂ = ಈ ಪ್ರಕಾರದಲ್ಲಿ ಸರ್ವಾಸು ಯೋನಿಷು = ಸಮಸ್ತ ಯೋನಿಗಳಲ್ಲಿ ಕ್ರಮೇಣ ತು = ಕ್ರಮದಿಂದವು ವ್ಯತಿಕ್ರಮ್ಯ = ತೊಳಲಿ, ॥೨೨೭॥

ಕಾಲಾಂತರವಶಾತ್ = ಕಾಲಾಂತರವಶದಿಂದ ಅತಿದುರ್ಲಭಂ = ಅತ್ಯಂತ ಹಡೆಯಲು ಬಾರದೆ ಇದ್ದಂಥಾ ಮಾನುಷ್ಯಂ = ಮನುಷ್ಯತ್ವವನು ಯಾಂತಿ = ಎಯ್ದುತ್ತಿಹರು. ಕ್ರಮೇಣ ಚ = ಕ್ರಮದಿಂದವೂ ಪುಣ್ಯಗೌರವಾತ್ = ಪುಣ್ಯದ ಗುರುತ್ವದ ದೆಸೆಯಿಂದ ಮಾನುಷ್ಯಮಪಿ = ಮನುಷ್ಯ ಜನ್ಮವನು ಪ್ರಾಪ್ಯತೇ = ಪಡೆವುತ್ತಿಹನು. ॥೨೨೮॥

ಕರ್ಮಣಾಂ = ಕರ್ಮಂಗಳ ಗುರುಲಾಘವಾತ್ = ಗುರುವಿನ ಲಘುವಿನ ದೆಸೆಯಿಂದ ವಿಚಿತ್ರಾಃ = ನಾನಾ ಪ್ರಕಾರವಹಂಥಾ ಗತಯಃ = ಗತಿಗಳು ಪ್ರೋಕ್ತಾಃ = ಹೇಳಲುಪಟ್ಟವು. ಪಾಪಕರ್ಮಿಣಾಂ = ಪಾಪಕರ್ಮಿಗಳಿಗೆ ಏವಮಾದಿ ಮಹಾಘೋರಾಃ = ಇವು ಮೊದಲಾಗಿ ಮಹಾ ಭಯಂಕರವಹಂಥಾ ಯಾತನಾಃ = ಯಾತನೆಗಳಹವು. ॥೨೨೯॥

ಏಕೈಕಂ ನರಕಂ = ಒಂದೊಂದು ನರಕವನು ಶತಶಃ = ನೂರು ಪ್ರಕಾರವಾಗಿ ಅಥ = ಅನಂತರದಲ್ಲಿ ಸಹಸ್ರಶಃ = ಸಹಸ್ರ [4]ಪ್ರಕಾರ[4]ವಾಗಿ ಜ್ಞೇಯಾಃ = ಅರಿಯಲು ಯೋಗ್ಯಂಗಳು. ಸರ್ವೇಷು ನರಕೇಷ್ವಪಿ = ಸಮಸ್ತ ನರಕಂಗಳಲ್ಲಿಯು ಪ್ರತ್ಯೇಕಂ = ಬೇರೆಬೇರೆ ಚಿತ್ರಾಃ = ಚಿತ್ರಂಗ-ಹಂಥಾ ಯಾತನಾಃ = ಯಾತನೆಗಳಹವು. ॥೨೩೦॥

---

[1] ಕ್ರಮೇಣಾಪಿ (ಕ) ಮೂಲ [2] ಕಾ (ಗ) [3] ಯಂ (ಕ) ಮೂಲ [4] ಪ್ರಾಯ (ಖ.ಚ)

**ತತ್ರಾ[1]ನ್ಯಾ[1] ಯಾತನಾಃ ಕಷ್ಟಾ ವಿವಿಧಾಃ ಪಾಪಕರ್ಮಿಣಾಂ**
**ಮಹಾಘೋರಾತಿಘೋರಾಖ್ಯಾಃ ಕಲ್ಪಾನಲಸಮಪ್ರಭಾಃ ||೨೩೧||**

**[2]ಶ್ರುತ್ವೈವ ತಾಸ್ತತಸ್ತೂರ್ಣಂ[2] ಮ್ರಿಯಂತೇ ಮೃದುಚೇತಸಃ**
**[3]ತತಸ್ತಾಃ ಕಥಿತಾ ನಾತ್ರ [3]ಪಾಪಾ ದ್ರಕ್ಷ್ಯಂತಿ ತಾಃ ಸ್ವಯಮ್ ||**

**[4]ಕಸ್ತಾ ವರ್ಷ[4]ಶತೇನಾಪಿ [5]ಸರ್ವಾ[5] ವಕ್ತುಂ [6]ಸಮುತ್ಸಹೇತ್[6]**
**ಇತಿ ಜ್ಞಾತ್ವಾ ನರಃಪುಣ್ಯಂ ಕುರ್ಯಾತ್ ಪಾಪಂ ಚ ವರ್ಜಯೇತ್ ||**

---

ತತ್ರ = ಆ ನರಕದಲ್ಲಿ ಪಾಪಕರ್ಮಿಣಾಂ = ಪಾಪಕರ್ಮಿಗಳಿಗೆ ಮಹಾಘೋರಾತಿಘೋರಾಖ್ಯಾಃ = ಮಹಾಘೋರ ಅತಿಘೋರವೆಂಬ ಹೆಸರನುಳ್ಳಂಥಾ ಕಲ್ಪಾನಲಸಮಪ್ರಭಾಃ = ಕಲ್ಪಾಂತದ ಅಗ್ನಿಗೆ ಸಮಾನವಹ ಜ್ವಾಲೆಯನುಳ್ಳಂಥಾ ವಿವಿಧಾಃ = ನಾನಾ ಪ್ರಕಾರವಹಂಥಾ ಕಷ್ಟಾಃ = ಕಷ್ಟವಹಂಥಾ ಅನ್ಯಾಃ = ಮತ್ತೆ ಕೆಲವು ಯಾತನಾಃ = ಯಾತನೆಗಳಹವು. ||೨೩೧||

ಮೃದುಚೇತಸಃ = ಮೃದುಚಿತ್ತವನುಳ್ಳವರುಗಳು ತಾಃ = ಆ ನರಕಯಾತನೆಗಳನು ಶ್ರುತ್ವೈವ = ಕೇಳಿಯೆ ತತಃ = ಅಷ್ಟರಿಮೇಲೆ ತೂರ್ಣಂ = ಬೇಗ ಮ್ರಿಯಂತೇ = ಸಾವುತ್ತಿಹರು. ತತಃ = ಅದು ಕಾರಣವಾಗಿ ತಾಃ = ಆ ನರಕಯಾತನೆಗಳ[ಳು]ನು ಅತ್ರ = ಇಲ್ಲಿ ನ ಕಥಿತಾಃ = ಹೇಳಲುಪಟ್ಟದಿಲ್ಲ. ಪಾಪಾಃ = ಪಾಪಿಗಳು ಸ್ವಯಂ = ತಾವೇ ತಾಃ = ಆ ನರಕಯಾತನೆಗಳನು ದ್ರಕ್ಷ್ಯಂತಿ = ಕಾಬರು. ಸಂಕೋಚದಿಂದ ಹೇಳಲುಪಟ್ಟುದಲ್ಲದೆ ಇಪ್ಪತ್ತೆಂಟು ಕೋಟಿನರಕಂಗಳು ವಿಸ್ತಾರವಾಗಿ ಹೇಳಲುಪಟ್ಟದಿಲ್ಲ. ಸಮಸ್ತ ನರಕಂ[7]ಗಳ ಹೇಳಲಾಗಿ[7] ಮೃದುಚಿತ್ತವನುಳ್ಳವರುಗಳು [8]ಕೇಳಿದ ಮಾತ್ರದಿಂದಲೇ ಮರಣವನೆಯ್ದು[8]ವರು. ಅದು ನಿಮಿತ್ತವಾಗಿ ವಿಸ್ತರಿಸಿದುದಿಲ್ಲವೆಂಬುದರ್ಥ. ||೨೩೨||

ಸರ್ವಾಃ = ಸಮಸ್ತವಹಂಥಾ ತಾಃ = ಆ ನರಕ ಯಾತನೆಗಳನು ವರ್ಷಶತೇನಾಪಿ = ನೂರುವರ್ಷದಿಂದಾಯಿತ್ತಾದರೂ ವಕ್ತುಂ = ಹೇಳಲು ಕಃ = ಆವಾತನು ಸಮುತ್ಸಹೇತ್ = ಸಮರ್ಥನಹನು ? ಇತಿ = ಈ ಪ್ರಕಾರದಲ್ಲಿ ಜ್ಞಾತ್ವಾ = ಅರಿ[3]ದು

---

[1] ದ್ಯಾ (ಘ) [2] ಶ್ರುತ್ವೈ ತತ್ರ ತಾಸ್ತೂರ್ಣಂ (ಕ) ಮೂಲ ಮಾತ್ರ.
[3] ತಸ್ಮಾನ್ನ ಕಥಿತಾಹ್ಯತ್ರ (ಘ) [4] ತಸ್ಮಾದ್ವರ್ಷ (ಕ) ಮೂಲಮಾತ್ರ
[5] ಸರ್ವಾನ್ (ಘ) [6] ನ ಶಕ್ನುಮಃ (ಘ)
[7] ಲುಪ್ತ (ಕ) [8] ಲುಪ್ತ (ಕ)

**ಪುಣ್ಯೇನ ಯಾತಿ ದೇವತ್ವಮಪುಣ್ಯಾನ್ನರಕಂ ವ್ರಜೇತ್ ॥೨೩೪॥**

**ಇತಿ ಶ್ರೀ ನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ**
**ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮ-**
**ಸುಧಾರ್ಣವಪೂರ್ಣಚಂದ್ರಸ್ಯ ಗೋರಗೋಡಪುರವರಾಧೀಶ್ವರ-**
**ಮಲ್ಲಿಕಾರ್ಜುನಾಚಾರ್ಯಸ್ಯ ಅನುಜ್ಞಯಾ ಶ್ರೀಧರಾಂಕ-**
**ಪ್ರಣೀತೇ ಕರ್ಣಾಟಭಾಷಾವಿವರಣೇ[1] ಧರ್ಮಾಧರ್ಮ-**
**ಭೇದಕಥನೇ ನರಕಯಾತನಾನಿರೂಪಣಂ ನಾಮ ತೃತೀಯೋಽಧ್ಯಾಯಃ**
**ಅಧ್ಯಾಯ ೩ಕ್ಕಂ ಗ್ರಂಥ ೪೦೧ಕ್ಕಂ ಮಂಗಳಮಹಾ.**

---

ನರಃ = ಮನುಷ್ಯನು ಪುಣ್ಯಂ = ಧರ್ಮವನು ಕುರ್ಯಾತ್ = ಮಾಡೂದು. ಪಾಪಂ ಚ = ಪಾಪವನು ವರ್ಜಯೇತ್ = ಬಿಡುವುದು. ॥೨೩೩॥

ಪುಣ್ಯೇನ = ಪುಣ್ಯದಿಂದ ದೇವತ್ವಂ = ದೇವತ್ವವನು ಯಾತಿ = ಎಯ್ದುತಿಹನು ಅಪುಣ್ಯಾತ್ = ಪಾಪದ ಡೆಸೆಯಿಂದ ನರಕಂ = ನರಕವನು ವ್ರಜೇತ್ = ಎಯ್ದುವನು. ॥೨೩೪॥

---

1 ನರಕಯಾತನಾಭೇದಕಥನಂ (ಕ) ಸದಾಚಾರ ನಿರೂಪಣೇ ನರಕಯಾತನಾಭೇದಕಥನಂ ಧರ್ಮಾಧರ್ಮಭೇದಕಥನಂ ನಾಮ (ಕ. ಖ)

# ಚತುರ್ಥೋಽಧ್ಯಾಯಃ

## ( ಪಿಂಡೋತ್ಪತ್ತಿಕಥನಂ )

ಶಿವಧರ್ಮೋತ್ತರೇ ಸ್ಕಂದ ಉವಾಚ—

ಅಥ ನಾರಕಿಣಾಂ ಪುಂಸಾಮಧರ್ಮಾದೇವ ಕೇವ[1]ಲಾತ್[1]
ಕ್ಷಣಮಾತ್ರೇಣ ಭೂತೇಭ್ಯಃ ಶರೀರ[2]ಮುಪಪದ್ಯತೇ[2] ||೧||

ತದ್ವದ್ಧರ್ಮೇಣ ಚೈಕೇನ ದೇವಾ[3]ನಾಮೌ[3]ಪಪಾದಿಕಮ್
ಸದ್ಯಃ ಪ್ರಜಾಯತೇ ದಿವ್ಯಂ ಶರೀರಂ ಭೂತಸಾರತಃ ||೨||

ಕರ್ಮಣಾ[4]ಪ್ಯ[4]ತಿಮಿಶ್ರೇಣ ಯಚ್ಛರೀರಮಿಹಾತ್ಮನಃ
ತದ್ಭೂತಪರಿಮಾಣೇನ ವಿಜ್ಞೇಯಂ ಹಿ ಚತುರ್ವಿಧಮ್ ||೩||

---

ಶಿವಧರ್ಮೋತ್ತರೇ ಸ್ಕಂದ ಉವಾಚ—[ ಶಿವಧರ್ಮೋತ್ತರದಲ್ಲಿ ] ಸ್ಕಂದನ ವಾಕ್ಯವು.

ಅಥ=ಅನಂತರದಲ್ಲಿ ಕೇವಲಾತ್ = ಒಬ್ಬೊಯ ಅಧರ್ಮಾದೇವ=ಪಾಪದ ದೆಸೆಯಿಂದವೇ ನಾರಕಿಣಾಂ=ನರಕವನ್ನೈದಿದಂಥಾ ಪುಂಸಾಂ = ಮನುಷ್ಯರುಗಳಿಗೆ ಕ್ಷಣಮಾತ್ರೇಣ = ಕ್ಷಣಮಾತ್ರದಿಂದ ಭೂತೇಭ್ಯಃ = ಪಂಚಮಹಾಭೂತಗಳ ದೆಸೆಯಿಂದ ಶರೀರಂ=ದೇಹವು ಉಪಪದ್ಯತೇ=ಹುಟ್ಟಲುಪಡುತ್ತಿಹುದು. ||೧||

ತದ್ವತ್=ಆ ಪ್ರಕಾರದಲ್ಲಿ ಏಕೇನ ಧರ್ಮೇಣ ಚ=ಮುಖ್ಯವಹ ಪುಣ್ಯ ದಿಂದವು ದೇವಾನಾಂ=ದೇವರ್ಕಳ ಔಪಪಾದಿಕಂ=ಸಂಬಂಧವಹಂಥಾ ದಿವ್ಯಂ= ಪ್ರಕಾಶಿಸುತ್ತಿದ್ದಂಥಾ ಶರೀರಂ=ದೇಹವು ಭೂತಸಾರತಃ—ಪಂಚಮಹಾಭೂತಂಗಳ ಸಾರದಿಂದ ಸದ್ಯಃ=ಆಕ್ಷಣದಲ್ಲಿ ಪ್ರಜಾಯತೇ=ಹುಟ್ಟಲುವಡುತ್ತಿಹದು. ||೨||

ಇಹ=ಈ ಭೂಲೋಕದಲ್ಲಿ ಆತ್ಮನಃ=ಜೀವಾತ್ಮಂಗೆ ಅತಿಮಿಶ್ರೇಣ=ಅತ್ಯಂತ ಮಿಶ್ರವಾದಂಥಾ ಕರ್ಮಣಾಪಿ = ಕರ್ಮದಿಂದವೂ ತದ್ಭೂತಪರಿಮಾಣೇನ = ಆ ಪಂಚಮಹಾಭೂತಂಗಳ ಪ್ರಮಾಣಿನಿಂದ ಚತುರ್ವಿಧಂ = ನಾಲ್ಕು ಪ್ರಕಾರವಹಂಥಾ

---

1 ಲಂ (ಘ)  2 ಮುಪಜಾಯತೇ (ಘ)  3 ನಾಂಚೌ (ಘ).  4 ವಾಪಿ (ಘ)

ಉದ್ಭಿ[1]ದಾಃ[1] ಸ್ಥಾವರಾ ಜ್ಞೇಯಾಸ್ತೃಣಗುಲ್ಮಾದಿರೂಪಿಣಃ
ಕ್ರಿಮಿಕೀಟಪತಂಗಾದ್ಯಾಃ ಸ್ವೇದಜಾ ನಾಮ ದೇಹಿನಃ ||೪||

ಅಂಡಜಾಃ ಪಕ್ಷಿಣಸ್ಸರ್ಪಾ ನಕ್ರ[2]ಮತ್ಸ್ಯಾಹಿ[2]ಕಚ್ಛಪಾಃ
ಜರಾಯುಜಾಶ್ಚ ವಿಜ್ಞೇಯಾ ಮಾನುಷಾಶ್ಚ ಚತುಷ್ಪದಾಃ ||೫||

ತತ್ರ ಸಿಕ್ತಾ ಜಲೇ [3]ಭೂಮಿಃ ಅಂತರೂಷ್ಮಪ್ರಪಾಚಿತಾ[3]
ವಾಯುನಾ [4]ವ್ಯೂಹ್ಯ[4]ಮಾನಾ ಚ ಬೀಜತ್ವಂ ಪ್ರತಿಪದ್ಯತೇ ||೬||

---

ಯತ್ = ಆವುದಾನೊಂದು ಶರೀರಂ = [5]ಶರೀರವೆಂದು[5] ಜ್ಞೇಯಂ ಹಿ = ಅರಿಯಲು ಯೋಗ್ಯವಲಾ. ||೩||

ತೃಣಗುಲ್ಮಾದಿರೂಪಿಣಃ = ಹುಲ್ಲುಗೆಂಡೆ ಮೊದಲಾದ ರೂಪನುಳ್ಳಂಥಾ ಸ್ಥಾವರಾಃ = ಸ್ಥಾವರಂಗಳು ಉದ್ಭಿದಾಃ = ಉದ್ಭಿದಯೋನಿಗಳೆಂದು ಜ್ಞೇಯಾಃ = ಅರಿಯಲು ಯೋಗ್ಯಂಗಳು. ಕ್ರಿಮಿಕೀಟಪತಂಗಾದ್ಯಾಃ = ಕ್ರಿಮಿಕೀಟ ಪತಂಗದ ಹುಳು ಮೊದಲಾಗಿದ್ದಂಥಾ ದೇಹಿನಃ = ಪ್ರಾಣಿಗಳು ಸ್ವೇದಜಂಗಳೆನಿಸುವುವು ನಾಮ = ಪ್ರಸಿದ್ಧವು. ||೪||

ಪಕ್ಷಿಣಃ = ಪಕ್ಷಿಗಳು ಸರ್ಪಾಃ = ಸರ್ಪಂಗಳು ನಕ್ರಮತ್ಸ್ಯಾಹಿಕಚ್ಛಪಾಃ = ನೆಗಳು ಮೀನು [6]ನೀರುವಾವು ಆವೆ[6]ಗಳು ಅಂಡಜಾಃ = ಅಂಡಜಗಳೆನಿಸುವವು. ಮಾನುಷಾಶ್ಚ = ಮನುಷ್ಯರುಗಳು ಚತುಷ್ಪದಾಶ್ಚ = ನಾಲ್ಕು ಕಾಲ ಪ್ರಾಣಿಗಳು ಜರಾಯುಜಾಃ = ಜರಾಯುಜಂಗಳೆಂದು ವಿಜ್ಞೇಯಾಃ = ಅರಿಯಲು ಯೋಗ್ಯಂಗಳು. ||೫||

ತತ್ರ = ಅಲ್ಲಿ ಅಂತಃ = ಒಳಗೆ ಊಷ್ಮಪ್ರಪಾಚಿತಾ = ಉಷ್ಣದಿಂದ ಬೇವುತ್ತಿದ್ದಂಥಾ ಭೂಮಿಃ = ಭೂಮಿ ಜಲೇ = ಮಳೆಯ ಉದಕದಲ್ಲಿ ಸಿಕ್ತಾ = ನೆನೆಯಲುಪಟ್ಟುದಾಗಿ ವಾಯುನಾ = ವಾಯುವಿನಿಂದ ವ್ಯೂಹ್ಯಮಾನಾ ಚ = ಬೀಸಲುಪಟ್ಟದಾಗುತ್ತವೂ ಬೀಜತ್ವಂ = ಬೀಜವಹತನವನು ಪ್ರತಿಪದ್ಯತೇ = ಎಯ್ದಲುಪಡುತ್ತಿಹಂದು. ||೬||

---

1 ಜಾಃ (ಘ) 2 ಮತ್ಸ್ಯಾಶ್ಚ (ಘ). (ಕ) ಮೂಲ
3 ಭೂಮಿಸ್ತೇಜಸಾ ಚ ಪ್ರತಾಪಿತಾ(ಘ) 4 ಯೋಜ್ಯ (ಘ)
5 ದೇಹವು (ಕ) 6 ನೀರಪಾವು ಆಮೆ (ಕ)

ಯಥಾಽತ್ರ ಶಾಲಿಬೀಜಾನಿ ಸಂಸಿಕ್ತಾನ್ಯಂಭಸಾ ಪುನಃ
ಉಚ್ಛೂನತಾಂ ಮೃದುತ್ವಂ ಚ ಮೂಲಭಾವಂ ವ್ರಜಂತಿ ಚ ॥೭॥

ತನ್ಮೂಲಾದಂಕುರೋತ್ಪತ್ತಿಃ ಅಂಕುರಾತ್ಪರ್ಣಸಂಭವಃ
ಪರ್ಣಾನ್ನಾಲಂ ತತಃ ಕಾಂಡಂ ಕಾಂಡಾಚ್ಚ ಪ್ರಸವಂ ಪುನಃ ॥೮॥

ಪ್ರಸವಾಚ್ಚ [1]ತುಷಕ್ಷೀರಂ [1]ಕ್ಷೀರಾತ್ತಂಡುಲಸಂಭವಃ
ತಂಡು[2]ಲಾಚ್ಚ[2] ತತಃ ಪಕ್ವಾಃ ಮ್ರಿಯಂತ್ಯೋಷಧಯಸ್ತದಾ ॥೯॥

---

ಅತ್ರ = ಈ ಭೂಮಿಯಲ್ಲಿ ಅಂಭಸಾ = ಉದಕದಿಂದ ಪುನಃ = ಮರಳಿ ಸಂಸಿಕ್ತಾನಿ = ಲೇಸಾಗಿ [3]ನನೆ[3]ದಂಥಾ ಶಾಲಿಬೀಜಾನಿ = ನೆಲ್ಲಿಂ ಬೀಜಂಗಳು ಯಥಾ = ಹೇಂಗೆ ಉಚ್ಛೂನತಾಂ = ಉಬ್ಬುಹತನವನು ಮೃದುತ್ವಂ ಚ = ಮೆತ್ತನೆಯಹತನವನು ಮೂಲಭಾವಂ ಚ = ಬೇರಿಳಿವ ಸ್ವಭಾವವನು ವ್ರಜಂತಿ = ಎಯ್ದುತ್ತಿಹವು. ॥೭॥

ತನ್ಮೂಲಾತ್ = ಆ ಬೇರಿನ ದೆಸೆಯಿಂದ ಅಂಕುರೋತ್ಪತ್ತಿಃ = ಮೊಳೆ ಹುಟ್ಟಿತ್ತು. ಅಂಕುರಾತ್ = ಮೊಳಕೆಯ ದೆಸೆಯಿಂದ ಪರ್ಣಸಂಭವಃ = ಎಲೆ ಹುಟ್ಟಿತ್ತು. ಪರ್ಣಾತ್ = ಎಲೆಯ ದೆಸೆಯಿಂದ ನಾಳಂ = ಸುಳಿ ಹುಟ್ಟೊದು. ತತಃ = ಅಪ್ಪಟಿ ಮೇಲೆ ಕಾಂಡಂ = ದಂಟಹುದು. ಕಾಂಡಾತ್ = ದಂಟಿನ ದೆಸೆಯಿಂದ ಪುನಃ = ಮರಳಿ ಪ್ರಸವಂ = ಹೂವಹುದು. ॥೮॥

ಪ್ರಸವಾಚ್ಚ = ಹೂವಿನ ದೆಸೆಯಿಂದವು ತುಷಕ್ಷೀರಂ = ಹಾಲುದೆನೆಯಹುದು. ಕ್ಷೀರಾತ್ = ಹಾಲುಗಟ್ಟುವದಱ ದೆಸೆಯಿಂದ ತಂಡುಲಸಂಭವಃ = ಅಕ್ಕಿ ಬಲಿವುದಹುದು. ತಂಡುಲಾಚ್ಚ = ಅಕ್ಕಿ ಬಲಿದದಱ ದೆಸೆಯಿಂದ ತತಃ = ಅಪ್ಪಟಿ ಮೇಲೆ ಪಕ್ವಾಃ = ಹಣ್ಣುದೆನೆಗಳಹವು. ತದಾ = ಆಗ ಓಷಧಯಃ = ನೆಲ್ಲು ಮೊದಲಾದ ಧಾನ್ಯಂಗಳು ಮ್ರಿಯಂತೇ = ಕೊಯಿಸಿಕೊಳುತ್ತಿಹವು. ಮೃಙ್ ಪ್ರಾಣ ತ್ಯಾಗೇ ಎಂಬ ಧಾತುವಿನಲ್ಲಿ ಆದ ಪದವು ಮರಣವಾಗುತ್ತಿಹವು ಎನಬೆಕು. ಇಲ್ಲಿಗೆ ಉಚಿತಾರ್ಥದಿಂದ ಕೊಯಿಸಿಕೊಳುತ್ತಿಹವೆನಬೇಕಾಯಿತ್ತು. ॥೯॥

---

[1] ತುಷಂ ಕ್ಷೀರಂ (ಘ) [2] ಲಂಚ (ಘ)
[3] ನೆನೆ (ಕ)

ಯವಾದ್ಯಾಶ್ಶಾಲಿಪರ್ಯಂತಾಃ ಶ್ರೇಷ್ಠಾಃ ಸಪ್ತದಶ ಸ್ಮೃತಾಃ
ಓಷಧ್ಯಃ ಫಲಪಾಕಾಂತಾಃ ಶೇಷಾಃ ಕ್ಷುದ್ರಾಃ ಪ್ರಕೀರ್ತಿತಾಃ ||೧೦||

ಏತಾ ಲೂನಾ ಮರ್ದಿತಾಶ್ಚ ಶನೈರುತ್ಪೂಯ[1]ಸಂಸ್ಕೃತಾಃ
ಶೂರ್ಪೋಲೂಖಲಯಂತ್ರಾದ್ಯೈಃ ಸ್ಥಾಲ್ಯಾಮುದಕವಹ್ನಿಭಿಃ ||೧೧||

ಷಡ್ವಿಧಾಹಾರಭೇದೇನ ಪರಿಣಾಮಂ [2]ವ್ರಜಂತಿ ತಾಃ[2]
ಅನ್ಯೋನ್ಯರಸಸಂಯೋಗಾದನೇಕಸ್ವಾದುತಾಂ ಗತಾಃ ||೧೨||

ಭಕ್ಷ್ಯಂ ಭೋಜ್ಯಂ ಚ ಪೇಯಂ ಚ ಲೇಹ್ಯಂ ಚೋಷ್ಯಂ ಚ ಪಿಚ್ಛಿಲಂ
ಇತಿ ಭೇದಾ[3]ಸ್ತು ಷಟ್ ಪ್ರೋಕ್ತಾ[3] ಮಧುರಾದ್ಯಾಶ್ಚ ಷಡ್ರಸಾಃ ||

---

ಯವಾದ್ಯಾಃ = ಜವೆ ಮೊದಲಾದಂಥಾ ಶಾಲಿಪರ್ಯಂತಾ = ನೆಲ್ಲುಕಡೆಯಾಗಿದ್ದಂಥಾ ಫಲಪಾಕಾಂತಾಃ = ಫಲ ಮೊದಲು ಪಾಕವೇ ಕಡೆಯಾಗಿ ಉಳ್ಳಂಥಾ ಓಷಧ್ಯಃ = ಧಾನ್ಯಂಗಳು ಸಪ್ತದಶ = ಹದಿನೇಳು ಶ್ರೇಷ್ಠಾಃ = ಮುಖ್ಯವಹಂಥಾವೆಂದು ಸ್ಮೃತಾಃ = ಹೇಳಲುಪಟ್ಟವು. ಶೇಷಾಃ = ಉಳಿದ ಧಾನ್ಯಂಗಳು ಕ್ಷುದ್ರಾಃ = ಕಿಱುಧಾನ್ಯಂಗಳೆಂದು ಪ್ರಕೀರ್ತಿತಾಃ = ಹೇಳಲುಪಟ್ಟವು. ||೧೦||

ಏತಾಃ = ಈ ಧಾನ್ಯಂಗಳು ಲೂನಾಃ = ಕೊಯಿಸಿಕೊಳುತ್ತಿಹವು. ಮರ್ದಿತಾಶ್ಚ = ಒಕ್ಕಿಸಿಕೊಳುತ್ತಿಹವು. ಶನೈಃ = ಮೆಲ್ಲನೆ ಶೂರ್ಪೋಲೂಖಲಯಂತ್ರಾದ್ಯೈಃ = ಮೊಱನೊರಳೊನಕೆಗಳ ಪ್ರಯತ್ನ ಮೊದಲಾದಂಥಾ ಅವಱಿಂದ ಉತ್ಪೂಯ = ಅತ್ಯಂತ ಶುದ್ಧೈಸಿ ಸಂಸ್ಕೃತಾಃ = ತಂಡುಲಸಂಸ್ಕಾರವಾಗಲುಪಟ್ಟವು ಸ್ಥಾಲ್ಯಾಂ = ಭಾಂಡದಲ್ಲಿ ಉದಕವಹ್ನಿಭಿಃ = ಉದಕ ಅಗ್ನಿಗಳಿಂದ ತಾಃ = ಆ ತಂಡುಲಸಂಸ್ಕಾರವಾದಂಥಾ ಧಾನ್ಯಂಗಳು ಷಡ್ವಿಧಾಹಾರಭೇದೇನ = ಭಕ್ಷ್ಯಭೋಜ್ಯಮುಂತಾದ ಆಱುಪ್ರಕಾರವಹಂಥಾ ಆಹಾರಂಗಳ ಭೇದದಿಂದ ಪರಿಣಾಮಂ = ಪಾಕವನು ವ್ರಜಂತಿ = ಎಯ್ದುತ್ತಿಹವು. ಅನ್ಯೋನ್ಯರಸಸಂಯೋಗಾತ್ = ಒಂದೊಂದು ರಸಂಗಳ ಸಂಪರ್ಕದ ದೆಸೆಯಿಂದ ಅನೇಕಸ್ವಾದುತಾಂ = ಅನೇಕ ಸ್ವಾದುವಹತನವನು ಗತಾಃ = ಎಯ್ದಿದವು. ||೧೧-೧೨||

ಭಕ್ಷ್ಯಂ = ಅಗಿದು ಮೆಲುವಂಥಾ ಕಜ್ಜಾಯವು ಭೋಜ್ಯಂ ಚ = ಉಂಬಂಥಾ ಅನ್ನವೂ ಪೇಯಂ = ಪಾನವು ಲೇಹ್ಯಂ = ನಕ್ಕುವಂಥಾ ಕಜ್ಜರಿಯು ಚೋಷ್ಯಂ ಚ = ಸುಱಿವಂಥಾ ಪಳಿದ್ಯವು ಪಿಚ್ಛಿಲಂ = ಹಾಲ ಕೆನೆ ಮುಂತಾಗಿ ನುಂಗುವಂಥಾ ಆಹಾರವು ಇತಿ = ಈ ಪ್ರಕಾರದಲ್ಲು ಷಟ್ ಭೇದಾಸ್ತು = ಆಱು ಭೇದನಹಂಥಾ

---

1 ತ್ಪ್ರಿಯ (ಘ) 2 ವ್ರಜಂತ್ಯುತ (ಘ) 3 ಷ್ಷಡನ್ನಸ್ಯ (ಕ) ಮೂಲಮಾತ್ರ

ತದನ್ನಂ ಸ್ಥೂಲ[1]ಕಬಲೈರ್ಗ್ರಾಸ್ಯೈರ್ಭುಕ್ತಂ[1] ಚ ದೇಹಿಭಿಃ
ಅಂತಃಸ್ಥಮಾಶಯೇ ಪೂರ್ವಂ ಪ್ರಾಣಸ್ಸ್ಥಾಪಯತೇ ಕ್ರಮಾತ್ ||೧೪||

ಅಪೃಥಗ್ಭೂತಮಾಹಾರಂ ಸ ವಾಯುಃ ಕುರುತೇ ದ್ವಿಧಾ
ಸಂಪ್ರವಿಶ್ಯಾನ್ನಮಧ್ಯೇ ತು ಪೃಥಗನ್ನಂ ಪೃಥಗ್ಜಲಮ್ ||೧೫||

ಅಗ್ನೇರೂರ್ಧ್ವಂ ಜಲಂ ಸ್ಥಾಪ್ಯ ತದನ್ನಂ[2] ತು[2] ಜಲೋಪರಿ
ಜಲಸ್ಯಾಧಃ ಸ್ವಯಂ ಪ್ರಾಣಃ ಸ್ಥಿತ್ವಾಽಗ್ನಿಂ ಧಮತೇ ಶನೈಃ ||೧೬||

---

ಆಹಾರಂಗಳು ಪ್ರೋಕ್ತಾಃ = ಹೇಳಲುಪಟ್ಟವು. ಮಧುರಾದ್ಯಾಶ್ಚ = ಸಿಹಿ ಹುಳಿ ಉಪ್ಪು ಮೆಣಸು ಕಹಿ ಒಗರು ಮೊದಲಾದಂಥಾವು ಷಡ್ರಸಾಃ = ಆಱು ರಸಂಗಳೆನಿಸುವವು. ||೧೩||

ತದನ್ನಂ = ಆ ಅನ್ನವು ದೇಹಿಭಿಃ = ಪ್ರಾಣಿಗಳಿಂದ ಗ್ರಾಸ್ಯೈಃ = ನುಂಗಲು ಪಟ್ಟಂಥಾ ಸ್ಥೂಲಕಬಳೈಶ್ಚ = ದೊಡ್ಡ ತುತ್ತುಗಳಿಂದ ಭುಕ್ತಂ = ಉಣ್ಣಲು ಪಟ್ಟುತ್ತು. ಪೂರ್ವಂ = ಮೊದಲು ಪ್ರಾಣಃ = ಪ್ರಾಣವಾಯುವೆ ಅಂತಃಸ್ಥಂ = ಒಳಗಿದ್ದನ್ನವನು ಆಶಯೇ = ಅಭಿಪ್ರಾಯದಲ್ಲಿ (?) [ಜಠರ ಕೋಶದಲ್ಲಿ] ಕ್ರಮಾತ್ = ಕ್ರಮದಿಂದ ಸ್ಥಾಪಯೇತ್ = ಇರಿಸುತ್ತಿಹುದು. ||೧೪||

ಸ ವಾಯುಃ = ಆ ಪ್ರಾಣವಾಯುವು ಅನ್ನಮಧ್ಯೇ ತು = ಅನ್ನಮಧ್ಯದಲ್ಲಿಯು ಸಂಪ್ರವಿಶ್ಯ = ಪ್ರವೇಶಿಸಿ ಅಪೃಥಗ್ಭೂತಂ = ಏಕಮಯವಾದಂಥಾ ಆಹಾರಂ = ಆಹಾರವನು ಕುಱಿತು ಅನ್ನಂ = ಅನ್ನವ ಪೃಥಕ್ = ಬೇಱಾಗಿ ಜಲಂ = ಉದಕವನು ಪೃಥಕ್ = ಬೇಱಾಗಿರ ದ್ವಿಧಾ = ಎರಡು ಪ್ರಕಾರದಿಂದ ಕುರುತೇ = ಮಾಡುತ್ತಿಹುದು. ||೧೫||

ಅಗ್ನೇಃ = ಅಗ್ನಿಯ ಊರ್ಧ್ವಂ = ಮೇಲೆ ಜಲಂ = ಉದಕವನು ಸ್ಥಾಪ್ಯ = ಇರಿಸಿ ತದನ್ನಂ ತು = ಆ ಅನ್ನವನು ಜಲೋಪರಿ = ಉದಕದ ಮೇಲೆ ಸ್ಥಾಪ್ಯ = ಪ್ರತಿಷ್ಠಿಸಿ ಜಲಸ್ಯ = ಜಲದ ಅಧಃ = ಕೆಳಗೆ ಪ್ರಾಣಃ = ವಾಯುವು ಸ್ವಯಂ = ತಾನೇ ಸ್ಥಿತ್ವಾ = ಇದ್ದು ಶನೈಃ = ಮೆಲ್ಲನೆ ಅಗ್ನಿಂ = ಅಗ್ನಿಯನು ಧಮತೇ = ಊದುತ್ತಿಹನು. ಧ್ಮಾ ಪೂರಣೇ ಎಂಬ ಧಾತುವಿನಲ್ಲಿ ಹುಟ್ಟಿದ ಆತ್ಮನೇಪದವು. ಉಚಿತಾರ್ಥವ ನುಡಿದುಕೊಂಬುದು. ||೧೬||

---

1 ಕಬಳೈಃ ಪರಿಭುಕ್ತಂ (ಘ) 2 ಚ (ಘ).

ವಾಯುನಾ [1]ಧ್ಮಾ[1]ಯಮಾನೋಽಗ್ನಿರತ್ಯುಷ್ಣಂ ಕುರುತೇ ಜಲಮ್
ತದನ್ನಮುಷ್ಣತೋಯೇನ ಸಮಂತಾತ್ಪಚ್ಯತೇ ಪುನಃ ||೧೭||

ದ್ವಿಧಾ ಭವತಿ ತತ್ಪಕ್ವಂ ಪೃಥಕ್ಕಿಟ್ಟಂ ಪೃಥಗ್ರ[2]ಸಃ[2]
ಮಲೈರ್ದ್ವಾದಶಭಿರ್ಭಿನ್ನಂ ಕಿಟ್ಟಂ ದೇಹಾದ್ಬಹಿರ್ವ್ರಜೇತ್ ||೧೮||

ಕರ್ಣಾಕ್ಷಿನಾಸಿಕಾಜಿಹ್ವಾದಂತಾಃ [3]ಶಿಶ್ನಂ ಗುದಂ[3]ನಖಾಃ
ಮಲಾಶ್ರಯಾಃ ಕಫಸ್ವೇದೌ ವಿಣ್ಮೂತ್ರೇ ದ್ವಾದಶ ಸ್ಮೃತಾಃ ||೧೯||

ಹೃತ್ಪದ್ಮೇ ಪ್ರತಿಬದ್ಧಾಶ್ಚ ಸರ್ವಾ ನಾಡ್ಯಸ್ಸಮಂತತಃ
ತಾಸಾಂ ಮುಖೇಷು ತತ್ಸೂಕ್ಷ್ಮಃ ಪ್ರಾಣಃಸ್ಥಾಪಯತೇ ರಸಮ್ ||

ವಾಯುನಾ = ವಾಯುವಿನಿಂದ ಧ್ಮಾಯಮಾನಃ = ಊದಿಸಿಕೊಳಲುಪಟ್ಟಂಥಾ ಅಗ್ನಿಃ = ಅಗ್ನಿ ಜಲಂ = ಉದಕವನು ಅತ್ಯುಷ್ಣಂ = ಅತ್ಯಂತ ಉಷ್ಣವನು ಕುರುತೇ = ಮಾಡುತ್ತಿಹುದು. ತದನ್ನಂ = ಆ ಅಂನವು ಉಷ್ಣತೋಯೇನ = ಉಷ್ಣವಾದಂಥಾ ಉದಕದಿಂದ ಸಮಂತಾತ್ = ಎಲ್ಲಾ ಕಡೆಯಲೂ ಪುನಃ = ಮರಳಿ ಪಚ್ಯತೇ = ಪಾಕವಾಗುತ್ತಿಹುದು. ಡುಪಚಷ್ ಪಾಕೇ ಎಂಬ ಧಾತುವಿನಲ್ಲಿ ಹುಟ್ಟಿದ ಆತ್ಮನೇ ಪದವು. ||೧೭||

[4]ಪಕ್ವಂ = ಪಾಕವಾದಂಥಾ ತತ್ = ಆ ಅನ್ನವು ಕಿಟ್ಟಂ = ಮಲವು ಪೃಥಕ್ = ಬೇರೆ ರಸಃ = [4]ರಸಮುಯವು. ಪೃಥಕ್ = ಬೇರಾಗಿ ದ್ವಿಧಾ = ಎರಡು ಪ್ರಕಾರವು ಭವತಿ = ಆಗುತ್ತಿಹುದು. ಕಿಟ್ಟಂ = ಮಲವು ದ್ವಾದಶಭಿಃ = ಹನ್ನೆರಡು ಪ್ರಕಾರವಾದಂಥಾ ಮಲೈಃ = ಮಲಂಗಳಿಂದ ಭಿನ್ನಂ = ಬೇರ್ಪಡಿಸಲುಪಟ್ಟುದಾಗಿ ದೇಹಾತ್ = ಶರೀರದ ದೆಸೆಯಿಂದವು ಬಹಿಃ = ಹೊರಗೆ ವ್ರಜೇತ್ = ಎಯ್ದುವುದು.

ಕರ್ಣಾಕ್ಷಿನಾಸಿಕಾಜಿಹ್ವಾದಂತಾಃ = ಕಿವಿ ಕಣ್ಣು ಮೂಗು ನಾಲಗೆ ಹಲ್ಲುಗಳು ಶಿಶ್ನಂ = ಶಿಶ್ನೆಯು ಗುದಂ = ಅಧೋದ್ವಾರವು ನಖಾಃ = ಉಗುರುಗಳು ಕಫಸ್ವೇದೌ = ಶ್ಲೇಷ್ಮ ಬೆಮರುಗಳು ವಿಣ್ಮೂತ್ರೇ = ಮಲಮೂತ್ರಂಗಳು ಮಲಾಶ್ರಯಾಃ = ಮಲಕ್ಕೆ ಆಶ್ರಯುವಹಂಥಾವು ದ್ವಾದಶ = ಹನ್ನೆರಡೆಂದು ಸ್ಮೃತಾಃ = ಹೇಳಲು ಪಟ್ಟವು. ||೧೯||

ಹೃತ್ಪದ್ಮೇ = ಹೃದಯಕಮಲದಲ್ಲಿ ಸರ್ವಾಃ = ಸಮಸ್ತವಹಂಥಾ ನಾಡ್ಯಃ = ನಾಡಿಗಳು ಸಮಂತತಃ = ಎಲ್ಲಾ ಕಡೆಯಲ್ಲಿಯೂ ಪ್ರತಿಬದ್ಧಾಶ್ಚ = ಸಂಬಂಧಿಸಲು

1 ಧ (ಘ) 2 ಸಂ (ಘ) 3 ಶಿಶ್ನಗುದಂ (ಘ) 4 ಲುಪ್ತ (ಕ)

ರಸೇನ ತೇನ ತಾ ನಾಡೀಃ[1] ಪ್ರಾಣಃ ಪೂರಯತೇ ಪುನಃ
ಪ್ರತರ್ಪಯಂತಿ ಸಂಪೂರ್ಣಾಃ ತಾಶ್ಚ ದೇಹಂ ಸಮಂತತಃ ॥೨೦॥

ತತಸ್ಸ ನಾಡೀಮಧ್ಯಸ್ಥಃ ಶಾರೀರೇಣೋಷ್ಮಣಾ ರಸಃ
ಪಚ್ಯತೇ ಪಚ್ಯಮಾನಾಚ್ಚ ಭವೇತ್ಪಾಕದ್ವಯಂ ಪುನಃ ॥೨೧॥

*ಚರ್ಮಾವೇಷ್ಟಂ[2] ಸಮಂತಾಚ್ಚ ರುಧಿರಂ ಚ ಪ್ರಜಾಯತೇ
ರಕ್ತಾಲ್ಲೋಮಾನಿ ಮಾಂಸಂ ಚ ಕೇಶಾಃ ಸ್ನಾಯುಶ್ಚ ಮಾಂಸತಃ ॥

---

ವಟ್ಟವು. ತಾಸಾಂ = ಆ ನಾಡಿಗಳ ಮುಖೇಷು = ಮುಖಂಗಳಲ್ಲಿ ರಸಂ = ಅಂನ ರಸವನು ತತ್ಸೂಕ್ಷ್ಮಃ = ಆ ಸೂಕ್ಷ್ಮವಹಂಥಾ ಪ್ರಾಣಃ = ಪ್ರಾಣವಾಯು ಸ್ಥಾಪಯತೇ = ಇರಿಸ್ಸುತ್ತಿಹುದು. ॥೨೦॥

ಪ್ರಾಣಃ = ಪ್ರಾಣವಾಯು ತೇನ ರಸೇನ = ಆ ರಸದಿಂದ ತಾಃ ನಾಡೀಃ = ಆ ನಾಡಿಗಳನು ಪುನಃ = ಮರಳಿ ಪೂರಯತೇ = ತುಂಬುತ್ತಿಹುದು. ಪೃ ಪಾಲನ ಪೂರಣಯೋಃ ಎಂಬ ಧಾತುಜ ಪದವು. ಸಂಪೂರ್ಣಾಃ = ತುಂಬಿದಂಥಾ ತಾಶ್ಚ = ಆ ನಾಡಿಗಳು ದೇಹಂ = ದೇಹವನು ಸಮಂತತಃ = ಎಲ್ಲಾ ಕಡೆಯುಲ್ಲಿಯೂ ಪ್ರತರ್ಪಯಂತಿ = ತೃಪ್ತಿಮಾಡುತ್ತಿಹವು. ತೃಪೂ ಪ್ರೀಣನೇ ಎಂಬ ಧಾತು.

ತತಃ = ಅನಂತರದಲ್ಲಿ ನಾಡೀಮಧ್ಯಸ್ಥಃ = ನಾಡಿಗಳ ಮಧ್ಯದಲ್ಲಿಹಂಥಾ ಸಃ = ಆ ರಸಃ = ರಸವು ಶಾರೀರೇಣ ಊಷ್ಮಣಾ = ಶರೀರದ ಉಷ್ಣದಿಂದ ಪಚ್ಯತೇ = ಪಾಕವಾಗುತ್ತಿಹುದು. ಪಚ್ಯಮಾನಾಚ್ಚ = ಪಾಕವಾದುದರ ದೆಸೆಯಿಂದವು ಪುನಃ = ಮರಳಿ ಪಾಕದ್ವಯಂ = ಪಾಕನೆರಡು ಪ್ರಕಾರವು ಭವೇತ್ = ಅಹುದು. ॥೨೧॥

ಸಮಂತಾಚ್ಚ = ಎಲ್ಲಾ ಕಡೆಯುಲ್ಲಿಯೂ ಚರ್ಮಾವೇಷ್ಟಂ = ಚರ್ಮದಿಂದ ಪರಿವೇಷ್ಟಿಸಿಕೊಂಡಿರುತ್ತಂ ಇದ್ದಂಥಾ ರುಧಿರಂ ಚ = ರಕ್ತವು ಪ್ರಜಾಯತೇ = ಆಗುತ್ತಿಹುದು. ರಕ್ತಾತ್ = ರಕ್ತದ ದೆಸೆಯಿಂದ ಲೋಮಾನಿ = ರೋಮಂಗಳು ಮಾಂಸಂ ಚ = ಮಾಂಸವು ಪ್ರಜಾಯತೇ = ಹುಟ್ಟುತ್ತಿಹುದು. ಮಾಂಸತಃ = ಮಾಂಸದ ದೆಸೆಯಿಂದ ಕೇಶಾಃ = ಮಂಡೆಯ ಕೂದಲುಗಳು ಸ್ನಾಯುಶ್ಚ = ನರವೂ ಹುಟ್ಟುತ್ತಿಹವು. ॥೨೨॥

---

1 ನಾಡ್ಯಸ್ತಾಃ (ಘ). 2 ವಿಷ್ಟಂ (ಘ) * ಆವಿಷ್ಟಂ ಎಂಬುದು ಯುಕ್ತ ಪಾಠ.

ಸ್ನಾಯೋಸ್ಸಿರಾಸ್ತಥಾಸ್ಥೀನಿ [1]ನಖಾ[1] ಮಜ್ಜಾಽಸ್ಥಿಸಂಭವಾಃ
*ಮಜ್ಜಾತ್ಕರಣಕೈವಲ್ಯಂ [2]ಶುಕ್ಲಂ[2] ಚ ಪ್ರಸವಾತ್ಮಕಮ್ ||೨೪||

ಇತಿ ದ್ವಾದಶಧಾಽನ್ನಸ್ಯ ಪರಿಣಾಮಃ ಪ್ರಕೀರ್ತಿತಃ
ಅನ್ನಾಚ್ಚೈವ ತತಶ್ಶು[3]ಕ್ಲಂ[3] ಶು[4]ಕ್ಲಾ[4]ದ್ದೇಹಸ್ಯ ಸಂಭವಃ ||೨೫||

ಋತುಕಾಲೇ ಯದಾ[5]ಶುಕ್ಲಂ[5] ನಿರ್ದೋಷಂ ಯೋನಿಸಂಸ್ಥಿತಮ್
ತದಾ ತದ್ವಾಯುನಾ ಸ್ಪೃಷ್ಟಂ ಸ್ತ್ರೀರಕ್ತೇನೈಕತಾಂ ವ್ರಜೇತ್ ||೨೬||

ವಿಸರ್ಗಕಾಲೇ ಶು[6]ಕ್ಲ[6]ಸ್ಯ ಜೀವಃ ಕರಣಸಂಯುತಃ
ಪ್ರೀತ್ಯಾ ಪ್ರವಿಶತೇ ಯೋನಿಂ ಕರ್ಮಭಿಃ ಸ್ವೈರ್ನಿಯೋಜಿತಃ ||೨೭||

---

ಸ್ನಾಯೋಃ = ನರವಿನ ದೆಸೆಯಿಂದ ಸಿರಾಃ = ನಾಡಿಗಳು ತಥಾ = ಹಾಂಗೆ ಅಸ್ಥೀನಿ = ಎಲು[ಬು]ಗಳು ಹುಟ್ಟಿದವು. ಮಜ್ಜಾ = ಮಜ್ಜೆಯು ನಖಾಃ = ಉಗುರುಗಳು ಅಸ್ಥಿಸಂಭವಾಃ = ಅಸ್ಥಿಗಳಿಂದ ಹುಟ್ಟಿದವು. ಮಜ್ಜಾತ್ = ಮಜ್ಜೆಯ ದೆಸೆಯಿಂದ ಕರಣಕೈವಲ್ಯಂ = ದೇಹಕ್ಕೆ ಸಾಧನವಹಂಥಾ ಪ್ರಸವಾತ್ಮಕಂ = ಉತ್ಪತ್ತಿ ಸ್ವರೂಪವಹಂಥಾ ಶುಕ್ಲಂ ಚ = ರೇತಸ್ಸು ಹುಟ್ಟಿತ್ತು. ||೨೪||

ಇತಿ = ಈ ಪ್ರಕಾರದಲ್ಲಿ ಅನ್ನಸ್ಯ = ಅನ್ನಕ್ಕೆ ದ್ವಾದಶಧಾ = ಹನ್ನೆರಡು ಪ್ರಕಾರವಾಗಿ ಪರಿಣಾಮಃ = ಆನಂದವು ಪ್ರಕೀರ್ತಿತಃ = ಹೇಳಲುಪಟ್ಟಿತ್ತು. ಅನ್ನಾಚ್ಚೈವ = ಅನ್ನದ ದೆಸೆಯಿಂದವೇ ಶುಕ್ಲಂ = ರೇತಸ್ಸು ಹುಟ್ಟಿತ್ತು. ತತಃ = ಅಷ್ಟಱ ಮೇಲೆ ಶುಕ್ಲಾತ್ = ರೇತಸ್ಸಿನ ದೆಸೆಯಿಂದ ದೇಹಸ್ಯ = ದೇಹದ ಸಂಭವಃ = ಉತ್ಪತ್ತಿಯಹುದು. ||೨೫||

ಯದಾ = ಆವಾಗ ಋತುಕಾಲೇ = ಋತು ಕಾಲದಲ್ಲಿ ನಿರ್ದೋಷಂ = ದೋಷವಿಲ್ಲದಂಥಾ ಶುಕ್ಲಂ = ರೇತಸ್ಸು ಯೋನಿಸಂಸ್ಥಿತಂ = ಯೋನಿಯಲ್ಲಿ ಇರಲು ಪಟ್ಟಿತ್ತು ತದಾ = ಆಗ ತತ್ = ಆ ರೇತಸ್ಸು ವಾಯುನಾ = ವಾಯುವಿನಿಂದ ಸ್ಪೃಷ್ಟಂ = ಸೋಂಕಲುಪಟ್ಟುದಾಗಿ ಸ್ತ್ರೀರಕ್ತೇನ = ಸ್ತ್ರೀಯುರ ರಕ್ತದಿಂದ ಏಕತಾಂ = ಒಂದೇಯಹತನವನು ವ್ರಜೇತ್ = ಎಯ್ದುವುದು. ||೨೬||

ಶುಕ್ಲಸ್ಯ = ಶುಕ್ಲವ ವಿಸರ್ಗಕಾಲೇ = ಬಿಡುವ ಕಾಲದಲ್ಲಿ ಕರಣಸಂಯುತಃ = ಮನೋಬು[ದ್ಧಿ][7]ಹಂಕಾರಚಿತ್ತವೆಂಬ ಅಂತಃಕರಣ ಚತುಷ್ಟಯಂಗಳಿಂದ

---

[1] ನಖ (ಘ) [2] ಶುಕ್ರಂ (ಕ) [3] ಕ್ರಂ (ಕ) [4] ಕ್ರಾ (ಕ) [5] ಶುಕ್ರಂ (ಕ)
[6] ಕ್ಲ (ಕ) [7] ದ್ಧಿರ (ವ್ಯಾ) * 'ಮಜ್ಜಾ' ಆಕಾರಾಂತವಾಗಿರಬೇಕು.

ತಚ್ಛು[1]ಕ್ಲ[1]ರಕ್ತಮೇಕಸ್ಥಮೇಕಾಹಾತ್ಕಲಲಂ ಭವೇತ್
ಪಂಚರಾತ್ರೇಣ ಕಲಲಂ ಬುದ್ಬುದಾಕಾರತಾಂ ವ್ರಜೇತ್ ||೨೮||

[2]ಬುದ್ಬುದಂ[2] ಸಪ್ತರಾತ್ರೇಣ ಮಾಂಸಪೇಶೀ ಭವೇತ್ಪುನಃ
ದ್ವಿಸಪ್ತಾಹಾದ್ಭವೇತ್ಪೇಶೀ ರಕ್ತಮಾಂಸಾಂಚಿತಾ ದೃಢಾ ||೨೯||

ಬೀಜಸ್ಯೇವಾಂ[3]ಕುರಾಃ ಪೇಶ್ಯಾಃ[3] ಪಂಚವಿಂಶತಿರಾತ್ರತಃ
ಭವಂತಿ ಮಾಸಮಾತ್ರೇಣ ಪಂಚಧಾ ಜಾಯತೇ ಪುನಃ ||೩೦||

ಗ್ರೀವಾ ಶಿರಶ್ಚ ಸ್ಕಂಧಶ್ಚ ಪೃಷ್ಠವಂಶಸ್ತಥೋದರಮ್

---

ಕೂಡಲುಪಟ್ಟಂಥಾ ಜೀವಃ = ಜೀವನು ಸ್ವೈಃ = ತಾ ಮಾಡಿದಂಥಾ ಕರ್ಮಭಿಃ = ಕರ್ಮಂಗಳಿಂದ ನಿಯೋಜಿತಃ = ಕೂಡಿದಾತನಾಗಿ ಪ್ರೀತ್ಯಾ = ಸಂತೋಷದಿಂದ ಯೋನಿಂ = ಯೋನಿಯನು ಪ್ರವಿಶತೇ = ಪ್ರವೇಶಿಸುತ್ತಿಹನು. ||೨೭||

ಏಕಸ್ಥಂ = ಒಂದಾಗಿದ್ದಂಥಾ ತಚ್ಛುಕ್ಲರಕ್ತಂ = ಆ ಶುಕ್ಲವು ರಕ್ತವು ಏಕಾಹಾತ್ = ಒಂದು ದಿನದ ಪೆಸೆಯಿಂದ ಕಲಲಂ = ಕಲ್ಕವು ಭವೇತ್ = ಆಹುದು. ಪಂಚರಾತ್ರೇಣ = ಐದು ರಾತ್ರೆಯಿಂದ ಕಲಲಂ = ಆ ಕಲ್ಕವು ಬುದ್ಬುದಾಕಾರತಾಂ = ಬೊಬ್ಬುಳಿಕೆಯಾಕಾರವಹತನವನು ವ್ರಜೇತ್ = ಎಯ್ದುವುದು. ||೨೮||

ಬುದ್ಬುದಂ = ಬೊಬ್ಬುಳಿಕೆಯಾದುದು ಸಪ್ತರಾತ್ರೇಣ = ಏಳು ರಾತ್ರಿಯಿಂದ ಮಾಂಸಪೇಶೀ = ಮಾಂಸದ ಮುದ್ದೆ ಭವೇತ್ = ಆಹುದು ಪುನಃ = ಮರಳಿ ಪೇಶೀ = ಆ ಮಾಂಸದ ಮುದ್ದೆ ದ್ವಿಸಪ್ತಾಹಾತ್ = ಹದಿನಾಲ್ಕು ದಿನದಿಂದ ರಕ್ತಮಾಂಸಾಂಚಿತಾ = ರಕ್ತ ಮಾಂಸದಿಂದ ಕೂಡಿದಂಥಾದು ದೃಢಾ ಭವೇತ್ = ಘಟ್ಟಿಯಹುದು. ||೨೯||

ಪಂಚವಿಂಶತಿರಾತ್ರತಃ = ಇಪ್ಪತ್ತೈದು ದಿನದಲ್ಲಿ ಪೇಶ್ಯಾಃ = ಮಾಂಸದ ಘಟ್ಟಿಗೆ ಬೀಜಸ್ಯೇವ = ಬೀಜಕ್ಕೆ ಅಂಕುರ ಮೂಡಿದ ಹಾಂಗೆ ಅಂಕುರಾಃ = ಮೊಳಕೆಗಳು ಭವಂತಿ = ಆಗುತ್ತಿಹವು. ಮಾಸಮಾತ್ರೇಣ = ಒಂದು ಮಾಸ ಮಾತ್ರದಿಂದ ಪುನಃ = ಮರಳಿ ಪಂಚಧಾ = ಐದು ಮೊಳಕೆ ಜಾಯತೇ = ಹುಟ್ಟುತ್ತಿಹುದು.

ಗ್ರೀವಾ = ಕೊರಳು ಶಿರಶ್ಚ = ತಲೆ ಸ್ಕಂಧಶ್ಚ = ಹೆಗಲು ಪೃಷ್ಠವಂಶಃ = ಬೆನ್ನ ನೆಟ್ಟೆಲು ತಥಾ = ಹಾಂಗೆ ಉದರಂ = ಹೊಟ್ಟೆ ಪಾಣಿಪಾದಾಃ = ಕೈಕಾಲು

---

[1] ಕ್ರ (ಕ) [2] ಬುದ್ಬುದಃ (ಘ) [3] ಕುರೋತ್ಪತ್ತಿಃ (ಘ)

ಪಾಣಿಪಾದಾಸ್ತಥಾ [1]ಪಾರ್ಶ್ವೇ[1] ಕಟೀ ಗಾತ್ರಂ ತಥೈವ ಚ
ಮಾಸದ್ವಯೇನ ಸರ್ವಾಣಿ ಕ್ರಮಶಃ ಸಂಭವಂತಿ ಚ ||೩೦||

ತ್ರಿಭಿರ್ಮಾಸೈಃ ಪ್ರಜಾಯಂತೇ ಸರ್ವಾಂಗಾಂಕುರಸಂಧಯಃ
ಮಾಸೈಶ್ಚತುರ್ಭಿರಂಗುಲ್ಯಃ ಪ್ರಜಾಯಂತೇ ಯಥಾಕ್ರಮಮ್ ||೩೧||

ಮುಖಂ ನಾಸಾ ಚ ಕರ್ಣೌ ಚ ಮಾಸೈರ್ಜಾಯಂತಿ ಪಂಚಭಿಃ
ದಂತಪಙ್ಕ್ತಿಸ್ತಥಾ ಗುಹ್ಯಂ ಜಾಯಂತೇ ಚ ನಖಾಃ ಪುನಃ ||೩೨||

[2]ಕರ್ಣಯೋರ್ಭವತಶ್ಛಿದ್ರೌ[2] ಷಣ್ಮಾಸಾಭ್ಯಂತರೇಣ ತು
ಪಾಯುರ್ಮೇಢ್ರಮುಪಸ್ಥಂ ಚ ನಾಭಿಶ್ಚಾಪ್ಯುಪಜಾಯತೇ ||೩೩||

---

ಗಳು ತಥಾ = ಹಾಂಗೆ ಪಾರ್ಶ್ವೇ = ಎರಡು ಬದಿಗಳು ಕಟೀ = ಟೊಂಕವೆರಡು ತಥೈವ ಚ = ಹಾಂಗೆ ಗಾತ್ರಂ = ಶರೀರವು ಮಾಸದ್ವಯೇನ = ತಿಂಗಳೆರಡರಿಂದ ಕ್ರಮಶಃ = ಕ್ರಮದಿಂದ ಸರ್ವಾಣಿ ಚ = ಎಲ್ಲವೂ ಸಂಭವಂತಿ = ಹುಟ್ಟುತ್ತಿಹವು. ||೩೦||

ತ್ರಿಭಿಃ ಮಾಸೈಃ = ಮೂರು ಮಾಸಗಳಿಂದ ಸರ್ವಾಂಗಾಂಕುರಸಂಧಯಃ = ಸರ್ವಾಂಗಂಗಳ ಮೊಳಕೆಗಳ ಸಂದುಗಳು ಪ್ರಜಾಯಂತೇ = ಹುಟ್ಟುತ್ತಿಹವು. ಚತುರ್ಭಿಃ ಮಾಸೈಃ = ನಾಲ್ಕು ಮಾಸಂಗಳಿಂದ ಅಂಗುಲ್ಯಃ = ಬೆರಳುಗಳು ಯಥಾಕ್ರಮಂ = ಕ್ರಮತಪ್ಪದೆ ಪ್ರಜಾಯಂತೇ = ಹುಟ್ಟುತ್ತಿಹವು. ||೩೧||

ಪಂಚಭಿಃ ಮಾಸೈಃ = ಐದು ಮಾಸಂಗಳಿಂದ ಮುಖಂ = ಮುಖವು ನಾಸಾ ಚ = ನಾಸಿಕವು ಕರ್ಣೌ ಚ = ಕಿವಿಗಳು ಜಾಯಂತಿ = ಹುಟ್ಟುತ್ತಿಹವು ಪುನಃ = ಮರಳಿ ದಂತಪಙ್ಕ್ತಿಃ = ದಂತಪಙ್ಕ್ತಿಯು ಗುಹ್ಯಂ = ಗೋಪ್ಯವಾಗಿ ಹುಟ್ಟುವುದು. ನಖಾಶ್ಚ = ಉಗುರುಗಳೂ ಜಾಯಂತೇ = ಹುಟ್ಟುತ್ತಿಹವು. ||೩೨||

ಷಣ್ಮಾಸಾಭ್ಯಂತರೇಣ = ಆರುತಿಂಗಳೊಳಗಣಿಂದ ಕರ್ಣಯೋಃ = ಎರಡು ಕಿವಿಗಳ ಛಿದ್ರೌ ತು = ಛಿದ್ರಂಗಳು ಭವತಃ = ಆಗುತ್ತಿಹವು. ಪಾಯುಃ = ಗುದವು ಮೇಢ್ರಂ = ಶಿಶ್ನಿಯು ಉಪಸ್ಥಂ ಚ = ಭಗವು ನಾಭಿಶ್ಚ = ಹೊಕ್ಕಳು ಉಪಜಾಯತೇ = ಹುಟ್ಟುತ್ತಿಹುದು. ಸ್ತ್ರೀಪುರುಷರ ಕುರಿತು ಉತ್ಪತ್ತಿಯು ಹೇಳಿದ ನಿರ್ಣಯವು. ||೩೩||

---

1 ಪಾರ್ಶ್ವೌ 2 ಕರ್ಣಯೋಸ್ತು ಭವೇಚ್ಛಿದ್ರಂ (ಘ)

ಸಂಧಯೋ ಯೇ ಚ ಗಾತ್ರೇಷು ಮಾಸೈರ್ಜಾಯಂತಿ ಸಪ್ತಭಿಃ
ಅಂಗಪ್ರತ್ಯಂಗಸಂಪೂರ್ಣಃ ಶಿರಃಕೇಶಸಮನ್ವಿತಃ ||೩೩||

ವಿಭಕ್ತಾವಯವಸ್ಸ್ಪಷ್ಟಃ ಪುನರ್ಮಾಸಾಷ್ಟಕೇನ ತು
ಪಂಚಾತ್ಮಕಸಮಾಯುಕ್ತಃ ಪರಿಪಕ್ವಸ್ಸ ತಿಷ್ಠತಿ ||೩೬||

ಮಾತುರಾಹಾರವೀರ್ಯೇಣ ಷಡ್ವಿಧೇನ ರಸೇನ [1]ಚ[1]
ನಾಭಿಸೂತ್ರನಿಬಂಧೇನ ವರ್ಧತೇ ಸ ದಿನೇ ದಿನೇ ||೩೭||

ತತಃ ಸ್ಮೃತಿಂ ಲಭೇಜ್ಜೀವಃ ಸಂಪೂರ್ಣೇಽಸ್ಮಿನ್ ಶರೀರಕೇ
ಸುಖದುಃಖಂ ವಿಜಾನಾತಿ ನಿದ್ರಾಸ್ವಪ್ನಂ ಪುರಾಕೃತಂ ||೩೮||

---

ಸಪ್ತಭಿಃ ಮಾಸೈಃ = ಏಳು ಮಾಸಂಗಳಿಂದ ಗಾತ್ರೇಷು = ಶರೀರಂಗಳಲ್ಲಿಯು ಯೇ ಚ = ಆವವು ಕೆಲವು ಸಂಧಯಃ = ಸಂದುಗಳು ಜಾಯಂತಿ = ಹುಟ್ಟುತ್ತಿಹವು ಪುನಃ = ಮರಳಿ ಮಾಸಾಷ್ಟಕೇನ ತು = ಮಾಸವೆಂಟರಿಂದವು ಸಃ = ಆ ಜೀವನು ಅಂಗಪ್ರತ್ಯಂಗಸಂಪೂರ್ಣಃ = ಅವಯವಂಗಳು ಸೂಕ್ಷ್ಮಾವಯವಂಗಳಿಂದ ಸಂಪೂರ್ಣವಹಂಥಾ ಶಿರಃಕೇಶಸಮನ್ವಿತಃ = ಮಂಡೆಯ ಕೂದಲುಗಳಿಂದ ಕೂಡಲುಪಟ್ಟಂಥಾ ವಿಭಕ್ತಾವಯವಸ್ಸ್ಪಷ್ಟಃ = ವಿಭಾಗಿಸಲುಪಟ್ಟ ಅವಯವಂಗಳ ವ್ಯಕ್ತವನುಳ್ಳಂಥಾ ಪಂಚಾತ್ಮಕಸಮಾಯುಕ್ತಃ = ಪಂಚಭೂತಂಗಳ ಸ್ವರೂಪದಿಂದ ಕೂಡಲುಪಟ್ಟಂಥಾ ಪರಿಪಕ್ವಃ = ಪರಿಪಾಕವಾದ ಚಿತ್ತವನುಳ್ಳಾತನಾಗಿ ತಿಷ್ಠತಿ = ಇರುತ್ತಿಹನು. ||೩೬||

ಸಃ = ಆ ಜೀವನು ನಾಭಿಸೂತ್ರನಿಬಂಧೇನ = ಹೊಕ್ಕಳ ನಾಳದಿಂದ ವೇಧಿಸಲುಪಟ್ಟಂಥಾ ಷಡ್ವಿಧೇನ ರಸೇನ = ಷಡ್ರಸಮಯುವಹಂಥಾ ಮಾತುಃ = ತಾಯ ಆಹಾರವೀರ್ಯೇಣ ಚ = ಆಹಾರದ ಸತ್ತ್ವದಿಂದವು ದಿನೇ ದಿನೇ = ದಿನ ದಿನದಲ್ಲಿ ವರ್ಧತೇ = ಬೆಳವುತ್ತಿಹನು. ||೩೭||

ತತಃ = ಅಷ್ಟರಮೇಲೆ ಜೀವಃ = ಜೀವನು ಸಂಪೂರ್ಣೇ = ಸಂಪೂರ್ಣವಾದಂಥಾ ಅಸ್ಮಿನ್ ಶರೀರಕೇ = ಈ ಶರೀರದಲ್ಲಿ ಸ್ಮೃತಿಂ = ಎಚ್ಚರಿಕೆಯನು ಲಭೇತ್ = ಪಡೆವನು. ಪುರಾ = ಪೂರ್ವಜನ್ಮದಲ್ಲಿ ಕೃತಂ = ಮಾಡಿದಂಥಾ ಕರ್ಮವನು ಸುಖದುಃಖಂ = ಸುಖದುಃಖವನು ನಿದ್ರಾಸ್ವಪ್ನಂ = ನಿದ್ರೆಕನಸನಾಗಿ ವಿಜಾನಾತಿ = ಅರಿವುತ್ತಿಹನು. ||೩೮||

---

[1] ತು (ಘ)

ಮೃತಶ್ಚಾಹಂ ಪುನರ್ಜಾತೋ ಜಾತಶ್ಚಾಹಂ ಪುನರ್ಮೃತಃ
ನಾನಾಯೋನಿಸಹಸ್ರಾಣಿ ಮಯಾ ದೃಷ್ಟಾನಿ ಜಾಯತಾ ||೩೯||

ಅಧುನಾ ಜಾತಮಾತ್ರೋಽಹಂ ಪ್ರಾಪ್ತಸಂಸ್ಕಾರ ಏವ ಚ
[1]ತತ್ತತ್[1] ಶ್ರೇಯಃ ಕರಿಷ್ಯಾಮಿ †ಯೇನ ಗರ್ಭೇಣ ಸಂಭವಃ† ||೪೦||

ಗರ್ಭಸ್ಥಶ್ಚಿಂತಯತ್ಯೇವಮಹಂ ಗರ್ಭಾದ್ವಿನಿ[2]ರ್ಗತಃ[2]
ಅಧ್ಯೇಷ್ಯಾಮಿ ಶಿವಜ್ಞಾನಂ ಸಂಸಾರವಿನಿವರ್ತಕಮ್ ||೪೧||

ಅಹಂ ಚ = ನಾನು ಮೃತಃ = ಮರಣವಾದಾತನು ಪುನಃ = ಮರಳಿ ಜಾತಃ = ಹುಟ್ಟಿದಾತನು ಜಾತಃ = ಹುಟ್ಟಿದಂಥಾ ಅಹಂ ಚ = ನಾನೂ ಪುನಃ = ಮರಳಿ ಮೃತಃ = ಸತ್ತಾತನು ಜಾಯತಾ = ಹುಟ್ಟಿದಂಥಾ ಮಯಾ = ನನ್ನಿಂದ ನಾನಾಯೋನಿಸಹಸ್ರಾಣಿ = ನಾನಾಪ್ರಕಾರವಹ ಯೋನಿಗಳ ಅಸಂಖ್ಯಾತಂಗಳು ದೃಷ್ಟಾನಿ = ಕಾಣಲು ಪಟ್ಟವು. ಶತಶಬ್ದ ಸಹಸ್ರಶಬ್ದವು ಅಸಂಖ್ಯಾತದಲ್ಲಿ ವರ್ತಿಸುವವು. ||೩೯||

ಅಧುನಾ = ಈಗವು ಯೇನ ಗರ್ಭೇಣ = ಆವುದಾನೊಂದು ಗರ್ಭದಿಂದ ಸಂಭವಃ = ಹುಟ್ಟಿದಂಥಾ ಅಹಂ ಚ = ನಾನೂ ಜಾತಮಾತ್ರ ಏವ = ಹುಟ್ಟಿದಾಕ್ಷಣವೇ ಪ್ರಾಪ್ತಸಂಸ್ಕಾರಃ = ಹಡೆಯಲು ಪಟ್ಟ ಗುರೂಪದೇಶವನುಳ್ಳಾತನಾಗಿ ತತ್ = ಆ ಸಂಸಾರನಿವೃತ್ತಿ ಕಾರಣವಾಗಿ ತತ್ ಶ್ರೇಯಃ = ಆ ಮೋಕ್ಷವನು ಕುರಿತು ಕರಿಷ್ಯಾಮಿ = [3]ಮಾಡೇನು.[3] ||೪೦||

ಅಹಂ = ನಾನು ಗರ್ಭಾತ್ = ಗರ್ಭದ ದೆಸೆಯಿಂದ ವಿನಿರ್ಗತಃ = ಹೊಱ-ವಂಟಾತನಾಗಿ ಸಂಸಾರವಿನಿವರ್ತಕಂ = ಸಂಸಾರ ನಿವೃತ್ತಿಯನು ಮಾಡುತ್ತಿದ್ದಂಥಾ

[1] ತತಃ (ಫ). [2] ಸೃತಃ (ಫ). [3] ಮಾಡೀನು (ಚ).

*'ಯೇನ–ಗರ್ಭೇ–ನ–ಸಂಭವಃ' ಇತಿ (ಫ). 'ಯೇನ–ಗರ್ಭೇಣ–ಸಂಭವಃ' ಇತಿ (ಕ.ಖ.ಗ.ಚ.). ಮೂಲದಲ್ಲಿ 'ಜಾತಮಾತ್ರಃ' ಎಂದಿದೆ. ವ್ಯಾಖ್ಯಾನದಲ್ಲಿ 'ಜಾತಮಾತ್ರ ಏವ' ಎಂದಿದೆ. ಈ (ಫ) ಪಾಠದಲ್ಲಿ 'ಗರ್ಭೇ-ನ' ಎಂದಿದೆ. ಉಳಿದವುಗಳಲ್ಲಿ 'ಗರ್ಭೇಣ' ಎಂದಿದೆ. ಈ ಪಾಠಗಳ ಮೇಲಿಂದ ಅರ್ಥವು ಪರಿಶೀಲನಾರ್ಹವಾಗಿದೆ.

ಯೇನ = ಯಾವ ಶ್ರೇಯಃಕರ್ಮದಿಂದ ಗರ್ಭೇ = ಗರ್ಭದಲ್ಲಿ ಸಂಭವಃ = ಹುಟ್ಟು ನ = ಇರುವುದಿಲ್ಲವೋ ಎಂದರೆ ಪುನರ್ಜನ್ಮವಿರುವುದಿಲ್ಲವೋ ಅಂತಹ ಶ್ರೇಯಸ್ಸಿನ ಕರ್ಮವನ್ನು ಮಾಡುವೆನು ಎಂದು ಅರ್ಥೈಸುವುದು ಸೂಕ್ತ. ಈ ಅರ್ಥವು ಯೇನ-ಗರ್ಭೇ-ನ-ಸಂಭವಃ ಎಂಬ ಪಾಠಕ್ಕೆ ಅನುಗುಣವಾಗಿದೆ.

ಏವಂ ಸ ಗರ್ಭೇ ದುಃಖೇನ ಮಹತಾ ಪರಿಪೀಡಿತಃ
ಜೀವಃ ಕರ್ಮವಶಾದಾಸ್ತೇ ಮೋಕ್ಷೋಪಾಯಂ ವಿಚಿಂತಯನ್ ||೪೧||

ಯಥಾ ಗಿರಿವರಾಕ್ರಾಂತಃ ಕಶ್ಚಿದ್ದುಃಖೇನ ತಿಷ್ಠತಿ
ತಥಾ ಜರಾಯುಣಾ ದೇಹೀ ದುಃಖೇ ತಿಷ್ಠತಿ ವೇಷ್ಟಿತಃ ||೪೨||

ಪತಿತಃ ಸಾಗರೇ ಯದ್ವದ್ದುಃಖಮಾಸ್ತೇ ಸಮಾಕುಲಃ
ಗರ್ಭೋದಕೇನ ಸಿಕ್ತಾಂಗಸ್ತಥಾ ವ್ಯಾಕುಲಿತಃ ಪುಮಾನ್ ||೪೩||

ಲೋಹಕುಂಭೇ ಯಥಾ ನ್ಯಸ್ತಃ ಪಚ್ಯತೇ ಕಶ್ಚಿದಗ್ನಿನಾ
ಗರ್ಭಕುಂಭೇ ತಥಾ ಕ್ಷಿಪ್ತಃ ಪಚ್ಯತೇ [1]ಜಠರಾಗ್ನಿನಾ[1] ||೪೪||

---

ಶಿವಜ್ಞಾನಂ = ಶಿವಜ್ಞಾನ ಶಾಸ್ತ್ರವನು ಅಧ್ಯೇಷ್ಯಾಮಿ = ಓದೇನು. ಏವಂ = ಈ ಪ್ರಕಾರದಲ್ಲಿ ಗರ್ಭಸ್ಥಃ = ಗರ್ಭದಲ್ಲಿದ್ದಂಥಾ ಜೀವನು ಚಿಂತಯತಿ = ಚಿಂತಿಸುತ್ತಿಹನು. ||೪೦||

ಏವಂ = ಈ ಪ್ರಕಾರದಲ್ಲಿ ಸಃ ಜೀವಃ = ಆ ಜೀವನು ಗರ್ಭೇ = ಗರ್ಭದಲ್ಲಿ ಮಹತಾ = ಬಹಳವಹಂಥಾ ದುಃಖೇನ = ದುಃಖದಿಂದ ಪರಿಪೀಡಿತಃ = ಕ್ಲೇಶಿತನಾಗಿ ಮೋಕ್ಷೋಪಾಯಂ = ಮೋಕ್ಷದ ಉಪಾಯವನು ವಿಚಿಂತಯನ್ = ಚಿಂತಿಸುತ್ತವು ಕರ್ಮವಶಾತ್ = ಕರ್ಮವಶದ ದೆಸೆಯಿಂದ ಆಸ್ತೇ ಇರುತ್ತಿಹನು. ||೪೧||

ಗಿರಿವರಾಕ್ರಾಂತಃ = ದೊಡ್ಡಿತಹ ಪರ್ವತದಲ್ಲಿ ಸುತ್ತುತ್ತಿದ್ದಂಥಾ ಕಶ್ಚಿತ್ = ಒಬ್ಬಾನೊಬ್ಬನು ದುಃಖೇನ = ದುಃಖದಿಂದ ಯಥಾ = ಎಹಗೆ ತಿಷ್ಠತಿ = ಇರುತ್ತಿಹನು ತಥಾ = ಹಾಂಗೆ ಜರಾಯುಣಾ = ಮಾಸಿನಿಂದ ವೇಷ್ಟಿತಃ = ಮುಸುಕಲುಪಟ್ಟಂಥಾ ದೇಹೀ = ಜೀವನು ದುಃಖೇ = ದುಃಖದಲ್ಲಿ ತಿಷ್ಠತಿ = ಇರುತಿಹನು. ||೪೨||

ಸಾಗರೇ = ಸಮುದ್ರದಲ್ಲಿ ಪತಿತಃ = ಬಿದ್ದಂಥಾ ಆತನು ಸಮಾಕುಲಃ = ವ್ಯಾಕುಲನಾಗಿ ಯದ್ವತ್ = ಹೇಂಗೆ ದುಃಖಂ = ದುಃಖವಾಗಿ ಆಸ್ತೇ = ಇರುತ್ತಿಹನು ತಥಾ = ಹಾಂಗೆ ಗರ್ಭೋದಕೇನ = ಗರ್ಭದ ಜಲದಿಂದ ಸಿಕ್ತಾಂಗಃ = ನೆನೆಯಲುಪಟ್ಟ ಶರೀರವನುಳ್ಳಂಥಾ ಪುಮಾನ್ = ಪುರುಷನು ವ್ಯಾಕುಲಿತಃ = ಚಂಚಲವಾಗುತ್ತಿಹನು. ||೪೩||

ಲೋಹಕುಂಭೇ = ಲೋಹದ ಭಾಂಡದಲ್ಲಿ ನ್ಯಸ್ತಃ = ಇ[2][ಡ][2]ಲುಪಟ್ಟಂಥಾ ಕಶ್ಚಿತ್ = ಒಬ್ಬಾನೊಬ್ಬನು ಅಗ್ನಿನಾ = ಅಗ್ನಿಯಿಂದ ಯಥಾ = ಹೇಂಗೆ

---

[1] ಜಾಠರಾಗ್ನಿನಾ (ಘ) [2] ರ (ಕ.ಖ)

ಸೂಚೀಭಿರಗ್ನಿವರ್ಣಾಭಿರ್ನಿರ್ಭಿನ್ನಸ್ಯ ನಿರಂತರಮ್
ಯದ್ದುಃಖಮುಪಜಾಯೇತ ತದ್ಗರ್ಭೇಽಷ್ಟಗುಣಂ ಭವೇತ್ ||೪೭||

[1]ಗರ್ಭ[1]ವಾಸಾತ್ಪರೋ ವಾಸಃ [2]ಕಷ್ಟೋ ನೈವಾಸ್ತಿ[2]ಕುತ್ರಚಿತ್
ದೇಹಿನಾಂ ದುಃಖಬಹುಲಂ ಸುಘೋರಮತಿಸಂಕಟಮ್ ||೪೭||

ಇತ್ಯೇತದ್ಗರ್ಭದುಃಖಂ ಹಿ ಪ್ರಾಣಿನಾಂ ಪರಿಕೀರ್ತಿತಮ್
ಚರಸ್ಥಿರಾಣಾಂ ಸರ್ವೇಷಾಂ ಆತ್ಮಗರ್ಭಾನುರೂಪತಃ ||೪೮||

ಗರ್ಭಾತ್ಕೋಟಿಗುಣಂ ದುಃಖಂ ಯೋನಿಯಂತ್ರಪ್ರಪೀಡನಾತ್
ಸಮ್ಮೂರ್ಛಾ ಜಾಯತೇ ತಸ್ಯ ಜಾಯಮಾನಸ್ಯ ದೇಹಿನಃ ||೪೯||

---

ಪಚ್ಯತೇ = ಬೇವುತ್ತಿಹನು ತಥಾ = ಹಾಂಗೆ ಗರ್ಭಕುಂಭೇ = ಗರ್ಭವೆಂಬ ಭಾಂಡದಲ್ಲಿ ಕ್ಷಿಪ್ತಃ = ಇದ್ದಂಥಾ ಪ್ರಾಣಿ ಜಠರಾಗ್ನಿನಾ = ಉದರಾಗ್ನಿಯಿಂದ ಪಚ್ಯತೇ = ಬೇವುತ್ತಿಹನು ||೪೫||

ಅಗ್ನಿವರ್ಣಾಭಿಃ = ಅಗ್ನಿಯ ವರ್ಣವನುಳ್ಳಂಥಾ ಸೂಚೀಭಿಃ = ಸೂಜಿಗಳಿಂದ ನಿರಂತರಂ = ಆವಾಗವು ನಿರ್ಭಿನ್ನಸ್ಯ = ಚುಚ್ಚಿಕೊಂಡಾತಂಗೆ ಯದ್ದುಃಖಂ = ಆವುದಾನೊಂದು ದುಃಖವು ಉಪಜಾಯೇತ = ಹುಟ್ಟೊದು ತತ್ = ಆ ದುಃಖವು ಗರ್ಭೇ = ಗರ್ಭದಲ್ಲಿ ಅಷ್ಟಗುಣಂ = ಎಂಟು ಮಡಿ ಭವೇತ್ = ಅಹುದು.

ದೇಹಿನಾಂ = ಪ್ರಾಣಿಗಳಿಗೆ ಗರ್ಭವಾಸಾತ್ = ಗರ್ಭದ ಆಶ್ರಯದ ದೆಸೆಯಿಂದ ಪರಂ = ಮತ್ತೊಂದು ಕಷ್ಟಃ = ಕಷ್ಟವಹಂಥಾ ವಾಸಃ = ಸ್ಥಾನವು ನಾಸ್ತಿ = ಇಲ್ಲ. ಸುಘೋರಂ = ಅತಿ ಭಯಂಕರವಹಂಥಾ ಅತಿಸಂಕಟಂ = ಅತ್ಯಂತ ಸಂಕಟವಹಂಥಾ ದುಃಖಬಹುಲಂ = ದುಃಖಂಗಳಿಂಹ ಬಹಳವಹಂಥಾದು ಕುತ್ರಚಿತ್ = ಎಲ್ಲಿಯೂ ನಾಸ್ತ್ಯೇವ = ಇಲ್ಲವು. ||೪೭||

ಇತಿ = ಈ ಪ್ರಕಾರದಲ್ಲಿ ಚರಸ್ಥಿರಾಣಾಂ = ಚರಾಚರವಹಂಥಾ ಸರ್ವೇಷಾಂ ಪ್ರಾಣಿನಾಂ = ಸಮಸ್ತ ಪ್ರಾಣಿಗಳಿಗೆ ಆತ್ಮಗರ್ಭಾನುರೂಪತಃ = ತಮ್ಮ ತಮ್ಮ ಗರ್ಭಕ್ಕನುಕೂಲವಹದಱ ದೆಸೆಯಿಂದ ಏತತ್ = ಈ ಗರ್ಭದುಃಖಂ = ಗರ್ಭದ ದುಃಖವು ಪರಿಕೀರ್ತಿತಂ ಹಿ = ಹೇಳಲುಪಟ್ಟಿದಲಾ ||೪೮||

ಜಾಯಮಾನಸ್ಯ = ಹುಟ್ಟುತ್ತಿದ್ದಂಥಾ ತಸ್ಯ ದೇಹಿನಃ = ಆ ಪ್ರಾಣಿಗೆ ಯೋನಿಯಂತ್ರಪ್ರಪೀಡನಾತ್ = ಯೋನಿಯೆಂಬ ಗಾಣದ ಬಾಧೆಯ ದೆಸೆಯಿಂದ

---

1 ಗರ್ಭಾ (ಘ) 2 ಕಷ್ಟದೋ ನಾಸ್ತಿ (ಘ)

[1]ರಸ[1]ವತ್ಪೀಡ್ಯಮಾನಸ್ಯ [2]ಯಂತ್ರೇಣೇವ[2] ಸಮಂತತಃ
ಶಿರಸ್ಯಾತಾಡ್ಯಮಾನಸ್ಯ [3]ಪಾಶ[3]ಮುದ್ಗರಕೋಟಿಭಿಃ ||೫೦||

ಗರ್ಭಾನ್ನಿ[4]ಷ್ಕ್ರಾಮ್ಯ[4]ಮಾಣಸ್ಯ ಪ್ರಬಲೈಸ್ಸೂತಿಮಾರುತೈಃ
ಜಾಯತೇ ಸುಮಹದ್ದುಃಖಂ ಪರಿತ್ರಾಣಮವಿಂದತಃ ||೫೧||

ಯಂತ್ರೇ[5]ಣ ಪೀಡಿತಾ[5] ಯದ್ವನ್ನಿಸ್ಸಾರಾಸ್ಸ್ಯುಸ್ತಿಲೇಕ್ಷವಃ
ತದ್ವಚ್ಛರೀರಂ ನಿಸ್ಸಾರಂ ಯೋನಿಯಂತ್ರಪ್ರಪೀ[6]ಡಿತಮ್[6] ||೫೨||

ಅಸ್ಥಿಪಟ್ಟತುಲಾಸ್ತಂಭಂ ಸ್ನಾಯುಬಂ[7]ಧೈಸ್ಸು[7]ಯಂತ್ರಿತಂ
ರಕ್ತಮಾಂಸಮೃದಾ ಲಿಪ್ತಂ ವಿಣ್ಮೂತ್ರದ್ರವ್ಯಭಾಜನಮ್ ||೫೩||

---

ಗರ್ಭಾತ್ = ಗರ್ಭದ ದೆಸೆಯಿಂದವು ಕೋಟಿಗುಣಂ = ಕೋಟಿ ಮಡಿಯಹಂಥಾ ದುಃಖಂ = ದುಃಖವು ಸಮ್ಮೂರ್ಛಾ = ಮೂರ್ಛೆಯು ಜಾಯತೇ = ಹುಟ್ಟುತ್ತಿಹುದು. ||೪೯||

ಸಮಂತತಃ = ಎಲ್ಲಾ ಕಡೆಯಲೂ ರಸವತ್ = ರಸದ್ರವ್ಯವಹಂಥಾ ವಸ್ತುವಿನೋಪಾದಿಯಲ್ಲಿ ಯಂತ್ರೇಣ = ಗಾಣದಿಂದ ಪೀಡ್ಯಮಾನಸ್ಯೇವ = ಬಾಧಿಸಿಕೊಳಲು ಪಟ್ಟಾತನಕ್ಕೈ ಎಂಬ ಹಾಂಗೆ ಇದ್ದಂಥಾ ಪಾಶಮುದ್ಗರಕೋಟಿಭಿಃ = ನೇಣುಕಬ್ಬುನದ ಡಾಣೆಗಳ ಕೋಟಿಗಳಿಂದ ಶಿರಸಿ = ಮಸ್ತಕದಲ್ಲಿ ಆತಾಡ್ಯಮಾನಸ್ಯೇವ = ಅಪ್ಪಳಿಸಿಕೊಳಲು ಪಟ್ಟಾತನಕ್ಕೈ ಎಂಬ ಹಾಂಗಿದ್ದಂಥಾ ಗರ್ಭಾತ್ = ಗರ್ಭದ ದೆಸೆಯಿಂದ ನಿಷ್ಕ್ರಾಮ್ಯಮಾಣಸ್ಯ = ಹೊರವಡುತ್ತಿದ್ದಂಥಾ ಪರಿತ್ರಾಣಂ = ಸತ್ವವನು ಅವಿಂದತಃ = ಹಡೆಯದೇ ಇದ್ದಂಥಾ ಪ್ರಾಣಿಗೆ ಪ್ರಬಲೈಃ = ಬಲವತ್ತರವಹಂಥಾ ಸೂತಿಮಾರುತೈಃ = ಪ್ರಸವಕಾಲದ ವಾಯುಗಳಿಂದ ಸುಮಹತ್ = ಅತಿಬಹಳವಹಂಥಾ ದುಃಖಂ = ದುಃಖವು ಜಾಯತೇ = ಹುಟ್ಟುತ್ತಿಹುದು. ||೫೧||

ಯಂತ್ರೇಣ = ಗಾಣದಿಂದ ಪೀಡಿತಾಃ = ತಿರಿಗಿಸಲುಪಟ್ಟಂಥಾ ತಿಲೇಕ್ಷವಃ = ಎಳ್ಳು ಕಬ್ಬುಗಳು ಯದ್ವತ್ = ಎಹಗೆ ನಿಸ್ಸಾರಾಃ = ನಿಸ್ಸಾರಂಗಳು ಸ್ಯುಃ = ಅಹವು ತದ್ವತ್ = ಆ ಪ್ರಕಾರದಲ್ಲಿ ಯೋನಿಯಂತ್ರಪ್ರಪೀಡಿತಂ = ಯೋನಿಯೆಂಬ ಗಾಣದಿಂದ ಬಾಧಿಸಲುಪಟ್ಟಂಥಾ ಶರೀರಂ = ದೇಹವು ನಿಸ್ಸಾರಂ = ಸತ್ತ್ವವಿಲ್ಲದದಹುದು. ||೫೨||

ಅಸ್ಥಿಪಟ್ಟತುಲಾಸ್ತಂಭಂ = ಅಸ್ಥಿಗಳೆಂಬ ಭಾರವಟ್ಟಿಗೆ ತೊಲೆ ಕಂಭಂಗಳ

---

[1] ಇಕ್ಷು (ಘ) [2] ಯಂತ್ರೇಣೈವ (ಘ) [3] ಯಥಾ (ಘ) [4] ಷ್ಕ್ರಮ (ಘ)
[5] ಣಾಪೀಡಿತಾ (ಘ) [6] ಡನಾತ್ (ಘ) [7] ಧೇನ (ಘ)

ಕೇಶರೋಮ [1]ತೃಣಚ್ಛನ್ನಂ[1] ರೋಗಾಯತನಮಾ[ಗತಂ]
ತುರಮ್ (?)+
ವದನೈಕಮಹಾದ್ವಾರಂ ಗವಾಕ್ಷಾಷ್ಟಕಭೂಷಿತಮ್ ||೫೪||

ಓಷ್ಠದ್ವಯ[2]ಕವಾಟಂ[2] ಚ ದಂತಜಿಹ್ವಾರ್ಗಳಾನ್ವಿತಮ್
ನಾಡೀಸ್ವೇದಪ್ರವಾಹಂ ಚ ಕಫಪಿತ್ತಪರಿಪ್ಲುತಮ್ ||೫೫||

ಜರಾಶೋಕಸಮಾವಿಷ್ಟಂ ಕಾಲಚಕ್ರಾನಲೇ ಸ್ಥಿತಮ್
ಕಾಮಕ್ರೋಧೇಂಧನಾಕ್ರಾಂತಂ ವ್ಯಸನೈಶ್ಚೋಪಮರ್ದಿತಮ್ ||೫೬||

---

ನುಳ್ಳಂಥಾ ಸ್ನಾಯುಬಂಧೈಃ = ನರವಿನ ಕಟ್ಟುಗಳಿಂದ ಸುಯಂತ್ರಿತಂ = ಲೇಸಾಗಿ ಬಿಗಿಯಲು ಪಟ್ಟಂಥಾ ರಕ್ತಮಾಂಸಮೃದಾ = ರಕ್ತಮಾಂಸಂಗಳೆಂಬ ಮಣ್ಣಿನಿಂದ ಲಿಪ್ತಂ = ಮೆತ್ತಲುಪಟ್ಟಂಥಾ ವಿಣ್ಮೂತ್ರದ್ರವ್ಯಭಾಜನಂ = ಮಲಮೂತ್ರಂಗಳೆಂಬ ದ್ರವ್ಯಂಗಳಿಗೆ ಭಾಜನವಹಂಥಾ ||೫೩||

ಕೇಶರೋಮತೃಣಚ್ಛನ್ನಂ = ಮಂಡೆಯ ಕೂದಲು ರೋಮಂಗಳೆಂಬ ಹುಲ್ಲ ಹೊದಕೆಯನುಳ್ಳಂಥಾ ಆತುರಂ[ಆಗತಂ ?] = ಬಂದಂಥಾ ರೋಗಾಯತನಂ = ರೋಗಂಗಳಿಗೆ ಮನೆಯಹಂಥಾ ವದನೈಕಮಹಾದ್ವಾರಂ = ಬಾಯಿಯೆಂಬ ಒಂದು ದೊಡ್ಡಿಯ ಬಾಗಿಲನುಳ್ಳಂಥಾ ಗವಾಕ್ಷಾಷ್ಟಕಭೂಷಿತಂ = ಎಂಟು ದ್ವಾರಗಳೆಂಬ ಗವಾಕ್ಷವೆಂಟಱಿಂದ ಒಪ್ಪುತ್ತಿದ್ದಂಥಾ ||೫೪||

ಓಷ್ಠದ್ವಯಕವಾಟಂ ಚ = ತುಟಿಗಳೆರಡೆಂಬ ಜವಳಿಗದ್ದಗಳನುಳ್ಳಂಥಾ ದಂತಜಿಹ್ವಾರ್ಗಳಾನ್ವಿತಂ = ಹಲ್ಲು ನಾಲಗೆಯೆಂಬ ಲಾಳವಿಂಡಿಗೆಯಿಂದ ಕೂಡಲು ಪಟ್ಟಂಥಾ ಶರೀರವೆಂಬ ಗೃಹವಾಯಿತ್ತು. ಮತ್ತೆಯು ವಿಸ್ತರಿಸುತ್ತಿದ್ದಾನು. ಅದು ಹೇಂಗೆಂದಡೆ, ನಾಡೀಸ್ವೇದಪ್ರವಾಹಂ ಚ = ನಾಡಿಗಳಲ್ಲಿಯ ಬೆವರ ಪ್ರವಾಹವನುಳ್ಳಂಥಾ ಕಫಪಿತ್ತಪರಿಪ್ಲುತಂ = ಶ್ಲೇಷ್ಮಪಿತ್ತಂಗಳಿಂದ ಮುಳುಗಲುಪಟ್ಟಂಥಾದು. ||೫೫||

ಜರಾಶೋಕಸಮಾವಿಷ್ಟಂ = ಮುಪ್ಪು ಶೋಕಂಗಳಿಂದ ಪ್ರವೇಶಿಸಲು ಪಟ್ಟಂಥಾದು ಕಾಲಚಕ್ರಾನಲೇ = ಕಾಲಚಕ್ರವೆಂಬ ಅಗ್ನಿಯಲ್ಲಿ ಸ್ಥಿತಂ = ಇರುತ್ತಂ ಇದ್ದಂಥಾದು ಕಾಮಕ್ರೋಧೇಂಧನಾಕ್ರಾಂತಂ = ಕಾಮಕ್ರೋಧಂಗಳೆಂಬ ಕಟ್ಟಿಗೆಗಳಿಂದ ಒಟ್ಟಲು ಪಟ್ಟಂಥಾದು ವ್ಯಸನೈಶ್ಚ = ಸಪ್ತವ್ಯಸನಂಗಳಿಂದವು ಉಪಮರ್ದಿತಂ = ಅರಸಿಕೊಳಲುಪಟ್ಟಂಥಾದು. ||೫೬||

---

[1] ತೃಣಾಚ್ಛನ್ನಂ (ಘ) [2] ಕಪಾಟಂ (ಘ) + ಆತುರಂ = ಬಂದಂಥಾ(ವ್ಯಾಖ್ಯಾ) ?

ಭೋಗತೃಷ್ಣಾತುರಂ ಮೂಢಂ ರಾಗದ್ವೇಷವಶಾನುಗಮ್
ಸಂವರ್ತಿತಾಂಗ[1]ಪ್ರತ್ಯಂಗ[1]ಜರಾಯುಪರಿವೇಷ್ಟಿತಮ್ ||೫೭||

ಸಂಕಟೇ[2]ನಾ[2]ವಿವಿಕ್ತೇನ ಯೋನಿಮಾರ್ಗೇಣ ನಿರ್ಗತಮ್
ವಿಣ್ಮೂತ್ರರಕ್ತಸಿಕ್ತಾಂಗಂ ಷಟ್ಕೋಶಾಂಗಸಮುದ್ಭವಮ್ ||೫೮||

ಅಸ್ಥಿಪಂಜರಸಂಘಾತಂ [3]ಜ್ಞೇಯಮಸ್ಮಿನ್ ಕಳೇವರೇ[3] ||೫೯||

ಶತತ್ರಯಂ ಷಷ್ಟ್ಯಧಿಕಂ [4]ಪಂಚಾಶೀತಿ[4]ಶತಾನಿ ಚ
ಸಾರ್ಧಾಭಿಸ್ತಿಸೃಭಿಶ್ಛನ್ನಂ ಸಮಂತಾದ್ರೋಮಕೋಟಿಭಿಃ ||೬೦||

---

ಭೋಗತೃಷ್ಣಾತುರಂ = ಭೋಗಂಗಳ ಬಯಕೆಗಳಿಂದ ವ್ಯಗ್ರವಹಂಥಾದು ಮೂಢಂ = ಅಜ್ಞಾನಮಯವಹಂಥಾದು ರಾಗದ್ವೇಷವಶಾನುಗಂ = ಹಿರುಷ ವೈರಂಗಳ ವಶವರ್ತಿಯಾದಂಥಾದು ಸಂವರ್ತಿತಾಂಗಪ್ರತ್ಯಂಗಜರಾಯುಪರಿವೇಷ್ಟಿತಂ =ಅತ್ಯಂತ ವರ್ತಿಸುತ್ತಿರ್ದ ಅವಯುವ ಸೂಕ್ಷ್ಮಾವಯುವ ಮಾಸಿನಿಂದ ಮುಸುಕಲು ಪಟ್ಟಂಥಾದು. ||೫೭||

ಅವಿವಿಕ್ತೇನ = ವಿಭಾಗಿಸಬಾರದಂಥಾ ಸಂಕಟೇನ = ಸಂಕಟವಹಂಥಾ ಯೋನಿಮಾರ್ಗೇಣ = ಯೋನಿಮಾರ್ಗದಿಂದ ನಿರ್ಗತಂ = ಹೊಱಂಡಲು ಪಟ್ಟಂಥಾದು. ವಿಣ್ಮೂತ್ರರಕ್ತಸಿಕ್ತಾಂಗಂ = ಮಲಮೂತ್ರ ರಕ್ತಂಗಳಿಂದ ತೋಯಲುಪಟ್ಟ ಅವಯುವಂಗಳನುಳ್ಳಂಥಾದು ಷಟ್ಕೋಶಾಂಗಸಮುದ್ಭವಂ = *ಮಜ್ಜೆ, ಅಸ್ಥಿ, ಶುಕ್ಲ, ರಕ್ತ, ಮಾಂಸ, ತ್ವಕ್ ಎಂಬ* ಷಟ್ಕೋಶಾಂಗಂಗಳಿಂದ ಹುಟ್ಟಲುಪಟ್ಟಂಥಾದು. ||೫೮||

ಅಸ್ಮಿನ್ ಕಳೇವರೇ = ಈ ಶರೀರದಲ್ಲಿ ಅಸ್ಥಿಪಂಜರಸಂಘಾತಂ = ಎಲುವಿನ ಹಂಜರದ ಮೊತ್ತವೆಂದು ಜ್ಞೇಯಂ = ಅಱಿಯಲು ಯೋಗ್ಯವು.

ಷಷ್ಟ್ಯಧಿಕಂ=ಅಱುವತ್ತು ಅಧಿಕವಹಂಥಾ ಶತತ್ರಯಂ = ಮುನ್ನೂಱು ಪಂಚಾಶೀತಿಶತಾನಿ ಚ = ಎಂಟು ಸಾವಿರಪೈನೂಱು ಸಾರ್ಧಾಭಿಃ = ಅರೆ ಕೋಟಿ

---

[1] ಪ್ರತ್ಯಂಗಂ (ಘ) [2] ನ (ಘ) + ಅನ್ನಮಯ ಪ್ರಾಣಮಯ ಮನೋಮಯ ಆನಂದಮಯ ಭಾವಮೆಂಬ (ಚ) ದ ಟಿಪ್ಪಣಿ.

[3] ಅಸ್ಮಿನ್ ಜ್ಞೇಯಂ ಕಳೇವರಂ (ಘ) [4] ಪಂಚಪೇಶೀ (ಘ) ಪಂಚಾಶೀತಿಶತಾನಿ ಚ (ಘ) ಪಾಠಾಂತರ.

ಶರೀರಂ ಸ್ಥೂಲಸೂಕ್ಷ್ಮಾಭಿಃ ದೃಶ್ಯಾದೃಶ್ಯಾಶ್ಚ ತಾಃ ಸ್ಥಿತಾಃ
[1]ತಾವತೀಭಿಶ್ಚ ನಾಡೀನಾಂ ಕೋಟಿಭಿಸ್ತತ್ಸಮನ್ವಿತವ್ ||೬೧||

ಪ್ರಸ್ವೇದ[2]ಸ್ತ್ವಶುಚಿರ್ಯಾಭಿರಂತಃ[3]ಸ್ಥಃ[3] ಸ್ರವತೇ ಬಹಿಃ
ದ್ವಾತ್ರಿಂಶದ್ದಶನಾಃ ಪ್ರೋಕ್ತಾ ವಿಂಶತಿಸ್ತು ನಖಾಃ ಸ್ಮೃತಾಃ ||೬೨||

ಪಿತ್ತಸ್ಯ [4]ಕುಡುಬಂ[4]ಜ್ಞೇಯಂ ಕಫಸ್ಯಾರ್ಧಾಢಕಂ [5]ಭವೇತ್[5]
ವಸಾಯಾಶ್ಚ [6]ಪಲಾ[6]ವಿಂಶತ್ ತದರ್ಧಂ ಪಲಲಸ್ಯ ಚ ||೬೩||

ಯಿಂದ ಸಹಿತವಹಂಥಾ ತಿಸೃಭಿಃ ಕೋಟಿಭಿಃ = ಮೂಱು ಕೋಟಿಗಳಿಂದ ರೋಮ = ರೋಮವು ಸಮಂತಾತ್ = ಎಲ್ಲಾ ಕಡೆಯಲೂ ಛನ್ನಂ = ಮುಸುಕಲುಪಟ್ಟಿತ್ತು ಮೂಱುವರೆ ಕೋಟಿಯೂ ಎಂಟು ಸಾವಿರದ ಎಂಟನೂಱುಆಱುವತ್ತು ರೋಮಂಗಳು ಶರೀರದಲ್ಲಿ ಇಹವು. ||೬೦||

ತಾವತೀಭಿಃ = ಆ ರೋಮಂಗಳ ಲೆಕ್ಕದ ಪ್ರಮಾಣವನುಳ್ಳಂಥಾ ಸ್ಥೂಲ ಸೂಕ್ಷ್ಮಾಭಿಃ = ಸ್ಥೂಲಸೂಕ್ಷ್ಮಂಗಳಹಂಥಾ ನಾಡೀನಾಂ = ನಾಡಿಗಳ ಕೋಟಿಭಿಶ್ಚ = ಕೋಟಿಗಳಿಂದವು ಶರೀರಂ = ದೇಹವು ಸಮನ್ವಿತಂ = ಕೂಡಲುಪಟ್ಟಿತ್ತು. ತಾಃ = ಆ ನಾಡಿಗಳು ದೃಶ್ಯಾದೃಶ್ಯಾಶ್ಚ = ಕಾಣಬಹಂಥಾವಾಗಿ ಕಾಣಬಾರದ್ದಂಥಾ ವಾಗಿಯೂ [7]ಸ್ಥಿತಾಃ = ಇರುತ್ತಿಹವು.[7] ನಾಡಿಗಳು ಆ ರೋಮಂಗಳಷ್ಟು ಸಂಖ್ಯಾ ಪ್ರಮಾಣವಾಗಿಹವು. ||೬೧||

ಯಾಭಿಃ = ಆವವು ಕೆಲವು ನಾಡಿಗಳಿಂದ ಅಂತಸ್ಥಃ = ಒಳಗಿದ್ದಂಥಾ ಅಶುಚಿಃ = ಶುದ್ಧವಲ್ಲದೆ ಇದ್ದಂಥಾ ಪ್ರಸ್ವೇದಃ = ಬೆವರು ಬಹಿಃ = ಹೊಱಗೆ ಸ್ರವತೇ = ಸುರಿವುತ್ತಿಹುದು. ದಶನಾಃ = ಹಲ್ಲುಗಳು ದ್ವಾತ್ರಿಂಶತ್ = ಮೂವತ್ತೆರಡೆಂದು ತು = ವಿಶೇಷವಾಗಿ ಪ್ರೋಕ್ತಾಃ = ಹೇಳಲುಪಟ್ಟವು. ||೬೨||

ಪಿತ್ತಸ್ಯ = ಪಿತ್ತವ ಕುಡುಬಂ = ಒಂದು [8]ಪಡಿಯೊಂದು[8] ಜ್ಞೇಯಂ = ಅಱಿಯಲು ಯೋಗ್ಯವು ಕಫಸ್ಯ = ಶ್ಲೇಷ್ಮಕ್ಕೆ ಅರ್ಧಾಢಕಂ = ಅರೆಗೊಳಗವು ಭವೇತ್ = ಆಹುದು. ಮೂಱುಪಡಿ ಶ್ಲೇಷ್ಮವೆಂಬುದರ್ಥ. ವಸಾಯಾಃ = ಬಸೆಯ

---

1 ಏತಾವತೀಭಿರ್ನಾಡೀಭಿಃ (ಘ) 2 ಮಧುಭಿ (ಘ)
3 ಸ್ಥಂ (ಘ) 4 ಕುಡವಂ (ಘ) 5 ಸ್ಮೃತಂ (ಘ) 6 ಪಲಂ (ಘ)
7 ಲುಪ್ತ (ಕ) 8 ಮಾನವೆಂದು (ಕ) ಹಿಡಿಯೊಂದು (ಖ) ಪಡಿಯೊಂದು (ಚ)

[1]ಪಂಚಾರ್ಬುದ[7]ಪಲಾ ಜ್ಞೇಯಾ ಪಲಾನಿ ದಶ ಮೇದಸಃ
ಪಲತ್ರಯಂ ಮಹಾರಕ್ತಂ ಮಜ್ಜಾ [2]ಸ್ಯಾತ್ತಚ್ಚತುರ್ಗುಣಮ್[2] ||೬೪||

[3]ಶುಕ್ಲಾರ್ಧಕುಡುಬಂ[3]ಜ್ಞೇಯಂ [4]ತದ್ವೀರ್ಯಂ[4] ದೇಹಿನಾಂ ಬಲಮ್
[5]ಮಾಂಸಾದ್ಯಮೇಕಪಿಂಡಸ್ಯ[5] ಪಲಸಾಹಸ್ರಮುಚ್ಯತೇ ||೬೫||

ರಕ್ತಂ ಪಲಶತಂ ಜ್ಞೇಯಂ ವಿಣ್ಮೂತ್ರಂ ಚಾಪ್ರಮಾಣತಃ
ಇತಿ ದೇಹಗೃಹಂ [6]ಖ್ಯಾತಂ[6] ನಿತ್ಯಸ್ಯಾನಿತ್ಯಮಾತ್ಮನಃ ||೬೬||

---

[7]ಪಲಾ ಚ = ಹಲವು ವಿಂಶತ್ = ಇಪ್ಪತ್ತು ಪಲಲಸ್ಯ = ಮಾಂಸಕ್ಕೆ ತದರ್ಧಂ ಚ = ಆ ಬಸೆಯ ಇಪ್ಪತ್ತು ಹಲದ ಅರ್ಧವು.[7] ||೬೩||

ಅರ್ಬುದಪಲಾ = ಚರ್ಮದ (?) ಹಲವು ಪಂಚ = ಐದೆಂದು ಜ್ಞೇಯಾ-ಅಱಿಯಲು ಯೋಗ್ಯವು ಮೇದಸಃ = ಮೇದಸ್ಸಿನ ಪಲಾನಿ = ಹಲಂಗಳು ದಶ = ಹತ್ತು ಮಹಾರಕ್ತಂ = ಮಹಾರಕ್ತವು ಪಲತ್ರಯಂ = ಮೂಱು ಹಲವು ಮಜ್ಜಾ = ಮಜ್ಜೆ ತಚ್ಚತುರ್ಗುಣಂ = ಆದಱ ನಾಲ್ಕುಮಡಿ ಸ್ಯಾತ್ = ಅಹುದು. ||೬೪||

ಶುಕ್ಲಾರ್ಧಕುಡುಬಂ = ಇಂದ್ರಿಯವು ಅರೆ[8]ಪಡಿ[8]ಯೆಂದು ಜ್ಞೇಯಂ = ಅಱಿಯಲು ಯೋಗ್ಯವು. ತದ್ವೀರ್ಯಂ = ಆ ರೇತಸ್ಸು ದೇಹಿನಾಂ = ಪ್ರಾಣಿಗಳಿಗೆ ಬಲಂ = ಸತ್ವವು. ಏಕಪಿಂಡಸ್ಯ = ಒಂದು ಶರೀರಕ್ಕೆ ಮಾಂಸಾದ್ಯಂ = ಮಾಂಸ ಮೊದಲಾದಂಥಾದು ಪಲಸಾಹಸ್ರಂ = ಸಾವಿರ ಹಲವೆಂದು ಉಚ್ಯತೇ = ಹೇಳಲು-ಪಡುತ್ತಿಹುದು. ||೬೫||

ರಕ್ತಂ = ನೆತ್ತರು ಪಲಶತಂ = ನೂಱುಹಲವೆಂದು ಜ್ಞೇಯಂ = ಅಱಿಯಲು ಯೋಗ್ಯವು. ವಿಣ್ಮೂತ್ರಂ ಚ = ಮಲಮೂತ್ರವು ಅಪ್ರಮಾಣತಃ = ಲೆಕ್ಕದೊಳಗಲ್ಲ. ಇತಿ = ಈ ಪ್ರಕಾರದಲ್ಲಿ ನಿತ್ಯಸ್ಯ = ಕೇಡಿಲ್ಲದೆಯಿದ್ದಂಥಾ ಆತ್ಮನಃ = ಆತ್ಮಂಗೆ ಅನಿತ್ಯಂ = ಅನಿತ್ಯವಹಂಥಾ ದೇಹಗೃಹಂ = ಶರೀರವೆಂಬ ಮನೆ ಖ್ಯಾತಂ = ಹೇಳಲುಪಟ್ಟುತ್ತು. ||೬೬||

---

1 ಪಂಚಾರ್ಧಂತು (ಘ) 2 ಸ್ಯಾಚ್ಚ ಚತುರ್ಗುಣಾ (ಘ).
3 ಶುಕ್ರಾರ್ಧಂಕುಡವಂ (ಘ) 4 ತದ್ಬೀಜಂ (ಘ) 5 ಮಾಂಸಸ್ಯ ಚೈಕಪಿಂಡೇನ (ಘ)
6 ಹ್ಯೇತತ್ (ಘ) 7 ಲುಪ್ತ (ಕ) 8 ಹಿಡಿ (ಕ)

ಅವಿಶುದ್ಧಂ ವಿಶುದ್ಧಸ್ಯ [1]ಕರ್ಮಬಂಧವಿ[1]ನಿರ್ಮಿತಮ್
ಶುಕ್ಲಶೋಣಿತಸಂಯೋಗಾದ್ದೇಹಸ್ಸಂಜಾಯತೇ ಯತಃ ||೧೭||

ನಿತ್ಯಂ ವಿಣ್ಮೂತ್ರ[2]ಪೂರ್ಣಶ್ಚ[2] ತೇನಾಯಮಶುಚಿಃಸ್ಮೃತಃ ||೧೮||

ಯಥಾಂತರ್ವಿಷ್ಟಯಾ ಪೂರ್ಣಃ ಶುಚಿಸ್ಸ್ಯಾನ್ನ ಬಹಿರ್ಘಟಃ
[3]ಯತ್ನತಃ ಶೋಧ್ಯಮಾನೋಽಪಿ ದೇಹೋಽಯಮಶುಚಿಸ್ತಥಾ[3] ||

ಯಂ ಪ್ರಾಪ್ಯಾತಿಪವಿತ್ರಾಣಿ ಪಂಚಗವ್ಯಹವೀಂಷಿ ಚ
ಅಶುಚಿತ್ವಂ ಕ್ಷಣಾದ್ಯಾಂತಿ ಕಿಮನ್ಯದಶುಚಿಸ್ತತಃ ||೨೦||

---

ಯತಃ = ಆವುದಾನೊಂದು ಕಾರಣವಾಗಿ ವಿಶುದ್ಧಸ್ಯ = ಶುದ್ಧನಹಂಥಾ ಆತ್ಮಂಗೆ ಅವಿಶುದ್ಧಂ = ಶುದ್ಧವಲ್ಲದಂಥಾ ಕರ್ಮಬಂಧವಿನಿರ್ಮಿತಂ = ಕರ್ಮದ ಬಂಧನದಿಂದ ನಿರ್ಮಿಸಲುಪಟ್ಟಂಥಾ ದೇಹಃ = ದೇಹವು ಶುಕ್ಲಶೋಣಿತಸಂಯೋಗಾತ್ = ಶುಕ್ಲಶೋಣಿತ ಸಂಯೋಗದ ದೆಸೆಯಿಂದ ಸಂಜಾಯತೇ = ಹುಟ್ಟುತ್ತಿಹುದು.

ನಿತ್ಯಂ = ಆವಾಗವು ವಿಣ್ಮೂತ್ರಪೂರ್ಣಶ್ಚ = ಮಲಮೂತ್ರಂಗಳಿಂದ ತುಂಬಿಕೊಂಡಿಹುದು. ತೇನ = ಅದರಿಂದ ಅಯಂ = ಈ ಶರೀರವು ಅಶುಚಿಃ = ಶುದ್ಧವಲ್ಲವೆಂದು ಸ್ಮೃತಃ = ಹೇಳಲುಪಟ್ಟುತ್ತು. ||೧೮||

ಅಂತಃ = ಒಳಗೆ ವಿಷ್ಟಯಾ = ಮಲದಿಂದ ಪೂರ್ಣಃ = ತುಂಬಲುಪಟ್ಟಂಥಾ ಘಟಃ = ಮಡಕೆ ಯಥಾ = ಎಹಗೆ ಬಹಿಃ = ಹೊರಗು ಶುಚಿಃ = ಶುದ್ಧವು ನ ಸ್ಯಾತ್ = ಆಗದು ತಥಾ = ಹಾಂಗೆ ಅಯಂ ದೇಹಃ = ಈ ದೇಹವು ಯತ್ನತಃ = ಸ್ನಾನ ಮುಂತಾದ ಪ್ರಯತ್ನದಿಂದವು ಶೋಧ್ಯಮಾನೋಽಪಿ = ಶುದ್ಧವ ಮಾಡಲು ಪಟ್ಟುದಾಯಿತ್ತಾದರೂ ಅಶುಚಿಃ = ಅಶುಚಿಯಹಂಥಾದು. ||೧೯||

ಅತಿಪವಿತ್ರಾಣಿ = ಅತ್ಯಂತ ಪವಿತ್ರವಹಂಥಾ ಪಂಚಗವ್ಯಹವೀಂಷಿ ಚ = ಪಂಚಗವ್ಯವಹಂಥಾ ಹವಿಸ್ಸುಗಳು ಯಂ = ಆವುದಾನೊಂದು ಶರೀರವನು ಪ್ರಾಪ್ಯ = ಎಯ್ದಿ ಕ್ಷಣಾತ್ = ಆ ಕ್ಷಣದ ದೆಸೆಯಿಂದ ಅಶುಚಿತ್ವಂ = ಅಶುಚಿಯಹತನವನು ಯಾಂತಿ = ಎಯ್ದುತ್ತಿಹವು. ತತಃ = ಆ ಶರೀರದ ದೆಸೆಯಿಂದವು ಅನ್ಯತ್ = ಮತ್ತೊಂದು = ಅಶುಚಿಃ = [4]ಅಶುಚಿಯಹಂಥಾ[4]ದು [5]ಕಿಂ = ಏನುಂಟು ?[5] ||೨೦||

---

[1] ಕರ್ಮಬಂಧಾಧ್ವಿ (ಘ) [2] ಸಂಪೂರ್ಣಃ (ಘ)

[3] ಶೋಧ್ಯಮಾನೋಹಿ ದೇಹೋಽಯಂ ತೇನಾಯಮಶುಚಿಸ್ತತಃ (ಘ)

[4] ಶುದ್ಧವಲ್ಲದಂ (ಕ) [5] ಕಿಮಪಿ = ಮತ್ತೇನುಂಟು ? (ಕ).

[1]ಹೃದ್ಯಾನ್ಯಪ್ಯನ್ನಪಾನಾನಿ ಯಂ ಪ್ರಾಪ್ಯ ಸುರಭೀಣ್ಯಪಿ
ಅಶುಚಿತ್ವಂ ಪ್ರಯಾಂತ್ಯಾಶು ಕಿಮನ್ಯದಶುಚಿಸ್ತತಃ[1] ||೭೧||

ಹೇ ಜನಾಃ ಕಿಂ ನ[2]ಪಶ್ಯಧ್ವಂ[2] ಯನ್ನಿರ್ಯಾತಿ ದಿನೇ ದಿನೇ
ಸ್ವದೇಹಾತ್ಕಶ್ಮಲಂ ಪೂತಿ ತದಾಧಾರಃ ಕಥಂ ಶುಚಿಃ ||೭೨||

ದೇಹಃ ಸಂಶೋಧ್ಯಮಾನೋಽಪಿ ಪಂಚಗವ್ಯಕುಶಾಂಬುಭಿಃ
ಘೃಷ್ಯಮಾಣ ಇವಾಂಗಾರೋ ನಿರ್ಮಲತ್ವಂ ನ ಗಚ್ಛತಿ ||೭೩||

ಸ್ರೋತಾಂಸಿ ಯಸ್ಯ ಸತತಂ [3]ಪ್ರಸ್ರ[3]ವಂತಿ ಗಿರೇರಿವ
[4]ಕಫಮೂತ್ರಾದ್ಯಮಶುಚಿಃ[4] ಸ ದೇಹಃ ಶುದ್ಧ್ಯತೇ ಕಥಮ್ ||೭೪||

---

[1]ಹೃದ್ಯಾನಿ = ಮನೋಹರವಹಂಥಾ ಸುರಭೀಣಿ = ಸುವಾಸನೆಯುಳ್ಳಂಥಾ ಅನ್ನಪಾನಾನಿ = ಅನ್ನೋದಕಂಗಳು ಯಂ = ಆವುದಾನೊಂದು ದೇಹವನು ಪ್ರಾಪ್ಯಾಪಿ = ಎಯ್ದಿ ಆಶು = ಬೇಗ ಅಶುಚಿತ್ವಂ = ಅಶುಚಿಯಹತನವನು ಪ್ರಯಾಂತಿ = ಎಯ್ದುತ್ತಿಹವು. ತತಃ = ಆ ಶರೀರದ ದೆಸೆಯಿಂದವೂ ಅನ್ಯತ್ = ಮತ್ತೊಂದು ಅಶುಚಿಃ = ಶುದ್ಧವಲ್ಲದಂಥಾದು ಕಿಮಪಿ = ಮತ್ತೇನುಂಟು ?[1] ||೭೧||

ಹೇ ಜನಾಃ = ಎಲೆ ಮನುಷ್ಯರುಗಳಿರಾ ಸ್ವದೇಹಾತ್ = ನಿಂಮ ಶರೀರದ ದೆಸೆಯಿಂದ ದಿನೇ ದಿನೇ = ದಿನದಿನದಲ್ಲಿ ಪೂತಿ = ನಾರುತ್ತಿದ್ದಂಥಾ ಯತ್ = ಆವುದಾನೊಂದು ಕಶ್ಮಲಂ = ಮಲವು ನಿರ್ಯಾತಿ = ಹೊಱವಂಡುತ್ತಿದ್ದೂದು ಕಿಂ = ಏನುಕಾರಣ ನ ಪಶ್ಯಧ್ವಂ = ನೋಡಿರಿ(?) [ನೋಡರಿ ?] ತದಾಧಾರಃ = ಆ ಮಲಕ್ಕೆ ಆಧಾರವಹಂಥಾ ದೇಹವು ಕಥಂ = ಹೇಂಗೆ ಶುಚಿಃ = ಶುದ್ಧವಹುದು. ಶುದ್ಧವಾಗದೆಂಬುದರ್ಥ. ||೭೨||

ಪಂಚಗವ್ಯಕುಶಾಂಬುಭಿಃ = ಗೋಮೂತ್ರ ಗೋಮಯ ಗೋಕ್ಷೀರ ಗೋವಿನ ದಧಿ ಗೋವಿನ ಘೃತವೆಂಬ ಪಂಚಗವ್ಯ ಕುಶಮಿಶ್ರವಾದ ಉದಕಂಗಳಿಂದ ದೇಹಃ = ಶರೀರವು ಸಂಶೋಧ್ಯಮಾನೋಽಪಿ = ಶುದ್ಧವಾಗಿ ಮಾಡಲು ಪಟ್ಟುದಾಯಿತ್ತಾದರೂ ನಿರ್ಮಲತ್ವಂ = ನಿರ್ಮಲವಹತನವನು ನ ಗಚ್ಛತಿ = ಎಯ್ದುತ್ತಿರದು. ಕಥಮಿವ = ಅದು ಹೇಂಗೆಂದಡೆ ಘೃಷ್ಯಮಾಣಃ = ಅರೆಯಲುಪಟ್ಟಂಥಾ ಅಂಗಾರ ಇವ = [ಆರಿದ] ಕೆಂಡವೀಗ ಹೇಂಗೆ ಹಂಗೆ. ||೭೩||

ಯಸ್ಯ ಗಿರೇಃ = ಆವುದಾನೊಂದು ಪರ್ವತಕ್ಕೆ ಸತತಂ = ಆವಾಗವು

---

[1] (ಕ) ಇಲ್ಲ. [2] ಪಶ್ಯಂತಿ (ಘ) [3] ಪ್ರಭ (ಘ) [4] ಕಫಮೂತ್ರಪುರೀಷಾದ್ಯೈಃ (ಕ)

ಸರ್ವಾಶುಚಿನಿಧಾನಸ್ಯ ಶರೀರಸ್ಯ ನ ವಿದ್ಯತೇ
ಶುಚಿರೇಕಪ್ರದೇಶೋಽಪಿ ವಿಣ್ಮೂತ್ರಸ್ಯ ದೃತೇರಿವ ||೭೫||

ಸ್ಪೃಷ್ಟ್ವಾ [1]ಸ್ವ[1]ದೇಹ ಸ್ರೋತಾಂಸಿ ಮೃತ್ತೋಯೈಃ [2]ಶೋ[2]ಧ್ಯತೇ ಕರಃ
ತಥಾಪ್ಯಶುಚಿಭಾಂಡಸ್ಯ ನ [3]ವಿರಜ್ಯಥ[3] ಕಿಂ ಜನಾಃ ||೭೬||

ಕಾಯಸ್ಸ್ರಗ್ಗಂಧಧೂಪಾದ್ಯೈಃ ಯತ್ನೇನಾಪಿ ಸುಸಂಸ್ಕೃತಃ
ನ ಜಹಾತಿ ಸ್ವಕಂ ಭಾವಂ ಶ್ವಪುಚ್ಛಮಿವ ನಾಮಿತಮ್ ||೭೭||

---

ಸ್ರೋತಾಂಸಿ = ಪ್ರವಾಹಂಗಳು ಪ್ರಸ್ರವಂತೀವ = ಒಸರುತ್ತಿದ್ದಾವೆಹಗಹಗೆ ಅಶುಚಿಃ = ಅಶುಚಿಯಹಂಥಾ ಸಃ ದೇಹಃ = ಆ ದೇಹವು ಕಫಮೂತ್ರಾದ್ಯಂ= ಶ್ಲೇಷ್ಮ ಮೂತ್ರ ಮೊದಲಾಗಿದ್ದಂಥಾ ಅವಗಳುಳ್ಳದು ಕಥಂ ಶುಧ್ಯತೇ= ಹೇಂಗೆ ಶುದ್ಧವಹುದು ? ||೭೪||

ಸರ್ವಾಶುಚಿನಿಧಾನಸ್ಯ = ಸಮಸ್ತವಹ ಅಶುಚಿತ್ವಕ್ಕೆ ಸ್ಥಾನವಹಂಥಾ ಶರೀರಸ್ಯ = ಶರೀರಕ್ಕೆ ಏಕಪ್ರದೇಶೋಽಪಿ = ಒಂದು ಠಾವಾಯಿತ್ತಾದರೂ ಶುಚಿಃ =ಶುದ್ಧವು ನ ವಿದ್ಯತೇ = ಇಲ್ಲ. ಕಥಮಿವ= ಅದು ಹೇಂಗೆಂದಡೆ ದೃತೇಃ = ಸುತ್ತುವುತಂವಿದ್ದಂಥಾ ವಿಣ್ಮೂತ್ರಸ್ಯೇವ = ಮಲಮೂತ್ರಕ್ಕೀಗ[4]ವೆಹಗಹಗೆ[4] ||೭೫||

ಸ್ವದೇಹಸ್ರೋತಾಂಸಿ = ತಮ್ಮ ಶರೀರದಿಂದ ಸ್ರವಿಸುತ್ತಿದ್ದಂಥಾ ಮಲ ಮೂತ್ರಂಗಳನು ಸ್ಪೃಷ್ಟ್ವಾ= ಮುಟ್ಟಿ ಕರಃ = ಹಸ್ತವು ಮೃತ್ತೋಯೈಃ = ಮೃತ್ತಿಕೆ ಜಲಂಗಳಿಂದ ಶೋಧ್ಯತೇ = ಶುದ್ಧವಾಗುತ್ತಿಹುದು. ತಥಾಪಿ = ಹಾಂಗೆ ಅಶುಚಿಭಾಂಡಸ್ಯ=[5]ಅಶುದ್ಧದ[5] ಭಾಂಡವಹಂಥಾ ಶರೀರಕ್ಕೆ ಹೇ ಜನಾಃ = ಎಲೆ ಜನರುಗಳಿರಾ ಕಿಂ = ಏನು ಕಾರಣ ನ ವಿರಜ್ಯಥ = ವಿರಕ್ತಿಯ ಮಾಡಿರಿ ? [ಮಾಡರಿ ? ಮಾಡದಿರುವಿರಿ ?] ||೭೬||

ಕಾಯಃ = ಶರೀರವು ಸ್ರಗ್ಗಂಧಧೂಪಾದ್ಯೈಃ = ಪುಷ್ಪಮಾಲೆ ಗಂಧಧೂಪ ಮೊದಲಾದಂಥಾ ಅವಱಿಂದ ಯತ್ನೇನ = ಪ್ರಯತ್ನದಿಂದ ಸುಸಂಸ್ಕೃತೋಽಪಿ= ಲೇಸಾಗಿ ಅಲಂಕರಿಸಲುಪಟ್ಟದಾಯಿತ್ತಾದರೂ ಸ್ವಕಂ = ತನ್ನ ಸಂಬಂಧವಹಂಥಾ ಭಾವಂ = ಸ್ವಭಾವವನು ನ ಜಹಾತಿ = ಬಿಡದು. ಕಥಮಿವ = ಅದು ಹೇಂಗೆಯೂ ಎಂದರೆ ನಾಮಿತಂ= ಬಾಗಿದಂಥಾ ಶ್ವಪುಚ್ಛಮಿವ= ನಾಯಿಬಾಲವನೀಗ ಹೇಗೆ ಹಾಗೆ. ಎಹಗೆ ತಿದ್ದಿದರೂ ನಾಯಬಾಲದ ಡೊಂಕು ಬಿಡದು. ಆ ಮರ್ಯಾದೆಯಲಿ ಈ ದೇಹವು ತಂನ ಗುಣವ ಬಿಡದೆಂಬುದರ್ಥ. ||೭೭||

---

1 ತ್ರ (ಘ). 2 ಶು (ಘ). 3 ವಿರಜ್ಯಂತಿ (ಘ) 4 ಹೇಗೆ ಹಾಗೆ (ಕ). 5 ಅಶುಚಿ (ಚ)

9*

*ಯಥಾ ಜಾತ್ಯೈವ ಕೃಷ್ಣೋರ್ಣಾ ನ ಶುಕ್ಲಾ ಸ್ಯಾದುಪಾಯತಃ
ಸಂಶೋಧ್ಯಮಾನಾಪಿ ತಥಾ ಭವೇನ್ಮೂರ್ತಿರ್ನ ನಿರ್ಮಲಾ ||೭೮||

ಜಿಘ್ರನ್ನಪಿ ಸುದುರ್ಗಂಧಂ ಪಶ್ಯನ್ನಪಿ [1]ಮಲಂ ಸ್ವಕಮ್[1]
ನ ವಿರ[2]ಜ್ಯತಿ ಲೋಕೋ,ಯಂ ಪೀಡಯನ್ನಪಿ ನಾಸಿಕಾಮ್ ||೭೯||

ಅಹೋ ಮೋಹಸ್ಯ ಮಾಹಾತ್ಮ್ಯಂ ಯೇನ ವ್ಯಾಮೋಹಿತಂ ಜಗತ್
ಜಿಘ್ರನ್ ಪಶ್ಯನ್ ಸ್ವಕಂ ದೋಷಂ ಕಾಯಸ್ಯ ನ ವಿರಜ್ಯತಿ ||೮೦||

ಸ್ವದೇ[3]ಹಾಶುಚಿಗಂಧೇನ ನ ವಿರಜ್ಯತಿ ಯೋ ನರಃ[3]
ವಿರಾಗಕಾರಣಂ ತಸ್ಯ ಕಿಮನ್ಯದುಪದಿಶ್ಯತೇ ||೮೧||

---

ಜಾತ್ಯಾಕೃಷ್ಣೋರ್ಣಾ = ಜಾತಿ ತಡಿಯ = [ಕರಿ] ಕಂಬಳಿ ಉಪಾಯತ ಏವ = ನಾನಾ ಉಪಾಯದಿಂದವೆ ಯಥಾ = ಎಹಗೆ ಶುಕ್ಲಾ = ಬಿಳಿದು ನ ಸ್ಯಾತ್ = ಆಗದು ತಥಾ = ಹಾಂಗೆ ಮೂರ್ತಿಃ = ಶರೀರವು ಸಂಶೋಧ್ಯಮಾನಾಽಪಿ = ಸ್ನಾನಾದಿಗಳಿಂದ ಶುದ್ಧವ ಮಾಡಲುಪಟ್ಟುದಾಯಿತ್ತಾದರೂ ನಿರ್ಮಲಾ = ನಿರ್ಮಲವು ನ ಭವೇತ್ = ಆಗದು. ||೭೮||

ಅಯಂಲೋಕಃ = ಈ ಜನವು ಸುದುರ್ಗಂಧಂ = ಅತ್ಯಂತ ದುರ್ಗಂಧವಹಂಥಾ ಸ್ವಕಂ = ತ[4]ಮ್ಮ ಸಂಬಂಧವಹಂಥಾ ಮಲಂ = ಮಲವನು ಜಿಘ್ರನ್ನಪಿ = ಆಘ್ರಾಣಿಸುತ್ತಿದ್ದೂ ಪಶ್ಯನ್ನಪಿ = ನೋಡುತ್ತಿದ್ದೂ ನಾಸಿಕಾಂ = ಮೂಗನು ಪೀಡಯನ್ನಪಿ = ಮುಚ್ಚಿಕೊಳುತ್ತಿದ್ದೂ ನ ವಿರಜ್ಯತಿ = ವಿರಕ್ತಿಯಾಗುತ್ತಿರದು.

ಜಗತ್ = ಲೋಕವು ಯೇನ = ಆವುದಾನೊಂದು ಶರೀರದಿಂದ ವ್ಯಾಮೋಹಿತಂ = ಮೋಹಿಸಲುಪಟ್ಟುತ್ತು. ಮೋಹಸ್ಯ = ಅಜ್ಞಾನದ ಮಾಹಾತ್ಮ್ಯಂ = ಮಹಿಮೆ ಅಹೋ = ಆಶ್ಚರ್ಯವು. ಸ್ವಕಂ = ತಮ್ಮ ಸಂಬಂಧವಹಂಥಾ ದೋಷಂ = ದೋಷವಹಂಥಾ ಮಲವನು ಜಿಘ್ರನ್ = ಆಘ್ರಾಣಿಸುತ್ತವು ಪಶ್ಯನ್ = ನೋಡುತ್ತವು ಕಾಯಸ್ಯ = ದೇಹಕ್ಕೆ ನ ವಿರಜ್ಯತಿ = ವಿರಕ್ತಿಯ ಮಾಡುತ್ತಿರದು ||೮೦||

ಯಃ = ಆವನಾನೊಬ್ಬ ನರಃ = ಮನುಷ್ಯನು ಸ್ವದೇಹಾಶುಚಿಗಂಧೇನ = ತನ್ನ ದೇಹದ ಅಶುದ್ಧದ ವಾಸನೆಯಿಂದ ನ ವಿರಜ್ಯತಿ = ವಿರಕ್ತನಾಗುತ್ತಿರನು ತಸ್ಯ

---

* ಈ ಶ್ಲೋಕ ಮತ್ತು ವ್ಯಾಖ್ಯಾನ (ಖ ಮತ್ತು ಚ) ಪ್ರತಿಗಳಲ್ಲಿಲ್ಲ.

1 ಸ್ವಕಂ ಮಲಂ (ಘ) 2 ಜ್ಯೇತ (ಘ)

3 ಹೇ ಚ ವಿಗಂಧೇನ ವಿರಜ್ಯೇತ ನ ಯೋ ನರಃ (ಘ) 4 ನ್ನ (ಕ)

ಸರ್ವಮೇ[1]ತತ್ ಜಗತ್ಪೂತಂ[1] ದೇಹ ಏವಾಶುಚಿಃ ಪರಃ[2]
[3]ತಸ್ಮಾದವಯವಸ್ಪೃಷ್ಟಃ[3] ಶುಚಿರಪ್ಯಶುಚಿರ್ಭವೇತ್ ||೮೨||

ಗಂಧಲೇಪಾಪ[4]ನುತ್ತ್ಯರ್ಥಂ[4] ಶೌಚಂ ದೇಹಸ್ಯ [5]ಕೀರ್ತಿತಮ್[5]
ದ್ವಯಸ್ಯಾಪಗಮಾತ್ಪಶ್ಚಾತ್ ಭಾವದುಷ್ಟೋ ನ ಶುದ್ಧ್ಯತಿ[6] ||೮೩||

ಗಂಗಾತೋಯೇನ ಸರ್ವೇಣ ಮೃದ್ಭಾ[7]ರೈಶ್ಚ ನಗೋಪಮೈಃ[7]
ಆಮೃತ್ಯೋರಾಚರೇಚ್ಛೌಚಂ ಭಾವದುಷ್ಟೋ ನ ಶುದ್ಧ್ಯತಿ ||೮೪||

---

= ಆಶರೀರಕ್ಕೆ [ಆತನಿಗೆ] ವಿರಾಗಕಾರಣಂ = ವೈರಾಗ್ಯಕ್ಕೆ ಕಾರಣವಹಂಥಾ ಅನ್ಯತ್ = ಮತ್ತೊಂದು ಕಿಂ = ಏನು ಉಪದಿಶ್ಯತೇ = ಹೇಳಲುಪಡುತ್ತಿಹುದು ?

ಏತತ್ = ಈ ಸರ್ವಂ ಜಗತ್ = ಸಮಸ್ತ ಲೋಕವು ಪೂತಂ = ಪವಿತ್ರವಹಂಥಾದು. ದೇಹೆ ಏವ = ದೇಹವೇ ಪರಃ = ಅತ್ಯಂತ ಅಶುಚಿಃ = ಶುದ್ಧವಲ್ಲದ್ದು. ತಸ್ಮಾತ್ = ಅದು ಕಾರಣವಾಗಿ ಶುಚಿರಪಿ = ಶುದ್ಧವಹ ವಸ್ತು ಆವುದಾದರೂ ಅವಯವಸ್ಪೃಷ್ಟಃ = ಅವಯವಂಗಳ ಸೋಂಕುತವು ಅಶುಚಿಃ = ಶುದ್ಧವಲ್ಲದಂಥಾದು ಭವೇತ್ = ಅಹುದು ||೮೨||

ದೇಹಸ್ಯ = ದೇಹದ ಗಂಧಲೇಪಾಪನುತ್ತ್ಯರ್ಥಂ = [8]ದುರ್ಗಂಧಲೇಪನನ ನಿವಾರಿಸಲೋಸ್ಕರ ಶೌಚಂ = ಶೌಚವು[8] ಕೀರ್ತಿತಂ = ಹೇಳಲುಪಟ್ಟಿತ್ತು. ದ್ವಯಸ್ಯ = ದೇಹದ ದುರ್ವಾಸನೆ ಮಲದ ದುರ್ವಾಸನೆ ಈ ಎರಡಱ ಅಪಗಮಾತ್ = ಹೋಕಿನ ದೆಸೆಯಿಂದ ಪಶ್ಚಾತ್ = ಬಳಿಕವು ಭಾವದುಷ್ಟಃ = ಚಿತ್ತದಲ್ಲಿ ಹುಳುಕುಳ್ಳವನು ನ ಶುದ್ಧ್ಯತಿ = ಶುದ್ಧನಾಗುತ್ತಿರನು. ||೮೩.||

ಸರ್ವೇಣ = ಸಮಸ್ತವಹಂಥಾ ಗಂಗಾತೋಯೇನ = ಗಂಗೆಯ ಉದಕದಿಂದ ನಗೋಪಮೈಃ = [9]ಪರ್ವತಕ್ಕೆ ಸಮಾನವಹಂಥಾ ಮೃದ್ಭಾರೈಶ್ಚ = ಮೃತ್ತಿಕೆಯ ರಾಸಿಗಳಿಂದವೂ ಆಮೃತ್ಯೋಃ[9] = ಸಾವಲ್ಲಿಪರಿಯಂತವು ಶೌಚಂ ಚ = ತೊಳಹವನು ಆಚರೇತ್ = ಮಾಡುವನು. ಭಾವದುಷ್ಟಃ = ಚಿತ್ತದಲಿ ದುಷ್ಟನಹಂಥಾ ಆತನು ನ ಶುದ್ಧ್ಯತಿ = ಶುದ್ಧನಾಗುತ್ತಿರನು ||೮೪||

---

1 ವ ಜಗನ್ಮೇಧ್ಯಂ (ಘ)
2 ಚಿರ್ಭವೇತ್ (ಘ) 3 ತನ್ಮಲಾವಯವಸ್ಪರ್ಶಾತ್ (ಘ)
4 ನೋದಾರ್ಥಂ (ಘ) 5 ಕೀರ್ತನಂ (ಘ) 6 ಚ್ಛುದ್ಧಿಃ ಶುದ್ಧಸ್ಪರ್ಶಾದ್ವಿಶುದ್ಧ್ಯತಿ (ಘ)
7 ರೈಃ ಪರ್ವತೋಪಮೈಃ (ಘ) 8 ಲುಪ್ತ (ಕ) 9 ಲುಪ್ತ (ಕ)

ತೀರ್ಥಸ್ನಾನೈಸ್ತಪೋಭಿರ್ವಾ ದುಷ್ಟಾತ್ಮಾ ನೈವ ಶುದ್ಧ್ಯತಿ
[1]ಶ್ವದೃತಿಃ[1] ಕ್ಷಾಲಿತಾ ತೀ[2]ರ್ಥೈಃ[2] ಕಿಂ ಶುದ್ಧಿಮಧಿಗಚ್ಛತಿ ||೮೫||

ಅಂತರ್ಭಾವಪ್ರದುಷ್ಟಸ್ಯ ವಿಶತೋಽಪಿ ಹುತಾಶನಮ್
ನ ಸ್ವರ್ಗೋ ನಾಪವರ್ಗಶ್ಚ ದೇಹನಿರ್ದಹನಂ [3]ಫಲಮ್[3] ||೮೬||

ಭಾವಶು[4]ದ್ಧಿಃ[4] ಪರಂ ಶೌಚಂ ಪ್ರ[5]ಧಾನಂ[5] ಸರ್ವಕರ್ಮಸು ||೮೭||

ಅನ್ಯಥಾಽಽಲಿಂಗ್ಯತೇ ಕಾಂತಾ ಭಾವೇನ ದುಹಿತಾಽನ್ಯಥಾ
ಮನ[6]ಸೋ[6] ಭಿದ್ಯತೇ ವೃತ್ತಿರಭಿನ್ನೇ[7]ಷ್ವೇ[7]ವ ವಸ್ತುಷು ||೮೮||

---

ದುಷ್ಟಾತ್ಮಾ = ದುಷ್ಟಚಿತ್ತವನುಳ್ಳಾತನು ತೀರ್ಥಸ್ನಾನೈಃ = ತೀರ್ಥಸ್ನಾನಂಗಳಿಂದ ತಪೋಭಿರ್ವಾ = ತಪಸ್ಸುಗಳಿಂದವು ನೈವ ಶುದ್ಧ್ಯತಿ = ಶುದ್ಧನಾಗುತ್ತಂವಿರನು. ಶ್ವದೃತಿಃ = ನಾಯ ಶರೀರವು [ನಾಯ ಚರ್ಮದ ಚೀಲವು] ತೀರ್ಥೈಃ = ತೀರ್ಥಂಗಳಿಂದ ಕ್ಷಾಲಿತಾ = ತೊಳೆಯಲು ಪಟ್ಟಂಥಾದಾಗುತ್ತವು ಶುದ್ಧಿಂ = ಶುದ್ಧವನು ಅಧಿಗಚ್ಛತಿ ಕಿಂ = ಎಯಿದೂವೇ ಏನು ? ಶುದ್ಧವಾಗದೆಂಬುದರ್ಥ. ||೮೫||

ಹುತಾಶನಂ = ಅಜ್ಞಿಪುರುಷನನು ವಿಶತಃ = ಪ್ರವೇಶಿಸುತ್ತಿದ್ದಂಥಾ ಅಂತರ್ಭಾವಪ್ರದುಷ್ಟಸ್ಯ = ಒಳಗೆ ಭಾವಶುದ್ಧಿಯಿಲ್ಲದಾತಂಗೆ ಸ್ವರ್ಗೋ ನ = ಸ್ವರ್ಗವಿಲ್ಲ. ಅಪವರ್ಗಶ್ಚ ನ = ಮೋಕ್ಷವೂ ಇಲ್ಲ. ಅಪಿ = ಮತ್ತೇನೆಂದರೆ ದೇಹನಿರ್ದಹನಂ = ಶರೀರದಹನವಾದುದೇ ಫಲಂ = ಫಲವು.

ಪ್ರಯಾಗಕ್ಷೇತ್ರದಲ್ಲಿ ಸ್ವರ್ಗಮೋಕ್ಷಾಪೇಕ್ಷೆಯಿಂದ ಮನುಷ್ಯರುಗಳು ಅಗ್ನಿಪ್ರವೇಶವ ಮಾಡುತ್ತಿಹರು. ಚಿತ್ತಶುದ್ಧನಿಳ್ಳಾತನು ಫಲಿಪನೈದುವನು. ಚಿತ್ತಶುದ್ಧವಿಲ್ಲದಾತಂಗೆ ಶರೀರವೇ ಬೇವುದಲ್ಲದೆ ಫಲವಿಲ್ಲವೆಂಬುದರ್ಥ. ||೮೬||

ಭಾವಶುದ್ಧಿಃ = ಚಿತ್ತಶುದ್ಧಿ ಸರ್ವಕರ್ಮಸು = ಸರ್ವಕರ್ಮಂಗಳಲ್ಲಿ ಪ್ರಧಾನಂ ಮುಖ್ಯವಹಂಥಾ ಪರಂ = ಉತ್ಕೃಷ್ಟವಹಂಥಾ ಶೌಚಂ = ಶೌಚವೆನಿಪೂದು. [ಅದಕ್ಕೆ ದೃಷ್ಟಾಂತವನು ಹೇಳುತ್ತಿದ್ದಾನು.] ||೮೭||

ಅನ್ಯಥಾ = ಒಬ್ಬಾನೊಬ್ಬನಿಂದ ಕಾಂತಾ = ಸ್ತ್ರೀ ಭಾವೇನ = ಇಚ್ಛೆಯಿಂದ ಆಲಿಂಗ್ಯತೇ = ತಕ್ಕೈಸಿಕೊಳಲುಪಡುತ್ತಿಹಳು. ದುಹಿತಾ = ಮಗಳು ಅನ್ಯಥಾ

---

1 ಶ್ವಧೃತಿಃ (ಖ. ಚ) 2 ರ್ಥೇ (ಘ) 3 ಪರಂ (ಘ) 4 ದ್ಧಂ (ಘ)
5 ಮಾಣಂ (ಘ) 6 ಸಾ (ಕ) ಮೂಲ 7 ಷ್ವಪಿ (ಘ) 8 ಪಡೆಯು (ಖ. ಚ).

ಅನ್ಯಥೈವ ಸ್ತನಂ ಪುತ್ರಃ ಸ್ಪೃಶತೇ ಪತಿರನ್ಯಥಾ
[1]ಪಶ್ಯ ಪಶ್ಯ ಚ ಭಾವಸ್ಯ ತನ್ಮಾಹಾತ್ಮ್ಯ[1]ಮಶೇಷತಃ ||೮೯||

ಪರಿಷ್ವ[2]ಕ್ತಃ ಪ್ರಿಯೋ ನಾರ್ಯಾ ಭಾವಹೀನೋ ನ ಕಾಮಯೇತ್[2]
ನಾದ್ಯಾದ್ವಿವಿಧಮನ್ನಾದ್ಯಂ [3]ಭಕ್ಷ್ಯಾಣಿ[3]ಸುರಭೀಣಿ ಚ
ಅಭಾವೇನ ನರಸ್ತಸ್ಮಾದ್ಭಾವಃ ಸರ್ವತ್ರ ಕಾರಣಮ್ ||೯೦||

ಚಿತ್ತಂ ಶೋಧಯ ಯತ್ನೇನ ಕಿಮನ್ಯೈರ್ಬಾಹ್ಯಶೋಧನೈಃ
ಭಾವತಃ ಸುವಿಶುದ್ಧಾತ್ಮಾ ಸ್ವರ್ಗಂ ಮೋಕ್ಷಂ ಚ ವಿಂದತಿ ||೯೧||

---

ಭಾವೇನ = ಮತ್ತೊಂದು ಭಾವದಿಂದ ಆಲಿಂಗ್ಯತೇ = ತಕ್ಕೈಸಿಕೊಳಲುಪಡುತ್ತಿಹಳು. ಅಭಿನ್ನೇಷು = ಭಿನ್ನವಿಲ್ಲದೇ ಇದ್ದಂಥಾ ವಸ್ತುಷು = ವಸ್ತುಗಳಲ್ಲಿ ಮನಸಃ = ಮನಸ್ಸಿನ ವೃತ್ತಿರೇವ = ವರ್ತನೆಯೋ ಭಿದ್ಯತೇ = ಬೇಱಾಗುತ್ತಿಹುದು. ||೮೮||

ಪುತ್ರಃ = ಹಸುಮಗನು ಸ್ತನಂ = ತಾಯ ಮೊಲೆಯನು ಅನ್ಯಥೈವ = ಮತ್ತೊಂದು ಭಾವದಿಂದಲೇ ಸ್ಪೃಶತೇ = ಮುಟ್ಟುತ್ತಿಹನು. ಪತಿಃ = ಗಂಡನು ಅನ್ಯಥಾ ಮತ್ತೊಂದು ಭಾವದಿಂದ ಸ್ಪೃಶತೇ = ಮುಟ್ಟುತ್ತಿಹನು. ಭಾವಸ್ಯ = ಚಿತ್ತದ ತನ್ಮಾಹಾತ್ಮ್ಯಂ ಚ = ಆ ಮ ಹಿ ಮೆ ಯ ನು ಅಶೇಷತಃ = ವಿಶೇಷದ ದೆಸೆಯಿಂದ ಪಶ್ಯ ಪಶ್ಯ = ನೋಡು ನೋಡು. ||೮೯||

ನಾರ್ಯಾ = ಸ್ತ್ರೀಯಿಂದ ಪರಿಷ್ವಕ್ತಃ = ಆಲಿಂಗಿಸಲುಪಟ್ಟಂಥಾ ಪ್ರಿಯಃ = ಪುರುಷನು ಭಾವಹೀನಃ = ಇಚ್ಛೆಯಿಲ್ಲದಾತನಾಗುತ್ತವು ನ ಕಾಮಯೇತ್ = ಕಾಮಿಸನು. ವಿವಿಧಂ ನಾನಾ ಪ್ರಕಾರವಹಂಥಾ ಅನ್ನಾದ್ಯಂ = ಅನ್ನ ಮೊದಲಾದಂಥಾದನು ಸುರಭೀಣಿ = ಪರಿಮಳಿಸುತಿದ್ದಂಥಾ ಭಕ್ಷ್ಯಾಣಿ ಚ = ಭಕ್ಷ್ಯಂಗಳನು ನರಃ = ಮನುಷ್ಯನು ಅಭಾವೇನ = ಇಚ್ಛೆಯಿಲ್ಲದಿಹದಱಿಂದ ನಾದ್ಯಾತ್ = ಭುಂಜಿಸುತ್ತಿರನು. ಅದ + ಭಕ್ಷಣೇ ಎಂಬ ಧಾತು. ತಸ್ಮಾತ್ = ಅದುಕಾರಣ ಭಾವಃ = ಭಾವವು ಸರ್ವತ್ರ = ಎಲ್ಲಕ್ಕೆಯು ಕಾರಣಂ = ಕಾರಣವು. ||೯೦||

ಯತ್ನೇನ = ಪ್ರಯತ್ನದಿಂದ ಚಿತ್ತಂ = ಚಿತ್ತವನು ಶೋಧಯ = ಶುದ್ಧವ ಮಾಡು. ಅನ್ಯೈಃ = ಮತ್ತೆ ಕೆಲವಹಂಥಾ ಬಾಹ್ಯಶೋಧನೈಃ = ಬಾಹ್ಯಶೌಚಂಗಳಿಂದ ಕಿಂ = ಏನು ಪ್ರಯೋಜನವು? ಭಾವತಃ = ಚಿತ್ತದಿಂದ ಸುವಿಶುದ್ಧಾತ್ಮಾ = ಅತ್ಯಂತ

---

1 ಪಶ್ಯಧ್ವಮಸ್ಯ ಭಾವಸ್ಯ ಮಹಾಭಾಗ್ಯ (ಘ)
2 ಕ್ತೋಽಪಿ ಯನ್ನಾರ್ಯಾ ಭಾವಹೀನಾ (ಘ) 3 ಭಕ್ಷಾಣಿ (ಖ.ಗ).

ಜ್ಞಾನಾಮಲಾಂಭಸಾ[1] ಪುಂಸಾಂ ಸದ್ವೈರಾಗ್ಯಮೃದಾ [2]ಭವೇತ್[2]
ಅವಿದ್ಯಾರಾಗವಿಣ್ಮೂತ್ರಲೇಪಗಂಧವಿಶೋಧನಮ್ ||೯೨||

ಏವಮೇತಚ್ಛರೀರಂ ಹಿ ನಿಸರ್ಗಾದಶುಚಿ ಸ್ಮೃತಮ್
ತ್ವಙ್ಮಾತ್ರಸಾರಂ ನಿಸ್ಸಾರಂ ಕದಳೀಸಾರಸನ್ನಿಭಮ್ ||೯೩||

ಜ್ಞಾತ್ವೈವ [3]ದೋಷವದ್ದೇಹಂ ಯಃ ಪ್ರಾಜ್ಞಃ ಶಿಥಿಲೀ ಭವೇತ್[3]
ಸೋಽತಿಕ್ರಾಮತಿ ಸಂಸಾರಂ ದೃಢಗ್ರಾಹೀಹ ತಿಷ್ಠತಿ ||೯೪||

---

ಶುದ್ಧಾತ್ಮನು ಸ್ವರ್ಗಂ = ಸ್ವರ್ಗವನು ಮೋಕ್ಷಂ ಚ = ಮೋಕ್ಷವನು ವಿಂದತಿ = ಎಯ್ದುತ್ತಿಹೆನು. ವಿದ್ಲೃ+ಲಾಭೇ ಎಂಬ ಧಾತು. ||೯೧||

ಜ್ಞಾನಾಮಲಾಂಭಸಾ = ಜ್ಞಾನವೆಂಬ ನಿರ್ಮಲವಹಂಥಾ ಉದಕದಿಂದ ಸದ್ವೈರಾಗ್ಯಮೃದಾ = ಒಪ್ಪುತಿದ್ದಂಥಾ ವೈರಾಗ್ಯವೆಂಬ ಮೃತ್ತಿಕೆಯಿಂದ ಪುಂಸಾಂ = ಪುರುಷರುಗಳ ಅವಿದ್ಯಾರಾಗವಿಣ್ಮೂತ್ರಲೇಪಗಂಧವಿಶೋಧನಂ = ಅಜ್ಞಾನ ಮತ್ಸರಂಗಳೆಂಬ ಮಲಮೂತ್ರಂಗಳ ಲೇಪನದ ದುರ್ಗಂಧದ ಶುದ್ಧವು ಭವೇತ್ = ಆಹುದು. ರಾಗ ಶಬ್ದ ಮತ್ಸರದಲ್ಲಿ ವರ್ತಿಸೂದು. [4]'ರಾಗೋಽನುರಾಗೇ[4] ಮಾತ್ಸರ್ಯೇ' ಇದು ವಿಶ್ವಪ್ರಕಾಶಿಕಾಭಿಧಾನದಲ್ಲಿ ಹೇಳಲುಪಟ್ಟಿತ್ತು. ||೯೨||

ಏವಂ = ಈ ಪ್ರಕಾರದಲ್ಲಿ ತ್ವಙ್ಮಾತ್ರಸಾರಂ = ಚರ್ಮಮಾತ್ರದಿಂದ ಸಾರವಹಂಥಾ ನಿಸ್ಸಾರಂ = ನಿಸ್ಸಾರವಹಂಥಾ ಕದಳೀಸಾರಸನ್ನಿಭಂ = ಬಾಳೆಯು ಕೆಚ್ಚಿಗೆ ಸಮಾನವಹಂಥಾ ಏತಚ್ಛರೀರಂ = ಈ ಶರೀರವು ನಿಸರ್ಗಾತ್ = ಸ್ವಭಾವದ ದೆಸೆಯಿಂದ ಅಶುಚಿ = ಶುದ್ಧವಲ್ಲದಂಥಾದೆಂದು ಸ್ಮೃತಂ ಹಿ = ಹೇಳಲುಪಟ್ಟುದಲಾ.

ಯಃ = ಆವನೊಬ್ಬ ಪ್ರಾಜ್ಞಃ = ಬಲ್ಲಾತನು ದೋಷವನುಳ್ಳಂಥಾ ದೇಹಂ = ದೇಹವನು ಏವಂ = ಈ ಪ್ರಕಾರದಲ್ಲಿ ಜ್ಞಾತ್ವಾ = ಅಱಿದು ಶಿಥಿಲೀ = ಶಿಥಿಲವನುಳ್ಳಾತನು ಭವೇತ್ = ಅಹೆನು. ವಿರಕ್ತನಹನೆಂಬುದರ್ಥ. ಸಃ = ಆತನು ಸಂಸಾರಂ = ಸಂಸಾರವನು ಅತಿಕ್ರಾಮತಿ = ಮೀಱುತ್ತಿಹೆನು. ಇಹ = ಈ ಲೋಕದಲ್ಲಿ ದೃಢಗ್ರಾಹೀ = ದೃಢವಹಂಥಾ ಜ್ಞಾನವನ್ನು ಗ್ರಹಿಸಿದಾತನಾಗಿ ತಿಷ್ಠತಿ = ಇರುತ್ತಿಹನು. ||೯೪||

---

[1] ಸಾಂ (ಘ) [2] ಪುನಃ (ಘ)

[3] ದೇಹದೋಷಂ ಯಃ ಪ್ರಾಜ್ಞಸ್ಸ ಶಿಥಿಲೋ ಭವೇತ್ (ಘ). [4] ರಾಗಾನುರಾಗೇ (ಕ).

ಏವಮೇತನ್ಮಹಾಕಷ್ಟಂ ಜನ್ಮದುಃಖಂ ಪ್ರಕೀರ್ತಿತಮ್
ಪುಂಸಾಮಜ್ಞಾನದೋಷೇಣ ನಾನಾಕರ್ಮವಶೇನ ಚ ||೯೫||

*ಶ್ಲೋಕಾರ್ಧೇನ ತು ವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ
ಮಮೇತಿ ಪರಮಂ ದುಃಖಂ ನಿರ್ಮಮೇತಿ ಪರಂ ಸುಖಮ್ || ||೯೬||

ಬಹವೋಽಪಿ ಹಿ ರಾಜಾನಃ ಪರಂ ಮೋಕ್ಷಮಿತೋ ಗತಾಃ
ನಿರ್ಮಮೇತಿ, ಮಮೇತ್ಯೇವಂ ಬದ್ಧಾಃ ಶತಸಹಸ್ರಶಃ || ||೯೭||

ಗರ್ಭಸ್ಥಸ್ಯ ಸ್ಮೃತಿರ್ಯಾಽಽಸೀತ್[1]ಸಾ ಜಾತಸ್ಯ[1] ಪ್ರಣಶ್ಯತಿ
ಸಮ್ಮೂರ್ಛಿತಸ್ಯ ದುಃಖೇನ ಯೋನಿಯಂತ್ರ[2]ಪ್ರ[2]ಪೀಡನಾತ್ ||೯೮||

---

ನಾನಾಕರ್ಮವಶೇನ= ನಾನಾಪ್ರಕಾರವಹ ಕರ್ಮಾಧೀನವಹಂಥಾ ಅಜ್ಞಾನ-ದೋಷೇಣ ಚ = ಅಜ್ಞಾನದ ದೋಷದಿಂದವು ಪುಂಸಾಂ = ಮನುಷ್ಯರುಗಳಿಗೆ ಮಹಾಕಷ್ಟಂ = ಅತಿಕಷ್ಟವಹಂಥಾ ಏತತ್ = ಈ ಜನ್ಮದುಃಖಂ = ಹುಟ್ಟುವ ದುಃಖವು. ಏವಂ= ಈ ಪ್ರಕಾರದಲ್ಲಿ ಪ್ರಕೀರ್ತಿತಂ= ಹೇಳಲುಪಟ್ಟಿತ್ತು. ||೯೫||

[ಕೋಟಿ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವುದನ್ನು ಅರ್ಧಶ್ಲೋಕದಿಂದಲೇ ಹೇಳು-ವೆನು. ಕೇಳಿರಿ. ಅದೇನೆಂದರೆ; ಮಮಕಾರವೇ ಪರಮದುಃಖಕ್ಕೆ ಕಾರಣ. ಮಮಕಾರವನ್ನು ತೊರೆವುದೇ ಪರಮಸುಖಕ್ಕೆ ಕಾರಣ.

ಇಹದಲ್ಲಿ ಮಮಕಾರತೊರೆದು ಅನೇಕ ರಾಜರುಗಳೂ ಮೋಕ್ಷವನ್ನು ಪಡೆದರು. ಮಮಕಾರವಿಟ್ಟುಕೊಂಡಂಥಹ ಸಾವಿರಾರು ಜನರು ಮೋಕ್ಷವನ್ನು ಪಡೆಯದೇ ಇಹದಲ್ಲಿಯೇ ಬಂಧಿತರಾದರು.] ||೯೬-೯೭||

ಗರ್ಭಸ್ಥಸ್ಯ = ಗರ್ಭದಲ್ಲಿ ಇದ್ದಂಥಾ ಆತಂಗೆ ಯಾ = ಆವುದಾನೊಂದು ಸ್ಮೃತಿಃ= ನೆನಹು ಆಸೀತ್ = ಆಯಿತ್ತು ಸಾ = ಆ ನೆನಹು ಯೋನಿಯಂತ್ರ ಪ್ರಪೀಡನಾತ್ = ಯೋನಿಯೆಂಬ ಗಾಣದ ಬಾಧೆಯು ದೆಸೆಯಿಂದ ದುಃಖೇನ = ದುಃಖದಿಂದ ಸಮ್ಮೂರ್ಛಿತಸ್ಯ = ಮೂರ್ಛಿತನಾದಂಥಾ ಜಾತಸ್ಯ= ಹುಟ್ಟಿದಂಥಾ ಪ್ರಾಣಿಗೆ ಪ್ರಣಶ್ಯತಿ= ನಷ್ಟವಾಗುತ್ತಿಹುದು. ||೯೮||

---

* ಈ ಎರಡು ಶ್ಲೋಕಗಳು ವಾರಪವರ ಪುಸ್ತಕದಲ್ಲಿ (ಘ) ಮಾತ್ರ ಇರುತ್ತವೆ. ಯಾವ ಪ್ರತಿಗಳಲ್ಲೂ ಇಲ್ಲವಾಗಿ ವ್ಯಾಖ್ಯಾನವೂ ಇರುವುದಿಲ್ಲ.

1 ಸಾ ಚ ತಸ್ಯ (ಘ) 2 ನಿ (ಘ)

ಬಾಹ್ಯೇನ ವಾಯುನಾ ಚಾಸ್ಯ ಮೋಹಸಂಜ್ಞೇನ ದೇಹಿನಃ
ಸ್ಪೃಷ್ಟ[1]ಮಾತ್ರೇಣ[1] ಘೋರೇಣ ಜ್ವರಸ್ಸಮುಪಜಾಯತೇ ||೯೯||

ತೇನ ಜ್ವರೇಣ ಮಹತಾ [2]ಮಹಾಮೋಹಃ[2] ಪ್ರಜಾಯತೇ
ಸಮ್ಮೂಢಸ್ಯ ಸ್ಮೃತಿಭ್ರಂಶಃ ಶೀಘ್ರಂ ಸಂಜಾಯತೇ ಪುನಃ ||೧೦೦||

ಸ್ಮೃತಿಭ್ರಂಶಾತ್ತತಸ್ತಸ್ಯ ಪೂರ್ವಕರ್ಮವಶೇನ ಚ
ರತಿಸ್ಸಂಜಾಯತೇ ತೂರ್ಣಂ ಜಂತೋಸ್ತತ್ರೈವ ಜನ್ಮನಿ ||೧೦೧||

ರಕ್ತೋ ಮೂಢಶ್ಚ ಲೋಕೋಽಯಂ [3]ಅಕಾರ್ಯೇ[3] ಸಂಪ್ರವರ್ತತೇ
ನ ಚಾತ್ಮಾನಂ ವಿಜಾನಾತಿ ನ ಪರಂ ನ ಚ ದೈವತಂ ||೧೦೨||

---

ಅಸ್ಯ ದೇಹಿನಃ = ಈ ಪ್ರಾಣಿಗೆ ಘೋರೇಣ = ಭಯಂಕರವಹಂಥಾ ಮೋಹಸಂಜ್ಞೇನ = ಅಜ್ಞಾನದ ಚೇಷ್ಟೆಯನುಳ್ಳಂಥಾ ಸ್ಪೃಷ್ಟಮಾತ್ರೇಣ = ಸೋಂಕುತ್ತಿದ್ದಂಥಾ ಬಾಹ್ಯೇನ ವಾಯುನಾಚ= ಹೊಱಗಳ ವಾಯುವಿಂದವು ಜ್ವರಃ =ಜ್ವರವು ಸಮುಪಜಾಯತೇ = ಹುಟ್ಟುತ್ತಿಹುದು ||೯೯||

ಮಹತಾ = ದೊಡ್ಡಿತ್ತಹಂಥಾ ತೇನ ಜ್ವರೇಣ= ಆ ಜ್ವರದಿಂದ ಮಹಾ ಮೋಹಃ = ಅತ್ಯಂತ ಮಱವೆ ಪ್ರಜಾಯತೇ = ಹುಟ್ಟುತ್ತಿಹುದು. ಸಮ್ಮೂಢಸ್ಯ = ಮಱವೆಯಾದಾತಂಗೆ ಪುನಃ=ಮರಳಿ ಶೀಘ್ರಂ =ಆ ಕ್ಷಣವೆ ಸ್ಮೃತಿಭ್ರಂಶಃ = ನೆನಹಿನ ನಾಶವು ಸಂಜಾಯತೇ = ಆಗುತ್ತಿಹುದು. ||೧೦೦||

ಸ್ಮೃತಿಭ್ರಂಶಾತ್ = ನೆನಹು ನಷ್ಟವಾದುದಱ ದೆಸೆಯಿಂದ ತತಃ= ಅಷ್ಟಱ ಮೇಲೆ ತಸ್ಯ ಜಂತೋಃ = ಆ ಪ್ರಾಣಿಗೆ ಪೂರ್ವಕರ್ಮವಶೇನ ಚ= ಪೂರ್ವಕರ್ಮದ ವಶದಿಂದವು ತತ್ರ ಜನ್ಮನಿ ಏವ = ಆ ಜನ್ಮದಲ್ಲಿಯೇ ರತಿಃ = ತಾತ್ಪರ್ಯವು. ತೂರ್ಣಂ= ಬೇಗದಲೆ ಸಂಜಾಯತೇ = ಆಗುತ್ತಿಹುದು. ||೧೦೧||

ಮೂಢಃ = ಅಜ್ಞಾನವಹಂಥಾ ರಕ್ತಃ=ಸಂಸಾರದಲ್ಲಿ ಆಸಕ್ತಿಯನುಳ್ಳಂಥಾ ಅಯಂ ಲೋಕಶ್ಚ = ಈ ಜನವು ಅಕಾರ್ಯೇ = ಅಕೃತ್ಯವಹಂಥಾ ಸಂಸಾರದಲ್ಲಿ ಸಂಪ್ರವರ್ತತೇ = ಲೇಸಾಗಿ ವರ್ತಿಸಲುಪಡುತ್ತಿಹುದು. ಆತ್ಮಾನಂ ಚ = ತನ್ನನೂ ನ ವಿಜಾನಾತಿ = ಅಱಿವುತ್ತಿರದು. ಪರಂ = ಪರಲೋಕವನು ನ ವಿಜಾನಾತಿ = ಅಱಿಯದು. ದೈವತಂ ಚ = ದೈವವನು ನ ಜಾನಾತಿ= ಅಱಿಯದು. ||೧೦೨||

---

[1] ತ್ರಸ್ತ್ಯ (ಘ) [2] ಸಮ್ಮೋಹಶ್ಚ (ಘ) [3] ನ ಕಾರ್ಯೇ (ಘ)

ನ ಶೃಣೋತಿ ಪರಂ ಶ್ರೇಯಃ ಸತಿ ಚಕ್ಷುಷಿ ನೇಕ್ಷತೇ
ಸಮೇ ಪಥಿ ಶನೈರ್ಗಚ್ಛನ್ ಸ್ಖಲತೀವ ಪದೇ ಪದೇ ||೧೦೩||

ಸತ್ಯಾಂ ಬುದ್ಧೌ ನ ಜಾನಾತಿ [1]ಬೋಧ್ಯಮಾನೋ [1]ಬುಧೈರಪಿ
ಸಂಸಾರೇ ಕ್ಲಿಶ್ಯತೇ ತೇನ ರಾಗಲೋಭವಶಾನುಗಃ ||೧೦೪||

ಗರ್ಭಸ್ಮೃತೇರಭಾವಾಚ್ಚ[2] ಶಾಸ್ತ್ರಮುಕ್ತಂ ಶಿವೇನ ತು
ತದ್ದುಃಖಶಮನಾರ್ಥಾಯ ಸ್ವರ್ಗಮೋಕ್ಷಪ್ರಸಾಧನಮ್ ||೧೦೫||

---

ಅಯಂ ಲೋಕಃ = ಈ ಜನವು ಪರಂ = ಉತ್ಕೃಷ್ಟವಹಂಥಾ ಶ್ರೇಯಃ = ಮೋಕ್ಷವನು ನ ಶೃಣೋತಿ = ಕೇಳುತ್ತಿರದು. ಚಕ್ಷುಷಿ ಸತಿ = ಕಣ್ಣುಂಟಾಗುತ್ತಂ ವಿರಲು ನೇಕ್ಷತೇ = ನೋಡುತ್ತಿರದು. ಕಥಮಿವ = ಅದು ಹೇಂಗೆಯುಖಾ ಎಂದಡೆ ಸಮೇ ಪಥಿ = ಸರಿಸವಹಂಥಾ ದಾರಿಯಲ್ಲಿ ಶನೈಃ = ಮೆಲ್ಲನೆ ಗಚ್ಛನ್ = ನಡವುತವು ಪದೇ ಪದೇ = ಹಜ್ಜೆ ಹಜ್ಜೆಯಲ್ಲಿ ಸ್ಖಲತಿ ಇವ = ಎಡಹುತ್ತಿಹಾತ ನೆಹಗಹಗೆ ||೧೦೩||

ಬುದ್ಧೌ ಸತ್ಯಾಂ = ಬುದ್ಧಿವುಂಟಾಗುತ್ತಂವಿರಲು ಬುಧೈಃ = ವಿದ್ವಾನ್ನುಗಳಿಂದ [3]ಬೋಧ್ಯಮಾನೋಽಪಿ = ಬೋಧಿಸಲುಪಟ್ಟಾತನಾಯಿತ್ತಾದರೂ[3] ನ ಜಾನಾತಿ = ಅಱುವುತ್ತಿರನು. ಸಂಸಾರೇ = ಸಂಸಾರದಲ್ಲಿ ಕ್ಲಿಶ್ಯತೇ = ಕ್ಲೇಶಗೊಳ್ಳುತ್ತಿಹನು. ತೇನ = ಆ ಸಂಸಾರದಲ್ಲಿಯು ಕ್ಲೇಶದಿಂದ ರಾಗಲೋಭವಶಾನುಗಃ = ರಾಗಲೋಭಂಗಳ ವಶವನೆಯ್ದುದಾತನಹನು. ||೧೦೪||

ಗರ್ಭಸ್ಮೃತೇಃ = ಗರ್ಭದಲ್ಲಿಯ ನೆನಹಿನ ಅಭಾವಾಚ್ಚ = ನಾಶದ ದೆಸೆಯಿಂದವೂ ತದ್ದುಃಖಶಮನಾರ್ಥಾಯ = ಆ ಸಂಸಾರ ದುಃಖವ ತಗ್ಗಿಸಲೋಸ್ಕರ ಶಿವೇನ = ಶಿವನಿಂದ ಸ್ವರ್ಗಮೋಕ್ಷಪ್ರಸಾಧನಂ = ಸ್ವರ್ಗ ಮೋಕ್ಷಂಗಳ ಲೇಸಾಗಿ ಸಾಧಿಸಿಕೊಡುವಂಥಾ ಶಾಸ್ತ್ರಂ = ಶಿವಧರ್ಮೋತ್ತರಶಾಸ್ತ್ರವು ಉಕ್ತಂ ತು = ನುಡಿಯಲು ಪಟ್ಟುತ್ತಲಾ. ||೧೦೫||

---

[1] ಬಾಧ್ಯಮಾನೋ (ಕ)

[2] ನ ಭಾವೇನ (ಘ)

[3] ಭಾಧ್ಯಮಾನೋಽಪಿ = ಭಾಧಿಸಲುಪಟ್ಟುದಾಯಿತ್ತಾದರೂ (ಕ) ವ್ಯಾಖ್ಯಾ

ಯೇ ಸತ್ಯಸ್ಮಿನ್ ಶಿವಜ್ಞಾನೇ ಧರ್ಮಕಾಮಾರ್ಥಸಾಧಕೇ[1]
ನ ಕುರ್ವಂತ್ಯಾತ್ಮನಃ ಶ್ರೇಯಸ್ತದತ್ರ ಮಹದದ್ಭುತಮ್ ||೧೦೬||

ಇತಿ ಶ್ರೀ ನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ-
ಪೂರ್ಣಚಂದ್ರಸ್ಯ ಗೋರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ-
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ
"[2]ಪಿಂಡೋತ್ಪತ್ತಿಕಥನಂ"[2] ನಾಮ
ಚತುರ್ಥೋಽಧ್ಯಾಯಃ

---

ಯೇ = ಆರು ಕೆಲಬರು ಧರ್ಮಕಾಮಾರ್ಥಸಾಧಕೇ = ಧರ್ಮ ಕಾಮ ಅರ್ಥಂಗಳ ಸಾಧಿಸಿಕೊಡುವಂಥಾ ಅಸ್ಮಿನ್ = ಈ ಶಿವಜ್ಞಾನೇ = ಶಿವಜ್ಞಾನ ಶಾಸ್ತ್ರವು ಸತಿ =[3]ಉಂಟಾಗುತ್ತಿರಲು[3] ಆತ್ಮನಃ = ಜೀವಾತ್ಮಂಗೆ ಶ್ರೇಯಃ = ಮೋಕ್ಷವನು ನ ಕುರ್ವಂತಿ = ಮಾಡುತ್ತಿರರು. ತತ್ = ಅದು ಅತ್ರ = ಇಲ್ಲಿ ಮಹತ್ = ಬಹಳವಹಂಥಾ ಅದ್ಭುತಂ = ಆಶ್ಚರ್ಯವು. ||೧೦೬||

---

[1] ನೇ (ಘ) [2] ಲುಪ್ತ (ಕ) [3] ಇರಲಾಗಿ (ಕ)

# ಪಂಚಮೋಽಧ್ಯಾಯಃ

## ( ಸಂಸಾರಹೇಯತ್ವಕಥನಂ )

ಶಿವಧರ್ಮೋತ್ತರೇ ಸ್ಕಂದ ಉವಾಚ

ಅವ್ಯಕ್ತೇಂದ್ರಿಯವೃತ್ತಿತ್ವಾತ್ ಬಾಲ್ಯೇ ದುಃಖಂ ಮಹತ್ಪುನಃ
ಇಚ್ಛನ್ನಪಿ ನ ಶಕ್ನೋತಿ ವಕ್ತುಂ ಕರ್ತುಂ ಚ ತತ್ಕ್ರಿಯಾಮ್ ॥೧॥

ದಂತೋತ್ಥಾನೇ ಮಹದ್ದುಃಖಂ [1]ಮೌಢ್ಯೇನ[1] ವ್ಯಾಧಿನಾ [2]ತಥಾ[2]
ಬಾಲರೋಗೈಶ್ಚ ವಿವಿಧೈಃ ಪೀಡಾ ಬಾಲಗ್ರಹೈರಪಿ ॥೨॥

---

ಶಿವಧರ್ಮೋತ್ತರೇ ಸ್ಕಂದ ಉವಾಚ = ಶಿವಧರ್ಮೋತ್ತರದಲ್ಲಿ ಸ್ಕಂದನು ನುಡಿದನು.

ಬಾಲ್ಯೇಚ = ಬಾಲ್ಯ ಕಾಲದಲ್ಲಿಯೂ ಅವ್ಯಕ್ತೇಂದ್ರಿಯವೃತ್ತಿತ್ವಾತ್ = ಕಾಣಬಾರದೇ ಇದ್ದ ಇಂದ್ರಿಯಂಗಳ ವರ್ತನೆಯನುಂಟಹತನದ ದೆಸೆಯಿಂದ ಮಹತ್ = ದೊಡ್ಡಿತ್ತಹಂಥಾ ದುಃಖಂ = ದುಃಖವು ಪುನಃ = ಮರಳಿ ಇಚ್ಛನ್ನಪಿ= ಆವುದಾನೊಂದು ವಸ್ತುವನಿಚ್ಛೈಸುತ್ತವೂ ವಕ್ತುಂ = ಹೇಳಲು ನ ಶಕ್ನೋತಿ= ಸಮರ್ಥನಾಗುತ್ತಿರನು. ತತ್ಕ್ರಿಯಾಂ = ಆ ಇಚ್ಛೈಸಿದಂಥಾ ವಸ್ತುವಿನ ವ್ಯಾಪಾರ ವನು ಕರ್ತುಂ = ಮಾಡಲು ನ ಶಕ್ನೋತಿ = ಸಮರ್ಥನಾಗುತ್ತಿರನು. ॥೧॥

ದಂತೋತ್ಥಾನೇ = ಹಲ್ಲುಗಳು ಹುಟ್ಟುವಲ್ಲಿ ಮಹದ್ದುಃಖಂ = ಅತ್ಯಂತ ದುಃಖವು ಮೌಢ್ಯೇನ = ಅರಿಯಬಾರದಂಥಾ ವ್ಯಾಧಿನಾ = ವ್ಯಾಧಿಯಿಂದ ತಥಾ= ಆ ಪ್ರಕಾರದ ದುಃಖವು ವಿವಿಧೈಃ= ಹಲವು ಪ್ರಕಾರವಹಂಥಾ ಬಾಲರೋಗೈಶ್ಚ =[3]ಕೋನೆ[3]ಮುಂತಾದಂಥಾ ಬಾಲರೋಗಂಗಳಿಂದವು ಬಾಲಗ್ರಹೈರಪಿ= ಬಾಲಗ್ರಹಂ ಗಳಿಂದವೂ ಪೀಡಾ = ಬಾಧೆಯಹುದು. ॥೨॥

---

[1] ಅಲ್ಪೇನ (ಘ) [2] ತತಃ (ಘ) [3] ನೋವೆ (ಕ)

ತೃಟ್ ಬುಭುಕ್ಷಾ ಪರೀತಾಂಗಃ ಕ್ವಚಿತ್ತಿಷ್ಠತಿ ರಾರಟನ್
ವಿಣ್ಮೂತ್ರಭಕ್ಷಣಾದ್ಯಂ ಚ ಮೋಹಾದ್ಬಾಲಃ ಸಮಾಚರೇತ್ ||೩||

ಕೌಮಾರೇ ಕರ್ಣ[1]ವೇಧೇನ[1] ಮಾತಾಪಿತ್ರೋಶ್ಚ ತಾಡನಾತ್
ಅಕ್ಷರಾಧ್ಯಯನಾದ್ಯೈಶ್ಚ ದುಃಖಂ ಸ್ಯಾದ್ಗುರುಶಾಸನಾತ್ ||೪||

ಪ್ರಮತ್ತೇಂದ್ರಿಯವೃತ್ತಿತ್ವಾತ್ ಕಾಮರಾಗಪ್ರಪೀಡನಾತ್
[2]ರಾಗೋದ್ವೃತ್ತಸ್ಯ[2] ಸತತಂ ಕುತಸ್ಸೌಖ್ಯಂ ಚ ಯೌವನೇ ||೫||

[3]ಈರ್ಷ್ಯಯಾ ಸು[3]ಮಹದ್ದುಃಖಂ [4]ಮೋಹಾದ್ರ[4]ಕ್ತಸ್ಯ ಜಾಯತೇ
[5]ನೇತ್ರಸ್ಯೋತ್ಕು[5]ಪಿತಸ್ಯೇವ ರಾಗೋ ದುಃಖಾಯ ಕೇವಲಮ್ ||೬||

---

ಬಾಲಃ = ಹಸುಳೆ ರಾರಟನ್ = ಒಱಲುತ್ತವು ಕ್ವಚಿತ್ = ಒಂದೆ ಠಾವಿನಲ್ಲಿ ತಿಷ್ಠತಿ = ಇರುತ್ತಿಹನು. ತೃಟ್‌ಬುಭುಕ್ಷಾಪರೀತಾಂಗಃ = ನೀರಡಿಕೆ ಹಸಿವಿನಿಂದ ಆವರಿಸಲುಪಟ್ಟ ದೇಹವನುಳ್ಳಾತನಾಗಿ ಮೋಹಾತ್ = ಅಜ್ಞಾನದ ದೆಸೆಯಿಂದ ವಿಣ್ಮೂತ್ರಭಕ್ಷಣಾದ್ಯಂ ಚ = ಮಲಮೂತ್ರಂಗಳ ಭಕ್ಷಿಸುವ ಮೊದಲಾದಂಥಾ ಅವನು ಸಮಾಚರೇತ್ = ಮಾಡುವನು. ||೩||

ಕೌಮಾರೇ = ಚಿಕ್ಕವನಾಗಿದ್ದಲ್ಲಿ ಕರ್ಣವೇಧೇನ = ಕಿವಿಯನೂಱುವುದಱಿಂದ ಮಾತಾಪಿತ್ರೋಃ = ತಾಯಿತಂದೆಗಳ ತಾಡನಾಚ್ಚ — ಹೊಯಿಗಳ ದೆಸೆಯಿಂದವು ಗುರುಶಾಸನಾತ್ = ಆಚಾರ್ಯನ ಶಿಕ್ಷೆಯ ದೆಸೆಯಿಂದ ಅಕ್ಷರಾಧ್ಯಯನಾದ್ಯೈಶ್ಚ = ಅಕ್ಷರಾಭ್ಯಾಸ ಓದುವ ಮೊದಲಾದವಱಿಂದವೂ ದುಃಖಂ = ದುಃಖವು ಸ್ಯಾತ್ = ಅಹುದು. ||೪||

ಯೌವನೇ = ಪ್ರಾಯದಲ್ಲಿ ರಾಗೋದ್ವೃತ್ತಸ್ಯ = ಸಂತೋಷದಿಂದ ಹೆಚ್ಚಿದಂಥಾ ಆತಂಗೆ ಪ್ರಮತ್ತೇಂದ್ರಿಯವೃತ್ತಿತ್ವಾತ್ = ಉನ್ಮತ್ತವಹಂಥಾ ಇಂದ್ರಿಯಂಗಳ ವರ್ತನೆಯಸುಂಟಹತನದ ದೆಸೆಯಿಂದ ಸತತಂ = ಆವಾಗವು ಕಾಮರಾಗಪ್ರಪೀಡನಾಚ್ಚ = ಕಾಮನ ಅನುರಾಗದ ಬಾಧೆಯ ದೆಸೆಯಿಂದವು ಸೌಖ್ಯಂ = ಸುಖವು ಕುತಃ = ಎಲ್ಲಿಯದು ? ||೫||

ಮೋಹಾತ್ = ಅಜ್ಞಾನದ ದೆಸೆಯಿಂದ ರಕ್ತಸ್ಯ = ತತ್ಪರನಾದಂಥಾ ಪ್ರಾಯದವಂಗೆ ಈರ್ಷ್ಯಯಾ = ಮತ್ಸರದಿಂದ ಸುಮಹದ್ದುಃಖಂ = ದೊಡ್ಡಿಯ ದುಃಖವು

---

1 ಪೀಡಾಯಾಂ (ಘ) 2 ತದಪ್ರಾಪ್ತೇಸ್ತು (ಘ)
3 ಈರ್ಷಯಾಚ (ಘ) 4 ಮೋಹಯು (ಘ) 5 ನೇತ್ರಸ್ಯ ಕು (ಘ)

ನ ರಾತ್ರೌ ವಿಂದತೇ ನಿದ್ರಾಂ ಕಾಮಾಗ್ನಿಪರಿಪೀಡಿತಃ
ದಿವಾ ಚಾಪಿ ಕುತಸ್ಸೌಖ್ಯಮರ್ಥೋಪಾರ್ಜನಚಿಂತಯಾ ||೭||

ಸ್ತ್ರೀಷ್ವಾಯಾಸಿತದೇಹಸ್ಯ ಯೇ ಪುಂಸಃ ಶುಕ್ಲಬಿಂದವಃ
ನ ತೇ ಸುಖಾಯ ಮಂತವ್ಯಾಃ ಸ್ವೇದಜಾ ಇವ ಬಿಂದವಃ ||೮||

ಕ್ರಿಮಿಭಿಸ್ತುದ್ಯಮಾನಸ್ಯ ಕುಷ್ಠಿನಃ [1]ಪಾಮನಸ್ಯ[1] ವಾ*
ಕಂಡೂಯನಾಗ್ನಿತಾಪಾಭ್ಯಾಂ ಯತ್ಸುಖಂ ಸ್ತ್ರೀಷು ತದ್ವಿದುಃ ||೯||

---

ಜಾಯತೇ = ಹುಟ್ಟುತ್ತಿಹುದು. ಉತ್ಕುಪಿತಸ್ಯ = ಅತ್ಯಂತ ಕೋಪಿಸುತ್ತಿದ್ದಂಥಾ ನೇತ್ರಸ್ಯ = ದೃಷ್ಟಿಗಳನುಳ್ಳಾತಂಗೆ [ಹೇಗೋಹಾಗೆ] ರಾಗಃ = ಮತ್ಸರವು ಕೇವಲಂ ಬಹುಯ ದುಃಖಾಯ = ದುಃಖಕ್ಕೋಸ್ಕರವು. ||೬||

ಕಾಮಾಗ್ನಿಪರಿಪೀಡಿತಃ = ಕಾಮಾಗ್ನಿಯಿಂದ ಬಾಧಿಸಲುಪಟ್ಟ ಜೌವನಿಗನು ರಾತ್ರೌ = ಇರುಳಿನಲ್ಲಿ ನಿದ್ರಾಂ = ನಿದ್ರೆಯನು ನ ವಿಂದತೇ = ಅರಿಯಲುಪಡುತ್ತಿರನು. ದಿವಾ ಚಾಪಿ = ಹಗಲು ಅರ್ಥೋಪಾರ್ಜನಚಿಂತಯಾ = ಧನವ ಘಳಿಸುವ ಚಿಂತೆಯಿಂದ ಸೌಖ್ಯಂ = ಸುಖವು ಕುತಃ = ಎಲ್ಲಿಯದು ? ||೭||

ಸ್ತ್ರೀಷು = ಸ್ತ್ರೀಯರುಗಳಲ್ಲಿ ಆಯಾಸಿತದೇಹಸ್ಯ = ಆಯಾಸಗೊಳಲುಪಟ್ಟ ದೇಹವನುಳ್ಳಂಥಾ ಪುಂಸಃ = ಪುರುಷಂಗೆ ಯೇ = ಆವವು ಕೆಲವು ಶುಕ್ಲಬಿಂದವಃ = ಇಂದ್ರಿಯದ ಹನಿಗಳಹವು ತೇ = ಅವು ಸುಖಾಯ = ಸುಖಕ್ಕೋಸ್ಕರ ನ ಮಂತವ್ಯಾಃ = ಮನ್ನಿಸಲು ತಕ್ಕಂಥಾವಲ್ಲ. ಕಥಮಿವ = ಅದು ಹೇಂಗೆಯೂ ಎಂದಡೆ ಸ್ವೇದಜಾಃ = ಬೆವರಿಂದ ಹುಟ್ಟಿದಂಥಾ ಬಿಂದವ ಇವ = ಹನಿಗಳ ಹಗಹಗೆ. ||೮||

ಕ್ರಿಮಿಭಿಃ — ಕ್ರಿಮಿಗಳಿಂದ ತುದ್ಯಮಾನಸ್ಯ = [2]ಬಾಧಿಸಿಕೊಳಲು[2] ಪಟ್ಟಂಥಾ ಕುಷ್ಠಿನಃ = ಕೋಷ್ಠರೋಗವುಳ್ಳಾತಂಗೆ ಪಾಮನಸ್ಯ ವಾ = ಖಜ್ಜಿ ಉಳ್ಳಾತಂಗೆ[3]ಯೂ[3] ಕಂಡೂಯನಾಗ್ನಿತಾಪಾಭ್ಯಾಂ = ತುರಿಸುಹ ಬೆಂಕಿಯ ಕಾಸಿಕೊಳುಹಂಗಳಿಂದ ಯತ್ಸುಖಂ = ಆವುದಾನೊಂದು ಸುಖವುಂಟು ತತ್ = ಆ ಸುಖವು ಸ್ತ್ರೀಷು = ಸ್ತ್ರೀಯರುಗಳಲ್ಲಿ ಎಂದು ವಿದುಃ = ಹೇಳುತ್ತಿಹರು. ||೯||

---

[1] ಪಾಮಿನಸ್ಯ (ಕ.ಖ.ಗ.) [2] ಬಾಧೆಗೊಳಲು (ಕ) [3] ಯೂ (ಖ.ಚ.)

* ಪಾಮೀ ಎಂಬ ಪದವೇ ಯುಕ್ತ

ಯಾದೃಶಂ [1]ವಿದ್ಯತೇ[1] ಸೌಖ್ಯಂ [2]ಕಂಡೂಪೂಯವಿನಿರ್ಗಮೇ[2]
ತಾದೃಶಂ ಸ್ತ್ರೀಷು [3]ವಿಜ್ಞೇಯಂ[3] ನಾಧಿಕಂ ತಾಸು ವಿದ್ಯತೇ ||೧೦||

ಗ್ರಂಥೇಸ್ತು ವೇದನಾ ಯದ್ವತ್ ಸ್ಫುಟಿತಸ್ಯ [4]ವಿ[4]ವರ್ತತೇ
ತದ್ವತ್ ಸ್ತ್ರೀಷ್ವಪಿ ಮಂತವ್ಯಂ ನ ಸೌಖ್ಯಂ ಪರಮಾರ್ಥತಃ ||೧೧||

ಮಲಮೂತ್ರವಿಸರ್ಗಾ[5]ತ್ತು[5] ಸುಖಂ ಭವತಿ ಯಾದೃಶಮ್
ತಾದೃಶಂ ಸ್ತ್ರೀಷು ವಿಜ್ಞೇಯಂ ಮೂಢೈಃ ಕಲ್ಪಿತಮನ್ಯಥಾ ||೧೨||

ನಾರೀಷ್ವವ[6]ಸ್ತು[6]ಭೂತಾಸು ಸರ್ವದೋಷಾಶ್ರಯಾಸು ಚ
ನ ಚಾಣುಮಾತ್ರಮಪ್ಯೇವಂ ಸುಖಮಸ್ತಿ ವಿಚಾರತಃ ||೧೩||

---

ಕಂಡೂಪೂಯವಿನಿರ್ಗಮೇ = ತುರಿಯು ಕೀವು ಹೋಬವಂಟಲ್ಲಿ ಯಾದೃಶಂ = ಎಂಥಾ ಸೌಖ್ಯಂ = ಸುಖವು ವಿದ್ಯತೇ = ಉಂಟು ತಾದೃಶಂ = ಅಂಥ ಸುಖವು ತಾಸು ಸ್ತ್ರೀಷು = ಆ ಸ್ತ್ರೀಯರುಗಳಲ್ಲಿ ವಿಜ್ಞೇಯಂ = ಅರಿಯಲು ಯೋಗ್ಯವು. ಅಧಿಕಂ = ವೆಗ್ಗಳವು ನ ವಿದ್ಯತೇ = ಇಲ್ಲ. ||೧೦||

ಸ್ಫುಟಿತಸ್ಯ = ಬೊಕ್ಕೆಗೆ ಗ್ರಂಥೇಸ್ತು = ಕುರುವಿಗೆ ಯದ್ವತ್ = ಎಹಗೆ ವೇದನಾ = ನೋವು ವಿವರ್ತತೇ = ವರ್ತಿಸುತ್ತಿಹುದು ತದ್ವತ್ = ಹಾಂಗೆ ಸೌಖ್ಯಂ = ಸುಖವು ಸ್ತ್ರೀಷು = ಸ್ತ್ರೀಯರುಗಳಲ್ಲಿ ಮಂತವ್ಯಂ = ಬಗೆಯಲು ಯೋಗ್ಯವು. ಪರಮಾರ್ಥತೋಽಪಿ = ಪರಮಾರ್ಥದ ದೆಸೆಯಿಂದವೂ ನ = ಸುಖವಿಲ್ಲ. ||೧೧||

ಮಲಮೂತ್ರವಿಸರ್ಗಾತ್ತು = ಮಲಮೂತ್ರಂಗಳ ಬಿಡುವುದರ ದೆಸೆಯಿಂದವೂ ಯಾದೃಶಂ ಸುಖಂ = ಎಂಥಾ ಸುಖವು ಭವತಿ = ಆಗುತ್ತಿಹುದು ತಾದೃಶಂ = ಅಂಥಾ ಸುಖವು ಸ್ತ್ರೀಷು = ಸ್ತ್ರೀಯರುಗಳಲ್ಲಿ ವಿಜ್ಞೇಯಂ = ಅರಿಯಲು ಯೋಗ್ಯವು. ಮೂಢೈಃ = ಮೂರ್ಖರುಗಳಿಂದ ಅನ್ಯಥಾ = ಮತ್ತೊಂದು ಪ್ರಕಾರದಿಂದ ಕಲ್ಪಿತಂ = ಕಲ್ಪಿಸಲುಪಟ್ಟಿತ್ತು. ||೧೨||

ಅವಸ್ತುಭೂತಾಸು = ವಸ್ತುವಲ್ಲದಂಥಾ ಸರ್ವದೋಷಾಶ್ರಯಾಸು = ಸಮಸ್ತ ದೋಷಂಗಳಿಗೆ ಆಶ್ರಯವಹಂಥಾ ನಾರೀಷು ಚ = ಸ್ತ್ರೀಯರುಗಳಲ್ಲಿ ಯೂ

---

[1] ಮನ್ಯತೇ (ಘ) [2] ಗಂಡೇ ಪೂಯವಿನಿರ್ಗಮಾತ್ (ಘ). ಕಂಡೂಪೂಯ-ವಿನಿರ್ಗಮಾತ್ (ಘ) ಪಾಠಾಂತರ. [3] ಮಂತವ್ಯಂ (ಘ). [4] ನಿ (ಖ).
[5] ಚ್ಚ (ಘ) [6] ಸ್ಥಾ (ಘ)

ಸನ್ಮಾ[1]ನಮ[1]ವಮಾನೇನ ವಿಯೋಗೇನೇಷ್ಟ[2]ಸಂಗ[2]ಮಃ
ಯೌವನಂ ಜರಯಾ ಗ್ರಸ್ತಂ ಕ್ವ ಸೌಖ್ಯಮನುಪದ್ರವಮ್ ||೧೪||

ವಲೀಪಲಿತಸ್ವಾಲಿತ್ಯೈಃ ಶಿಥಿಲೀಕೃತವಿಗ್ರ[3]ಹಃ[3]
ಸರ್ವಕ್ರಿಯಾಸ್ವ[4]ಶ[4]ಕ್ತಶ್ಚ[4] ಜರಯಾ ಜರ್ಝರೀಕೃ[5]ತಃ[5] ||೧೫||

ಸ್ತ್ರೀಪುಂಸೋರ್ಯೌವನೇ ರೂಪಂ ಯಚ್ಚಾನ್ಯೋ[6]ನ್ಯ[6]ಪ್ರಿಯಂ ಪುರಾ
ತದೇವ ಜರಯಾ ಗ್ರಸ್ತಮುಭಯೋರಪಿ ನ ಪ್ರಿಯಮ್ ||೧೬||

ಅಪೂರ್ವವತ್ ಸ್ವಮಾತ್ಮಾನಂ ಜರಯಾ ಪರಿವರ್ತಿತಮ್
ಯಃ ಪಶ್ಯನ್ನ ವಿರಜ್ಯೇತ ಕೋಽನ್ಯಸ್ತಸ್ಮಾದಚೇತನಃ ||೧೭||

---

ಅಣುಮಾತ್ರಂ = ಅಣುಮಾತ್ರವಹಂಥಾ ಸುಖಮಪಿ = ಸುಖವು ಏವಂ = ಈ ಪ್ರಕಾರದಲ್ಲಿ ವಿಚಾರತಃ = ವಿಚಾರಿಸುವುದರ ದೆಸೆಯಿಂದ ನಾಸ್ತಿ = ಇಲ್ಲ. ||೧೩||

ಸನ್ಮಾನಂ = ಸನ್ಮಾನವು ಅವಮಾನೇನ = ಅವಮನ್ನಣೆಯಿಂದ ಗ್ರಸ್ತಂ = ನುಂಗಲುಪಟ್ಟಿತ್ತು. ಇಷ್ಟಸಂಗಮಃ = ಇಷ್ಟರುಗಳ ಸಂಗವು ವಿಯೋಗೇನ = ಅಗಲಿಕೆಯಿಂದ ಗ್ರಸ್ತಂ = ಹಿಡಲುಪಟ್ಟಿತ್ತು. ಯೌವನಂ = ಪ್ರಾಯವು ಜರಯಾ = ಮುಪ್ಪಿನಿಂದ ಗ್ರಸ್ತಂ = ನುಂಗಲುಪಟ್ಟಿತ್ತು. ಅನುಪದ್ರವಂ = ಉಪದ್ರವಿಲ್ಲದೆ-ಯಿದ್ದಂಥಾ ಸೌಖ್ಯಂ = ಸುಖವು ಕ್ವ = ಎಲ್ಲಿಯದು. ||೧೪||

ವಲೀಪಲಿತಸ್ವಾಲಿತ್ಯೈಃ = ತೆರೆನರೆಗಳ ಆಕ್ರಮಣಂಗಳಿಂದ ಶಿಥಿಲೀಕೃತವಿಗ್ರಹಃ = ಶಿಥಿಲವಾಗಿ ಮಾಡಲುಪಟ್ಟ ಶರೀರವನುಳ್ಳಂಥಾ ಸರ್ವಕ್ರಿಯಾಸು ಚ = ಸಮಸ್ತ ವ್ಯಾಪಾರಂಗಳಲ್ಲಿ[7]ಯಾ[7] ಅಶಕ್ತಃ = ಸಮರ್ಥನಲ್ಲದಂಥಾ ಜರಯಾ = ಮುಪ್ಪಿನಿಂದ ಜರ್ಝರೀಕೃತಃ = ಜರ್ಝರಿತವಾಗಿ ಮಾಡಲುಪಟ್ಟಾತನಹನು. ತೆರೆಯೆಂದಡೆ = ದೇಹದ ಸುಕ್ಕು ಎಂಬುದರ್ಥ. ||೧೫||

ಸ್ತ್ರೀಪುಂಸೋಃ = ಸ್ತ್ರೀಪುರುಷರುಗಳಿಗೆ ಯೌವನೇ = ಯೌವನದಲ್ಲಿ ಪುರಾ = ಮುನ್ನ ಅನ್ಯೋನ್ಯಪ್ರಿಯಂ = ಒಬ್ಬೊಬ್ಬರಿಗೆ ಪ್ರಿಯುವಹಂಥಾ ಯದ್ರೂಪಂ ಚ = ಆವುದಾನೊಂದು ರೂಪುಂಟು. ತದೇವ = ಆ ಸೌಂದರ್ಯವಹ ರೂಪೇ ಜರಯಾ = ಮುಪ್ಪಿನಿಂದ ಗ್ರಸ್ತಂ = ಗ್ರಹಿಸಲುಪಟ್ಟುದಾಗಿ ಉಭಯೋರಪಿ = ಗಂಡ-ಹೆಂಡರಿಗೆಯೂ ನ ಪ್ರಿಯಂ = ಪ್ರಿಯವಾದುದಿಲ್ಲ. ||೧೬||

ಯಃ = ಆವನಾನೊಬ್ಬ ಮನುಷ್ಯನು ಅಪೂರ್ವವತ್ = ಪೂರ್ವದ ಹಾಂಗಲ್ಲದೆ

---

1 ನಂಚಾ (ಕ) ಮೂಲ 2 ನುಚ (ಘ).
3 ಹಂ (ಘ) 4 ಕ್ತಂ ಚ (ಘ) 5 ತಂ (ಘ) 6 ನ್ಯಂ (ಘ) 7 ವೂ (ಕ.ಚ.)

ಜರಾಭಿಭೂತಃ ಪುರುಷಃ ಪತ್ನೀಪುತ್ರಾದಿಬಾಂಧವೈಃ
ಅಶಕ್ತತ್ವಾ[1]ದ್ದುರಾಚಾರೈಃ ಭೃತ್ಯೈಶ್ಚ ಪರಿಭೂಯತೇ ||೧೮||

[2]ಧರ್ಮಶ್ಚಾರ್ಥಶ್ಚ ಕಾಮಶ್ಚ ಮೋಕ್ಷಶ್ಚೈವ ನ ಜೀರ್ಯತಾ
ಶಕ್ಯಾಸ್ಸಾಧಯಿತುಂ[2] ತಸ್ಮಾತ್ ಯುವಾ ಧರ್ಮಂ ಸಮಾಚರೇತ್||

ವಾತಪಿತ್ತಕಫಾದೀನಾಂ ವೈಷಮ್ಯಾದ್ವ್ಯಾಧಿರುಚ್ಯತೇ
ವಾತಾದೀನಾಂ ಸಮೂಹಶ್ಚ ದೇಹೋಽಯಂ ಪರಿಕೀರ್ತಿತಃ ||೨೦||

---

ಜರಯಾ=ವೃದ್ಧಾಪ್ಯದಿಂದ ಪರಿವರ್ತಿತಂ = ವರ್ತಿಸಲುಪಟ್ಟಂಥಾ ಸ್ವಮಾತ್ಮಾನಂ = ತನ್ನ ಶರೀರವನು ಪಶ್ಯನ್ = ಕಾಣುತವು ನ ವಿರಜ್ಯೇತ = ವಿರಕ್ತನಾಗನು. ತಸ್ಮಾತ್=ಆತನ ದೆಸೆಯಿಂದವು ಅಚೇತನಃ=ಜಡವಹಂಥಾ ಅನ್ಯಃ=ಮತ್ತೊಂದು ವಸ್ತು ಕಃ=ಆವುದು?. ಆತನೇ ಜಡನೆಂಬುದರ್ಥ. ||೧೭||

ಜರಾಭಿಭೂತಃ=ವೃದ್ಧಾಪ್ಯದಿಂದ ಭಂಗಿತನಾದಂಥಾ ಪುರುಷಃ=ಮನುಷ್ಯನು ಅಶಕ್ತತ್ವಾತ್ = ಅಶಕ್ತನಹತನದ ದೆಸೆಯಿಂದ ಪತ್ನಿಪುತ್ರಾದಿಬಾಂಧವೈಃ = ಸ್ತ್ರೀಪುತ್ರ ಮೊದಲಾದಂಥಾ ಬಂಧುಗಳಿಂದ ದುರಾಚಾರೈಃ=[3]ದುರಾಚಾರಿಗಳಹಂಥಾ[3] ಭೃತ್ಯೈಶ್ಚ=ಸೇವಕರುಗಳಿಂದವೂ ಪರಿಭೂಯತೇ=ಜಱಿಸಿಕೊಳುತ್ತಿಹನು. ||೧೮||

ಧರ್ಮಶ್ಚ = ಧರ್ಮವೂ ಅರ್ಥಶ್ಚ = ಅರ್ಥವೂ ಕಾಮಶ್ಚ = ಕಾಮವೂ ಮೋಕ್ಷಶ್ಚೈವ = ಮೋಕ್ಷವೂ ಜೀರ್ಯತಾ=ವೃದ್ಧಾಪ್ಯದಾತನಿಂಡ ಸಾಧಯಿತುಂ = ಸಾಧಿಸಲು ನ ಶಕ್ಯಾಃ = ಶಕ್ಯಂಗಳಲ್ಲ. ತಸ್ಮಾತ್ = ಅದು ಕಾರಣವಾಗಿ ಯುವಾ = ಪ್ರಾಯದವನು ಧರ್ಮಂ=ಧರ್ಮವನು ಸಮಾಚರೇತ್= [4]ಲೇಸಾಗಿ[4] ಮಾಡೂದು. ||೧೯||

ವಾತಪಿತ್ತಕಫಾದೀನಾಂ = ವಾತಪಿತ್ತಶ್ಲೇಷ್ಮ ಮೊದಲಾಗಿದ್ದಂಥಾ ಅ[5]ವ[5]ಱ ವೈಷಮ್ಯಾತ್=ಉತ್ಕಟದ ದೆಸೆಯಿಂದ ವ್ಯಾಧಿಃ = ವ್ಯಾಧಿಯೆಂದು ಉಚ್ಯತೇ= ಹೇಳಲುಪಡುತ್ತಿಹುದು. ವಾತಾದೀನಾಂ = ವಾತಮೊದಲಾದವಱ ಸಮೂಹಶ್ಚ= ಮೊತ್ತವು ಅಯಂ ದೇಹಃ=ಈ ದೇಹವೆಂದು ಪರಿಕೀರ್ತಿತಃ=ಹೇಳಲುಪಟ್ಟುತ್ತು.

---

[1] ನ್ನಾದ್ರಿಯತೇ (ಘ)
[2] ಧರ್ಮಂ ಚಾರ್ಥಂ ಚ ಕಾಮಂ ಚ ಮೋಕ್ಷಂ ಜಾತಿಜರನ್ಯತಃ ಅಶಕ್ತಸ್ಸಾಧಿತುಂ (ಘ)
[3] ಲುಪ್ತ (ಕ) [4] ಲುಪ್ತ (ಕ) [5] ದ (ಖ)

ತಸ್ಮಾದ್ವ್ಯಾಧಿಮಯಂ ಜ್ಞೇಯಂ ಶರೀರಮಿದಮಾತ್ಮನಃ
ವಾತಾದಿವ್ಯತಿರೇಕತ್ವಾದ್ವ್ಯಾಧೀನಾಂ ಪಂಜರಂ ಸ್ಮೃತಮ್ ||೨೧||

ರೋಗೈರ್ನಾನಾವಿಧೈರ್ಯಾತಿ ದೇಹೋ ದುಃಖಾನ್ಯನೇಕಧಾ
ತಾನ್ಯೇವ ಸ್ವಾತ್ಮವೇದ್ಯಾನಿ ಕಿಮನ್ಯತ್ಕಥಯಾಮ್ಯಹಮ್ ||೨೨||

ಏಕೋತ್ತರಂ ಮೃತ್ಯುಶತಮಸ್ಮಿನ್ ದೇಹೇ ಪ್ರತಿಷ್ಠಿತಮ್
ತತ್ರೈಕಃ ಕಾಲಸಂಜ್ಞೋಽಭೂತ್ ಶೇಷಾಸ್ತ್ವಾಗಂತುಕಾಃ ಸ್ಮೃತಾಃ||

ಯೇ ಚ ತ್ವಾಗಂತವಃ ಪ್ರೋಕ್ತಾಸ್ತೇ ಪ್ರಶಾಮ್ಯಂತಿ ಭೇಷಜೈಃ
ಜಪಹೋಮಪ್ರದಾನೈಶ್ಚ ಕಾಲಮೃತ್ಯುರ್ನ ಶಾಮ್ಯತಿ ||೨೪||

---

ತಸ್ಮಾತ್ = ಅದು ಕಾರಣವಾಗಿ ಆತ್ಮನಃ = ಜೀವನ ಇದಂ ಶರೀರಂ = ಈ ಶರೀರವು ವ್ಯಾಧಿಮಯಂ = ವ್ಯಾಧಿಸ್ವರೂಪವೆಂದು ಜ್ಞೇಯಂ = ಅರಿಯಲು ಯೋಗ್ಯವು. ವಾತಾದಿವ್ಯತಿರೇಕತ್ವಾತ್ = ವಾತವೊದಲಾದವಱ ಉತ್ಕಟವನುಂಟ-ಹತನದ ದೆಸೆಯಿಂದ ವ್ಯಾಧೀನಾಂ = ವ್ಯಾಧಿಗಳ ಪಂಜರಂ = ಪಂಜರವೆಂದು ಸ್ಮೃತಂ = ಹೇಳಲುಪಟ್ಟಿತ್ತು. ||೨೧||

ನಾನಾವಿಧೈಃ = ನಾನಾಪ್ರಕಾರಂಗಳಹಂಥಾ ರೋಗೈಃ = ರೋಗಂಗಳಿಂದ ದೇಹಃ = ದೇಹವು. ಅನೇಕಧಾ = ಹಲವು ಪ್ರಕಾರವಹಂಥಾ ದುಃಖಾನಿ = ದುಃಖಂಗಳನು ಯಾತಿ = ಎಯ್ದುತ್ತಿಹುದು. ತಾನ್ಯೇವ = ಆ ದುಃಖಂಗಳೇ ಸ್ವಾತ್ಮವೇದ್ಯಾನಿ = ನಿಜಾತ್ಮಂಗೆ ಅಱಿಯಲುಯೋಗ್ಯಂಗಳು. ಅಹಮಪಿ = ನಾನೂ ಅನ್ಯತ್ಕಿಂ = ಮತ್ತೇನೆಂದು ಕಥಯಾಮಿ = ಹೇಳುವೆನು. ||೨೨||

ಅಸ್ಮಿನ್ ದೇಹೇ = ಈ ದೇಹದಲ್ಲಿ ಏಕೋತ್ತರಂ = ಒಂದು ಅಧಿಕವಹಂಥಾ ಮೃತ್ಯುಶತಂ = ನೂಱು ಮೃತ್ಯು ಪ್ರತಿಷ್ಠಿತಂ = ಇರಲುಪಟ್ಟಿತ್ತು. ತತ್ರ = ಆ ನೂಱಒಂದು ಮೃತ್ಯುವಿನಲ್ಲಿ ಏಕಃ = ಒಂದು ಕಾಲಸಂಜ್ಞಃ = ಕಾಲಮೃತ್ಯುವೆಂಬ ಹೆಸರನುಳ್ಳಂಥಾದು ಅಭೂತ್ = ಆಯಿತ್ತು ಶೇಷಾಸ್ತು = ಉಳಿದಂಥಾವು ಆಗಂತುಕಾಃ = ಅಪಮೃತ್ಯುಗಳೆಂದು ಸ್ಮೃತಾಃ = ಹೇಳಲುಪಟ್ಟವು. ||೨೩||

ಯೇ ಚ = ಆವವು ಕೆಲವು ಆಗಂತವಃ = ಅಪಮೃತ್ಯುಗಳು ಪ್ರೋಕ್ತಾಃ = ಹೇಳಲುಪಟ್ಟುವು ತೇ ತು = ಆ ಅಪಮೃತ್ಯುಗಳು ಭೇಷಜೈಃ = ಔಷಧಂಗಳಿಂದ ಜಪಹೋಮಪ್ರದಾನೈಶ್ಚ = ಜಪಹೋಮದಾನಂಗಳಿಂದವು ಪ್ರಶಾಮ್ಯಂತಿ = ಶಾಂತ-ವಾಗುತ್ತಿಹವು. ಕಾಲಮೃತ್ಯುಃ = ಕಾಲಮೃತ್ಯುವು ನ ಶಾಮ್ಯತಿ = ಶಾಂತ-ವಾಗುತ್ತಿರದು. ||೨೪||

ಯದಿ ವಾ ಸಾಪಮೃತ್ಯುಸ್ಸ್ಯಾತ್ ವಿಷಮು[1]ದ್ಯಾದಿ[1]ಶಂಕಿತಃ
ನ ಚಾತ್ರ ಪುರುಷಸ್ತಸ್ಮಾತ್ ಅಪಮೃತ್ಯೋರ್ಬಿಭೇತಿ ಸಃ ||೨೫||

ವಿವಿಧಾ ವ್ಯಾಧಯಶ್ಶಸ್ತ್ರಂ ಸರ್ಪಾದ್ಯಾಃ ಪ್ರಾಣಿನಸ್ತಥಾ
ವಿಷಾಣಿ ಚಾಭಿಚಾರಾಶ್ಚ ಮೃತ್ಯೋರ್ದ್ವಾರಾಣಿ ದೇಹಿನಾಮ್ ||೨೬||

* [2]ಪೀಡಿತಂ ಸರ್ಪಶಸ್ತ್ರಾದ್ಯೈ[2]ರಪಿ ಧನ್ವಂತರಿಸ್ಸ್ವಯಮ್
[3]ಸ್ವಸ್ಥೀ[3]ಕರ್ತುಂ ನ ಶಕ್ನೋತಿ ಕಾಲಪ್ರಾಪ್ತಂ ಹಿ ದೇಹಿನಮ್ ||೨೭||

ನೌಷಧಂ ನ ತಪೋ ದಾನಂ ನ ಮಂತ್ರಾ ನ ಚ ಬಾಂಧವಾಃ
ಶಕ್ನುವಂತಿ ಪರಿತ್ರಾತುಂ ನರಂ ಕಾಲಪ್ರಪೀಡಿತಮ್ ||೨೮||

---

ಅಪಮೃತ್ಯುಃ = ಅಪಮೃತ್ಯುವು ವಿಷಮುದ್ಯಾದಿಶಂಕಿತಃ = ವಿಷಮುದ್ಯ ಮೊದಲಾದವಱ ಶಂಕೆಯನುಳ್ಳಂಥಾದು ಯದಿ ವಾ = ಎತ್ತಲಾನು ಸ್ಯಾತ್ = ಅಹುದು ಅತ್ರ = ಇಲ್ಲಿ ಸ ಪುರುಷಃ = ಆ ಮನುಷ್ಯನು ತಸ್ಮಾದಪಮೃತ್ಯೋಃಶ್ಚ = ಆ ಅಪಮೃತ್ಯುವಿನ ದೆಸೆಯಿಂದವೂ ನ ಬಿಭೇತಿ ನ = ಅಂಜುತ್ತಿರನೆಂಬುದಿಲ್ಲ. ಅಪಮೃತ್ಯುವಿಗೆ ಮನುಷ್ಯನಂಜುತ್ತಿಹನೆಂಬುದರ್ಥ. ||೨೫||

ವಿವಿಧಾಃ = ನಾನಾಪ್ರಕಾರವಹಂಥಾ ವ್ಯಾಧಯಃ = ವ್ಯಾಧಿಗಳು ಶಸ್ತ್ರಂ = ಆಯುಧವು ತಥಾ = ಹಾಂಗೆ ಸರ್ಪಾದ್ಯಾಃ = ಸರ್ಪಮೊದಲಾದಂಥಾ ಪ್ರಾಣಿನಃ = ಪ್ರಾಣಿಗಳು ವಿಷಾಣಿ ಚ = ವಿಷಂಗಳು ಅಭಿಚಾರಾಶ್ಚ = ಮಾಟಕುಟಿಲಂಗಳೂ ದೇಹಿನಾಂ = ಪ್ರಾಣಿಗಳಿಗೆ ಮೃತ್ಯೋಃ = ಮೃತ್ಯುವಿನ ದ್ವಾರಾಣಿ = ಬಾಗಿಲುಗಳೆನಿಸುವವು. ||೨೬||

ಸರ್ಪಶಸ್ತ್ರಾದ್ಯೈಃ = ಸರ್ಪ ಶಸ್ತ್ರಮೊದಲಾದವಱಿಂದ ಪೀಡಿತಂ = ಬಾಧಿತನಾದಂಥಾ ಕಾಲಪ್ರಾಪ್ತಂ = ಕಾಲಮೃತ್ಯುಪ್ರಾಪ್ತ[4]ವಾ[4]ದಂಥಾ ದೇಹಿನಂ = ಪ್ರಾಣಿಯನು ಸ್ವಸ್ಥೀಕರ್ತುಂ = ಸ್ವಸ್ಥವಾಗಿ ಮಾಡಲು ಧನ್ವಂತರಿಃ ಸ್ವಯಮಪಿ = ಧನ್ವಂತರಿ ತಾನಾದರೂ ನ ಶಕ್ನೋತಿ ಹಿ = ಸಮರ್ಥನಾಗುತ್ತಿರನಲಾ. ||೨೭||

ಕಾಲಪ್ರಪೀಡಿತಂ = ಕಾಲಮೃತ್ಯುವಿನಿಂದ ಬಾಧಿಸಲುಪಟ್ಟಂಥಾ ನರಂ = ಮನುಷ್ಯನನು ಪರಿತ್ರಾತುಂ = ರಕ್ಷಿಸಲು ಔಷಧಂ = ಔಷಧವು ನ = ಸಮರ್ಥವಲ್ಲ. ತಪಃ = ತಪಸ್ಸು ದಾನಂ = ದಾನವು ನ = ಸಮರ್ಥವಲ್ಲ ಮಂತ್ರಾಃ = ಮಂತ್ರಗಳೂ

---

[1] ವ್ಯಾಧಿ (ಘ) [2] ಪಂಡಿತಃ ಸರ್ವಶಾಸ್ತ್ರಾದ್ಯೈಃ (ಘ) [3] ಸಾಸ್ಥ್ಯಂ (ಘ) [4] ನಾ (ಕ)
* ಪಂಡಿತಃ ಸರ್ವಶಾಸ್ತ್ರಾದ್ಯೈಃ ಎಂಬುದೇ ಉಚಿತ. ಕಾರಣ ಕಾಲಮೃತ್ಯು ಮಾತ್ರವೇ ಚಿಕಿತ್ಸೆಗೆ ದೂರವಾದುದು.

ರಸಾಯನತಪೋಜಪ್ಯೈಃ ಯೋಗಸಿದ್ಧೈರ್ಮಹಾತ್ಮಭಿಃ
ಕಾಲಮೃತ್ಯುರಪಿ ಪ್ರಾಜ್ಞೈಃ ಜೀರ್ಯತೇ ನಾಲಸೈರ್ನರೈಃ ||೨೯||

ನಾಸ್ತಿ ಮೃತ್ಯುಸಮಂ ದುಃಖಂ ನಾಸ್ತಿ ಮೃತ್ಯುಸಮಂ ಭಯಮ್
ನಾಸ್ತಿ ಮೃತ್ಯುಸಮಸ್ತ್ರಾಸಃ ಸರ್ವೇಷಾಮೇವ ದೇಹಿನಾಮ್ ||೩೦||

[1]ಸ ಭಾರ್ಯಾ[1]ಪುತ್ರಮಿತ್ರಾಣಿ ರಾಜ್ಯೈಶ್ವರ್ಯಸುಖಾನಿ ಚ
ಆಬದ್ಧಾನಿ ಚ ವೈರಾಣಿ ಮೃತ್ಯುಃ ಸರ್ವಾಣಿ [2]ಛಿಂ[2]ದತಿ ||೩೧||

ಹೇ ನರಾಃ ಕಿಂ ನ ಪಶ್ಯಧ್ವಂ ಸಹಸ್ರೇಷ್ವಪಿ ಮಧ್ಯತಃ
ಜನಾಃ ಶತಾಯುಷಃ ಪಂಚ ಭವಂತಿ ನ ಭವಂತಿ ವಾ ||೩೨||

---

ನ= ಸಮರ್ಥಂಗಳಲ್ಲ. ಬಾಂಧವಾಶ್ಚ = ಬಂಧುಗಳೂ ನ ಶಕ್ನುವಂತಿ= ಸಮರ್ಥ-ರಾಗುತ್ತಿರರು. ||೨೮||

ರಸಾಯನತಪೋಜಪ್ಯೈಃ = ನಿರ್ಗುಂಡಿಯ ಕಲ್ಪ ಮುಂತಾದ ರಸಾಯನ ತಪಸ್ಸು ಜಪಗಳನುಳ್ಳಂಥಾ ಯೋಗಸಿದ್ಧೈಃ = ಯೋಗಸಿದ್ಧರಹಂಥಾ ಪ್ರಾಜ್ಞೈಃ =ಬಲ್ಲವರಹಂಥಾ ಮಹಾತ್ಮಭಿಃ=ಮಹಾಪುರುಷರುಗಳಿಂದ ಕಾಲಮೃತ್ಯುರಪಿ= ಕಾಲಮೃತ್ಯುವಾಯಿತ್ತಾದರೂ ಜೀರ್ಯತೇ = ತಗ್ಗುತ್ತಿಹುದು. ಅಲಸೈಃ = ಅಲಸ್ಯವನುಳ್ಳಂಥಾ ನರೈಃ=ಮನುಷ್ಯರುಗಳಿಂದ ನ=ತಗ್ಗುತ್ತಿರದು. ||೨೯||

ಸರ್ವೇಷಾಂ ದೇಹಿನಾಮೇವ = ಸಮಸ್ತ ಪ್ರಾಣಿಗಳಿಗೆ ಮೃತ್ಯುಸಮಂ = ಮೃತ್ಯುವಿಂಗೆ ಸಮಾನವಹಂಥಾ ದುಃಖಂ = ದುಃಖವು ನಾಸ್ತಿ = ಇಲ್ಲ ಮೃತ್ಯುಸಮಂ = ಮೃತ್ಯುವಿಂಗೆ ಸಮಾನವಹಂಥಾ ಭಯಂ= ಭಯವು ನಾಸ್ತಿ= ಇಲ್ಲ. ಮೃತ್ಯುಸಮಃ =ಮೃತ್ಯುವಿಂಗೆ ಸಮಾನವಹಂಥಾ ತ್ರಾಸಃ = ನಡುಗುಹವು ನಾಸ್ತಿ = ಇಲ್ಲ. ||೩೦||

ಭಾರ್ಯಾಪುತ್ರಮಿತ್ರಾಣಿ = ಸ್ತ್ರೀಪುತ್ರಮಿತ್ರರುಗಳನು ರಾಜ್ಯೈಶ್ವರ್ಯ ಸುಖಾನಿ ಚ = ರಾಜ್ಯೈಶ್ವರ್ಯ ಸುಖಂಗಳನು ಆಬದ್ಧಾನಿ = ಎಲ್ಲಾ ದೆಸೆಯಲು ಸಂಬಂಧಿಸಲುಪಟ್ಟಂಥಾ ಸರ್ವಾಣಿ = ಸಮಸ್ತವಹಂಥಾ ವೈರಾಣಿ ಚ= ವೈರವರ್ಗಂಗಳನು ಸ ಮೃತ್ಯುಃ = ಆ ಮೃತ್ಯುವು ಛಿಂದತಿ= ಸಂಹರಿಸುತ್ತಿಹುದು

ಹೇ ನರಾಃ=ಎಲೆ ಮನುಷ್ಯರುಗಳಿರಾ ಸಹಸ್ರೇಷ್ವಪಿ= ಸಾವಿರ ಮನುಷ್ಯರುಗಳಲ್ಲಿಯೂ ಮಧ್ಯತಃ = ನಡುವೆ ಶತಾಯುಷಃ=ನೂರುವರುಷದ ಆಯುಷ್ಯ

---

[1] ಸಭಾರ್ಯಾ (ಘ) [2] ವಿಂ (ಘ)

ಅಶೀತಿಕಾಶ್ಚ ವಿದ್ಯಂತೇ ಕೇಚಿತ್ಸಪ್ತತಿಕಾ ನರಾಃ
ಪರಮಾಯುಸ್ಸ್ಥಿತಿಃ ಷ[1]ಷ್ಟಿಸ್ತದ[2]ಪ್ಯಾಯುರ್ನ ನಿಶ್ಚಿತಮ್ ||೩೩||

ಯಸ್ಯ ಯಾವದ್ಭವೇದಾಯುರ್ದೇಹಿನಃ ಪೂರ್ವಕರ್ಮಭಿಃ
ತಸ್ಯಾರ್ಧಮಾಯುಷೋ ರಾತ್ರಿರ್ಹರತೇऽತ್ರ ಮೃತೋಪ[3]ಮಃ ||೩೪||

ಬಾಲಭಾವೇ ಚ ಮೋಹೇನ ವಾರ್ಧ[4]ಕೇ ಜರಯಾ ತಥಾ
ವರ್ಷಾಣಾಂ ವಿಂಶತಿರ್ಯಾತಿ ಧರ್ಮಕಾಮಾರ್ಥವರ್ಜಿ[5]ತಾ ||೩೫||

---

ವನುಳ್ಳಂಥಾ ಜನಾಃ = ಮನುಷ್ಯರುಗಳು ಪಂಚ = ಐಯಿವರು ಭವಂತಿ ವಾ = ಆಹರೋ ನ ಭವಂತಿ ವಾ = ಆಗರೋ ಕಿಂ ನ ಪಶ್ಯಧ್ವಂ = ಏನು ಕಾರಣ ನೋಡಿ [ಡ]ರಿ? ||೩೨||

ಕೇಚಿತ್ = ಕೆಲಬರು ಅಶೀತಿಕಾಶ್ಚ = ಎಂಬತ್ತು ವರುಷದವರುಗಳು ವಿದ್ಯಂತೇ = ಉಂಟು ಕೇಚಿತ್ ನರಾಃ = ಕೆಲಬರು ಮನುಷ್ಯರುಗಳು ಸಪ್ತತಿಕಾಃ = ಎಪ್ಪತ್ತು ವರುಷದವರುಗಳುಂಟು ಷಷ್ಟಿಃ = ಅಱುವತ್ತು ವರುಷವು ಪರಮಾಯುಃ ಸ್ಥಿತಿಃ = ಪರಮಾಯುವಿನ ವರ್ತನೆಯುಂಟು ತತ್ ಆಯುರಪಿ = ಆ ಆಯುಷ್ಯವೂ ನ ನಿಶ್ಚಿತಂ = ನಿಶ್ಚೈಯಿಸಲುಪಟ್ಟುದಿಲ್ಲ. ||೩೩||

ಯಸ್ಯ ದೇಹಿನಃ = ಆವನಾನೊಬ್ಬ ಪ್ರಾಣಿಗೆ ಪೂರ್ವಕರ್ಮಭಿಃ = ಪೂರ್ವದ ಕರ್ಮಗಳಿಂದ ಆಯುಃ = ಆಯುಷ್ಯವು ಯಾವತ್ = ಎಷ್ಟು ಭವೇತ್ = ಅಹುದು ತಸ್ಯ = ಆತನ ಆಯುಷಃ = ಆಯುಷ್ಯದ ಅರ್ಧಂ = ಅರ್ಧವನು ರಾತ್ರಿಃ = ಇರುಳು ಹರತೇ = ಅಪಹರಿಸುತ್ತಿಹುದು. ಅತ್ರ = ಈ ರಾತ್ರಿಯಲ್ಲಿ ಮೃತೋಪಮಃ = ಸತ್ತಾತಗೆ ಸಮಾನನಾಗಿಹನು. (೩೪)

ಬಾಲಭಾವೇ = ಬಾಲತ್ವದಲ್ಲಿ ಮೋಹೇನ ಚ = ಅಜ್ಞಾನದಿಂದವೂ ತಥಾ = ಹಾಂಗೆ ವಾರ್ಧಕೇ = ವೃದ್ಧಾಪ್ಯದಲ್ಲಿ ಜರಯಾ = ಮುಪ್ಪಿಂದ ವರ್ಷಾಣಾಂ = ಸಂವತ್ಸರಂಗಳ ವಿಂಶತಿಃ = ಇಪ್ಪತ್ತು ಧರ್ಮಕಾಮಾರ್ಥವರ್ಜಿತಾ = ಧರ್ಮಕಾಮಾರ್ಥಂಗಳಿಂದ ವರ್ಜಿತವಾದಂಥಾದಾಗಿ ಯಾತಿ = ಎಯ್ದುತ್ತಿಹುದು .||೩೫||

---

[1] ಪು (ಘ) [2] ಸ್ಯಾ (ಕ) ಮೂಲ [3] ಸ (ಕ) ಮೂಲ
[4] ಕ್ಯೇ (ಘ) [5] ತಾಃ (ಖ ಚ)

ಆಗಂತುಕೈರ್ಭಯೈಃ ಪುಂಸಾಂ ವ್ಯಾಧಿಶೋಕೈರನೇಕಧಾ
[1]ಹ್ರಿಯತೇ[1]ಽರ್ಧಂ ಚ ತತ್ರಾಪಿ ಯಚ್ಛೇಷಂ ತದ್ಧಿ ಜೀವಿತಮ್ ||೩೬||

ಜೀವಿತಾಂತೇ ಚ ಮರಣಂ ಮಹಾಘೋರಮವಾಪ್ನುಯಾತ್
ಜಾಯತೇ ಯೋನಿಕೋಟೀಷು ಮೃತಃ ಕರ್ಮವಶಾತ್ಪುನಃ ||೩೭||

ದೇಹಭೇದೇನ ಯಃ ಪುಂಸಾಂ ವಿಯೋಗಃ ಕರ್ಮಸಂಕ್ಷಯಾತ್
ಮರಣಂ ತದ್ವಿನಿರ್ದಿಷ್ಟಂ ನ ನಾಶಃ ಪರಮಾರ್ಥತಃ ||೩೮||

ಮಹಾತಮಃಪ್ರವಿಷ್ಟಸ್ಯ [2]ಭಿ[2]ದ್ಯಮಾನಸ್ಯ ಕರ್ಮಸು
ಯದ್ದುಃಖಂ ಮರಣೇ ಜಂತೋಃ ನ[3]ತಸ್ಯೇಹೋ[3]ಪಮಾ ಕ್ವಚಿತ್ ||

ತತ್ರಾಪಿ = ಆ ಉಳಿದ ಆಯುಸ್ಸಿನಲ್ಲಿಯೂ ಅರ್ಧಂ ಚ = ಅರ್ಧವು ಆಗಂತುಕೈಃ = ಆಪಮೃತ್ಯುಗಳಿಂದವೂ ಭಯೈಃ = ಭಯಂಗಳಿಂದವೂ ಅನೇಕಧಾ = ಹಲವು ಪ್ರಕಾರವಹಂಥಾ ವ್ಯಾಧಿಶೋಕೈಃ = ವ್ಯಾಧಿಗಳು ಶೋಕಂಗಳಿಂದ ಹ್ರಿಯತೇ = ಅಪಹರಿಸಲುಪಟ್ಟಿತ್ತು. ಶೇಷಂ = ಉಳಿದಂಥಾ ಯತ್ = ಆವುದಾನೊಂದು ಆಯುಸ್ಸುವುಂಟು ತತ್ = ಅದು ಪುಂಸಾಂ = ಪುರುಷರುಗಳಿಗೆ ಜೀವಿತಂ ಹಿ = ಬದುಕುಹವಲಾ. (೩೬)

ಜೀವಿತಾಂತೇ = ಆಯುಸ್ಸಿನ ಕಡೆಯಲ್ಲಿ ಮಹಾಘೋರಂ = ಅತಿಭಯಂಕರವಹಂಥಾ ಮರಣಂ = ಮರಣವನು ಅವಾಪ್ನುಯಾತ್ = ಎಯ್ದುವನು. ಮೃತಃ = ಸತ್ತಾತನು ಕರ್ಮವಶಾತ್ = ಕರ್ಮಾಧೀನದ ದೆಸೆಯಿಂದ ಪುನಃ = ಮರಳಿ ಯೋನಿಕೋಟೀಷು = ಯೋನಿಕೋಟಿಗಳಲ್ಲಿ ಜಾಯತೇ = ಹುಟ್ಟುತ್ತಿಹನು.

ಪುಂಸಾಂ = ಪುರುಷರುಗಳಿಗೆ ಕರ್ಮಸಂಕ್ಷಯಾತ್ = ಕರ್ಮತೀರುವದರ ದೆಸೆಯಿಂದ ದೇಹಭೇದೇನ = ದೇಹಂಗಳ ಭೇದದಿಂದ ಯಃ = ಆವುದಾನೊಂದು ವಿಯೋಗಃ = ತೊಲಗುಹವಹುದು ತತ್ = ಅದು ಮರಣಂ = ಮರಣವೆಂದು ನಿರ್ದಿಷ್ಟಂ = ಹೇಳಲುಪಟ್ಟಿತ್ತು. ಪರಮಾರ್ಥತಃ = ಪರಮಾರ್ಥದ ದೆಸೆಯಿಂದ ನ ನಾಶಃ = ನಾಶವಿಲ್ಲ. ||೩೮||

ಕರ್ಮಸು = ಕರ್ಮಂಗಳಲ್ಲಿ ಭಿದ್ಯಮಾನಸ್ಯ = [4]ತೀರಿದಂಥಾ (?) ತಮಃ = ಅತ್ಯಂತ ಮಬ್ಬಿನೆಯನು[4] ಪ್ರವಿಷ್ಟಸ್ಯ = ಪ್ರವೇಶಿಸಿದಂಥಾ ಜಂತೋಃ = ಪ್ರಾಣಿಗೆ

[1] ಹ್ರೀಯತೇ (ಕ.ಖ.ಚ) [2] ಖಿ (ಕ)
[3] ನ ತಸ್ಯಹ್ಯು (ಘ) [4] ಲುಪ್ತ (ಕ)

ಹಾ ಪಿತರ್ಮಾತರ್ಹಾ ಕಾಂತೇ ಕ್ರಂದತ್ಯೇವಂ ಸುದುಃಖಿತಃ
ಮಂಡೂಕ ಇವ ಸರ್ಪೇಣ ಗ್ರಸ್ಯತೇ ಮೃತ್ಯುನಾ ಜಗತ್ ||೪೦||

ಬಾಂಧವೈಶ್ಚ ಪರಿಷ್ವಕ್ತಃ ಪ್ರಿಯೈಶ್ಚ ಪರಿವಾರಿತಃ
ನಿಶ್ವಸನ್ ದೀರ್ಘಮುಷ್ಣಂ ಚ ಮುಖೇನ ಪರಿಶುಷ್ಯತಾ ||೪೧||

ಚತುಷ್ಪರ್ಯಂತೇಷು ಖಟ್ವಾಯಾಃ[1] ಪರಿವರ್ತ್ಯ ಮುಹುರ್ಮುಹುಃ
ಸಮ್ಮೂರ್ಛಃ ಕ್ಷಿಪತೇऽತ್ಯರ್ಥಂ ಹಸ್ತಪಾದಾನಿತಸ್ತತಃ ||೪೨||

ಖಟ್ವಾಯಾ ವಾಞ್ಛತೇ ಭೂಮಿಂ ಭೂಮೇಃ ಖಟ್ವಾಂ ಪುನರ್ಮಹೀಮ್
ವಿವಸ್ತ್ರಸ್ತ್ಯಕ್ತಲಜ್ಜಶ್ಚ ಮೂತ್ರವಿಷ್ಠಾಪರಿಪ್ಲುತಃ ||೪೩||

---

ಮರಣೇ = ಮರಣದಲ್ಲಿ ಯತ್ = ಆವುದಾನೊಂದು ದುಃಖಂ = ದುಃಖವುಂಟು ತಸ್ಯ = ಆ ದುಃಖಕ್ಕೆ ಉಪಮಾ = ಸಮಾನವಹಂಥಾದು ಇಹ = ಇಲ್ಲಿ ಕ್ವಚಿತ್ = ಒಂದಿಷ್ಟೂ ನ = ಇಲ್ಲ. ||೩೯||

ಹಾ ಪಿತಃ = ಅಯ್ಯೋ ಅಪ್ಪಾ ಹಾ ಮಾತಃ = ಅಕ್ಕಟಾ ಅವ್ವಾ ಕಾಂತೇ = ಎಲೇ ಸ್ತ್ರೀ ಎಂದು ಏವಂ = ಈ ಪ್ರಕಾರವಲ್ಲಿ ಸುದುಃಖಿತಃ = ಅತ್ಯಂತ ದುಃಖಿತನಾಗಿ ಕ್ರಂದತಿ = ಅಳುತ್ತಿಹನು. ಸರ್ಪೇಣ = ಸರ್ಪದಿಂದ ಮಂಡೂಕ ಇವ = ಕಪ್ಪೆಯೀಗೆ[1]ಹೆಗಹಗೆ[2] ಮೃತ್ಯುನಾ = ಮೃತ್ಯುವಿಂದ ಜಗತ್ = ಲೋಕವು ಗ್ರಸ್ಯತೇ = ನುಂಗಲುಪಡುತ್ತಿಹುದು. ||೪೦||

ಬಾಂಧವೈಶ್ಚ = ಬಂಧುಗಳಿಂದವು ಪರಿಷ್ವಕ್ತಃ = ತಕ್ಕೈಸಿ ಕೊಳಲುಪಟ್ಟಾತನಾಗಿ ಪ್ರಿಯೈಶ್ಚ = ಸ್ನೇಹಿತರುಗಳಿಂದವೂ ಪರಿವಾರಿತಃ = ಮುಸುಕಲುಪಟ್ಟಾತನಾಗಿ ಪರಿಶುಷ್ಯತಾ = ಎಲ್ಲಾ ಕಡೆಯುಲ್ಲೂ ಒಣಗಿದಂಥಾ ಮುಖೇನ = ಮುಖದಿಂದ ದೀರ್ಘಂ = ಬಹಳವಹಂಥಾ ಉಷ್ಣಂ ಚ = ಉಷ್ಣವನೂ ನಿಃಶ್ವಸನ್ = ಬಿಸುಸುಯ್ಯುತ್ತಿಹನು. ||೪೧||

ಖಟ್ವಾಯಾಃ = ಮಂಚದ ಚತುಷ್ಪರ್ಯಂತೇಷು = ನಾಲ್ಕು ಕಡೆಗಳಲ್ಲಿ ಮುಹುರ್ಮುಹುಃ = ಅಡಿಗಡಿಗೆ ಪರಿವರ್ತ್ಯ = ಹೊರಳಿ ಅತ್ಯರ್ಥಂ = ಅತ್ಯಂತ ಸಮ್ಮೂರ್ಛಃ = ಮೂರ್ಛೆ ಕವಿದಾತನಾಗಿ ಹಸ್ತಪಾದಾನ್ = ಕೈಕಾಲುಗಳನು ಇತಸ್ತತಃ = ಇತ್ತಲತ್ತಲು ಕ್ಷಿಪತೇ = ಹಾಯಿಕುತ್ತಿಹನು. ||೪೨||

ಖಟ್ವಾಯಾಃ = ಹೊರಸಿನ ದೆಸೆಯಿಂದ ಭೂಮಿಂ = ಭೂಮಿಯನು

---

1 ಯಾಂ (ಘ) 2 ಹೇಗೆಹಾಂಗೆ (ಕ)

[1]ಯಾಚಮಾನಶ್ಚ[1] ಸಲಿಲಂ ಶುಷ್ಕಕಂಠೋಷ್ಠತಾಲುಕಃ
[2]ಚಿಂತಯಾನಶ್ಚ[2] ವಿತ್ತಾನಿ [3]ಕಸ್ಯೈ[3]ತಾನಿ ಮೃತೇ ಮಯಿ ||೪೪||

ಸರ್ವಾಂಗೈಶ್ಚ [4]ಖನನ್[4] ಭೂಮಿಂ ಕಾಲಪಾಶೇನ ಕರ್ಷಿತಃ
ಮ್ರಿಯತೇ ಪಶ್ಯತಾಮೇವ ಗಲೇ ಘು[5]ರು[5]ಘುರಾಯತೇ ||೪೫||

ಜೀವಸ್ತೃಣಜಲೂಕಾವದ್ದೇಹಾದ್ದೇಹಂ ವಿಶೇತ್ಕ್ರಮಾತ್
ಸಂಪ್ರಾ[6]ಪ್ಯೋತ್ತರಮಂ[6]ಶೇನ ದೇಹಂ ತ್ಯಜತಿ ಪೌರ್ವಿಕಮ್ ||೪೬||

---

ವಾಞ್ಛತೇ = ಇಚ್ಛೈಸುತ್ತಿಹನು. ಭೂಮೇಃ = ಭೂಮಿಯ ದೆಸೆಯಿಂದ ಖಟ್ವಾಂ = ಹೊಸಸನು ವಾಞ್ಛತೇ = ಇಚ್ಛೈಸುತ್ತಿಹನು. ಪುನಃ = ಮರಳಿ ಮಹೀಂ = ಭೂಮಿಯನು ವಾಞ್ಛತೇ = ಇಚ್ಛೈಸುತ್ತಿಹನು. ವಿವಸ್ತ್ರಃ = ವಸ್ತ್ರವ ತೊಱೆದಾತನಾಗಿ ತ್ಯಕ್ತಲಜ್ಜಶ್ಚ = ತೊಱೆಯಲುಪಟ್ಟ ಲಜ್ಜೆಯನುಳ್ಳಾತನಾಗಿಯು ಮೂತ್ರವಿಷ್ಟಾಪರಿಪ್ಲುತಃ = ಮೂತ್ರ ಮಲಂಗಳಲ್ಲಿ ಹೊರಳುತ್ತಿಹನು. ||೪೩||

ಶುಷ್ಕಕಂಠೋಷ್ಠತಾಲುಕಃ = ಒಣಗಿದಂಥಾ ಗಂಟಲು ತುಟಿ ಕಟವಾಯನುಳ್ಳಾತನಾಗಿ ಸಲಿಲಂ ಚ = ಉದಕವನೂ ಯಾಚಮಾನಃ = ಬೇಡುತ್ತಿಹನು. ಮಯಿ = ನಾನು ಮೃತೇ ಸತಿ = ಸಾವುತ್ತಿರಲು ಏತಾನಿ ವಿತ್ತಾನಿ ಚ = ಈ ಧನಂಗಳು ಕಸ್ಯ = ಆವಾತಂಗೆ ಅಪುದೆಂದು ಚಿಂತಯಾನಃ = ಚಿಂತಿಸುತ್ತಿಹನು. ||೪೪||

ಸರ್ವಾಂಗೈಶ್ಚ = ಸರ್ವಾಂಗಂಗಳಿಂದವೂ ಭೂಮಿಂ = ನೆಲವನು ಖನನ್ = ಬೆದಕುತ್ತವು ಕಾಲಪಾಶೇನೈವ = ಕಾಲಪಾಶದಿಂದವೆ ಕರ್ಷಿತಃ = ಎಳಸಿಕೊಳಲುಪಟ್ಟಾತನಾಗಿ ಗಲೇ = ಕೊರಳಿನಲ್ಲಿ ಘುರುಘುರಾಯತೇ = ಗುಱು ಗುಱುಗುಟ್ಟುತ್ತಿಹನು [7]ಪಶ್ಯತಾಂ = [ಜನರು ನೋಡುತ್ತಿರುವಾಗಲೇ] ಮ್ರಿಯತೇ = ಸಾವುತ್ತಿಹನು. ||೪೫||

ಜೀವಃ = ಜೀವನು ತೃಣಜಲೂಕಾವತ್ = ಹುಲ್ಲಮೇಲಣ ಜಿಗುಳೆಯೋಪಾದಿಯಲ್ಲಿ ದೇಹಾತ್ = ದೇಹದ ದೆಸೆಯಿಂದ ದೇಹಂ = ಯಾತನಾಶರೀರವನು ಕ್ರಮಾತ್ = ಕ್ರಮದಿಂದ ವಿಶೇತ್ = ಪ್ರವೇಶಿಸುವನು. ಅಂಶೇನ = ಒಂದಂಶದಿಂಹ ಉತ್ತರಂ ದೇಹಂ = ಮೇಲಣದಹಂಥಾ ಯಾತನಾ ಶರೀರವನು ಸಂಪ್ರಾಪ್ಯ = ಎಯ್ದಿ ಪೌರ್ವಿಕಂ = ಪೂರ್ವದ ಶರೀರವನು ತ್ಯಜತಿ = ಬಿಡುತ್ತಿಹನು. ||೪೬||

---

[1] ಪೀತಮಾತ್ರೋಽಪಿ (ಘ) [2] ಚಿಂತ್ಯಮಾನಸ್ತು (ಘ) [3] ಕಸ್ತು (ಘ)
[4] ಖನೇತ್ (ಘ) [5] ರ (ಘ) [6] ಪ್ಯಚೋತ್ತರಾಂ (ಘ)
[7] ಕೊನೆಯಲ್ಲಿ ಈ ಪದವಿದ್ದು 'ನೋಡಲ್ಪಡಲಿ' ಎಂದು ಅರ್ಥೈಸಿದೆ (?)

ಮರಣಾತ್ಪ್ರಾರ್ಥನಾ[1]ದುಃ[1]ಖಮಧಿಕಂ ಹಿ ವಿವೇಕಿನಃ
ಕ್ಷಣಿಕಂ ಮರಣೇ ದುಃಖಮನಂತಂ ಪ್ರಾರ್ಥನಾಕೃತಮ್ ||೪೭||

ಜಗತಾಂ ಪತಿರರ್ಥಿತ್ವಾದ್ವಿಷ್ಣುರ್ವಾಮನತಾಂ ಗತಃ
ಅಧಿಕಃ ಕಃ ಪರಸ್ತಸ್ಮಾದ್ಯೋ ನ ಯಾಸ್ಯತಿ ಲಾಘವಮ್ ||೪೮||

ಜ್ಞಾತಂ ಮಯೇ[2]ದ[2]ಮಧುನಾ ಮೃತೋ ಭವತಿ ಯದ್ಗುರುಃ
ನ ಪರಂ ಪ್ರಾರ್ಥಯೇದ್ಭೂಯಃ ತೃಷ್ಣಾ ಲಾಘವಕಾರಣಮ್ ||೪೯||

ಆದೌ ದುಃಖಂ ತಥಾ ಮಧ್ಯೇ ದುಃಖ[3]ಮಂತೇ[3] ಸುದಾರುಣಮ್
ನಿಸರ್ಗಾತ್ಸರ್ವಭೂತಾನಾಂ ಇತಿ ದುಃಖಪರಂಪರಾ ||೫೦||

---

ವಿವೇಕಿನಃ = ವಿವೇಕಿಯಾದಂಥಾ ಪುರುಷಂಗೆ ಮರಣಾತ್ = ಮರಣದ ದೆಸೆಯಿಂದವೂ ಪ್ರಾರ್ಥನಾದುಃಖಂ = ಯಾಚಿಸುವ ದುಃಖವು ಅಧಿಕಂ ಹಿ = ಅಧಿಕವಹಂಥಾದ್ದಲಾ. ಮರಣೇ = ಮರಣದಲ್ಲಿಯ ದುಃಖಂ = ದುಃಖವು ಕ್ಷಣಿಕಂ = ಕ್ಷಣಮಾತ್ರವಹಂಥಾದು ಪ್ರಾರ್ಥನಾ = ಬೇಡು[4]ವುದು[4] ಅನಂತಂ = ಬಹಳ ದುಃಖವಾಗಿ ಕೃತಂ = ಮಾಡಲುಪಟ್ಟಿತ್ತು.* ||೪೭||

ಜಗತಾಂ = ಲೋಕಂಗಳಿಗೆ ಪತಿಃ = ಒಡೆಯನಹಂಥಾ ವಿಷ್ಣುಃ = ಮಹಾವಿಷ್ಣು ಅರ್ಥಿತ್ವಾತ್ = ಯಾಚಕನಹತನದ ದೆಸೆಯಿಂದ ವಾಮನತಾಂ = ವಾಮನನಹತನವನು ಗತಃ = ಎಯ್ದಿದನು. ವಾಮನನೆಂದಡೆ ಹ್ರಸ್ವನೆಂಬುದರ್ಥ. ಅಧಿಕಃ = ಉತ್ಕೃಷ್ಟನಹಂಥಾ ಪರಃ = ಅನ್ಯನಹಂಥಾ ಯಃ ಕಃ = ಆವನಾನೊಬ್ಬನು ತಸ್ಮಾತ್ = ಆ ಯಾಚಕತ್ವದ ದೆಸೆಯಿಂದ ಲಾಘವಂ = ಲಘುತ್ವವನು ನ ಯಾಸ್ಯತಿ = ಎಯ್ದನು ? ಬೇಡುವುದಱಿಂದ ಲಘುತ್ವವನೆಯ್ದುವನೆಂಬುದರ್ಥ. ||೪೮||

ಮಯಾ = ಎನ್ನಿಂದ ಇದಂ = ಇದು ಜ್ಞಾತಂ = ಅಱಿಯಲುಪಟ್ಟಿತ್ತು ಅಧುನಾ = ಈಗವು ಯತ್ = ಆವುದಾನೊಂದು ಕಾರಣವಾಗಿ ಗುರುಃ = ಗುರುತ್ವವನುಳ್ಳಾತನು ಪ್ರಾರ್ಥಯೇತ್ = ಬೇಡುವನು. ಮೃತಃ = ಸತ್ತಾತನು ಭವತಿ = ಆಗುತ್ತಿಹನು. ಭೂಯಃ = ಮರಳಿ ತೃಷ್ಣಾ = ಬಯಸುಹವು ಲಾಘವಕಾರಣಂ = ಲಘುತ್ವಕ್ಕೆ ಕಾರಣವು ನ ಪರಂ = ಶ್ರೇಷ್ಠನಲ್ಲಾ. ||೪೯||

ಆದೌ = ಮೊದಲು ಹುಟ್ಟುವಲ್ಲಿ ದುಃಖಂ = ದುಃಖವು ತಥಾ = ಹಾಂಗೆ

---

[1] ದ್ದುಃ (ಘ) [2] ತ್ಥ (ಘ) [3] ಸ್ತ್ರೈ (ಕ) ಮೂಲ. [4] ಹವು (ಖ ಚ)
*['ಪ್ರಾರ್ಥನೆಯಿಂದ ಉಂಟುಮಾಡಲ್ಪಟ್ಟ ದುಃಖವು ಅನಂತವಾದುದು']

ವರ್ತಮಾನಾನ್ಯತೀತಾನಿ ದುಃಖಾನ್ಯೇತಾನಿ ಯಾನಿ ತು
ನರಾ ನ ಭಾವಯಂತ್ಯಜ್ಞಾ ನ ವಿರಜ್ಯಂತಿ ತೇನ ತೇ ||೫೧||

ಅತ್ಯಾಹಾರಾನ್ಮ[1]ಹಾದುಃಖಂ[1] ಅನಾಹಾರಾನ್ಮಹಾಭಯಮ್
ತುಲಿತೇ ಜೀವಿತೇ ಕಷ್ಟಂ ಅನ್ನೇऽಪ್ಯೇವಂ ಕುತಸ್ಸುಖಮ್ ||೫೨||

ಕ್ಷುಧಾ ಹಿ ಸರ್ವರೋಗಾಣಾಂ ವ್ಯಾಧಿಶ್ಶ್ರೇಷ್ಠತಮಃ ಸ್ಮೃತಃ
ಸ ಚಾನ್ನೌಷಧಲೇಪೇನ ಕ್ಷಣಮಾತ್ರೇಣ ಶಾಮ್ಯತಿ ||೫೩||

---

ಮಧ್ಯೇ = ಮಧ್ಯದಲ್ಲಿಯು ದುಃಖಂ = ದುಃಖವು ಅಂತೇ = ಅಂತ್ಯಕಾಲದಲ್ಲಿ ಸುದಾರುಣಂ = ಅತಿ ಭಯಂಕರವಹಂಥಾ ದುಃಖವು. ನಿಸರ್ಗಾತ್ = ಸ್ವಭಾವದ ದೆಸೆಯಿಂದ ಸರ್ವಭೂತಾನಾಂ = ಸಮಸ್ತ ಪ್ರಾಣಿಗಳಿಗೆ ಇತಿ = ಈ ಪ್ರಕಾರ ದಲ್ಲಿ ದುಃಖಪರಂಪರಾ = ದುಃಖಂಗಳ ಪಾರಂಪರೆಯುಹುದು. ||೫೦||

ಅಜ್ಞಾಃ = ಅಜ್ಞಾನಿಗಳಹಂಥಾ ನರಾಃ = ಮನುಷ್ಯರುಗಳು ಅತೀತಾನಿ = ಹಿಂದಾದಂಥಾ ವರ್ತಮಾನಾನಿ = ವರ್ತಿಸುತ್ತಿದ್ದಂಥಾ ಯಾನಿ = ಆವವು ಕೆಲವು ದುಃಖಾನಿ = ದುಃಖಂಗಳುಂಟು. ಏತಾನಿ = ಈ ದುಃಖಂಗಳನ್ನು ನ ಭಾವಯಂತಿ = ನೆನವುತ್ತಿರರು. ತೇನ = ಅದು ಕಾರಣದಿಂದ ತೇ = ಆ ಮನುಷ್ಯರುಗಳು ನ ವಿರಜ್ಯಂತಿ = ವಿರಕ್ತರಾಗುತ್ತಿರರು. ||೫೧||

ಅತ್ಯಾಹಾರಾತ್ = ಅತ್ಯಂತ ಆಹಾರದ ದೆಸೆಯಿಂದ ಮಹಾದುಃಖಂ = ಅತಿದುಃಖವು ಅನಾಹಾರಾತ್ = ಆಹಾರವಿಲ್ಲದ ದೆಸೆಯಿಂದ ಮಹಾಭಯಂ = ಅತ್ಯಂತ ಭಯವು. ತುಲಿತೇ ಸತಿ = ತೂಕಪ್ರಮಾಣವಾಗುತ್ತಿರಲು ಜೀವಿತಂ = ಜೀವಿಸುಹವು ಕಷ್ಟಂ = ದುಃಖವು ಏವಂ = ಈ ಪ್ರಕಾರದಲ್ಲಿ ಅನ್ನೇऽಪಿ = ಅನ್ನದಲ್ಲಿಯೂ ಸುಖಂ = ಸುಖವು ಕುತಃ ? = ಎಲ್ಲಿಯದು ? ||೫೨||

ಕ್ಷುಧಾ = ಹಸಿವು ಸರ್ವರೋಗಾಣಾಂ = ಸಮಸ್ತರೋಗಂಗಳಿಗೆ ಶ್ರೇಷ್ಠತಮಃ = ಅತ್ಯಧಿಕವಹಂಥಾ ವ್ಯಾಧಿಃ = ವ್ಯಾಧಿಯೆಂದು ಸ್ಮೃತೋ ಹಿ = ಹೇಳಲುಪಟ್ಟುದಲಾ ಸ ಚ = ಆ ಹಸಿವೆಂಬ ವ್ಯಾಧಿಯು ಅನ್ನೌಷಧಲೇಪೇನ = ಅನ್ನವೆಂಬ ಔಷಧ ಲೇಪನದಿಂದ ಕ್ಷಣಮಾತ್ರೇಣ = ಒಂದು ಕ್ಷಣಮಾತ್ರದಿಂದ ಶಾಮ್ಯತಿ = ತಗ್ಗುತ್ತಿಹುದು. ||೫೩||

---

[1] ಹದ್ದುಃಖಂ (ಘ) [2] ಣಾ (ಕ)

ಕ್ಷುದ್ವ್ಯಾಧಿವೇದನಾ ತೀವ್ರಾ ನಿಶ್ಶೇಷಬಲಕೃಂತನೀ
[1]ತಯಾಽಭಿಭೂತೋ ಮ್ರಿಯತೇ ಯಥಾನ್ಯೈರ್ವ್ಯಾಧಿಭಿರ್ನರಃ||೫೪||

ಷಡ್ರಸೇನಾಪಿ ಕಿಂ ತೇನ ಜಿಹ್ವಾಗ್ರಪರಿವರ್ತಿನಾ
ಯತ್ ಕ್ಷಣಾರ್ಧಾರ್ಧಕಾಲೇನ ಕಂಠಂ ಪ್ರಾಪ್ಯಾ[2]ತಿ[2]ವರ್ತತೇ ||೫೫||

ಇತಿ ಕ್ಷುದ್ವ್ಯಾಧಿತಪ್ತಾನಾಮನ್ನಮೌಷಧವತ್ ಸ್ಮೃತಮ್[3]
ನ ತತ್ಸುಖಾಯ ಮಂತವ್ಯಂ ಪರಮಾರ್ಥೇನ ಪಂಡಿತೈಃ ||೫೬||

ಮೃತೋಪಮಶ್ಚ ಯಶ್ಶೇತೇ[4] ಸರ್ವಕಾರ್ಯವಿವರ್ಜಿತಃ
ತಸ್ಯಾಪಿ ಚ ಕುತಸ್ಸೌಖ್ಯಂ ತಮಸಾಚ್ಛಾದಿತಾತ್ಮನಃ ||೫೭||

---

ಕ್ಷುದ್ವ್ಯಾಧಿವೇದನಾ = ಹಸಿವೆಂಬ ವ್ಯಾಧಿಯ ವೇದನೆ ತೀವ್ರಾ = ಬಲಿಷ್ಠವಹಂಥಾದು. ನಿಶ್ಶೇಷಬಲಕೃಂತನೀ = ಏನೂ ಉಳಿಯದೆ ಸತ್ತ್ವವ ಕೆಡಿಸುವಂಥಾದು. ತಯಾ = ಆ ಹಸಿವೆಂಬ ವ್ಯಾಧಿಯಿಂದ ಅಭಿಭೂತಃ = ಮುಂದುಗೆಟ್ಟಂಥಾ ನರಃ = ಮನುಷ್ಯನು ಮ್ರಿಯತೇ = ಸಾವುತ್ತಿಹನು. ಅನ್ಯೈರ್ವ್ಯಾಧಿಭಿರ್ಯಥಾ = ಉಳಿದ ವ್ಯಾಧಿಗಳಿಂ[5]ದೆಹಗಹಗೆ[5] ||೫೪||

ಜಿಹ್ವಾಗ್ರಪರಿವರ್ತಿನಾ = ನಾಲಗೆಯ ತುದಿಯಲ್ಲಿ ವರ್ತಿಸುತ್ತಿದ್ದಂಥಾ ತೇನ ಷಡ್ರಸೇನಾಪಿ = ಆ ಷಡುರಸಾನ್ನದಿಂದವು ಕಿಂ = ಏನು ಪ್ರಯೋಜನವು ? ಯತ್ = ಆವುದಾನೊಂದು ಕಾರಣವಾಗಿ, ಕ್ಷಣಾರ್ಧಾರ್ಧಕಾಲೇನ = ಒಂದು ಕ್ಷಣಾರ್ಧದ ಅರ್ಧಕಾಲದಿಂದ ಕಂಠಂ = ಕೊರಳನು ಪ್ರಾಪ್ಯ = ಎಯ್ದಿ ಅತಿವರ್ತತೇ = ಇಳಿವುತ್ತಿಹುದು. ||೫೫||

ಇತಿ = ಈ ಪ್ರಕಾರದಲ್ಲಿ ಕ್ಷುದ್ವ್ಯಾಧಿತಪ್ತಾನಾಂ = ಹಸಿವೆಂಬ ವ್ಯಾಧಿಯಿಂದ ಬೆಂದಂಥಾ ಅವರುಗಳಿಗೆ ಅನ್ನಂ = ಅಶನವು ಔಷಧವತ್ = ಔಷಧದೋಪಾದಿಯೆಂದು ಸ್ಮೃತಂ = ಹೇಳಲ್ಪಟ್ಟಿತ್ತು. ತತ್ = ಆ ಅನ್ನವು ಪರಮಾರ್ಥೇನ = ಪರಮಾರ್ಥದಿಂದ ಪಂಡಿತೈಃ = ವಿದ್ವಾಂಸ್ರುಗಳಿಂದ ಸುಖಾಯ = ಸುಖಕ್ಕೋಸ್ಕರ ನ ಮಂತವ್ಯಂ = ಮನ್ನಿಸಲು ಯೋಗ್ಯವಲ್ಲ.

ಯಶ್ಚ = ಆವನಾನೊಬ್ಬಾತನು ಮೃತೋಪಮಃ = ಸತ್ತಾತಂಗೆ ಸಮಾನನಾಗಿ ಸರ್ವಕಾರ್ಯವಿವರ್ಜಿತಃ = ಸಮಸ್ತ ಉದ್ಯೋಗವಿಲ್ಲದಾತನಾಗುತವು

---

[1] ತದಾ (ಘ) [2] ಪಿ (ಕ) ಮೂಲ [3] ಮೀರಿತಂ (ಘ)
[4] ಮುಸ್ಸ್ವಯಂ ಶೇತೇ (ಘ). [5] ಹೇಗೋ ಹಾಗೆ (ಕ)

ಪ್ರಬೋಧೇಽಪಿ ಕುತಸ್ಸೌಖ್ಯಂ ಕಾರ್ಯೈರುಪಹತಾತ್ಮನಃ
ಕೃಷಿವಾಣಿಜ್ಯಸೇವಾಧ್ವಗೋರಕ್ಷಾದಿಪರಿಶ್ರಮೈಃ ||೫೮||

ಪ್ರಾತರ್ಮೂತ್ರಪುರೀಷಾದ್ಯೈಃ ಮಧ್ಯಾಹ್ನೇ ಕ್ಷುತ್ಪಿಪಾಸಯಾ
ತೃಪ್ತಾಃ ಕಾಮೇನ ಬಾಧ್ಯಂತೇ ನಿದ್ರಯಾ ನಿಶಿ ಜಂತವಃ ||೫೯||

ಅರ್ಥಾನಾಮರ್ಜನೇ[1] ದುಃಖಂ [2]ಅರ್ಜಿತಾನಾಂ ಚ ರಕ್ಷಣೇ
ನಾಶೇ ದುಃಖಂ ವ್ಯಯೇ ದುಃಖಂ [3]ಅರ್ಥೇಽಪ್ಯೇವಂ[3] ಕುತಸ್ಸುಖಮ್

---

ಶೇತೇ = ಮಲಗಿಹನು. ತಮಸಾ = ಮಱವೆಯಿಂದ ಆಚ್ಛಾದಿತಾತ್ಮನಃ = ಮುಸುಕಲುಪಟ್ಟ ಆತ್ಮನನುಳ್ಳಂಥಾ ತಸ್ಯಾಪಿ ಚ = ಆತಂಗೆಯೂ ಸೌಖ್ಯಂ = ಸುಖವು ಕುತಃ = ಎಲ್ಲಿಯದು ? ||೫೭||

ಕೃಷಿವಾಣಿಜ್ಯಸೇವಾಧ್ವಗೋರಕ್ಷಾದಿಪರಿಶ್ರಮೈಃ = ಆರಂಭ ಬೆವಹಾರ ಓಲೈಸುಹ ದಾರಿಯ ನಡಹ ಗೋವುಗಳ ರಕ್ಷಿಸುಹ ಮೊದಲಾದ ಬಳಲಿಕೆಯನುಳ್ಳಂಥಾ ಕಾರ್ಯೈಃ = ಕಾರ್ಯಂಗಳಿಂದ ಉಪಹತಾತ್ಮನಃ = ಕೆಡಲುಪಟ್ಟ ಚಿತ್ತವನುಳ್ಳಾತಂಗೆ ಪ್ರಬೋಧೇಽಪಿ = ಎಚ್ಚತ್ತಲ್ಲಿಯೂ ಸೌಖ್ಯಂ = ಸುಖವು ಕುತಃ = ಎಲ್ಲಿಯದು ? ||೫೮||

ಜಂತವಃ = ಪ್ರಾಣಿಗಳು ಪ್ರಾತಃ = ಉದಯದಲ್ಲಿ ಮೂತ್ರಪುರೀಷಾದ್ಯೈಃ = ಮೂತ್ರ ಮಲ ಮೊದಲಾಗಿದ್ದಂಥಾ ಅವಱಿಂದವು ಮಧ್ಯಾಹ್ನೇ = ಮಧ್ಯಾಹ್ನದಲ್ಲಿ ಕ್ಷುತ್ಪಿಪಾಸಯಾ = ಹಸಿವು ತೃಷೆಯಿಂದವು ತೃಪ್ತಾಃ = ಊಟದಿಂದ ತೃಪ್ತಿಯಾದಂಥಾ ಅವರುಗಳು ಕಾಮೇನ = ಕಾಮದಿಂದ ನಿಶಿ = ರಾತ್ರಿಯಲ್ಲಿ ನಿದ್ರಯಾ = ನಿದ್ರೆಯಿಂದ ಬಾಧ್ಯಂತೇ = ಬಾಧಿಸಿಕೊಳುತ್ತಿಹರು. ||೫೯||

ಅರ್ಥಾನಾಂ = ಅರ್ಥಂಗಳ ಅರ್ಜನೇ = ಘಳಿಸುವಲ್ಲಿ ದುಃಖಂ = ದುಃಖವು. ಅರ್ಜಿತಾನಾಂ = ಘಳಿಸಿದಂಥಾ ಅರ್ಥಂಗಳ ರಕ್ಷಣೇ ಚ = ರಕ್ಷಿಸುವಲ್ಲಿಯೂ ದುಃಖಂ = ದುಃಖವು. ನಾಶೇ = ಅರ್ಥನಾಶದಲ್ಲಿ ದುಃಖಂ = ದುಃಖವು. ವ್ಯಯೇ = ವೆಚ್ಚವಾದಲ್ಲಿ ದುಃಖಂ = ದುಃಖವು. ಅರ್ಥೇಽಪಿ = ಅರ್ಥದಲ್ಲಿಯೂ ಏವಂ = ಈ ಪ್ರಕಾರದಲ್ಲಿ ಸುಖಂ = ಸುಖವು ಕುತಃ = ಎಲ್ಲಿಯದು ? ||೬೦||

---

1 ಅರ್ಜನೇಽ (ಕ.ಖ) 2 ಅ (ಕ.ಖ) 3 ಅರ್ಥಸ್ಯೈವಂ (ಗ)

ಚೋರೇಭ್ಯಸ್ಸಲಿಲಾದಗ್ನೇಃ ಸ್ವಜನಾತ್ಪಾರ್ಥಿವಾದಪಿ
ಭಯಮರ್ಥವತಾಂ ನಿತ್ಯಂ ಮೃತ್ಯೋರ್ದೇಹಭೃತಾಮಿವ ||೬೧||

ಖೇ ಯಥಾ ಪಕ್ಷಿಭಿರ್ಮಾಂಸಂ ಭಕ್ಷ್ಯತೇ ಶ್ವಾಪದೈರ್ಭುವಿ
ಜಲೇ ಚ ಭಕ್ಷ್ಯತೇ ಮತ್ಸ್ಯೈಃ ತಥಾ ಸರ್ವತ್ರ ವಿತ್ತವಾನ್ ||೬೨||

[1]ವಿಮೋಹಯಂತಿ ಸಂಪತ್ಸು ತಾಪಯಂತಿ ವಿಪತ್ತಿಷು
ಕ್ಲೇಶಯಂತ್ಯಾರ್ಜ[2]ನೇ ಕಾಲೇ ಕದಾ[3]ಽನ್ವರ್ಥಾಸ್ಸುಖಾವಹಾಃ ||೬೩||

---

ಚೋರೇಭ್ಯಃ = ಕಳ್ಳರ ದೆಸೆಯಿಂದ ಸಲಿಲಾತ್ = ಉದಕದ ದೆಸೆಯಿಂದ ಅಗ್ನೇಃ = ಅಗ್ನಿಯ ದೆಸೆಯಿಂದ ಸ್ವಜನಾತ್ = ದಾಯಾದ್ಯರ ದೆಸೆಯಿಂದ ಪಾರ್ಥಿವಾದಪಿ = ಅರಸಿನ ದೆಸೆಯಿಂದವೂ ಅರ್ಥವತಾಂ = ಧನವಾನ್ನುಗಳಿಗೆ ನಿತ್ಯಂ = ಆವಾಗನೂ ಭಯಂ = ಭಯವು. ಕಥಮಿವ = ಅದು ಹೇಂಗೆಯೂ ಎಂದಡೆ ಮೃತ್ಯೋಃ = ಮೃತ್ಯುವಿನ ದೆಸೆಯಿಂದ ದೇಹಭೃತಾಮಿವ = ಪ್ರಾಣಿಗಳಿಗೆ [4]ಹಗಹಗೆ[4]. ||೬೧||

ಮಾಂಸಂ = ಮಾಂಸವು ಪಕ್ಷಿಭಿಃ = ಹಕ್ಕಿಗಳಿಂದ ಯಥಾ = ಎಹಗೆ ಖೇ = ಆಕಾಶದಲ್ಲಿ ಭಕ್ಷ್ಯತೇ = ಭಕ್ಷಿಸಲುಪಡುತ್ತಿಹುದು. ಭುವಿ = ಭೂಮಿಯಲ್ಲಿ ಶ್ವಾಪದೈಃ = ನಾಯಿಗಳಿಂದ ಭಕ್ಷ್ಯತೇ = ಭಕ್ಷಿಸಲುಪಡುತ್ತಿಹುದು. ಜಲೇ ಚ = ಉದಕದಲ್ಲಿಯೂ ಮತ್ಸ್ಯೈಃ = ಮತ್ಸ್ಯಂಗಳಿಂದ ಭಕ್ಷ್ಯತೇ = ಭಕ್ಷಿಸಲುಪಡುತ್ತಿಹುದು. ತಥಾ = ಹಾಂಗೆ ವಿತ್ತವಾನ್ = ಧನವುಳ್ಳಾತನು ಸರ್ವತ್ರ = ಎಲ್ಲರಿಂದವು ಬಾಧಿಸಿಕೊಳಲುಪಡುತ್ತಿಹನು. ||೬೨||

ಸಂಪತ್ಸು = ಐಶ್ವರ್ಯಂಗಳಲ್ಲಿ ವಿಮೋಹಯಂತಿ = ಮಱವೆಯನುಳ್ಳವರುಗಳಾಗುತ್ತಿಹರು. ವಿಪತ್ತಿಷು = ವಿಪತ್ಕಾಲಂಗಳಲ್ಲಿ ತಾಪಯಂತಿ = ದುಃಖಿಸುತ್ತಿಹೆರು. ಆರ್ಜನೇಕಾಲೇ = ಘಳಿಸುವ ಕಾಲದಲ್ಲಿ ಕ್ಲೇಶಯಂತಿ = ಕ್ಲೇಶಗೊಳುತ್ತಿಹರು. ಅನ್ವರ್ಥಾಃ = ಧನವಾನ್ನುಗಳು ಕದಾ = ಎಂದಿಗೆ ಸುಖಾವಹಾಃ = ಸುಖಿಗಳಹರು.* || ೬೩||

---

1 ಸಂ (ಘ) 2 ನಾ(ಘ) 3 ಹ್ಯ (ಘ) 4 ಹೇಗೋ ಹಾಗೆ (ಕ)

* [ಸಂಪತ್ತುಗಳಲ್ಲಿ ಮರವೆಯನ್ನೂ ವಿಪತ್ತುಗಳಲ್ಲಿ ದುಃಖವನ್ನೂ ಸಂಪಾದನೆ ಮಾಡುವ ಕಾಲದಲ್ಲಿ ಕ್ಲೇಶವನ್ನೂ ಉಂಟುಮಾಡತಕ್ಕವು. ಆದ್ದರಿಂದ ಅರ್ಥಗಳು ಯಾವಾಗ ತಾನೇ ಸುಖವನುಂಟುಮಾಡುವವು ? ] [ಅರ್ಥಾಃ ಕದಾ ನನು ಸುಖಾವಹಾಃ ?]

ಯಶ್ಚಾರ್ಥಪತಿರುದ್ವಿಗ್ನೋ ಯಶ್ಚ ಸರ್ವಾರ್ಥನಿಸ್ಪೃಹಃ
ತಯೋರರ್ಥಪತಿರ್ದುಃಖೀ ಸುಖೀ ಸರ್ವಾರ್ಥನಿಸ್ಪೃಹಃ ||೬೪||

ವಿವಾಹವಿಸ್ತರೇ ದುಃಖಂ ತದ್ಗರ್ಭೋದ್ವಹನೇ ಪುನಃ
ಪ್ರಸವೇಽಪತ್ಯದೋಷೈಶ್ಚ ದುಃಖಂ ವಿಷ್ಠಾದಿಕರ್ಮಭಿಃ ||೬೫||

ದಂತಾದಿರೋಗಃ ಪುತ್ರಸ್ಯ ಹಾ ಕಷ್ಟಂ ಕಿಂ ಕರೋಮ್ಯಹಮ್
ಗಾವೋ ನಷ್ಟಾಃ ಕೃಷಿರ್ಭಗ್ನಾ ಕ್ವಾಪ್ಯಶ್ವಾಃ ಪ್ರಪಲಾಯಿತಾಃ ||೬೬||

*ಅಮೀ[1]ಪ್ರಾಹು[1]ಣಿಕಾಃ ಪ್ರಾಪ್ತಾ, ಭಗ್ನಂ ಛಿದ್ರಂ ಚ ಮೇ ಗೃಹಮ್
[2]ಬಾಲಾಪತ್ಯಾ[2] ಚ ಮೇ ಭಾರ್ಯಾ ಕಿಂ ಕರಿಷ್ಯೇ[3] ನಿರಿಂಧನಮ್[3] ||೬೭||

---

ಯಶ್ಚ = ಅವನಾನೊಬ್ಬನು ಅರ್ಥಪತಿಃ = ಧನಪತಿಯಹಂಥಾ ಆತನು ಯಶ್ಚ = ಆವನಾನೊಬ್ಬನು ಸರ್ವಾರ್ಥನಿಸ್ಪೃಹಃ = ಸಮಸ್ತ ಅರ್ಥಂಗಳಲ್ಲಿ ಇಚ್ಛೆಯಿಲ್ಲದಾತನು ತಯೋಃ = ಅವರಿಬ್ಬರೊಳಗೆ ಅರ್ಥಪತಿಃ = ಧನಪತಿಯು ಹಾತನು ಉದ್ವಿಗ್ನಃ = ಮುಂದುಗೆಟ್ಟಂಥಾ ದುಃಖೀ = ದುಃಖಿಯೆನಿಸುವನು. ಸರ್ವಾರ್ಥನಿಸ್ಪೃಹಃ = ಸಮಸ್ತ ದ್ರವ್ಯಂಗಳಲ್ಲಿ ಇಚ್ಛೆಯಿಲ್ಲದಾತನು ಸುಖೀ = ಸುಖಿಯೆನಿಸುವನು. ||೬೪||

ವಿವಾಹವಿಸ್ತರೇ ಚ = ವಿವಾಹದ ಸಂಭ್ರಮದಲ್ಲಿಯೂ ದುಃಖಂ = ದುಃಖವು ಪುನಃ = ಮರಳಿ ಗರ್ಭೋದ್ವಹನೇ = ಗರ್ಭವ ಧರಿಸುವಲ್ಲಿ ತತ್ = ಅಂಥಾ ದುಃಖವು. ಪ್ರಸವೇ = ಹೆರುವ ಕಾಲದಲ್ಲಿ ವಿಷ್ಟಾದಿಕರ್ಮಭಿಃ = ಮಲವಿಸರ್ಜನೆ ಅಡ್ಡಸಿಕ್ಕುಹ ಮೊದಲಾದ ವ್ಯಾಪಾರವನುಳ್ಳಂಥಾ ಅಪತ್ಯದೋಷೈಶ್ಚ = ಶಿಶುವಿನ ದೋಷಂಗಳಿಂದವೂ ದುಃಖಂ = ದುಃಖವು. ಇದು ಸ್ತ್ರೀಯರಿಗೆ ಹೇಳಿದಂಥಾ ನಿರ್ಣಯವು. ||೬೫||

ಪುತ್ರಸ್ಯ = ಮಗಂಗೆ ದಂತಾದಿರೋಗಃ = ಹಲ್ಲಶೂಲೆ ಮೊದಲಾದಂಥಾ ರೋಗವು. ಹಾ = ಅಕ್ಕಟಾ ಕಷ್ಟಂ = ದುಃಖವು. ಅಹಂ = ನಾನು ಕಿಂ ಕರೋಮಿ = ಏನಮಾಡುವೆನು ಎನುತ್ತಿಹನು. ಗಾವಃ = ಗೋವುಗಳು ನಷ್ಟಾಃ = ತಪ್ಪಿಹೋದವು. ಕೃಷಿಃ = ಆರಂಭವು ಭಗ್ನಾ = ಕೆಟ್ಟಿತ್ತು- ಅಶ್ವಾಃ = ಕುದುರೆಗಳು[4] ಕ್ವಾಪಿ = ಎಲ್ಲಿಗೋ ಪ್ರಪಲಾಯಿತಾಃ = ಓಡಿಹೋದವು. ||೬೬||

*ಪ್ರಾಹುಣಿಕಾಃ = ಹೇಳಿದಂಥಾ ಅಮೀ = ಇವು ಪ್ರಾಪ್ತಾಃ = ಆದವು*

---

[1] ಪ್ರಾಘು (ಘ) [2] ಬಾಲಹತ್ಯಾ (ಘ) ನಿರಿಂಧನಃ (ಘ)

* ಅಮೀ ಪ್ರಾಘುಣಿಕಾಃ ಪ್ರಾಪ್ತಾಃ = ಈ ಅತಿಥಿಗಳೂ ಬಂದರು ಎಂದಿರಬೇಕಿತ್ತು ಮೇಲೆ ಹೇಳಿದಂಥಾ ಅಮೀ = ಇವು [ಈ]. ಪ್ರಾಹುಣಿಕಾಃ = ಕಥೆಗಳೂ ಪ್ರಾಪ್ತಾಃ =

ಪ್ರದಾನಕಾಲಃ[1] ಕನ್ಯಾಯಯಾಃ ಸದೃಶಃ ಕೋ ವರೋ ಭವೇತ್
ಇತಿ ಚಿಂತಾಭಿಭೂತಾನಾಂ ಕುತಸ್ಸೌಖ್ಯಂ ಕುಟುಂಬಿನಾಮ್ ||೬೮||

ಉಪೇಂದ್ರವಜ್ರಾವೃತ್ತಂ ||

ಕುಟುಂಬಚಿಂತಾಕುಲಿತಸ್ಯ ಪುಂಸಃ
ಶ್ರುತಂ ಚ ಶೀಲಂ ಚ ಗುಣಾಶ್ಚ ಸರ್ವೇ ।
ಅಪಕ್ವಕುಂಭೇ ನಿಹಿತಾ ಇವಾಪಃ
ಪ್ರಯಾಂತಿ ದೇಹೇನ ಸಮಂ ವಿನಾಶಮ್ ||೬೯||

---

ಮೇ = ಎನ್ನ ಗೃಹಂ ಚ = ಮನೆಯೂ ಭಗ್ನಂ = ಮುರಿಯಿತ್ತು. ಛಿದ್ರಂ = ಖಂಡಿಯಾಯಿತ್ತು. ಮೇ = ಎನ್ನ ಭಾರ್ಯಾ = ಹೆಂಡತಿ ಬಾಲಾಪತ್ಯಾ = ಹಸುಮಗನನುಳ್ಳಾಯಕನು. ನಿರಿಂಧನಂ = ಮನೆಗೆ ಕಟ್ಟಿಗೆಯಿಲ್ಲ. ಕಿಂ ಕರಿಷ್ಯೇ = ಏನ ಮಾಡುವೆನು ? ||೬೭||

ಕನ್ಯಾಯಾಃ = ಕನ್ನಿಕೆಯ ಪ್ರದಾನಕಾಲಃ = ಕೊಡುವ ಕಾಲವು. ಸದೃಶಃ ಸಮಾನವನಹಂಥಾ ವರಂ = ವರನು ಕಃ = ಆವಾತನು ಭವೇತ್ = ಅಹನು ? ಇತಿ = ಈ ಪ್ರಕಾರದಲ್ಲಿ ಚಿಂತಾಭಿಭೂತಾನಾಂ = ಚಿಂತೆಯಿಂದ ಮುಂದುಗೆಟ್ಟಂಥಾ ಕುಟುಂಬಿನಾಂ = ಕುಟುಂಬವನುಳ್ಳಂಥಾ ಸಂಸಾರಿಗಳಿಗೆ ಸೌಖ್ಯಂ = ಸುಖವು ಕುತಃ = ಎಲ್ಲಿಯದು ? ||೬೮||

ಕುಟುಂಬಚಿಂತಾಕುಲಿತಸ್ಯ = ಕುಟುಂಬದ ಚಿಂತೆಯಿಂದ ವ್ಯಾಕುಲನಹಂಥಾ ಪುಂಸಃ = ಪುರುಷನ ಶ್ರುತಂ ಚ = ಶಾಸ್ತ್ರಶ್ರವಣವು ಶೀಲಂ ಚ = ವರ್ತನವೂ ಸರ್ವೇ ಗುಣಾಶ್ಚ = ಸಮಸ್ತ ಗುಣಂಗಳೂ ಅಪಕ್ವಕುಂಭೇ = ಹಸಿಯ ಮಡಕೆಯಲ್ಲಿ ನಿಹಿತಾಃ = ಎರೆಯಲುಪಟ್ಟಂಥಾ ಆಪ ಇವ = ಉದಕಂಗಳು [2]ಎಹಗಹಗೆ[2] ದೇಹೇನ ಸಮಂ = ದೇಹದೊಡನೆ ವಿನಾಶಂ = ಕೆಡುಹವನು ಪ್ರಯಾಂತಿ = ಎಯ್ದುತ್ತಿಹವು. ||೬೯||

---

ಆದವು (ಅಪವಾದ ಕಥೆಗಳೂ ಪ್ರಾಪ್ತವಾದವು.) ಎಂಬ ಅಭಿಪ್ರಾಯವೂ ಸಹ ಇಲ್ಲಿ ಬರುತ್ತದೆ. ಪ್ರಾಕುಣಿಕ, "ಪ್ರಾಘುಣ, ಪ್ರಾಹುಣ, ಪ್ರಾಘುಣಕ, ಪ್ರಾಹುಣಕ, ಪ್ರಾಹುಣಿಕ"—ಇವು ಪರ್ಯಾಯ ಪದಗಳು. 'ಸಂದರ್ಶಕ ಅತಿಥಿ, ಕಥೆಗಳು, ಎಂಬರ್ಥಗಳನ್ನು ಕೊಡುತ್ತೇವೆ. 'ಈ ಸಂದರ್ಶಕರೂ ಅಥವಾ ಈ ಅತಿಥಿಗಳೂ ಅಥವಾ ಈ ಕಥೆಗಳೂ ಪ್ರಾಪ್ತರಾದರು ಅಥವಾ ಪ್ರಾಪ್ತವಾದವು) ಎಂಬರ್ಥಗಳನ್ನು ಹೊರಹೊಮ್ಮಿಸುತ್ತವೆ.

[1] ಲೇ (ಫ) [2] ಎಹಗೇ ಹಾಂಗೆ (ಕ)

ಸ್ವಜಾತೀಯಾದ್ಭಯಂ ಪ್ರಾಯಃ ಸರ್ವೇಷಾಮೇವ ದೇಹಿನಾಮ್
ಏಕದ್ರವ್ಯಾಭಿಲಾಷಿತ್ವಾತ್ ಶುನಾಮಿವ ಪರಸ್ಪರಮ್ ॥೬೯॥

[1]ನಾ[1]ಪ್ಯಧೃಷ್ಯಬಲಃ ಕಶ್ಚಿತ್ ನೃಪಃ ಖ್ಯಾತೋಽಸ್ತಿ ಭೂತಲೇ
ನಿಖಿಲಂ ಯಸ್ತಿರಸ್ಕೃತ್ಯ ಸುಖಂ ತಿಷ್ಠತಿ ನಿರ್ಭಯಃ ॥೭೦॥

ಯುದ್ಧೇ ಬಾಹುಸಹಸ್ರಂ ಹಿ ಪಾತಯಾಮಾಸ ಭೂತಲೇ
ಶ್ರೀಮತಃ ಕಾರ್ತವೀರ್ಯಸ್ಯ ಋಷಿಪುತ್ರಃ ಪ್ರತಾಪವಾನ್ ॥೭೧॥

---

ಸರ್ವೇಷಾಂ ದೇಹಿನಾಮೇವ = ಸಮಸ್ತ ಪ್ರಾಣಿಗಳಿಗೆ ಸ್ವಜಾತೀಯಾತ್ = ದಾಯಾದ್ಯನ ದೆಸೆಯಿಂದ ಪರಸ್ಪರಂ = ಒಬ್ಬೊಬ್ಬರು ಏಕದ್ರವ್ಯಾಭಿಲಾಷಿತ್ವಾತ್ = ಒಂದೇ ವಸ್ತುವ ಇಚ್ಛೈಸುವತನದ ದೆಸೆಯಿಂದ ಪ್ರಾಯಃ = ಅತ್ಯಂತ ಭಯಂ = ಭಯವು. ಕಥಮಿವ = ಅದು ಹೆಂಗೆಂದಡೆ ಶುನಾಮಿವ = ನಾಯಿಗಳಿಗೀಗ [2]ಹೆಂಗೆ[2] ಹಾಗೆ. ಒಡವೆ ನಿಮಿತ್ತವಾಗಿ ದಾಯಾದ್ಯರುಗಳು ನಾಯ ಹಾಂಗೆ ಕಾದಿ ಆಡುತ್ತಿಹರೆಂಬುದರ್ಥ. ॥೬೯॥

ಭೂತಲೇ = ಭೂಮಿಯಲ್ಲಿ ಅಧೃಷ್ಯಬಲಃ = ಶತ್ರುಗಳಿಂದ ಎಯ್ದಲು ಬಾರದೇ ಇದ್ದ ಪರಾಕ್ರಮವನುಳ್ಳಂಥಾ ಖ್ಯಾತಃ = ಖ್ಯಾತನಹಂಥಾ ಕಶ್ಚಿತ್ = ಒಬ್ಬಾನೊಬ್ಬ ನೃಪೋಽಪಿ = ಅರಸೂ ನಾಸ್ತಿ = ಇಲ್ಲ. ನಿಖಿಲಂ = ಸಮಸ್ತ ರಾಜಸಮೂಹವನು ತಿರಸ್ಕೃತ್ಯ = ಗೆದ್ದು ಯಃ = ಆವನಾನೊಬ್ಬ ಅರಸು ನಿರ್ಭಯಃ = ನಿರ್ಭೀತನಾಗಿ ಸುಖಂ = ಸುಖವಾಗಿ ತಿಷ್ಠತಿ = ಇರುತ್ತಿಹನು? ಆವನೂ ನಿರ್ಭಯವಾಗಿ ಇಹದಿಲ್ಲವೆಂಬುದರ್ಥ. ॥೭೦॥

ಅದಕ್ಕೆ ದೃಷ್ಟಾಂತವ ಹೇಳುತ್ತಿದ್ದಾನು—

ಶ್ರೀಮತಃ = ಐಶ್ವರ್ಯವನುಳ್ಳಂಥಾ ಕಾರ್ತವೀರ್ಯಸ್ಯ = ಕಾರ್ತವೀರ್ಯನ ಬಾಹುಸಹಸ್ರಂ = ಸಾವಿರ ತೋಳನು ಯುದ್ಧೇ = ಕಾಳಗದಲ್ಲಿ ಋಷಿಪುತ್ರಃ = ಋಷಿಯ ಕುಮಾರನಹಂಥಾ ಪ್ರತಾಪವಾನ್ = ಪರಾಕ್ರಮವನುಳ್ಳಂಥಾ ಪರಶುರಾಮನು ಭೂತಲೇ = ಭೂಮಿಯಲ್ಲಿ ಪಾತಯಾಮಾಸ ಹಿ = ಕೆಡಹಿದನಲಾ. ತಱಿದನೆಂಬುದರ್ಥ ॥೭೧॥

---

[1] ಸೋಽ (ಘ) [2] ಹೇಗೋ (ಕ)

11

ಋಷಿಪುತ್ರಸ್ಯ ರಾಮಸ್ಯ ರಾಮೋ ದಶರಥಾತ್ಮಜಃ
ಜಘಾನ ವೀರ್ಯಮತುಲಮೂರ್ಧ್ವಗಂ ಯನ್ಮಹಾತ್ಮನಃ ||೭೨||

ಜರಾಸಂಧೇನ ರಾಮಸ್ಯ ಕೃಷ್ಣತ್ವೇ ನಾಶಿತಂ ಯಶಃ
ಜರಾಸಂಧಸ್ಯ ಭೀಮೇನ ತಸ್ಯಾಪಿ ಪವನಾತ್ಮಜಾತ್ ||೭೩||

[1]ಹನು[1]ಮಾನಪಿ ಸೂರ್ಯೇಣ [2]ವಿ[2]ಕ್ಷಿಪ್ತಃ ಪತಿತಃ ಕ್ಷಿತೌ
ಸೂರ್ಯಃ ಪ್ರತಾಪಯುಕ್ತೋಽಪಿ ಮೇಘೈಸ್ಸಂಛಾದ್ಯತೇ ಯತಃ ||೭೪||

ಕ್ಷಿಪ್ಯಂತೇ ವಾಯುನಾ ಮೇಘಾ ವಾಯೋರ್ವೀರ್ಯಂ ನಗೈರ್ಜಿತಮ್
ದಹ್ಯಂತೇ ವಹ್ನಿನಾ ಶೈಲಾಃ ಸ ವಹ್ನಿಶ್ಶಾಮ್ಯತೇ ಜಲೈಃ ||೭೫||

ಋಷಿಪುತ್ರಸ್ಯ = ಜಮದಗ್ನಿ ಋಷಿಯ ಪುತ್ರನಹಂಥಾ ಮಹಾತ್ಮನಃ = ಮಹಾತ್ಮನಹಂಥಾ ರಾಮಸ್ಯ = ಪರಶುರಾಮನ ಊರ್ಧ್ವಗಂ = ಸ್ವರ್ಗವ ನೆಯ್ದಿದಂಥಾ ಅತುಳಂ = ಬಹಳವಹಂಥಾ ಯತ್ = ಆವುದಾನೊಂದು ವೀರ್ಯಂ = ಪರಾಕ್ರಮವನು, ದಶರಥಾತ್ಮಜಃ = ದಶರಥನ ಪುತ್ರನಹಂಥಾ ರಾಮಃ = ರಾಮಚಂದ್ರನು ಜಘಾನ = ತಗ್ಗಿಸಿದನು.

ರಾಮಸ್ಯ = ರಾಮಚಂದ್ರನ ಯಶಃ = ಕೀರ್ತಿ ಕೃಷ್ಣತ್ವೇ = ಕೃಷ್ಣಾವ ತಾರದಲ್ಲಿ ಜರಾಸಂಧೇನ = ಜರಾಸಂಧನಿಂದ ನಾಶಿತಂ = ಕೆಡಿಸಲುಪಟ್ಟಿತ್ತು. ಜರಾಸಂಧಸ್ಯ = ಜರಾಸಂಧನ ಯಶಃ = ಕೀರ್ತಿ ಭೀಮೇನ = ಭೀಮನಿಂದ ನಾಶಿತಂ = ಕೆಡಿಸಲುಪಟ್ಟಿತ್ತು ತಸ್ಯಾಪಿ = ಆ ಭೀಮನ ಕೀರ್ತಿಯೂ ಪವನಾತ್ಮ ಜಾತ್ = ಹನುಮಂತನ ದೆಸೆಯಿಂದ ನಾಶಿತಂ = ಕೆಡಿಸಲುಪಟ್ಟಿತ್ತು. ||೭೩||

ಹನುಮಾನಪಿ = ಹನುಮಂತನೂ ಸೂರ್ಯೇಣ = ಸೂರ್ಯನಿಂದ [3]ವಿ[3]ಕ್ಷಿಪ್ತಃ = ಕೆಡಹಲುಪಟ್ಟಾತನಾಗಿ ಕ್ಷಿತೌ = ಭೂಮಿಯಲ್ಲಿ ಪತಿತಃ = ಬಿದ್ದನು. ಪ್ರತಾಪ-ಯುಕ್ತಃ = ಪ್ರತಾಪದಿಂದ ಕೂಡಲುಪಟ್ಟಂಥಾ ಸೂರ್ಯೋಽಪಿ = ಸೂರ್ಯನೂ ಯತಃ = ಆವುದಾನೊಂದು ಕಾರಣವಾಗಿ ಮೇಘೈಃ = ಮೇಘಂಗಳಿಂದ ಸಂಛಾದ್ಯತೇ = ಮುಸುಕಲುಪಡುತ್ತಿಹನು. ||೭೪||

ವಾಯುನಾ = ವಾಯುವಿನಿಂದ ಮೇಘಾಃ = ಮೇಘಂಗಳು ಕ್ಷಿಪ್ಯಂತೇ = ತೊಲಗಿಸಲುಪಡುತ್ತಿಹವು. ವಾಯೋಃ = ವಾಯುವಿನ ವೀರ್ಯಂ = ಪರಾಕ್ರಮವು ನಗೈಃ = ಪರ್ವತಂಗಳಿಂದ ಜಿತಂ = ಗೆಲಲುಪಟ್ಟಿತ್ತು. ಶೈಲಾಃ = ಪರ್ವತಂಗಳು

[1] ಹನೂ (ಘ) [2, 3] ನಿ (ಕ ಖ)

ತಜ್ಜಲಂ ಶೋಷ್ಯತೇ ಸೂರ್ಯೈಸ್ತೇ ಸೂರ್ಯಾಸ್ಸಹ ವಾರಿಣಾ
ಲೋಕೇಶಾಸ್ಸರ್ವದೇವಾಶ್ಚ ನಶ್ಯಂತೇ ಬ್ರಹ್ಮಣೋ ದಿನೇ ||೭೬||

ಬ್ರಹ್ಮಾಪಿ ತ್ರಿದಶೈಸ್ಸಾರ್ಧಮುಪಸಂಹ್ರಿಯತೇ ಪುನಃ
ಪರಾರ್ಧದ್ವಯಕಾಲಾಂತೇ ಶಿವೇನ ಪರಮಾತ್ಮನಾ ||೭೭||

ಏವಂ ನಾಸ್ತೀಹ ಸಂಸಾರೇ ಯಸ್ಯ ಸರ್ವೋತ್ತಮಂ ಬಲಮ್
ವಿಹಾಯೈಕಂ ಜಗನ್ನಾಥಂ ಪರಮಾತ್ಮಾನಮವ್ಯಯಮ್ ||೭೮||

ಜ್ಞಾತ್ವಾ ಸಾತಿಶಯಂ ಸರ್ವಮಭಿಮಾನಂ ವಿವರ್ಜಯೇತ್
ಏವಂ ಭೂತೇ ಜಗತ್ಯಸ್ಮಿನ್ ಕಶ್ಶೂರಃ ಪಂಡಿತೋಽಪಿ ವಾ ||೭೯||

---

ವಹ್ನಿನಾ = ಅಗ್ನಿಯಿಂದ ದಹ್ಯಂತೇ = ಬೇಯಲುಪಡುತ್ತಿಹವು. ಸ ವಹ್ನಿಃ = ಆ ಅಗ್ನಿ ಜಲೈಃ = ಉದಕಂಗಳಿಂದ ಶಾಮ್ಯತೇ = ಶಾಂತವಾಗಲುಪಡುತ್ತಿಹುದು.

ತಜ್ಜಲಂ = ಆ ಪ್ರಳಯಕಾಲದ ಜಲವು ಸೂರ್ಯೈಃ = ಏಳುಮಂದಿ* ಸೂರ್ಯರುಗಳಿಂದ ಶೋಷ್ಯತೇ = ಬತ್ತುತ್ತಿಹುದು. ತೇ ಸೂರ್ಯಾಃ = ಆ ಏಳು ಮಂದಿ ಸೂರ್ಯರುಗಳು ವಾರಿಣಾ ಸಹ = ಉದಕದಿಂದ ಸಹಿತವಾಗಿ ಲೋಕೇಶಾಃ = ಲೋಕಪಾಲಕರುಗಳು ಸರ್ವದೇವಾಶ್ಚ = ಸಮಸ್ತ ದೇವರ್ಕಳೂ ಬ್ರಹ್ಮಣಃ = ಬ್ರಹ್ಮನ ದಿನೇ = ದಿನದಲ್ಲಿ ನಶ್ಯಂತೇ = ಲಯವಾಗುತ್ತಿಹರು.

ಬ್ರಹ್ಮಾಪಿ = ಬ್ರಹ್ಮನೂ ತ್ರಿದಶೈಸ್ಸಾರ್ಧಂ = ದೇವರ್ಕಳಿಂದ ಸಹಿತವಾಗಿ ಪರಾರ್ಧದ್ವಯಕಾಲಾಂತೇ = ಪ್ರಳಯ ಕಾಲದ ಕಡೆಯಲ್ಲಿ ಪರಮಾತ್ಮನಾ = ಪರಮಾತ್ಮನಹಂಥಾ ಶಿವೇನ = ಶಿವನಿಂದ ಪುನಃ = ಮರಳಿ ಉಪಸಂಹ್ರಿಯತೇ = ಸಂಹರಿಸಿಕೊಳಲುಪಡುತ್ತಿಹನು. ||೭೭||

ಏವಂ = ಈ ಪ್ರಕಾರದಲ್ಲಿ ಇಹ = ಈ ಲೋಕದಲ್ಲಿ ಯಸ್ಯ = ಆವನಾನೊಬ್ಬಾತಂಗೆ ಸರ್ವೋತ್ತಮಂ = ಸಮಸ್ತರಿಗಿಂದವೂ. ಉತ್ಕೃಷ್ಟವಹಂಥಾ ಬಲಂ = ಸತ್ತ್ವವು ನಾಸ್ತಿ = ಇಲ್ಲ. ಸಂಸಾರೇ = ಸಂಸಾರದಲ್ಲಿ ವಿಹಾಯ = ಬಿಟ್ಟು ಏಕಂ = ಒಂದೇ ವಸ್ತುವಹಂಥಾ ಜಗನ್ನಾಥಂ = ಜಗದೀಶ್ವರನಹಂಥಾ ಅವ್ಯಯಂ = ಕೇಡಿಲ್ಲದೇ ಇದ್ದಂಥಾ ಪರಮಾತ್ಮಾನಂ = ಪರಮಾತ್ಮನಹಂಥಾ ಶಿವನನು ಸಾತಿಶಯಂ = ಅತಿಶಯದಿಂದ ಸಹಿತವಾಗಿ ಜ್ಞಾತ್ವಾ = ಅರಿದು ಸರ್ವಂ = ಸಮಸ್ತವಹಂಥಾ ಅಭಿಮಾನಂ = ಗರ್ವವನು ವಿವರ್ಜಯೇತ್ =

---

* ಏಳು ಮಂದಿ ? [12 ಮಂದಿ]

ನೇಹಾಸ್ತಿ ಸರ್ವವಿತ್ಕಶ್ಚಿತ್ ನ ಚ ಮೂರ್ಖಶ್ಚ ಸರ್ವದಾ
ಯೋ ಯದ್ವಸ್ತು ವಿಜಾನಾತಿ ತಾವತಾ ಸ ತು ಪಂಡಿತಃ ||೮೦||

[1]ಸರ್ವದಾ ಚ ನ[1] ಸರ್ವಜ್ಞಃ ಪ್ರಭಾವಃ ಸರ್ವಗಃ ಸ್ಮೃತಃ
ಸ್ಥಿತಃ ಸಾತಿಶಯತ್ವೇನ ಪ್ರಭಾವಃ ಕಸ್ಯಚಿತ್ ಕ್ವಚಿತ್ ||೮೧||

ದಾನವೈರ್ನಿರ್ಜಿತಾ ದೇವಾಃ ತೇ ದೇವೈರ್ನಿರ್ಜಿತಾಃ ಪುನಃ
ನಿವಾತಕವಚಾನ್ ಸರ್ವಾನ್ ದಾನವಾನ್ಬಲಗರ್ವಿತಾನ್ ||೮೨||

ಜಿತ್ವಾಸ್ತ್ರೈರರ್ಜುನಃ ಶ್ರೀಮಾನ್ ಗೋಪಾಲೈರಿಹ ನಿರ್ಜಿತಃ
ಇತ್ಯನ್ಯೋನ್ಯಸ್ಥಿತಾವೇತೌ ಭಾಗ್ಯೈರ್ಜಯಪರಾಜಯೌ ||೮೩||

---

ಬಿಡುವುದು. ಏವಂಭೂತೇ = ಈ ಪ್ರಕಾರವಹಂಥಾ ಅಸ್ಮಿನ್ ಜಗತಿ = ಈ ಲೋಕದಲ್ಲಿ ಶೂರಃ ಕಃ = ಪರಾಕ್ರಮಿ ಆವಾತನು ? ಪಂಡಿತೋऽಪಿವಾ = ಬಲ್ಲಾತನಾವವನು ? ಪರಾಕ್ರಮಿಯೂ ಇಲ್ಲ. ಬಲ್ಲವನೂ ಇಲ್ಲವೆಂಬುದರ್ಥ. ||೭೯||

ಇಹ = ಈ ಲೋಕದಲ್ಲಿ ಸರ್ವವಿತ್ = ಸರ್ವವನೂ ಬಲ್ಲಂಥಾ ಕಶ್ಚಿತ್ = ಒಬ್ಬನೂ ನಾಸ್ತಿ = ಇಲ್ಲ. ಸರ್ವದಾ = ಎಲ್ಲಾಗವೂ ಮೂರ್ಖಶ್ಚ = ಮೂರ್ಖನೂ ನ ಚ = ಇಲ್ಲ. ಯಃ = ಆವನಾನೊಬ್ಬನು ಯದ್ವಸ್ತು = ಆವುದಾನೊಂದು ಪರವಸ್ತುವನು ವಿಜಾನಾತಿ = ಅರಿವುತ್ತಿಹನು, ತಾವತಾ = ಅಷ್ಟರಿಂದ ಸ ತು = ಆತನೇ ಪಂಡಿತಃ = ವಿದ್ವಾನ್ನುವೆನಿಸುವನು. ||೮೦||

ಸರ್ವಗಃ = ಸರ್ವಶಾಸ್ತ್ರವನೆಯ್ದಿದಂಥಾ ಪ್ರಭಾವಃ = ಸಾಮರ್ಥ್ಯವನುಳ್ಳಂಥಾ ಸರ್ವಜ್ಞಃ = ಸರ್ವಜ್ಞನು ಸರ್ವದಾ ಚ = ಎಲ್ಲಿಂಯೂ ನ ಸ್ಮೃತಃ = ಹೇಳಲುಪಟ್ಟುದಿಲ್ಲ. ಸಾತಿಶಯತ್ವೇನ = ಅತಿಶಯದಿಂದ ಸಹಿತವಾಗಿ ಕಸ್ಯಚಿತ್ = ಆವಾತಂಗೆ ಕ್ವಚಿತ್ = ಎಲ್ಲಿಯೂ ಪ್ರಭಾವಃ = ಸಾಮರ್ಥ್ಯವು ಸ್ಥಿತಃ = ಇದ್ದುದು ? ಆವಾತಂಗೆಯು ಸಾಮರ್ಥ್ಯವಿಲ್ಲವೆಂಬುದರ್ಥ ||೮೧||

ದೇವಾಃ = ದೇವರ್ಕಳು ದಾನವೈಃ = ರಾಕ್ಷಸರಿಂದ ನಿರ್ಜಿತಾಃ = ಸೋಲಲುಪಟ್ಟರು ತೇ = ಆ ರಾಕ್ಷಸರುಗಳು ಪುನಃ = ಮರಳಿ ದೇವೈಃ = ದೇವರ್ಕಳಿಂದ ನಿರ್ಜಿತಾಃ = ಸೋಲಲುಪಟ್ಟರು. ಬಲಗರ್ವಿತಾನ್ = ಸತ್ತ್ವದಿಂದ ಗರ್ವಿಸಲುಪಟ್ಟಂಥಾ ಸರ್ವಾನ್ = ಸಮಸ್ತವಹಂಥಾ ನಿವಾತಕವಚಾನ್ = ನಿವಾತಕವಚರೆಂಬಂಥಾ ದಾನವಾನ್ = ರಾಕ್ಷಸರುಗಳನು ಶ್ರೀಮಾನ್ = ಶ್ರೀಮಾನ್ನುವ

---

[1] ಸರ್ವದಾನೀ ಚ (ಘ).

ರಾಜ್ಯೇಽಪಿ ಸುಮಹದ್ದುಃಖಂ ಸಂಧಿವಿಗ್ರಹಚಿಂತಯಾ
ಪುತ್ರಾದಪಿ ಭಯಂ ಯತ್ರ ತತ್ರ ಸೌಖ್ಯಂ ಹಿ ಕೀದೃಶಮ್ ||೮೪||

ಏವಂ ವಸ್ತ್ರಯುಗಂ ರಾಜ್ಞಃ ಪ್ರಸ್ಥಮಾತ್ರಾನ್ನಭೋಜನಮ್
ಯಾನಂ ಶಯ್ಯಾಸನಂ ಚೈಕಂ ಶೇಷಂ ದುಃಖಾಯ ಕೇವಲಮ್ ||೮೫||

[1]ಸಪ್ತಭೌಮೋಽಪಿ[1] ಭವನೇ ಖಟ್ವಾಮಾತ್ರಪರಿಗ್ರಹಃ
[2]ಉದಕುಂಭಃ ಸ್ರವಂತೀಭ್ಯಃ ಕ್ಲೇಶಾಯೇವ ಪ್ರವಿಸ್ತರಃ[2] ||೮೬||

---

ಹಂಥಾ ಅರ್ಜುನಃ = ಅರ್ಜುನನು ಅಸ್ತ್ರೈಃ = ಬಾಣಗಳಿಂದ ಜಿತ್ವಾ = ಗೆದ್ದು ಇಹ = ಈ ಭೂಲೋಕದಲ್ಲಿ ಗೋಪಾಲೈಃ = ಹಟ್ಟಿಕಾರರಿಂದ ನಿರ್ಜಿತಃ = ಸೋಲಲುಪಟ್ಟನು. ಇತಿ = ಈ ಪ್ರಕಾರದಲ್ಲಿ ಏತೌ ಜಯಪರಾಜಯೌ = ಈ ಗೆಲವು ಸೋಲಂಗಳೆರಡೂ ಭಾಗ್ಯೈಃ = ಭಾಗ್ಯಂಗಳಿಂದ ಅನ್ಯೋನ್ಯಸ್ಥಿತೌ = ಒಬ್ಬೊಬ್ಬರಲ್ಲಿ ಇರಲುಪಟ್ಟವು.

ರಾಜ್ಯೇಽಪಿ = ರಾಜ್ಯದಲ್ಲಿಯೂ ಸಂಧಿವಿಗ್ರಹಚಿಂತಯಾ = ಸಂಧಾನ ಕಾಳಗದ ಚಿಂತೆಯಿಂದ ಸುಮಹತ್ = ದೊಡ್ಡಿತ್ತಹಂಥಾ ದುಃಖಂ = ದುಃಖವು ಯತ್ರ = ಅವುದಾನೊಂದು ರಾಜ್ಯದಲ್ಲಿ ಪುತ್ರಾದಪಿ = ಕುಮಾರನ ದೆಸೆಯಿಂದವೂ ಭಯಂ = ಭಯವು ತತ್ರ = ಆ ರಾಜ್ಯವನಾಳುವಲ್ಲಿ ಹಿ = ಆವುದಾನೊಂದು ಕಾರಣವಾಗಿ ಕೀದೃಶಂ = ಎಲ್ಲಿಯ ಸೌಖ್ಯಂ = ಸುಖವುಂಟು ? ರಾಜ್ಯದಲ್ಲಿ ಸುಖವಿಲ್ಲವೆಂಬುದರ್ಥ. ||೮೪||

ಏವಂ = ಈ ಪ್ರಕಾರದಲ್ಲಿ ರಾಜ್ಞಃ = ಅರಸಿಂಗೆ ವಸ್ತ್ರಯುಗಂ = ಹೊದೆವ ವಸ್ತ್ರವೆರಡು. ಪ್ರಸ್ಥಮಾತ್ರಾನ್ನಭೋಜನಂ = ಒಂದು ಬಳ್ಳ ಅನ್ನವ ನುಣುಹನು. ಏಕಂ = ಒಂದು ಯಾನಂ = ವಾಹನವು ಶಯ್ಯಾಸನಂ = ಮಂಚವು ಸಿಂಹಾಸನವು ಏಕಂ = ಒಂದೊಂದೇ. ಶೇಷಂ = ಉಳಿದಂಥಾದ್ದು ಕೇವಲಂ = ಬರಿಯ ದುಃಖಾಯ = ದುಃಖಕ್ಕೋಸ್ಕರ. ||೮೫||

ಸಪ್ತಭೌಮೇ = ಏಳುನೆಲೆಯುಳ್ಳಂಥಾ ಭವನೇಽಪಿ = ಉಪ್ಪರಿಗೆಯ ಮನೆಯಲ್ಲಿಯೂ ಖಟ್ವಾಮಾತ್ರಪರಿಗ್ರಹಃ = ಒಂದು ಮಂಚ ಮಾತ್ರವಿಕ್ಕುವ ಠಾವು ಅಂಗೀಕರಿಸಲುಪಟ್ಟುದು. ಕಥಮಿವ = ಅದು ಹೇಂಗೆಂದಡೆ ಸ್ರವಂತೀಭ್ಯಃ = ನದಿಗಳ ದೆಸೆಯಿಂದ ಉದಕುಂಭ ಇವ = ಉದಕದ ಕೊಡನೆಹಗಹಗೆ. ತುಂಬು ವಷ್ಟನೆ ಹಿಡಿವುದೆಂಬುದರ್ಥ. ಪ್ರವಿಸ್ತರಃ = ಬಹಳವಹ ಸಂಪತ್ತು ಕ್ಲೇಶಾಯ =

---

[1] ಸಾರ್ವಭೌಮೋಽಪಿ (ಘ) [2] ಭಿನ್ನಕುಂಭಃ ಸ್ರುತೇರ್ಹೇತುಸ್ತದ್ವತ್ ಕ್ಲೇಶಾಯ ವಿಸ್ತರಃ (ಘ) ಪಾಠಾಂತರ.

ಪ್ರತ್ಯೂಷೇ ತೂರ್ಯನಿರ್ಘೋಷಃ ಸಮಃ ಪುರನಿವಾಸಿನಾಮ್ ||
[1]ರಾಜ್ಞೋ ಽ[1]ಭಿಮಾನಮಾತ್ರಂ ಹಿ ಮಮಾಯಂ ವಾದ್ಯತೇ ಗೃಹೇ ||

ಸರ್ವಮಾಭರಣಂ ಭಾರಂ ಸರ್ವಮಾಲೇಪನಂ ಮಲಮ್
ಸರ್ವಂ ಗೀತಂ ಪ್ರಲಾಪಿತ್ವಂ ನೃತ್ಯಮುನ್ಮತ್ತಚೇಷ್ಟಿತಮ್ ||೮೮||

ಇತ್ಯೇವಂ ರಾಜ್ಯಸಂಭೋಗ್ಯೈಃ ಕುತಃ ಸೌಖ್ಯಂ ವಿಚಾರತಃ
ನೃಪಾಣಾಂ ವ್ಯಗ್ರಚಿತ್ತಾನಾಮನ್ಯೋನ್ಯವಿಜಿಗೀಷಯಾ ||೮೯||

ಪ್ರಾಯೇಣ ಶ್ರೀಮದಾಲೇಪಾಃ ಭೋಗಂ ಭುಕ್ತ್ವಾ ಮಹಾಬಲಾಃ
ಸ್ವರ್ಗಂ ಪ್ರಾಪ್ಯಾಪಿ ಪತಿತಾಃ ಕಃ ಶ್ರಿಯಾ ವಿಂದತೇ ಸುಖಮ್ |೯೦||

---

ಕ್ಲೇಶಕ್ಕೋಸ್ಕರವು. ಬಹಳೈಶ್ವರ್ಯವಾದರೂ ಆರಸಿನ ಒಂದು ಶರೀರಕ್ಕೆ ಅನುಭವಿಸು ವಷ್ಟೇ ಪ್ರಾಪ್ತವಹುದು. ಮಿಕ್ಕಾದ ಐಶ್ವರ್ಯವನು ಬಾಹತ್ತರ ವಿನಿಯೋಗದವರನು ಭವಿಸುವರೆಂಬುದರ್ಥ. ||೮೬||

ಪ್ರತ್ಯೂಷೇ = ಪ್ರಾತಃಕಾಲದಲ್ಲಿ ತೂರ್ಯನಿರ್ಘೋಷಃ = ಮಂಗಳಾರ್ಥ ವಹ ವಾದ್ಯಧ್ವನಿ ರಾಜ್ಞಃ = ಅರಸಿಂಗೆಯು ಪುರನಿವಾಸಿನಾಂ = ಪಟ್ಟಣದಲ್ಲಿ ಇದ್ದಂಥಾ ಜನರುಗಳಿಗೆಯು ಸಮಃ = ಸಮಾನವು ಮಮ = ಎನ್ನ ಗೃಹೇ = ಗೃಹದಲ್ಲಿ ಅಯಂ = ಈ ವಾದ್ಯವು ವಾದ್ಯತೇ = ಬಾಜಿಸಲುಪಡುತ್ತಿದ್ದೂದೆಂಬ ಅಭಿಮಾನಮಾತ್ರಂ = ಗರ್ವಮಾತ್ರವೇ. ರಾಜ್ಞೋ ಹಿ = ಅರಸಿಂಗಲಾ. ||೮೭||

ಸರ್ವಂ = ಸಮಸ್ತವಹಂಥಾ ಆಭರಣಂ = ಆಲಂಕಾರವು ಭಾರಂ = ಭಾರವು. ಸರ್ವಂ = ಸಮಸ್ತವಹಂಥಾ ಆಲೇಪನಂ = ಅನುಲೇಪನವು ಮಲಂ = ಮಲಿನವಹಂಥಾದ್ದು. ಸರ್ವಂ = ಸಮಸ್ತವಹಂಥಾ ಗೀತಂ = ಗೀತವು ಪ್ರಲಾಪಿತ್ವಂ = ಪ್ರಲಾಪವು. ನೃತ್ಯಂ = ನೃತ್ಯವು ಉನ್ಮತ್ತಚೇಷ್ಟಿತಂ = ಅತ್ಯಂತ ಸೊಕ್ಕಿದವನ ಚೇಷ್ಟೆಯನುಳ್ಳಂಥಾದು. ||೮೮||

ಅನ್ಯೋನ್ಯವಿಜಿಗೀಷಯಾ = ಒಬ್ಬರೊಬ್ಬರ ಗೆಲುವ ಇಚ್ಛೆಯಿಂದ ವ್ಯಗ್ರ-ಚಿತ್ತಾನಾಂ = ವ್ಯಗ್ರವಹ ಚಿತ್ತವನುಳ್ಳಂಥಾ ನೃಪಾಣಾಂ = ಅರಸುಗಳಿಗೆ ರಾಜ್ಯಸಂಭೋಗ್ಯೈಃ = ರಾಜ್ಯಭೋಗಂಗಳಿಂದ ಇತ್ಯೇವಂ = ಈ ಪ್ರಕಾರದಲ್ಲಿ ವಿಚಾರತಃ = ವಿಚಾರಿಸಲಾಗಿ ಸೌಖ್ಯಂ = ಸುಖವು ಕುತಃ = ಎಲ್ಲಿಯದು ? ||೮೯||

ಶ್ರೀಮದಾಲೇಪಾಃ = ಐಶ್ವರ್ಯದ ಮದದಿಂದ ಮುಸುಕಲುಪಟ್ಟಂಥಾ

---

[1] ರಾಜಾ (ಘ)

ಸ್ವರ್ಗೇಽಪಿ ಹಿ ಕುತಸ್ಸೌಖ್ಯಂ ದೃಷ್ಟ್ವಾ ದೀಪ್ತಾಂ ಪರಶ್ರಿಯಮ್
ಉಪರ್ಯುಪರಿ ಪಶ್ಯಧ್ವಂ ಸರ್ವೇ ಸಾತಿಶಯಾಃ ಸ್ಥಿತಾಃ ||೯೧||

ನರೈಃ ಪುಣ್ಯಫಲಂ ಸ್ವರ್ಗೇ ಮೂಲಚ್ಛೇದೇನ ಭುಜ್ಯತೇ
‡ನ ಚಾನ್ಯತ್ಕ್ರಿಯತೇ ಕರ್ಮ[1]ಶ್ರೋತ್ರದೋಷಸ್ಸುದಾರುಣಃ‡ ||೯೨||

ಛಿನ್ನಮೂಲಸ್ತರುರ್ಯದ್ವದವಶ್ಯಂ ಪತತಿ ಕ್ಷಿತೌ
ಪುಣ್ಯಮೂಲಕ್ಷಯಾತ್ತದ್ವದ್ದಾಂ ಪತಂತಿ ದಿವೌಕಸಃ ||೯೩||

ಮಹಾಬಲಾಃ = ಅತ್ಯಂತ ಸತ್ತ್ವವನುಳ್ಳಂಥಾ ಅರಸುಗಳು ಸ್ವರ್ಗಂ = ಸ್ವರ್ಗವನು ಪ್ರಾಪ್ಯಾಪಿ = ಎಯ್ದಿಯೂ ಪ್ರಾಯೇಣ = ಸ್ವಭಾವದಿಂದ ಭೋಗಂ = ಭೋಗವನು ಭುಕ್ತ್ವಾ = ಭೋಗಿಸಿ ಪತಿತಾಃ = ಭೂಲೋಕದಲ್ಲಿ ಬೀಳುತ್ತಿಹರು. ಶ್ರಿಯಾ = ಐಶ್ವರ್ಯದಿಂದ ಕಃ = ಆವಾತನು ಸುಖಂ = ಸುಖವನು ವಿಂದತೇ = ಪಡೆವುತ್ತಿಹನು ? ಐಶ್ವರ್ಯದಿಂದ ಆವಾತಂಗೆಯೂ ಸುಖವಿಲ್ಲವೆಂಬುದರ್ಥ ||೯೦||

ಸ್ವರ್ಗೇಽಪಿ = ಸ್ವರ್ಗದಲ್ಲಿಯೂ ದೀಪ್ತಾಂ = ಪ್ರಕಾಶಿಸುತ್ತಿದ್ದಂಥಾ ಪರಶ್ರಿಯಂ = ಪರರೈಶ್ವರ್ಯವನು ದೃಷ್ಟ್ವಾ = ಕಂಡು ಸೌಖ್ಯಂ = ಸುಖವು ಕುತಃ = ಎಲ್ಲಿಯದು ? ಉಪರ್ಯುಪರಿ = ಮೇಲೆ ಮೇಲೆ ಪಶ್ಯಧ್ವಂ = ನೋಡಿ. ಸರ್ವೇ = ಸಮಸ್ತ ದೇವರ್ಕಳು ಸಾತಿಶಯಾಃ = ಅತಿಶಯದಿಂದ ಸಹಿತರಾಗಿ ಸ್ಥಿತಾ ಹಿ = ಇರುತ್ತಿಹರಲಾ. ||೯೧||

ನರೈಃ = ಮನುಷ್ಯರುಗಳಿಂದ ಪುಣ್ಯಫಲಂ = ಪುಣ್ಯದ ಫಲವು ಮೂಲಚ್ಛೇದೇನ = ಮೂಲಚ್ಛೇದವಹೆದರಿಂದ ಸ್ವರ್ಗೇ = ಸ್ವರ್ಗದಲ್ಲಿ ಭುಜ್ಯತೇ = ಭೋಗಿಸಲುಪಡುತ್ತಿಹುದು. ಶ್ರೋತ್ರದೋಷಃ = ಶ್ರವಣಂಗಳಿಗೆ ದೋಷವಹಂಥಾ ಸುದಾರುಣಃ = ಅತಿಭಯಂಕರವಹಂಥಾ ಅನ್ಯತ್ಕರ್ಮ = ಮತ್ತೊಂದು ವ್ಯಾಪಾರವು ನ ಕ್ರಿಯತೇ = ಮಾಡಲುಪಡುತ್ತಿರದು. [?] ||೯೨||

ಛಿನ್ನಮೂಲಃ = ಛೇದಿಸಲ್ಪಟ್ಟ ಮೊದಲನುಳ್ಳಂಥಾ ತರುಃ = ವೃಕ್ಷವು ಯದ್ವತ್ = ಎಹಗೆ ಅವಶ್ಯಂ = ನಿಶ್ಚಯವಾಗಿ ಕ್ಷಿತೌ = ಭೂಮಿಯಲ್ಲಿ ಪತತಿ =

1 ಶ್ರೋತ್ರದೋಷಂ ಸುದಾರುಣಮ್ (ಘ) ಪಾಠ. ಉಳಿದೆಲ್ಲ ಪಾಠ ಮೇಲಿನಂತೆ.

‡ ಉತ್ತರಾರ್ಧದ ಅರ್ಥವು ಅಸ್ಪಷ್ಟ. 'ಅನ್ಯತ್ ಕರ್ಮ ನ ಚ ಕ್ರಿಯತೇ ಅತ್ರ ಸಃ ಸುದಾರುಣಃ ದೋಷಃ' ಎಂಬಂತೆ [ಸೋಽತ್ರ ದೋಷಃ ಸುದಾರುಣಃ] ಎಂದಿಟ್ಟುಕೊಳ್ಳಬಹುದೇ? ಪುಣ್ಯಶೇಷವಿರುವನಕವೂ ಪುಣ್ಯಫಲವನ್ನೇ ಅನುಭವಿಸುತ್ತಾ ಮುಂದೆಯೂ ಇಂತಹ ಫಲಾನು

ಸುಖಾಭಿಲಾಷನಿಷ್ಠಾನಾಂ ದುಃಖಂ ಭೋಗಾರ್ಥಸಂಪ್ಲವಾತ್
ಅಕಸ್ಮಾತ್ಪತನಂ ಸ್ವರ್ಗೇ ಕಷ್ಟಂ ದುಃಖಂ ದಿವೌಕಸಾವ್ ||೯೪||

ಇತಿ ಸ್ವರ್ಗೇಽಪಿ ದೇವಾನಾಂ ನಾಸ್ತಿ ಸೌಖ್ಯಂ ವಿಚಾರತಃ
ಕ್ಷಯಾತ್ಸಾತಿಶಯಂ ದುಃಖಂ ಸ್ವರ್ಗಭೋಗೀಯಕರ್ಮಣಾವ್ ||೯೫||

ತತಃ ಕಷ್ಟಂ ಮಹಾದುಃಖಂ ನರಕಾಗ್ನಿಷು ದೇಹಿನಾವ್
ಘೋರೈಶ್ಚತುರ್ವಿಧೈಃ ಪಾಪೈರ್ವಾಙ್ಮನಃಕಾಯಸಂಭವೈಃ ||೯೬||

---

ಬೀಳುತ್ತಿಹುದು, ತದ್ವತ್ = ಹಾಂಗೆ ಪುಣ್ಯಮೂಲಕ್ಷಯಾತ್ = ಪುಣ್ಯದ ಮೂಲ ನಷ್ಟವಾದುದರ ದೆಸೆಯಿಂದ ದಿವೌಕಸಃ = ದೇವರ್ಕಳು ಗಾಂ = ಭೂಮಿಯನು ಪತಂತಿ = ಎಯ್ದುತ್ತಿಹರು. ||೯೩||

ಸುಖಾಭಿಲಾಷನಿಷ್ಠಾನಾಂ = ಸುಖವ ಬಯಸುವಲ್ಲಿ ತಾತ್ಪರ್ಯವನ್ನುಳ್ಳಂಥಾ ಅವರುಗಳಿಗೆ ಭೋಗಾರ್ಥಸಂಪ್ಲವಾತ್ = ಭೋಗಸಮಾಪ್ತಿಯಾದುದರ ದೆಸೆಯಿಂದ ದುಃಖಂ = ದುಃಖವಹುದು. ಸ್ವರ್ಗೇ = ಸ್ವರ್ಗದಲ್ಲಿಯು ದಿವೌಕಸಾಂ = ದೇವರ್ಕಳಿಗೆ ಅಕಸ್ಮಾತ್ = ಕಾರಣವಿಲ್ಲದೆ ಪತನಂ = ಬೀಳುಹವು. ಕಷ್ಟಂ = ಕಷ್ಟವಹಂಥಾ ದುಃಖಂ = ದುಃಖವು. ||೯೪||

ಇತಿ = ಈ ಪ್ರಕಾರದಲ್ಲಿ ಸ್ವರ್ಗೇಽಪಿ = ಸ್ವರ್ಗದಲ್ಲಿಯೂ ದೇವಾನಾಂ = ದೇವತೆಗಳಿಗೆ ಸೌಖ್ಯಂ = ಸುಖವು ವಿಚಾರತಃ = ವಿಚಾರಿಸಲಾಗಿ ನಾಸ್ತಿ = ಇಲ್ಲ. ಸ್ವರ್ಗಭೋಗೀಯಕರ್ಮಣಾಂ = ಸ್ವರ್ಗಭೋಗದ ಸಂಬಂಧವಹಂಥಾ ಸತ್ಕರ್ಮಂಗಳ ಕ್ಷಯಾತ್ = ನಷ್ಟದ ದೆಸೆಯಿಂದ ಸಾತಿಶಯಂ = ಅತಿಶಯದಿಂದ ಸಹಿತವಹಂಥಾ ದುಃಖಂ = ದುಃಖವು. ||೯೫||

ತತಃ = ಆ ಪುಣ್ಯ ತೀರಿದ್ದರ ದೆಸೆಯಿಂದ ದೇಹಿನಾಂ = ಪ್ರಾಣಿಗಳಿಗೆ ವಾಙ್ಮನಃಕಾಯಸಂಭವೈಃ = ಮನ ವಚನಕಾಯ ಕರ್ಮಂಗಳಿಂದ ಹುಟ್ಟಿದಂಥಾ ಘೋರೈಃ = ಭಯಂಕರವಹಂಥಾ ಚತುರ್ವಿಧೈಃ = ನಾಲ್ಕು ಪ್ರಕಾರವಹಂಥಾ ಪಾಪೈಃ = ಪಾಪಂಗಳಿಂದ ನರಕಾಗ್ನಿಷು = ನರಕಾಗ್ನಿಗಳಲ್ಲಿ ಕಷ್ಟಂ = ಕಷ್ಟವಹಂಥಾ ಮಹಾದುಃಖಂ = ಮಹಾದುಃಖವು. ||೯೬||

---

ಭವಕ್ಕಾಗಿಯೇ ಮತ್ತೊಂದು ಪುಣ್ಯಕರ್ಮವನ್ನು ಮಾಡಬೇಕೆಂಬ ತಿಳುವಳಿಕೆಯುಂಟಾಗುತ್ತಿಲ್ಲವಲ್ಲಾ. ಈ ವಿಷಯದಲ್ಲಿ ಈ ರೀತಿಯಿಂದಿರುವುದು ದೋಷವು. ಆ ದೋಷವು ಅತೀವ ಭಯಂಕರ ದೋಷವು. ಹೀಗಿರಬಹುದಲ್ಲವೇ ?

ಕುಠಾರೈಶ್ಛೇದನಂ ತೀವ್ರಂ ವಲ್ಕಲಾನಾಂ ಚ ತತ್ ಕ್ಷಣಮ್
ಪರ್ಣಶಾಖಾಫಲಾನಾಂ ಚ ಪಾತನಂ ಚಂಡವಾಯುನಾ ||೯೭||

ಉನ್ಮೂಲನಂ ಪ್ರಮರ್ದಶ್ಚ ಗಜೈರನ್ಯೈಶ್ಚ ದೇಹಿಭಿಃ
ದಾವಾಗ್ನಿಪಾತಶೋಷೈಶ್ಚ ದುಃಖಂ ಸ್ಥಾವರಜಾತಿಷು ||೯೮||

ತೃಟ್ ಬುಭುಕ್ಷಾ ಚ ಸರ್ಪಾಣಾಂ ಕ್ರೋಧದುಃಖಂ ಚ ದಾರುಣಮ್
ದುಷ್ಟಾನಾಂ ಘಾತನಂ ಲೋಕೇ ಪಾಶೇನ ಚ ನಿಬಂಧನಮ್ ||೯೯||

ಅಕಸ್ಮಾಜ್ಜನ್ಮ ಮರಣಂ ಕೀಟಾದೀನಾಂ ಮುಹುರ್ಮುಹುಃ
ಸರೀಸೃಪನಿಕಾಯಾನಾಮೇವಂ ದುಃಖಾನ್ಯನೇಕಧಾ ||೧೦೦||

---

ಸ್ಥಾವರಜಾತಿಷು = ವೃಕ್ಷ ಮೊದಲಾದಂಥಾ ಸ್ಥಾವರ ಜಾತಿಗಳಲ್ಲಿ ಕುಠಾರೈಃ = ಕೊಡಲಿಗಳಿಂದ ತೀವ್ರಂ = ಅತ್ಯಂತ ಛೇದನಂ = ಕಡಿಹವು. ತತ್ಕ್ಷಣಂ = ಆ ಕ್ಷಣವು ವಲ್ಕಲಾನಾಂ = ತೊಬಟೆಗಳ ಛೇದನಂ ಚ = ಎತ್ತುಹವು. ಚಂಡವಾಯುನಾ = ಬಿರುಘಾಳಿಯಿಂದ ಪರ್ಣಶಾಖಾಫಲಾನಾಂ ಚ = ಎಲೆ ಕೊಂಬು ಕಾಯಿಗಳ ಪಾತನಂ ಚ = ಕೆಡಹುಹವು ಗಜೈಶ್ಚ = ಆನೆಗಳಿಂದವೂ ಉನ್ಮೂಲನಂ = ಕೀಳುಹವು ಅನ್ಯೈಃ = ಉಳಿದಂಥಾ, ದೇಹಿಭಿಶ್ಚ = ಪ್ರಾಣಿಗಳಿಂದವು ಪ್ರಮರ್ದಶ್ಚ = ಮುರಿಹವು ದಾವಾಗ್ನಿ ಪಾತಶೋಷೈಶ್ಚ = ಕಾಳ್ಗಿಚ್ಚು ಬಹುದರಿದೆಸೆಯಿಂದವೂ ಒಣಗುಹಂಗಳಿಂದವೂ ದುಃಖಂ = ದುಃಖವು. ||೯೭–೯೮||

ದುಷ್ಟಾನಾಂ = ದುಷ್ಟವಹಂಥಾ ಸರ್ಪಾಣಾಂ = ಸರ್ಪಂಗಳಿಗೆ ಬಭುಕ್ಷಾ = ಹಸಿವು ತೃಟ್ ಚ = ಬಾಯಾರುಹವು ದಾರುಣಂ = ಭಯಂಕರವಹಂಥಾ ಕ್ರೋಧದುಃಖಂ ಚ = ಕ್ರೋಧ ದುಃಖವು ಲೋಕೇ = ಜನದಲ್ಲಿ ಘಾತನಂ = [1]ಕೊಲಿಸಿಕೊಳುಹವು ಪಾಶೇನ ಚ = ಪಾಶದಿಂದವೂ[1] ನಿಬಂಧನಂ = ಉರುಲ ನಿಕ್ಕಿಸಿಕೊಳುಹವು. ||೯೯||

ಸರೀಸೃಪನಿಕಾಯಾನಾಂ = ಸರ್ಪಂಗಳ ಸಮೂಹಂಗಳಿಗೆ ಕೀಟಾದೀನಾಂ = ಹುಳು ಮೊದಲಾದಂಥಾ ಪ್ರಾಣಿಗಳಿಗೆ ಅಕಸ್ಮಾತ್ = ಕಾರಣವಿಲ್ಲದೇ ಮರಣಂ = ಸಾವು ಜನ್ಮ = ಹುಟ್ಟುಹವು ಮುಹುರ್ಮುಹುಃ = ಆಡಿಗಡಿಗೆ ಏವಂ = ಈ ಪ್ರಕಾರದಲ್ಲಿ ಅನೇಕಧಾ = ಹಲವು ಪ್ರಕಾರಂಗಳಹಂಥಾ ದುಃಖಾನಿ = ದುಃಖಂಗಳು. ||೧೦೦||

---

[1] ಲುಪ್ತ (ಕ)

ಚಂದನಾದ್ಯನುಲೇಪೋಕ್ತದ್ರವ್ಯಾಣಿ ಸುರಭೀಣಿ ಚ
ಕೇಶಾನುಲೇಪದ್ರವ್ಯಾಣಿ ಕಸ್ತೂರ್ಯಾ[1]ದೀನಿ[1] ಯಾನಿ ಚ ||೧೨||

ತುರಂಗಮಗಜಾಂದೋಲಸ್ಯಂದನಾನಿ ಶುಭಾನಿ ಚ
ತೇಷಾಂ ಪ್ರದಾನಂ ಸದ್ಭಕ್ತ್ಯಾ ಧನಶುಶ್ರೂಷಿಕಾ [3]ಸ್ಮೃತಾ[2] ||೧೩||

ದ್ರವ್ಯಸಾಮರ್ಥ್ಯಸಂಪನ್ನೋ ಯಃಕಶ್ಚಿಚ್ಛಿಷ್ಯಕಸ್ಸದಾ
ಸರ್ವಶುಶ್ರೂಷಿಕಾಂ ಕುರ್ಯಾತ್ ಸ್ವಗುರೋರೇವ ಭಕ್ತಿತಃ ||೧೪||

ನ್ಯಾಯಾರ್ಜಿತಂ ಸ್ಥಿತಂ ಸ್ವರ್ಣಮುಖ್ಯಂ ಯದ್ವ್ಯವಹಾರತಃ
ತದೇವ ದೇಯಂ ಗುರವೇ ದದ್ಯಾದ್ದಾನೇಽಪಿ ತದ್ವರಮ್ ||೧೫||

---

ಭೂಮಿ ತೊತ್ತು ಬಂಟರು ವಸ್ತ್ರಂಗಳು ಅತ್ರ = ಈ ಪ್ರಕಾರದಲ್ಲಿ ಪರ್ಯಂಕ ಭೂಷಣಾನಿ = ಮಂಚ ಆಭರಣಂಗಳು ತ್ರಿಪಾದಚಷಕಾದಯಃ = ಅಡ್ಡಣಿಗೆ ಹಾಲು ಬಟ್ಟಲು ಮೊದಲಾದಂಥಾವು. ||೧೧||

ಸುರಭೀಣಿ = ಪರಿಮಳವನುಳ್ಳಂಥಾ ಚಂದನಾದ್ಯನುಲೇಪೋಕ್ತದ್ರವ್ಯಾಣಿ ಚ = ಶ್ರೀಗಂಧ ಮೊದಲಾಗಿ ಅನುಲೇಪಕ್ಕೆ ಹೇಳಲ್ಪಂಟ್ಟಂಥಾ ದ್ರವ್ಯಂಗಳು, ಕಸ್ತೂರ್ಯಾದೀನಿ = ಕಸ್ತೂರಿ ಮೊದಲಾಗಿದ್ದಂಥಾ ಯಾನಿ = ಆವವು ಕೆಲವು ಕೇಶಾನುಲೇಪದ್ರವ್ಯಾಣಿ ಚ = ಕೇಶಂಗಳಿಗೆ ಅನುಲೇಪವಹ ದ್ರಹ್ಯಂಗಳು. ||೧೨||

ಶುಭಾನಿ = ಒಪ್ಪುತ್ತಿದ್ದಂಥಾ ತುರಂಗಮ = ಕುದುರೆ ಗಜ = ಆನೆ ಆಂದೋಳ = ದಂಡಿಗೆ ಸ್ಯಂದನಾನಿ ಚ = ರಥಂಗಳು ತೇಷಾಂ = ಹೇಳಲ್ಪಟ್ಟಂಥಾ ಸದ್ಭಕ್ತ್ಯಾ = ಸದ್ಭಕ್ತಿಯಿಂದ ಪ್ರದಾನಂ = ಕೊಡುಹಣವು ಧನಶುಶ್ರೂಷಿಕಾ = ಧನಸೇವೆಯೆಂದು ಸ್ಮೃತಾ = ಹೇಳಲ್ಪಟ್ಟಿತ್ತು. ||೧೩||

ದ್ರವ್ಯಸಾಮರ್ಥ್ಯಸಂಪನ್ನಃ = ದ್ರವ್ಯಸಾಮರ್ಥ್ಯದಿಂದ ಸಂಪನ್ನನಹಂಥಾ ಯಃಕಶ್ಚಿತ್ = ಆವನಾನೊಬ್ಬ ಶಿಷ್ಯಕಃ = ಶಿಷ್ಯನು ಸದಾ = ಎಲ್ಲಾಗವೂ ಭಕ್ತಿತಃ ಏವ = ಭಕ್ತಿಯಿಂದವೇ ಸ್ವಗುರೋಃ = ತನ್ನ ಶ್ರೀಗುರುವಿಂಗೆ ಸರ್ವಶುಶ್ರೂಷಿಕಾಂ = ಸಮಸ್ತ ಸೇವೆಯನು ಕುರ್ಯಾತ್ = ಮಾಡೂದು. ||೧೪||

ವ್ಯವಹಾರತಃ = ವ್ಯವಹಾರದ ದೆಸೆಯಿಂದ ನ್ಯಾಯಾರ್ಜಿತಂ = ನ್ಯಾಯದಿಂದ ಘಳಿಸಿದಂಥಾ ಸ್ವರ್ಣಮುಖ್ಯಂ = ಸುವರ್ಣ ಮೊದಲಾದಂಥಾ ಯತ್ = ಆವುದಾನೊಂದು ವಸ್ತು ಸ್ಥಿತಂ = ಇದ್ದೂದು ತದೇವ = ಆ ವಸ್ತುವೇ ದೇಯಂ =

---

[1] ದ್ಯಾ (ಖ.ಘ.ಚ) [2] ಮತಾ (ಘ)

ಯೇನನ್ಯೂನಂ ವ್ಯವಹಾರೇ ತು ತಚ್ಚ ಸ್ವರ್ಣಂ ಕದಾಚನ
ನ ದದ್ಯಾದ್ಗುರವೇ ದಾನಂ ಮನುಷ್ಯಃ ಫಲವಾಂಛಕಃ ||೧೬||

ನೂತನಂ[1]ಸುದೃಢಂ[1] ಸ್ನಿಗ್ಧಂ ಧವಲಂ ನೇತ್ರವಲ್ಲಭವತ್
ದದ್ಯಾದಾಚ್ಛಾದನಂ ಭಕ್ತ್ಯಾ ಗುರವೇ ಸರ್ವದಾ ಬುಧಃ ||೧೭||

ವಿಶೀರ್ಣಂ ಸ್ಫುಟಿತಂ ದಗ್ಧಂ ಪ್ರಾಕ್ತನಂ ಸ್ವಧೃತಂ ಪುರಾ
[2]ದಷ್ಟಮಾಖ್ವಾ[2]ದಿಭಿರ್ವಸ್ತ್ರಂ ನ ದದ್ಯಾದ್ಗುರವೇ ಬುಧಃ ||೧೮||

---

ಕೊಡಬೇಕಾದುದು ಗುರವೇ=ಶ್ರೀ ಗುರುವಿಂಗೋಸ್ಕರ ದದ್ಯಾತ್=ಈಯುಬೇಕು ದಾನೇಽಪಿ=ದಾನದಲ್ಲಿಯೂ ತತ್=ಅದು ವರಂ=ಶ್ರೇಷ್ಠವು. ||೧೫||

ವ್ಯವಹಾರೇ ತು = ವ್ಯವಹಾರದಲ್ಲಿಯೂ ಯತ್ = ಆವುದಾನೊಂದು ಸ್ವರ್ಣಂ=ಸುವರ್ಣವು ನ್ಯೂನಂ=ಹೀನವಾದಂಥಾದ್ದು. ಅನ್ಯಾಯದಿಂದ ಬಂದು ದೆಂಬುದರ್ಥ. ತಚ್ಚ=ಆ ಅನ್ಯಾಯದಿಂದ ಬಂದಂಥಾ ಸುವರ್ಣವನು ಫಲವಾಂಛಕಃ =ಫಲವನು ಬಯಸುತಿದ್ದಂಥಾ ಮನುಷ್ಯಃ=ಮನುಷ್ಯನು ಕದಾಚನ=ಒಂದು ಬಾರಿಯೂ ಗುರವೇ=ಗುರುವಿಗೋಸ್ಕರ ದಾನಂ=ದಾನವನು ನ ದದ್ಯಾತ್= ಕೊಡಲಾಗದು. ||೧೬||

ಬುಧಃ=ಬಲ್ಲಂಥಾತನು ಗುರವೇ=ಶೀಗುರುವಿಂಗೋಸ್ಕರ ಸುದೃಢಂ= ಬಲ್ಲಿತ್ತಹಂಥಾ ಸ್ನಿಗ್ಧಂ ಮೃದುವಹಂಥಾ ನೇತ್ರವಲ್ಲಭಂ=ಕಣ್ಣಿಂಗೆ ಮನೋಹರ ವಹಂಥಾ ಧವಳಂ=ಬಿಳಿದಹಂಥಾ ನೂತನಂ=ಹೊಸತಹಂಥಾ ಆಚ್ಛಾದನಂ= ವಸ್ತ್ರವನು ಭಕ್ತ್ಯಾ=ಭಕ್ತಿಯಿಂದ ಸರ್ವದಾ=ಎಲ್ಲಾಗವೂ ದದ್ಯಾತ್= ಕೊಡುವುದು. ||೧೭||

ಬುಧಃ=ಬಲ್ಲಂಥಾ ಆತನು ಗುರವೇ=ಶೀಗುರುವಿಂಗೋಸ್ಕರ ವಿಶೀರ್ಣಂ= ಜೀರ್ಣವಾದಂಥಾ ಸ್ಫುಟಿತಂ=ಹಱಿದಂಥಾ ದಗ್ಧಂ=ಕಿಡಿತಾಗಿದಂಥಾ ಪ್ರಾಕ್ತನಂ =ಹಳದಾದಂಥಾ ಪುರಾ=ಮುನ್ನ ಸ್ವಧೃತಂ=ತಾನು ಹೊದ್ದಂಥಾ ಆಖ್ವಾದಿಭಿಃ =ಇಲಿ ಮುಂತಾದ ಪ್ರಾಣಿಗಳಿಂದ ದಷ್ಟಂ=ಕಡಿದಂಥಾ ವಸ್ತ್ರಂ=ವಸ್ತ್ರವನು ನ ದದ್ಯಾತ್=ಕೊಡಲಾಗದು. ||೧೮||

---

[1] ಸದೃಢಂ (ಖ.ಗ) [2] ದಷ್ಟಂ ಕೀಟಾ (ಘ)

ಪರುಷಂ ದುಷ್ಕ್ರಿಯಾಯುಕ್ತಂ ನೀಲಸೂತ್ರವಿನಿರ್ಮಿತಮ್
ಪಟ್ಟವಸ್ತ್ರೇತರಂ ವಸ್ತ್ರಂ [1]ವಿರಲಂ[1] ನ ಪ್ರದಾಪಯೇತ್ ॥೧೯॥

ಪಟ್ಟದೇವಾಂಗಚೀನಾನಿ ವಾಸಾಂಸ್ಯನ್ಯಾನಿ ಯಾನಿ ಚ
ಚಿತ್ರಾಣಿ ದದ್ಯಾನ್ನೃಪತಿಃ ಇತರೋ ವಾ ಧನಾಧಿಪಃ ॥೨೦॥

ಗುರೋಃ ಪ್ರಿಯಾಣಿ ದ್ರವ್ಯಾಣಿ ಯಾನಿ ಕಾನಿಚಿದನ್ವಹಮ್
ತಾನಿ ಭಕ್ತ್ಯಾ ಪ್ರದೇಯಾನಿ ಶಿಷ್ಯೇಣ ಸುಲಭಾನಿ ಚ ॥೨೧॥

ದರಿದ್ರಶ್ಚೇತ್ಸ್ವಯಂ ಶಿಷ್ಯಃ ಪ್ರತಿಸಂವತ್ಸರಂ ಯಜೇತ್
ವಾಸಃ ಪ್ರಾವರಣಂ ದದ್ಯಾದವಶ್ಯಂ ನೇತ್ರವಲ್ಲಭಮ್ ॥೨೨॥

---

ಪರುಷಂ = ಬಿರುಸಾದಂಥಾ ದುಷ್ಕ್ರಿಯಾಯುಕ್ತಂ = ದುರ್ವ್ಯಾಪಾರದಿಂದ ಕೂಡಿದಂಥಾ ನೀಲಸೂತ್ರನಿರ್ಮಿತಂ = ನೀಲವರ್ಣವಹ ಎಳೆಗಳಿಂದ ನೆಯ್ದಂಥಾ ಪಟ್ಟವಸ್ತ್ರೇತರಂ = ಪಟ್ಟಾವಳಿಯ ವಸ್ತ್ರವಲ್ಲದಂಥಾ ವಿರಳಂ = ಛಿದ್ರವಾದಂಥಾ ವಸ್ತ್ರಂ = ವಸ್ತ್ರವನು ನ ಪ್ರದಾಪಯೇತ್ — ಕೊಡಲಾಗದು. ॥೧೯॥

ನೃಪತಿಃ = ಅರಸು ವಾ = ಅಲ್ಲಾ ಧನಾಧಿಪಃ = ಧನಪತಿಯುಹಂಥಾ ಇತರಃ = ಮತ್ತಾವಾತನಾದರೂ ಪಟ್ಟದೇವಾಂಗಚೀನಾನಿ = ಪಟ್ಟಾವಳಿ ದೇವಾಂಗ ಚೀನಿಯುಹಂಥಾ ವಾಸಾಂಸಿ ಚ = ವಸ್ತ್ರಂಗಳನು ಅನ್ಯಾನಿ = ಮತ್ತೆ ಕೆಲವಹಂಥಾ ಯಾನಿ = ಆವವು ಕೆಲವು ಚಿತ್ರಾಣಿ ಚ = ಚಿತ್ರವಹಂಥಾ ವಸ್ತ್ರಂಗಳನು ದದ್ಯಾತ್ — ಕೊಡುವುದು. ॥೨೦॥

ಗುರೋಃ = ಶ್ರೀಗುರುವಿಂಗೆ ಪ್ರಿಯಾಣಿ = ಪ್ರಿಯವಹಂಥಾ ಯಾನಿ ಕಾನಿಚಿತ್ = ಆವವು ಕೆಲವು ದ್ರವ್ಯಾಣಿ = ದ್ರವ್ಯಂಗಳುಂಟು ಸುಲಭಾನಿ = ಒದಗಿದಂಥಾ ತಾನಿ ಚ = ಆ ದ್ರವ್ಯಂಗಳನು ಅನ್ವಹಂ = ದಿನಂ ಪ್ರತಿ ಶಿಷ್ಯೇಣ = ಶಿಷ್ಯನಿಂದ ಭಕ್ತ್ಯಾ = ಭಕ್ತಿಯಿಂದ ಪ್ರದೇಯಾನಿ = ಕೊಡಲು ಯೋಗ್ಯಂಗಳು ॥೨೧॥

ದರಿದ್ರಃ = ದರಿದ್ರನಹಂಥಾ ಶಿಷ್ಯಶ್ಚೇತ್ = ಶಿಷ್ಯನಾದಪಕ್ಷೇ ಸ್ವಯಂ = ತಾನೇ ಪ್ರತಿಸಂವತ್ಸರಂ = ವರುಷಂ ಪ್ರತಿ ಯಜೇತ್ = ಅರ್ಚಿಸೂದು ಯಜ-ದೇವಪೂಜಾಸಂಗತಿಕರಣದಾನೇಷು ಇತಿ ಧಾತುಃ ನೇತ್ರವಲ್ಲಭಂ = ದೃಷ್ಟಿಗೆ ಮನೋಹರವಹಂಥಾ ಪ್ರಾವರಣಂ = ಹೊದೆವಂಥಾ ವಾಸಃ = ವಸ್ತ್ರವನು ಅವಶ್ಯಂ = ನಿಶ್ಚಯವಾಗಿ ದದ್ಯಾತ್ = ಕೊಡುವುದು. ॥೨೨॥

---

[1] ಸುಜೀರ್ಣಂ (ಘ)

ಗುರುಂ ಸ್ವಗೃಹಮಾಯಾಂತಂ ದೃಷ್ಟ್ವಾ ಭಕ್ತಿಯುತೋ ನೃಪಃ
ನತ್ವಾ ತದಾಸನಂ ದತ್ವಾ ಚಾಸೀತ ತದನುಜ್ಞಯಾ ॥೨೩॥

ಸ್ವಾಚಾರ್ಯಚರಣದ್ವಂದ್ವಪ್ರಕ್ಷಾಲಿತಜಲಂ ಸದಾ
ಯಃ ಪಿಬೇದ್ಧಾರಯೇದ್ಭಕ್ತ್ಯಾ ಸರ್ವಪಾಪೈಃ ಪ್ರಮುಚ್ಯತೇ ॥೨೪॥

ಚಂದನಂ ಚಾಕ್ಷತಂ ಪುಷ್ಪಂ ಸ್ವರ್ಣಂ ತಾಂಬೂಲಮಂಬರಮ್
ಪಾತ್ರೇ ನಿಧಾಯ ಗುರವೇ ಶಿಷ್ಯೋ ದದ್ಯಾನ್ನ ಪಾಣಿನಾ ॥೨೫॥

ಸಂಭೋಜಯಿತ್ವಾ ಸ್ವಗುರುಂ ಪಶ್ಚಾದ್ಭುಂಜೀತ ಬುದ್ಧಿಮಾನ್
ಗುರೋಃ ಪುರಸ್ತಾದ್ಯೋ ಭುಂಕ್ತೇ ಗುರುದ್ರೋಹೀ ಸ ಉಚ್ಯತೇ॥೨೬

---

ಭಕ್ತಿಯುತಃ = ಭಕ್ತಿಯಿಂದ ಕೂಡಲ್ಪಟ್ಟಂಥಾ ನೃಪಃ = ಅರಸು ಸ್ವಗೃಹಂ = ತನ್ನ ಗೃಹವನು ಕುರಿತು ಆಯಾಂತಂ = ಬಂದಂಥಾ ಗುರುಂ = ಶ್ರೀಗುರುವನ ದೃಷ್ಟ್ವಾ = ಕಂಡು ನತ್ವಾ = ನಮಸ್ಕರಿಸಿ ತದಾಸನಂ = ಆ ಗುರುವಿಂಗೆ ಗದ್ದಿಗೆಯನು ದತ್ವಾ ಚ = ಕೊಟ್ಟು ತದನುಜ್ಞಯಾ = ಆ ಶ್ರೀಗುರುವಿನ ಅನುಜ್ಞೆಯಿಂದ ಅಸೀತ = ಕುಳ್ಳಿಹುದು. ॥೨೩॥

ಸ್ವಾಚಾರ್ಯಚರಣದ್ವಂದ್ವಪ್ರಕ್ಷಾಳಿತಜಲಂ = ತನ್ನ ಶ್ರೀಗುರುವಿನ ಚರಣವೆರಡು ಪ್ರಕ್ಷಾಲಿಸಿದಂಥಾ ಜಲವನು ಯಃ = ಆವನಾನೊಬ್ಬ ಶಿಷ್ಯನು ಭಕ್ತ್ಯಾ = ಭಕ್ತಿಯಿಂದ ಸದಾ = ಎಲ್ಲಾಗವೂ ಧಾರಯೇತ್ = ಧರಿಸುವನು ಪಿಬೇತ್ = ಪಾನವ ಮಾಡುವನು ಸರ್ವಪಾಪೈಃ = ಸಮಸ್ತ ಪಾಪಂಗಳಿಂದ ಪ್ರಮುಚ್ಯತೇ = ಬಿಡಲ್ಪಡುತ್ತಿಹನು. ॥೨೪॥

ಶಿಷ್ಯಃ = ಶಿಷ್ಯನು ಚಂದನಂ = ಗಂಧವನು ಅಕ್ಷತಂ ಚ = ಅಕ್ಷತೆಯನು ಪುಷ್ಪಂ = ಪುಷ್ಪವನು ಸ್ವರ್ಣಂ = ಸುವರ್ಣವನು ತಾಂಬೂಲಂ = ವೀಳೆಯವನು ಅಂಬರಂ = [1]ಬಟ್ಟೆಯನು[1] ಪಾತ್ರೇ = ಪಾತ್ರೆಯಲ್ಲಿ ನಿಧಾಯ = ಇರಿಸಿ ಗುರವೇ = ಶ್ರೀಗುರುವಿಂಗೋಸ್ಕರ ದದ್ಯಾತ್ = ಕೊಡುವುದು. ಪಾಣಿನಾ = ಹಸ್ತದಿಂದ ನ = ಕೊಡಲಾಗದು. ॥೨೫॥

ಬುದ್ಧಿಮಾನ್ = ಬುದ್ಧಿಯನುಳ್ಳಾತನು ಸ್ವಗುರುಂ = ತನ್ನ ಶ್ರೀಗುರುವನು ಸಂಭೋಜಯಿತ್ವಾ = ಆರೋಗಣೆಯ ಮಾಡಿಸಿ ಪಶ್ಚಾತ್ = ಬಳಿಕ ಭುಂಜೀತ =

---

[1] ವಸ್ತ್ರ (ಖ. ಚ)

ಯಾನಿ ಭಕ್ಷ್ಯಾಣಿ ನವ್ಯಾನಿ ಕಂದಮೂಲಫಲಾನಿ ಚ
ಅಪೂಪಾನ್ಯುಪದಂಶಾನಿ ಗುರೋಃ ಪೂರ್ವಂ ನ ಭಕ್ಷಯೇತ್ ॥೨೭॥

ಶಿಷ್ಯೇಣ ಭೋಜನಾತ್ಪೂರ್ವಂ ನ ಭೋಕ್ತವ್ಯಂ ಕದಾಚನ
ಭೋಜನಾನಂತರೇಽಶ್ನೀಯಾತ್ ಸ್ವಗುರೋರ್ಯಸ್ಸ ಪುಣ್ಯಭಾಕ್

ಯೋ ಭಕ್ತ್ಯಾ ಸ್ವಗುರೋರ್ಭಕ್ತಃ[1] ಶಿಷ್ಯಃ ಪಾತ್ರೇಽನ್ನಮುಜ್ಝಿತಮ್
ಭುಂಕ್ತೇ ಸ ಸರ್ವದುರಿತೈರ್ಮುಚ್ಯತೇ ನಾತ್ರ ಸಂಶಯಃ ॥೨೯॥

---

ಭೋಜನವ ಮಾಡೂದು. ಯಃ = ಆವನಾ[2]ನೊಬ್ಬಾತನು ಗುರೋಃ = ಶ್ರೀಗುರು ವಿನ ಪುರಸ್ತಾತ್ = ಮುಂದೆ ಭುಂಕ್ತೇ = ಉಣುತ್ತಿಹನು ಸಃ = ಆತನು ಗುರುದ್ರೋಹೀ = ಗುರುದ್ರೋಹಿ ಎಂದು ಉಚ್ಯತೇ = ಹೇಳಲ್ಪಡುತ್ತಿಹನು. ॥೨೬॥

ನವ್ಯಾನಿ = ಹೊಸ್ತಹಂಥಾ ಯಾನಿ = ಆವವು ಕೆಲವು ಭಕ್ಷ್ಯಾಣಿ = ಭಕ್ಷ್ಯ ಗಳನು ಕಂದಮೂಲಫಲಾನಿಚ = ಕಂದ ಮೂಲಫಲಂಗಳನು ಅಪೂಪಾನಿ = ಔಗು ಗಳನು ಉಪದಂಶಾನಿ = ಉಪ್ಪಿನಕಾಯಿ ಶಾಕಂಗಳನು ಗುರೋಃ = ಶ್ರೀಗುರುವಿನ ದೆಸೆಯಿಂದವು ಪುರ್ವಂ = ಮೊದಲು ನ ಭಕ್ಷಯೇತ್ = ಮೆಲಲಾಗದು, ॥೨೭॥

ಸ್ವಗುರೋಃ = ತನ್ನ ಶ್ರೀಗುರುವಿನ ಭೋಜನಾತ್ = ಆರೋಗಣೆಯ ದೆಸೆಯಿಂದ ಪೂರ್ವಂ = ಮೊದಲು ಕದಾಚನ = ಒಂದು ವೇಳೆಯೂ ಶಿಷ್ಯೇಣ = ಶಿಷ್ಯನಿಂದ ನ ಭೋಕ್ತವ್ಯಂ = ಉಣಲಾಗದು. ಶಿಷ್ಯನು ಮೊದಲುಣಲಾಗದೆಂಬುದರ್ಥ. ಭೋಜನಾನಂತರೇ = ಶ್ರೀಗುರುವಿನ ಆರೋಗಣೆಯ ಅನಂತರದಲ್ಲಿ ಯಃ = ಆವನಾ ನೊಬ್ಬನು ಅಶ್ನೀಯಾತ್ = ಉಂಬನು ಸಃ = ಅತನು ಪುಣ್ಯಭಾಕ್ = ಪುಣ್ಯವ ಭಜಿಸುವಾತನು. ಪುಣ್ಯಾತ್ಮನೆಂಬುದರ್ಥ. ॥೨೮॥

ಭಕ್ತಃ = ಭಕ್ತಿಯನುಳ್ಳಂಥಾ ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಸ್ವಗುರೋಃ = ತನ್ನ ಶ್ರೀಗುರುವಿನ ಪಾತ್ರೇ = ಆರೋಗಣೆಯ ಮಾಡಿದಂಥಾ ಪಾತ್ರೆ ಯಲ್ಲಿ ಉಜ್ಝಿತಂ = ಬಿಡಲ್ಪಟ್ಟಂಥಾ ಅನ್ನಂ = ಅನ್ನವನು ಭಕ್ತ್ಯಾ = ಭಕ್ತಿಯಿಂದ ಭುಂಕ್ತೇ = ಭುಂಜಿಸುತ್ತಿಹನು. ಸಃ = ಆತನು ಸರ್ವದುರಿತೈಃ = ಸಮಸ್ತಪಾತಕಂ ಗಳಿಂದ ಮುಚ್ಯತೇ = ಬಿಡಲ್ಪಡುತ್ತಿಹನು. ಅತ್ರ = ಈ ಅರ್ಥದಲ್ಲಿ ಸಂಶಯಃ = ಸಂದೇಹವು ನ = ಇಲ್ಲ. ॥೨೯॥

---

[1] ರ್ಭಕ್ತಂ (ಘ) [2] ನೊಬ್ಬನು (ಕ.ಖ.ಗ)

ತಾಂಬೂಲಮುತ್ತಮಂ ತಸ್ಮೈ ತತಃ ಪಾತ್ರೇಣ ದಾಪಯೇತ್
ಪಶ್ಚಾದಿಷ್ಟಾನಿ ವಸ್ತೂನಿ ದತ್ವಾ ನತ್ವಾ ಕ್ಷಮಾಪಯೇತ್ ||೩೦||

ಪ್ರದತ್ತಂ ಯತ್ಸ್ವಗುರುಣಾ ತಾಂಬೂಲಂ ಪರಿಚರ್ವಿತಮ್
ಶಿಷ್ಯಸ್ತದ್ಭಕ್ಷಯೇದ್ಭಕ್ತ್ಯಾ ಶುದ್ಧಾಂತಃಕರಣೋ ಭವೇತ್ ||೩೧||

ಶುಭಕಾರ್ಯೇಷು ಸರ್ವೇಷು ವಿವಾಹಾದಿಷು ಭಕ್ತಿತಃ
ಗುರುಮಭ್ಯರ್ಚಯೇಚ್ಛಿಷ್ಯೋ [1]ವಸ್ತ್ರಹೇಮಾಂಗುಲೀಯಕೈಃ ||೩೨||

ತತ್ರಾಪಿ ಚ ಸಭಾಪೂಜಾವಿಧೇಃ ಪೂರ್ವಂ ಗುರುಂ ಯಜೇತ್
ತತಸ್ಸಭಾಂ ಯಜೇದ್ಯೋಗ್ಯಂ[2] ಕ್ರಮೇಣೈವ ಯಥಾಶುಭಮ್ ||೩೩||

---

ತತಃ = ಅಷ್ಟರಮೇಲೆ ಉತ್ತಮಂ = ಒಳ್ಳೆತ್ತಹಂಥಾ ತಾಂಬೂಲಂ = ವೀಳೆಯವನ್ನು ತಸ್ಮೈ = ಆ ಶ್ರೀಗುರುವಿಂಗೋಸ್ಕರ ಪಾತ್ರೇಣ = ಬಟ್ಟಲಿಂದ ದಾಪಯೇತ್ = ಕೊಡುವುದು. ಪಶ್ಚಾತ್ = ಬಳಿಕ ಇಷ್ಟಾನಿ = ಬಯಸಿದಂಥಾ ವಸ್ತೂನಿ = ವಸ್ತುಗಳನು ದತ್ವಾ = ಕೊಟ್ಟು ನತ್ವಾ = ನಮಸ್ಕರಿಸಿ ಕ್ಷಮಾಪಯೇತ್ = ಪ್ರಸನ್ನನ ಮಾಡಿಕೊಂಬುದು. ||೩೦||

ಪ್ರದತ್ತಂ = ಕೊಡಲ್ಪಟ್ಟಂಥಾ ಯತ್ = ಆವುದಾನೊಂದು ತಾಂಬೂಲಂ = ತಾಂಬೂಲವು ಸ್ವಗುರುಣಾ = ತನ್ನ ಗುರುವಿಂದ ಪರಿಚರ್ವಿತಂ = ಸವಿಯಲ್ಪಟ್ಟಿತ್ತು. ತತ್ = ಆ ಶ್ರೀಗುರು ಸವಿದಂಥಾ ತಾಂಬೂಲ ಪ್ರಸಾದವನು ಶಿಷ್ಯಃ = ಶಿಷ್ಯನು ಭಕ್ತ್ಯಾ = ಭಕ್ತಿಯಿಂದ ಭಕ್ಷಯೇತ್ = ಮೆಲುವುದು. ಶುದ್ಧಾಂತಃಕರಣಃ = ನಿರ್ಮಲವಹ ಚಿತ್ತವನುಳ್ಳಾತನು ಭವೇತ್ = ಅಹನು. ||೩೧||

ವಿವಾಹಾದಿಷು = ವಿವಾಹ ಮೊದಲಾದಂಥಾ ಸರ್ವೇಷು = ಸಮಸ್ತವಹಂಥಾ ಶುಭಕಾರ್ಯೇಷು = ಶುಭಕಾರ್ಯಂಗಳಲ್ಲಿ ಶಿಷ್ಯಃ — ಶಿಷ್ಯನು ಭಕ್ತಿತಃ — ಭಕ್ತಿಯಿಂದ ವಸ್ತ್ರಹೇಮಾಂಗುಲೀಯಕೈಃ ..., ವಸ್ತ್ರ ಸುವರ್ಣ ಉಂಗುರಂಗಳಿಂದ ಗುರುಂ = ಶ್ರೀಗುರುವನು ಅಭ್ಯರ್ಚಯೇತ್ — ಪೂಜಿಸೂದು. ||೩೨||

ತತ್ರಾಪಿ ಚ = ಆ ವಿವಾಹ ಮೊದಲಾದ ಶುಭಕರ್ಮದಲ್ಲಿಯೂ ಸಭಾಪೂಜಾವಿಧೇಃ = ಸಭಾಪೂಜೆಯ ವಿಧಾನದ ದೆಸೆಯಿಂದವೂ ಪೂರ್ವಂ = ಮೊದಲು ಗುರುಂ = ಶ್ರೀಗುರುವನು ಯಜೇತ್ = ಪೂಜಿಸೂದು. ತತಃ = ಆ ಶ್ರೀಗುರುವಿನ ಪೂಜೆಯ ಮಾಡಿದ ಅನಂತರದಲ್ಲಿ ಸಭಾಂ = ಸಭೆಯನು ಯೋಗ್ಯಂ = ಯೋಗ್ಯವಹನನು

---

[1] ವಸ್ತ್ರೈರ್ಹೇ (ಘ) [2] ಗ್ಯ (ಘ)

ಸಭಾಂತರೇ ಗುರುಂ ಧೀಮಾನ್ ಕದಾಚಿದಪಿ ನಾರ್ಚಯೇತ್
ಆಸನಸ್ಥಂ ವಿಶೋಧ್ಯಾಂಘ್ರಿಂ[1] ಗಂಧಪುಷ್ಪಾಕ್ಷತೈರ್ಯಜೇತ್ ||೩೪||

ತತೋಽರ್ಪಯೇತ್ಸ್ವಗುರವೇ ವಸ್ತ್ರಹೇಮಾಂಗುಲೀಯಕಾನ್[2]
ದರಿದ್ರಶ್ಚೋದಿತೇಷ್ವೇಷು ನಿಜಶಕ್ತಿಮವಂಚಯನ್ ||
ಅವಶ್ಯಮರ್ಚಯೇಚ್ಛಿಷ್ಯೋ ಗುರುಂ ಲಬ್ಧಧನೇನ ವಾ ||೩೫||

ಗುರುಯಾತ್ರಾ ದೇವಯಾತ್ರಾ ತೀರ್ಥಯಾತ್ರೇತಿ ಚ ತ್ರಿಧಾ
ಆಸಾಂ ತ್ರಿವಿಧಯಾತ್ರಾಣಾಂ ಗುರುಯಾತ್ರಾ ಫಲಾಧಿಕಾ ||೩೬||

---

ಕ್ರಮೇಣೈವ=ಕ್ರಮದಿಂದವೆ ಯಥಾಶುಭಂ=ಮಂಗಳವಹ ಹಾಂಗೆ ಯಜೇತ್=ಪೂಜಿಸೂದು. ||೩೩||

ಧೀಮಾನ್=ಬುದ್ಧಿ[3]ಯನುಳ್ಳಾತನು ಗುರುಂ=ಶ್ರೀಗುರುವನು ಸಭಾಂತರೇ=ಸಭಾಪೂಜೆಯ ಅನಂತರದಲ್ಲಿ ಕದಾಚಿದಪಿ=ಒಂದು ವೇಳೆಯಲಾದರೂ ನಾರ್ಚಯೇತ್=ಅರ್ಚಿಸಲಾಗದು. ಆಸನಸ್ಥಂ=ಗದ್ದುಗೆಯಲ್ಲಿ ಕುಳ್ಳಿರ್ದಂಥಾ ಶ್ರೀಗುರುವನು ಕುರಿತು ಅಂಘ್ರಿಂ=ಪಾದವನು ವಿಶೋಧ್ಯ=ತೊಳದು ಗಂಧಪುಷ್ಪಾಕ್ಷತೈಃ=ಗಂಧ ಪುಷ್ಪ ಅಕ್ಷತೆಗಳಿಂದ ಯಜೇತ್=ಅರ್ಚಿಸೂದು. ||೩೪||

ತತಃ=ಅಷ್ಟರ ಮೇಲೆ ಸ್ವಗುರವೇ=ತನ್ನ ಗುರುವಿಂಗೋಸ್ಕರ ವಸ್ತ್ರಹೇಮಾಂಗುಲೀಯಕಾನ್=ವಸ್ತ್ರ ಸುವರ್ಣ ಉಂಗುರಂಗಳನು ಅರ್ಪಯೇತ್=ಸಮರ್ಪಿಸೂದು. ದರಿದ್ರಶ್ಚ=ದರಿದ್ರನಾದರೂ ಉದಿತೇಷು ಏಷು=ಒದಗಿದಂಥಾ ಈ ನುಡಿದಂಥಾ ವಸ್ತುಗಳಲ್ಲಿ ನಿಜಶಕ್ತಿಂ=ತನ್ನ ಶಕ್ತಿಯನು ಅವಂಚಯನ್=ವಂಚಿಸದೇ ಅರ್ಪಯೇತ್=ಸಮರ್ಪಿಸೂದು.

ಶಿಷ್ಯಃ=ಶಿಷ್ಯನು ಲಬ್ಧಧನೇನ ವಾ=ಒದಗಿದಷ್ಟು ಧನದಿಂದಲಾದರೂ ಗುರುಂ=ಶ್ರೀಗುರುವನು ಅವಶ್ಯಂ=ನಿಶ್ಚಯವಾಗಿ ಅರ್ಚಯೇತ್=ಅರ್ಚಿಸೂದು. ||೩೫||

ಗುರುಯಾತ್ರಾ=ಗುರುವಿನ ಸಮೀಪಕ್ಕೆ ಹೋಗುಹ, ದೇವಯಾತ್ರಾ=ಶಿವಸ್ಥಾನಕ್ಕೆ ಹೋಗುಹ, ತೀರ್ಥಯಾತ್ರಾ=ತೀರ್ಥಕ್ಕೆ ಹೋಗುಹ ಇತಿ ಚ=ಈ ಪ್ರಕಾರದಲ್ಲಿ ತ್ರಿಧಾ=ಮೂರು ಪ್ರಕಾರವಹ ಯಾತ್ರೆಯುಂಟು. ಆಸಾಂ=ಈ

---

[1] ಘ್ರೀಃ (ಘ) [2] ಕಂ (ಘ) [3] ಯು (ಕ)

ಗುರುಸಂದರ್ಶನಾ[1]ರ್ಥಂ ತು ಭಕ್ತ್ಯಾ ಯಾತ್ರಾಂ ಕರೋತಿ ಯಃ
ಪುಣ್ಯದೇಹೀ ಸ ವಿಜ್ಞೇಯಃ ಸಮಸ್ತಾಮರವಲ್ಲಭಃ ||೩೭||

ಶಿಷ್ಯೋ ಗುರುಸ್ಥಿತಗ್ರಾಮಂ ಪ್ರವಿಶನ್ವಾಹನಾದಿಕಮ್
ವರ್ಜಯೇದ್ಗೃಹಸಾಮೀಪ್ಯೇ ತಥಾ ವೈ ಪಾದುಕಾನಿ ಚ ||೩೮||

ಗುರುಂ ದಿದೃಕ್ಷುರ್ಯಃ ಶಿಷ್ಯಃ ಸದ್ಭಕ್ತ್ಯಾಽನುದಿನಂ ಸದಾ
ರಿಕ್ತಪಾಣಿರ್ನ ಸಂಪಶ್ಯೇದ್ಯಥಾ ರಾಜಾ ತಥಾ ಗುರುಃ ||೩೯||

ಫಲಂ ಪ್ರಸೂನಂ ತಾಂಬೂಲಮನ್ಯತ್ಕಿಮಪಿ ವಸ್ತು ಚ
[2]ಏ[3]ಷ್ವೇಕಂ ಗುರವೇ ದತ್ವಾ ನಮಸ್ಕುರ್ಯಾತ್ತತೋ ಗುರುಮ್ ||೪೦||

---

ತ್ರಿವಿಧಯಾತ್ರಾಣಾಂ = ಮೂರು ಯಾತ್ರೆಗ[3][ ಳೊಳಗೆ ][3] ಗುರುಯಾತ್ರಾ = ಶ್ರೀಗುರುಯಾತ್ರೆ ಅಧಿಕಾ = ಅಧಿಕವಹಂಥಾ ಫಲಾ = ಫಲವನುಳ್ಳದು ||೩೬||

ಯಃ = ಆವನಾನೊಬ್ಬನು ಗುರುಸಂದರ್ಶನಾರ್ಥಂ = ಶ್ರೀಗುರುವಿನ ಸಂದರ್ಶನ ಕ್ಕೋಸ್ಕರ ಭಕ್ತ್ಯಾ = ಭಕ್ತಿಯಿಂದ ಯಾತ್ರಾಂ ತು = ಯಾತ್ರೆಯನು ಕರೋತಿ = ಮಾಡುತ್ತಿಹನು ಸಃ = ಆತನು ಪುಣ್ಯದೇಹೀ = ಪುಣ್ಯಾತ್ಮನೆಂದು ವಿಜ್ಞೇಯಃ = ಅರಿಯಲು ಯೋಗ್ಯನು. ಸಮಸ್ತಾಮರವಲ್ಲಭಃ = ಸಮಸ್ತ ದೇವಶ್ರೇಷ್ಠನಹನು.

ಶಿಷ್ಯಃ = ಶಿಷ್ಯನು ಗುರುಸ್ಥಿತಗ್ರಾಮಂ = ಗುರುವಿಹಂಥಾ ಗ್ರಾಮವನು ಪ್ರವಿಶನ್ = ಪ್ರವೇಶಿಸುತ್ತವು ಗೃಹಸಾಮೀಪ್ಯೇ = ಶ್ರೀಗುರುವಿನ ಗೃಹಸಮೀಪದಲ್ಲಿ ವಾಹನಾದಿಕಂ = ವಾಹನ ಮೊದಲಾಗಿದ್ದಂಥಾವನು ತಥಾ ವೈ = ಹಾಂಗೆ ಪಾದುಕಾನಿ ಚ = ಹಾವುಗೆಗಳನು ವರ್ಜಯೇತ್ = ವರ್ಜಿಸೂದು. ||೩೮||

ಗುರುಂ = ಶ್ರೀಗುರುವನು ದಿದೃಕ್ಷುಃ = ನೋಡಲಿಚ್ಛೆಯನುಳ್ಳಂಥಾ ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಸದ್ಭಕ್ತ್ಯಾ = ಸದ್ಭಕ್ತಿಯಿಂದ ಅನುದಿನಂ = ಅನುದಿನವು ಸದಾ = ಎಲ್ಲಾಗಳೂ ರಿಕ್ತಪಾಣಿಃ = ಬರಿಯ ಹಸ್ತನಾಗಿ ನ ಸಂಪಶ್ಯೇತ್ ದರ್ಶನ ಮಾಡಲಾಗದು. ರಾಜಾ ಯಥಾ = ಅರಸೆಹಗಹಗೆ ತಥಾ ಗುರುಃ = ಆ ಮರಿಯಾದಿಯುಳ್ಳ ಆಚಾರ್ಯನು. ||೩೯||

ಫಲಂ = ಫಲವು ಪ್ರಸೂನಂ = ಪುಷ್ಪವು ತಾಂಬೂಲಂ = ವೀಳಯವು ಅನ್ಯತ್ = ಮತ್ತೊಂದು ಕಿಮಪಿ = ಅವುದಾನೊಂದು ವಸ್ತು ಚ = ವಸ್ತುವುಂಟು ಏಷು = ಇವರಲ್ಲಿ ಏಕಂ = ಒಂದನು ಗುರುವೇ = ಗುರುವಿಂಗೋಸ್ಕರ ದತ್ವಾ = ಕೊಟ್ಟು

---

[1] ರ್ಥಾಯ (ಘ) [2] ತೇ (ಘ) [3] ಗಳಿಗೆ.

ಶ್ರೀಮಾನಪಿ [1]ತಪಸ್ವೀ ಚ[1] ಶಾಸ್ತ್ರಜ್ಞಃ ಕುಲ[2]ಶೌಚ[3]ವಾನ್
ಕುರ್ಯಾದ್ದಂಡನಮಸ್ಕಾರಂ ನಿರ್ಲಜ್ಜೋ ಗುರುಸನ್ನಿಧೌ ||೪೧||

ಉಪಚಾರೇಷು ಸರ್ವೇಷು ದ್ವಾವೇವಾತ್ಯಂತಶೋಭನೌ
ಪ್ರಿಯವಾಕ್ಚ[3] ಪ್ರಣಾಮಶ್ಚ ತೌ ವಿನಾಽನ್ಯೇ ವೃಥಾ ಸ್ಮೃತಾಃ ||೪೨||

ಅಗ್ರೇ ದೃಷ್ಟ್ವಾ ನಮಸ್ಕೃತ್ವಾ ಪ್ರದಕ್ಷಿಣಮನು[4]ವ್ರಜೇತ್[4]
[5]ಪ್ರಥಮದ್ವಾರಮಾರಭ್ಯ ದ್ವಾರಾವಧಿ ಪರಿಕ್ರಮೇತ್[5] ||೪೩||

---

ತತಃ = ಅನಂತರದಲ್ಲಿ ಗುರುಂ = ಶ್ರೀಗುರುವನು ನಮಸ್ಕುರ್ಯಾತ್ = ನಮಸ್ಕಾರವ ಮಾಡೂದು. ||೪೦||

ಶ್ರೀಮಾನಪಿ = ಐಶ್ವರ್ಯವನುಳ್ಳಾತನಾದರೂ ತಪಸ್ವೀಚ = ತಪಸ್ವಿಯಾದರೂ ಶಾಸ್ತ್ರಜ್ಞಃ = ಶಾಸ್ತ್ರಜ್ಞನು ಕುಲಶೌಚವಾನ್ = ಕುಲಶೌಚವುಳ್ಳಾತನು ಗುರುಸನ್ನಿಧೌ = ಗುರುವಿನ ಸಮೀಪದಲ್ಲಿ ನಿರ್ಲಜ್ಜಃ = ಲಜ್ಜೆಯಿಲ್ಲದೆ ದಂಡನಮಸ್ಕಾರಂ = ದಂಡನಮಸ್ಕಾರವನು ಕುರ್ಯಾತ್ = ಮಾಡೂದು. ||೪೧||

ಸರ್ವೇಷು = ಸಮಸ್ತವಹಂಥಾ ಉಪಚಾರೇಷು = ಉಪಚಾರಂಗಳಲ್ಲಿ ದ್ವಾವೇವ = ಎರಡೇ ಅತ್ಯಂತಶೋಭನೌ = ಅತ್ಯಂತ ಒಪ್ಪುವಂಥಾವು. ಪ್ರಿಯವಾಕ್ಚ = ಪ್ರಿಯವಾಕ್ಯವು ಪ್ರಣಾಮಶ್ಚ = ನಮಸ್ಕಾರವು ತೌ ವಿನಾ = ಅವೆರಡಿಲ್ಲದೇ ಅನ್ಯೇ = ಉಳಿದ ಉಪಚಾರಂಗಳು ವೃಥಾ = ವ್ಯರ್ಥವೆಂದು ಸ್ಮೃತಾಃ = ಹೇಳಲ್ಪಟ್ಟವು. ||೪೨||

ದೃಷ್ಟ್ವಾ = ಕಂಡು ಅಗ್ರೇ = ಇದಿರಿನಲ್ಲಿ ನಮಸ್ಕೃತ್ವಾ = ನಮಸ್ಕಾರವನು ಮಾಡಿ ಪ್ರದಕ್ಷಿಣಂ = ಪ್ರದಕ್ಷಿಣವನು ಅನುವ್ರಜೇತ್ = ಮಾಡುವುದು ಅನು ಎಂಬ ಉಪಸರ್ಗದಿಂದ ಧಾತ್ವರ್ಥವ ಕೆಡಿಸಿತ್ತು. ಪ್ರಥಮದ್ವಾರಂ = ಮೊದಲ ಬಾಗಿಲು ಆರಭ್ಯ = ತೊಡಗಿ ದ್ವಾರಾವಧಿ = ಮನೆಯ ಬಾಗಿಲು ಪರ್ಯಂತ ಪರಿಕ್ರಮೇತ್ = ಪ್ರದಕ್ಷಿಣವ ಮಾಡುವದು. ||೪೩||

---

1 ತಪೋವೇಷೀ (ಖ.ಗ.ಚ). ತಪಸ್ವೀ ಚ (ಕ) ವ್ಯಾಖ್ಯಾಪಾಠ.

2 ಶೀಲ (ಫ). 3 ಜೇಃ (ಫ) 4 ಸ್ಮರನ್ (ಫ)

5 ಪ್ರದಕ್ಷಿಣಂ ಚ ಕುರ್ವೀತ ಯಥಾ ಶಕ್ತ್ಯನುಸಾರತಃ (ಫ)

ಪ್ರದಕ್ಷಿಣ[1]ಕೃತೋ[1] ಧೀಮಾನ್ ನ ತು ದೀರ್ಘಪದಂ ನ್ಯಸೇತ್
ನ ಗಚ್ಛೇತ್ತ್ವರಿತೋ ಯಚ್ಚ ನ ಜಲ್ಪೇದಿತರೈಸ್ಸಹ ||೪೪||

ಪದೇ ಪದಾಂತರಂ ನ್ಯಸ್ಯ ಕರೌ ಚಲನವರ್ಜಿತೌ
[2]ಸ್ತುತಿರ್ವಾಚಾ ಹೃದಿ[2] ಧ್ಯಾನಂ [3]ಚತುರಂಗಂ[3] ಪ್ರದಕ್ಷಿಣಮ್ ||೪೫||

[4]ಏವಂ ಶಿಷ್ಯಃ ಶುಚಿರ್ಭಕ್ತ್ಯಾ ಸಹ ಕುರ್ಯಾತ್ಪರಿಕ್ರಮಮ್[4]
ಸ್ವಗುರೋಃ ಪುರತಶ್ಶಿಷ್ಯೋ ನೇತರಾನ್ ಕೀರ್ತಯೇಜ್ಜನಾನ್ ||೪೬||

---

ಪ್ರದಕ್ಷಿಣಕೃತಃ = ಪ್ರದಕ್ಷಿಣವ ಮಾಡಿದಂಥಾ ಧೀಮಾನ್ = ಬಲ್ಲಾತನು ದೀರ್ಘಪದಂ ತು = ನಿಡಿದಾಗಿ ಹೆಜ್ಜೆಯನು ನ್ಯಸೇನ್ನ = [5]ಇಕ್ಕ[5]ಲಾಗದು ತ್ವರಿತಃ = ಬೇಗದಲು ನ ಗಚ್ಛೇತ್ = ನಡೆಯಲಾಗದು ಯಚ್ಚ = ಆವುದಾನೊಂದು ಕಾರಣ ವಾಗಿಯೂ ಇತರೈಸ್ಸಹ = [6]ಉಳಿದವರು[6]ಗಳೊಡನೆ ನ ಜಲ್ಪೇತ್ = ಮಾತನಾಡ ಲಾಗದು. ||೪೪||

ಪದೇ = ಹಜ್ಜೆಯಲ್ಲಿ ಪದಾಂತರಂ = ಹಜ್ಜೆಯನು ನ್ಯಸ್ಯ = ಇರಿಸಿ ಕರೌ = ಹಸ್ತಂಗಳು ಚಲನವರ್ಜಿತೌ = ಚಲನೆಯಿಲ್ಲದ[7]ವಾಗಿ[7] ವಾಚಾ = ವಾಕ್ಯದಿಂದ ಸ್ತುತಿಃ = ಸ್ತೋತ್ರವ ಮಾಡುತ್ತಲು ಹೃದಿ = ಚಿತ್ತದಲ್ಲಿ ಧ್ಯಾನವ ಮಾಡುತ್ತಲು ಚತುರಂಗಂ = ಈ ನಾಲ್ಕಂಗವನುಳ್ಳಂಥಾ ಪ್ರದಕ್ಷಿಣಂ = ಪ್ರದಕ್ಷಿಣವನು ಮಾಡು ವುದು. ||೪೫||

ಏವಂ = ಈ ಪ್ರಕಾರದಲ್ಲಿ ಶಿಷ್ಯಃ = ಶಿಷ್ಯನು ಶುಚಿಃ = ಶುಚಿಯಾಗಿ ಭಕ್ತ್ಯಾ ಸಹ = ಭಕ್ತಿಯೊಡನೆ ಪರಿಕ್ರಮಂ = ಪ್ರದಕ್ಷಿಣವನು ಕುರ್ಯಾತ್ = ಮಾಡುವುದು. ಸ್ವಗುರೋಃ = ತನ್ನ ಶ್ರೀಗುರುವಿನ ಪುರತಃ = ಮುಂದೆ ಶಿಷ್ಯಃ = ಶಿಷ್ಯನು ಇತರಾನ್ = ಉಳಿದಂಥಾ ಜನಾನ್ = ಜನರುಗಳನು ನ ಕೀರ್ತಯೇತ್ = ಕೊಂಡಾಡಲಾಗದು. ||೪೬||

---

1 ಜ್ಞೋಯೋ (ಘ) 2 ಸ್ತುತಿಂವಾಚಾ ಹೃದಾ (ಘ)
3 ಏವಂ ಕುರ್ಯಾತ್ (ಘ)
4 ಏವಂ ಶಿಷ್ಯಃ ಶುಚಿಃ ಕುರ್ಯಾತ್ ಭಕ್ತ್ಯಾ ಸಹ ಪರಿಕ್ರಮಮ್ (ಘ)
5 ಇಡ (ಖ.ಚ) 6 ಇತರರು (ಖ.ಚ)
7 ದಾತನಾಗಿ (ಖ.ಚ.)

[1]ಅಸಹ್ಯಭಾಷಣಂ ಚೈವ[1] ನ ವದೇದಿತರೇತರವತ್
ನಾನೃತಂ ನಾಪ್ರಿಯಂ ವಾಕ್ಯಂ ನ [2]ಗುಹ್ಯಂ[2] ಚಾಪಿ ಭಾಷಯೇತ್ ||

ನಾಪೃಚ್ಛನ್ನಮುಖೋ ಬ್ರೂಯಾದ್ಗುರೋರಗ್ರೇ ಕದಾಚನ
ಸ್ವಾಮಿಭಟ್ಟಾರಕಾಚಾರ್ಯದೇವಶ್ರೀಗುರುನಾಮಭಿಃ ||೪೮||

ವಾಚ್ಯಃ ಸದಾ ಗುರುಃ ಶಿಷ್ಯೈಃ ಜಾತುಚಿನ್ನಾನ್ಯನಾಮಭಿಃ
ತ್ವಂ ಶಬ್ದಂ ನ ಪ್ರಯುಂಜೀತ ಗುರೌ ಶಿಷ್ಯಃ ಕದಾಚನ ||೪೯||

ಆಜ್ಞಾಂ ನ ಲಂಘಯೇತ್ತಸ್ಯ [3]ಸನಂ ನೋ[3]ಪವಿಶೇತ್ತಥಾ
ಆಸನಂ ವಾಹನಂ ವಸ್ತ್ರಂ ಭೂಷಣಂ ಶಯನಂ ತಥಾ
ನ ಕುರ್ಯಾದ್ಗುರುಸಾದೃಶ್ಯಂ [4]ಗತಿಸಿದ್ಧೇರಪೇಕ್ಷಕಃ[4] ||೫೦||

---

ಅಸಹ್ಯಭಾಷಣಂ= ಸೊಗಸದಂಥಾ[5]ಮಾತನು[5] ನ ವದೇತ್ = ನುಡಿಯಲಾಗದು ಇತರೇತರಂ= ಅನ್ಯವ್ಯಾಪಾರವನು ನ ವದೇತ್ = ನುಡಿಯಲಾಗದು. ಅನೃತಂ= ಹುಸಿಯನು ನ = ನುಡಿಯಲಾಗದು. ಅಪ್ರಿಯಂ = ಪ್ರಿಯವಲ್ಲದೇ ಇದ್ದಂಥಾ ವಾಕ್ಯಂ= ವಾಕ್ಯವನು ನ= ನುಡಿಯಲಾಗದು. ಗುಹ್ಯಂ ಚಾಪಿ= ಗೋಪ್ಯವಹಂಥಾ ಮಾತನು ನ ಭಾಷಯೇತ್ = ಆಡಲಾಗದು. ||೪೭||

ಗುರೋಃ= ಶ್ರೀ ಗುರುವಿನ ಅಗ್ರೇ = ಇದಿರಿನಲ್ಲಿ ಕದಾಚನ = ಒಂದು ಬಾರಿಯೂ ಅನುಖಃ= ತಿರಿಗಿದ ಮುಖವನುಳ್ಳಾತನಾಗಿ ನ ಬ್ರೂಯಾತ್ = ನುಡಿಯಲಾಗದು. ಅಪೃಚ್ಛನ್= ಬೆಸಗೊಳ್ಳದಾತನಾಗಿ ನ= ನುಡಿಯಲಾಗದು ಸ್ವಾಮಿಭಟ್ಟಾರಕಾಚಾರ್ಯದೇವ ಶ್ರೀಗುರುನಾಮಭಿಃ = ಸ್ವಾಮೀ ಒಡೆಯರು ಭಟ್ಟಾರಕಃ= ಭಟ್ಟಾರಕರು ಆಚಾರ್ಯಃ = ಆಚಾರ್ಯರು ದೇವಃ = ದೇವರು ಶ್ರೀ ಗುರುಃ= ಶ್ರೀಗುರುಃವೆಂಬಂಥಾ ನಾಮಭಿಃ= ನಾಮಂಗಳಿಂದವು, ||೪೮||

ಗುರುಃ= ಶ್ರೀಗುರುವು ಶಿಷ್ಯೈಃ= ಶಿಷ್ಯರುಗಳಿಂದ ಸದಾ = ಎಲ್ಲಾಗವೂ ವಾಚ್ಯಃ= ನುಡಿಯಲು ಯೋಗ್ಯನು. ಜಾತುಚಿತ್= ಒಮ್ಮೆಯೂ ಅನ್ಯನಾಮಭಿಃ =ಉಳಿದ ಹೆಸರುಗಳಿಂದ ನ ವಾಚ್ಯಃ= ನುಡಿಯಲು ಯೋಗ್ಯನಲ್ಲ. ಶಿಷ್ಯಃ= ಶಿಷ್ಯನು ಗುರೌ= ಗುರುವಿನಲ್ಲಿ ಕದಾಚನ= ಒಂದು ಬಾರಿಯೂ ತ್ವಂ ಶಬ್ದಂ= ನೀನು ಎಂಬ ಶಬ್ದವನು ನ ಪ್ರಯುಂಜೀತ= ಪ್ರಯೋಗಿಸಲಾಗದು. ||೪೯||

ತಸ್ಯ= ಆ ಶ್ರೀಗುರುವಿನ ಆಜ್ಞಾಂ= ಆಜ್ಞೆಯನು ನ ಲಂಘಯೇತ್=

---

1 ಅಸಹ್ಯಭಾವಂ ನ ವದೇತ್ (ಖ.ಗ.ಚ) 2 ಗುಹ್ಯಂ (ಗ) 3 ಸಮೇಃನೋ(ಖ.ಗ.ಚ)
4 ಗತಿಸಿದ್ಧಿ ಹಿತೇಃ ಚ್ಛುಕಃ (ಘ) 5 ಕಾರ್ಯವನು (ಖ. ಚ)

ಗುರುಗೇಹೇ [1]ಸಮಕ್ಷಂ[1] ವಾ ನ ಯಥೇಷ್ಟಾಸನೋ ಭವೇತ್
ಗುರುರ್ದೇವೋ ಯತಸ್ಸಾಕ್ಷಾತ್ ತದ್ಗೃಹಂ ಶಿವಮಂದಿರಮ್ ||೫೧||

ಗುರುಸ್ಥಿತಸ್ಥಲಾ[2]ದುಚ್ಚ[2]ಸ್ಥಲೇ ವಾ ಚೋನ್ನತಾಸ[3]ನೇ[3]
ಉದಗ್ರವೇದಿಕಾಯಾಂ ವಾ ಶಿಷ್ಯೋ ನಾಸೀತ ಜಾತುಚಿತ್ ||೫೨||

ನೋಲ್ಬಣಂ ಧಾರಯೇದ್ವೇಷಂ ನಾಲಂಕಾರಾಂಶ್ಚ [4]ಕರ್ಹಿ[4]ಚಿತ್
ನಾಂಗಭೋಗಾದಿಕಂ ಕುರ್ಯಾನ್ನ ಲೀಲಾಮಪರಾಮಪಿ ||೫೩||

---

ಮೀರಲಾಗದು. ತಥಾ = ಹಾಂಗೆ [5]ಸಮಂ = ಸಮಾನವಾಗಿ[5] ಉಪವಿಶೇನ್ನ = ಕುಳ್ಳಿರಲಾಗದು. ಗುರುಸಾದೃಶ್ಯಂ = ಗುರುವಿನ ಗದ್ದುಗೆಗೆ ಸಮಾನವಹಂಥಾ ಆಸನಂ = ಗದ್ದುಗೆಯನು ವಾಹನಂ = ವಾಹನವನು ವಸ್ತ್ರಂ = ವಸ್ತ್ರವನು ಭೂಷಣಂ = ಅಲಂಕಾರವನು ತಥಾ = ಹಾಂಗೆ ಶಯನಂ = ಶಯನವನು ಗತಿಸಿದ್ಧೇಃ = ಮೋಕ್ಷದ ಸಿದ್ಧಿಯ ಅಪೇಕ್ಷಕಃ = ಬಯಸುವಾತನು ನ ಕುರ್ಯಾತ್ = ಮಾಡಲಾಗದು. ||೫೦||

ಗುರುಗೇಹೇ = ಶ್ರೀಗುರುವಿನ ಗೃಹದಲ್ಲಿಯೂ ಸಮಕ್ಷಂ ವಾ = ಗುರುವಿನ ಸಮೀಪದಲ್ಲಿಯೂ ಯಥೇಷ್ಟಾಸನಃ = ಇಚ್ಛೆಗೆ ಬಂದ ಹಾಂಗೆ ಗದ್ದುಗೆಯಲ್ಲಿ ಕುಳ್ಳಿರುಹವು ನ ಭವೇತ್ = ಆಗದು. ಯತಃ = ಆವುದಾನೊಂದು ಕಾರಣವಾಗಿ ಗುರುಃ = ಗುರುವು ಸಾಕ್ಷಾತ್ = ಪ್ರತ್ಯಕ್ಷನಹಂಥಾ ದೇವಃ = ಶಿವನು. ತದ್ಗೃಹಂ = ಆ ಗುರುವಿನ ಗೃಹವು ಶಿವಮಂದಿರಂ = ಶಿವನ ಅರಮನೆ. ||೫೧||

ಗುರುಸ್ಥಿತಸ್ಥಲಾತ್ = ಗುರುವಿದ್ದ ಠಾವಿನ ದೆಸೆಯಿಂದವೂ ಉಚ್ಚಸ್ಥಲೇ ವಾ = ಉನ್ನತವಹ ಸ್ಥಾನದಲ್ಲಿ ಉದಗ್ರವೇದಿಕಾಯಾಂ ವಾ = ಉನ್ನತವಹ ಜಗಲಿಯಲ್ಲಿ ಶಿಷ್ಯಃ = ಶಿಷ್ಯನು ಜಾತುಚಿತ್ = ಒಮ್ಮೆಯೂ [6]ಉನ್ನತಾಸನೇ = ಉನ್ನತಾಸನದಲ್ಲಿ[6] ನಾಸೀತ = ಕುಳ್ಳಿರಲಾಗದು. ||೫೨||

ಉಲ್ಬಣಂ = ಕಡ್ಡಿಮುಂತಾದವರ್‌ ಮೀರಿಹವನು ನ ಕುರ್ಯಾತ್ = ಮಾಡಲಾಗದು. ವೇಷಂ = ವೇಷವನು ನ ಧಾರಯೇತ್ = ಧರಿಸಲಾಗದು. ಅಂಗಭೋಗಾಧಿಕಂ = ಶರೀರದ ಭೋಗ ಮೊದಲಾದಂಥಾವನು ನ ಕುರ್ಯಾತ್ = ಮಾಡಲಾಗದು. ಅಪರಾಂ = ಅನ್ಯವಹಂಥಾ ಲೀಲಾಮಪಿ = ವಿಲಾಸವನು ನ =

---

[1] ಸಮೀಪೇ (ಘ) [2] ದುಚ್ಚೈಃ (ಘ) [3] ನೀ (ಖ. ಚ.) ಉನ್ನ
[4] ಜಾತು (ಘ) [5] ಸಮೇನ-ಸಮಾನದಿಂದ (ಖಚ)
[6] ಉನ್ನತಾಸನೀ — ಉನ್ನತಾಸನವನು ಳ್ಳಾತನಾಗಿ (ಖ. ಚ)

ನ ಚೋತ್ತಿಷ್ಠೇದ್ವಿಶೇನ್ನೈವ ನ ವೃಥಾಕಾರ್ಯಮಾಚರೇತ್
[1]ದೀಕ್ಷಾವ್ಯಾಖ್ಯಾಪ್ರಮತ್ತಾದಿ[1] ಗುರೋರಗ್ರೇ [2]ವಿಸ[2]ರ್ಜಯೇತ್ ||೫೪||

ಅತಿ[3]ಹಾಸ್ಯ[3]ಮವಷ್ಟಂಭಂ ಲೀಲಾಮಂಘ್ರಿಪ್ರಸಾರಣಮ್
ವಿನೋದೋಜ್ಜ್ವಲವೇಷಂ ಚ ಪರ್ಯಂಕಂ ದಂತಧಾವನಮ್ ||೫೫||

ಪರ್ವಸ್ಫೋಟವಿಕಾರಂ ಚ ಪಾದಪ್ರಕ್ಷಾಲನಂ ತಥಾ
ತದ್ವಾಕ್ಯಪ್ರತಿಕೂಲಂ ಚ ನ ಕುರ್ಯಾದ್ಗುರುಸನ್ನಿಧೌ ||೫೬||

ಪಾತ್ರಂ ಸ್ನಾನಜಲಂ ಛಾಯಾಂ ಮಾಲ್ಯೋಪಕರಣಾನಿ ಚ
[4]ಭಕ್ತಿಹೀನಸ್ತು[4] ಪಾದಾಭ್ಯಾಂ ನ ಸ್ಪೃಶೇನ್ನೈವ ಲಂಘಯೇತ್ ||೫೭||

---

ಮಾಡಲಾಗದು. ಗುರುವಿನ ಸಮೀಪದಲ್ಲಿ ಇದ್ದಂಥಾ ಶಿಷ್ಯನು ಇಂಥವುಗಳನ್ನು ಮಾಡಲಾಗದೆಂಬುದರ್ಥ. ||೫೩||

ಗುರೋಃ=ಗುರುವಿನ ಅಗ್ರೇ=ಇದಿರಿನಲ್ಲಿ ವೃಥಾ = ವೃಥಾಯವು ನ ಚೋತ್ತಿಷ್ಠೇತ್=ಏಳಲಾಗದು. ವೃಥಾ=ವೃಥಾಯವು ವಿಶೇನ್ನೈವ= ಪ್ರವೇಶಿಸಲಾಗದು. ವೃಥಾ=ವ್ಯರ್ಥವಹಂಥಾ ಕಾರ್ಯಂ=ಕಾರ್ಯವನು ಆಚರೇನ್ನ =ಆಚರಿಸಲಾಗದು. ದೀಕ್ಷಾವ್ಯಾಖ್ಯಾಪ್ರಮತ್ತಾದಿ = ಉಪದೇಶ, ವ್ಯಾಖ್ಯಾನವ ಮಾಡುಹ, ಮದೋನ್ಮತ್ತತನ ಮುಂತಾದವನು ವಿಸರ್ಜಯೇತ್=ಬಿಡುವುದು.

ಅತಿಹಾಸ್ಯಂ=ಅತ್ಯಂತ ನಗೆಯುನು ಅವಷ್ಟಂಭಂ=ಬಿಗಿದುಕೊಂಡಿರುಹವನು ಲೀಲಾಂ=ವಿಲಾಸವನು ಅಂಘ್ರಿಪ್ರಸಾರಣಂ= ಕಾಲನೀಡಿಕೊಳುಹವನು ವಿನೋದೋಜ್ಜ್ವಲವೇಷಂ ಚ = ವಿನೋದವನು ಒಪ್ಪುತ್ತಂವಿದ್ದಂಥಾ ಅಲಂಕಾರವನು ಪರ್ಯಂಕಂ=ಮಂಚವನು ದಂತಧಾವನಂ=ಹಲ್ಲುಸುಲಿದುಕೊಳುಹವನು, ೫೫ ||

ಪರ್ವಸ್ಫೋಟವಿಕಾರಂ ಚ= ಬೆರಳಗಣ್ಣಿನ ಚಿಟುಕತೆಗೆದುಕೊಂಬ ವಿಕಾರವನು ತಥಾ=ಹಾಂಗೆ ಪಾದಪ್ರಕ್ಷಾಲನಂ=ಕಾಲತೊಳೆದುಕೊಳುಹವನು ತದ್ವಾಕ್ಯಪ ಕೂಲಂಚ=ಆವರ ಮಾತ ಮುರಿಹವನು ಗುರುಸನ್ನಿಧೌ=ಶ್ರೀ ಗುರುವಿನ ಸಮೀಪದಲ್ಲಿ ನ ಕುರ್ಯಾತ್=ಮಾಡಲಾಗದು. ||೫೬||

ಪಾತ್ರಂ = ಆರೋಗಣೆಯ ಭೋಜನವನು ಸ್ನಾನಜಲಂ = ಮಜ್ಜನವ ಮಾಡಿದ ಉದಕವನು ಛಾಯಾಂ = ಗುರುವಿನ ನೆಳಲನು ಮಾಲ್ಯೋಪಕರಣಾನಿ

---

[1] ದೀಕ್ಷಾಂವ್ಯಾಖ್ಯಾಂ ಪ್ರಮತ್ತತ್ವಂ (ಘ)
[2] ವಿವ (ಘ) [3] ಹಾಸ (ಘ) [4] ಭಕ್ತಿಹೀನೋಪಿ (ಘ)

*ಪಾದುಕಾಸನಶಯ್ಯಾದಿ ಗುರುಣಾ ಯದಧಿಷ್ಠಿತಮ್
ನಮಸ್ಕುರ್ವೀತ ತತ್ಸರ್ವಂ ಪಾದಾಭ್ಯಾಂ ನ ಸ್ಪೃಶೇತ್ ಕ್ವಚಿತ್ ||೫೮||

ನ ಗುರೋರಾಶ್ರಮೇ ಕುರ್ಯಾದುಪಾನತ್ಪರಿಸರ್ಪಣಮ್
ಗಚ್ಛತಃ ಪೃಷ್ಠತೋ ಗಚ್ಛೇದ್ಗುರೋಶ್ಛಾಯಾಂ ನ ಲಂಘಯೇತ್ ||

ನೋಪವಿಷ್ಟೇ ಭವೇದೂರ್ಧ್ವಂ [1]ಊರ್ಧ್ವಸ್ಥೇ ನ ವಿಶೇದ್ಗುರೌ[1]
ಪಶ್ಚಾತ್ಪಾದೇನ ನಿರ್ಗಚ್ಛೇತ್ ನಮಸ್ಕೃತ್ವಾಗ್ರತೋ ಗುರೋಃ ||

---

ಚ = ಪುಷ್ಪಮಾಲೆಯನು ಉಪಕರಣಂಗಳನು ಭಕ್ತಿಹೀನಸ್ಸನ್ = ಭಕ್ತಿಯಿಲ್ಲದಾತನಾಗಿ ಪಾದಾಭ್ಯಾಂ = ಪಾದಂಗಳಿಂದ ನ ಸ್ಪೃಶೇತ್ = ಮೆಟ್ಟಲಾಗದು. ಲಂಘಯೇನ್ನೈವ = ದಾಟಲಾಗದು. ||೫೭||

ಯತ್ = ಆವುದಾನೊಂದು ಕಾರಣವಾಗಿ ಗುರುಣಾ = ಶ್ರೀಗುರುವಿಂದ ಪಾದುಕಾಸನಶಯ್ಯಾದಿ = ಹಾವುಗೆ ಗದ್ದುಗೆ ಹಾಸಿಕೆ ಮೊದಲಾದಂಥಾದು ಅಧಿಷ್ಠಿತಂ = ಅಂಗೀಕರಿಸಲ್ಪಟ್ಟಿತ್ತು. ತತ್ಸರ್ವಂ = ಅವೆಲ್ಲವನು ನಮಸ್ಕುರ್ವೀತ = ನಮಸ್ಕಾರವ ಮಾಡುವುದು. ಪಾದಾಭ್ಯಾಂ = ಕಾಲುಗಳಿಂದ ಕ್ವಚಿತ್ = ಒಂದು ಬಾರಿಯೂ ನ ಸ್ಪೃಶೇತ್ = ಸೋಂಕಲಾಗದು. ||೫೮||

ಗುರೋಃ = ಶ್ರೀಗುರುವಿನ ಆಶ್ರಮೇ = ಆಶ್ರಮದಲ್ಲಿ ಉಪಾನತ್ಪರಿಸರ್ಪಣಂ = ಪಾದತ್ರಾಣದಿಂದ ನಡೆಹವನು ನ ಕುರ್ಯಾತ್ = ಮಾಡಲಾಗದು. ಗಚ್ಛತಃ = ಹೋಗುತ್ತಿದ್ದಂಥಾ ಗುರೋಃ = ಗುರುವಿನ ಪೃಷ್ಠತಃ = ಬೆನ್ನ ಕಡೆಯಿಂದ ಗಚ್ಛೇತ್ = ನಡೆವುದು. ಗುರೋಃ = ಗುರುವಿನ ಛಾಯಾಂ = ನೆಳಲನು ನ ಲಂಘಯೇತ್ = ದಾಟಲಾಗದು. ||೫೯||

ಗುರೌ = ಶ್ರೀಗುರುವು ಉಪವಿಷ್ಟೇ ಸತಿ = ಕುಳ್ಳಿರುತ್ತಂವಿರಲು ಊರ್ಧ್ವಂ = ಉಚ್ಚಸ್ಥಾನವು ನ ಭವೇತ್ = ಆಗದು. ಗುರೌ = ಶ್ರೀಗುರುವು ಊರ್ಧ್ವಸ್ಥೇ ಸತಿ = ಉನ್ನತಸ್ಥಾನದಲ್ಲಿ ಇರುತ್ತಂವಿರಲು ನ ವಿಶೇತ್ = ಪ್ರವೇಶಿಸಲಾಗದು. ಶ್ರೀಗುರು ಉನ್ನತಸ್ಥಲ ಸಮಸ್ಥಲದಲ್ಲಿ ಕುಳ್ಳಿರಲು ಶಿಷ್ಯನು ಅತ್ಯುನ್ನತಸ್ಥಾನದಲ್ಲಿ ಕುಳ್ಳಿರಲಾಗದೆಂಬುದರ್ಥ. ಗುರೋಃ = ಶ್ರೀಗುರುವಿನ ಅಗ್ರತಃ = ಮುಂದೆ ನಮಸ್ಕೃತ್ವಾ = ನಮಸ್ಕರಿಸಿ ಪಶ್ಚಾತ್ = ಹಿಂದುಗಡೆಯಿಂದ ಪಾದೇನ = ಕಾಲು ನಡೆಯಿಂದ ನಿರ್ಗಚ್ಛೇತ್ = ಎಯ್ದುವುದು.

---

* ಈ ಶ್ಲೋಕ (ಘ)ದಲ್ಲಿಲ್ಲ.

[2] ನೋಚ್ಚಾಸನಗತೋ ವಿಶೇತ್ (ಘ)

ಸ್ವಗುರೋರ್ಮನಸಃ[1] ಶಿಷ್ಯೋ [2][ಯಚ್ಚಾಯಾತಿ]ತದಾಚರೇತ್[1] ||

ಕಾರ್ಯವಿಜ್ಞಾಪನಾರ್ಥಂ ಯದ್ಗುರೂಣಾಂ ದೂರವಾಸಿನಾಮ್
[3]ಯಾತ್ರಾಲೇಖಾವೃತೇಸ್ಸಂಖ್ಯಾಃ[3]ಷಡಿತ್ಯಭಿಹಿತಾ ಬುಧೈಃ ||೬೧||

ತಾಲಪತ್ರಂ ದೃಢಂ ಸೌಮ್ಯಮೃಜು ಸಾಗ್ರಂ ದ್ವಿಧಾ ಕೃತಮ್
ಮೃದುಲಂ ಯತ್ಪ್ರಶಸ್ತಂ [4]ತದ್ಯಾತ್ರಾಲೇಖಾವಿಲೇಖನೇ[4] ||೬೨||

ಕರ್ಕಶಂ ಕಲ್ಮಷಂ ವಕ್ರಂ ಹೀನಾಗ್ರಂ ಸ್ಫುಟಿತಂ ಯುಗಮ್
[5]ತಾಲಪತ್ರಮಶಸ್ತಂ ಸ್ಯಾದ್ಯಾತ್ರಾ[5]ಲೇಖಾವಿಲೇಖನೇ ||೬೩||

---

ಸ್ವಗುರೋಃ = ತನ್ನ ಶ್ರೀಗುರುವಿನ ಮನಸಃ = ಮನಸ್ಸಿಂಗೆ ಯಚ್ಚ = ಆವುದಾನೊಂದು ಆಯಾತಿ = ಬಹುದು ತತ್ = ಅದನು ಶಿಷ್ಯಃ = ಶಿಷ್ಯನು ಆಚರೇತ್ = ಮಾಡುವುದು. ||೬೦||

ಯತ್ = ಆವುದಾನೊಂದು ಕಾರಣವಾಗಿ ದೂರವಾಸಿನಾಂ = ದೂರದಲ್ಲಿ ಇದ್ದಂಥಾ ಗುರೂಣಾಂ = ಆಚಾರ್ಯರುಗಳಿಗೆ ಕಾರ್ಯವಿಜ್ಞಾಪನಾರ್ಥಂ = ಕಾರ್ಯವ ಬಿನ್ನಹವ ಮಾಡಲೋಸ್ಕರ ಯಾತ್ರಾಲೇಖಾವೃತ್ತೇಃ = ಕಳುಹುವ ಓಲೆಯ ಸುತ್ತಿನ ಸಂಖ್ಯಾಃ = ಲೆಕ್ಕಂಗಳು ಷಡಿತಿ = ಆರೆಂದು ಹೀಂಗೆ ಬುಧೈಃ = ವಿದ್ವಾಂಸರಿಂದ ಅಭಿಹಿತಾಃ = ಹೇಳಲ್ಪಟ್ಟವು.

ಓಲೆಯ ಚಂದ್ರಿಕೆಯ ಮೇಲೆ ಆರುಸುತ್ತನಿಕ್ಕುವುದೆಂಬುದರ್ಥ. ||೬೧||

ದೃಢಂ = ಬಲ್ಲಿತ್ತಹಂತಾ ಸೌಮ್ಯಂ = ಮನೋಹರವಹಂಥಾ ಋಜು = ನೇರಿತಹಂಥಾ ಸಾಗ್ರಂ = ತುದಿಸಹಿತವಹಂಥಾ ಮೃದುಲಂ = ನಯವಹಂಥಾ ದ್ವಿಧಾ = ಎರಡು ತಾಲಪತ್ರಂ = ತಾಳೋಲೆ ಕೃತಂ = ಮಾಡಬೇಕಾದಂಥಾದ್ದು. ಯಾತ್ರಾಲೇಖಾವಿಲೇಖನೇ = ಶ್ರೀಗುರುವಿಂಗೆ ಕಳುಹುವ ಓಲೆಯ ಬರಸುವಲ್ಲಿ ಯತ್ = ಆವುದಾನೊಂದು ತಾಳೋಲೆಯುಂಟು ತತ್ = ಅದು ಪ್ರಶಸ್ತಂ = ಶ್ರೇಷ್ಠವಹಂಥಾದ್ದು. ||೬೨||

ಕರ್ಕಶಂ = ಬಿರುಸಾದಂಥಾ ಕಲ್ಮಷಂ = ಕಪ್ಪಾದಂಥಾ ವಕ್ರಂ = ಡೊಂಕಾದಂಥಾ ಹೀನಾಗ್ರಂ = ತುದಿಯಿಲ್ಲದಂಥಾ ಯುಗಂ ಸ್ಫುಟಿತಂ = ಎರಡು ಸೀಳಾ

---

1 ಸಾ ಭೀಪ್ಸಂ ಯತ್ತದೇವಾಚರೇತ್ಸುಧೀಃ (ಘ) 2 ಯಚ್ಚ ಯಾತಿ (ಕ. ಖ. ಚ)
3 ಯಾರೇಖಾಭಿವೃತಾ ಸಂಖ್ಯಾ (ಘ) 4 ತನ್ಮತಂ ಲೇಖಾವಿಲೇಖನೇ (ಘ).
5 ತಾಲಪತ್ರಂ ನ ತಚ್ಛ್ರೇಷ್ಠಂ ಮತಂ (ಘ)

[1]ಮಾತ್ರಾವಿಸರ್ಗಾ[1]ನುಸ್ವಾರೈರ್ವರ್ಣಸ್ಪಷ್ಟಂ ಯಥಾ ಭವೇತ್
ತಥೈವ [2]ಲೇಖ್ಯೇ ವಿಲಿಖೇತ್[2]ಛಿಂದ್ಯಾದ್ವರ್ಣಂ ನ ಜಾತುಚಿತ್ ||೬೪||

ಸಂದಿಗ್ಧಂ ಛಿನ್ನವರ್ಣಂ[3]ಚ ಪ್ರಶಸ್ತೇತರ[3]ಭಾಷಣಮ್
ನ ಕದಾಚಿಲ್ಲಿಖೇತ್ಪತ್ರೇ [4]ಸ್ವಾಚಾರ್ಯವಶಗಂ[4] ಸುಧೀಃ ||೬೫||

ಪ್ರಶಸ್ತಭಾಷಾಸಂಯುಕ್ತಂ ವಿನಯಸ್ತುತಿಪೂರ್ವಕಮ್
ವಿಜ್ಞಾಪನೀಯಂ ಗುರವೇ ಯತ್ಕಾರ್ಯಂ [5]ತತ್ಸಮಾಲಿಖೇತ್[5] ||೬೬||

[6]ಸ್ವಲ್ಪಪತ್ರೇ ಸ್ಥಿತಿರಿತಿ[6] ಪ್ರವಿಲಿಖ್ಯ ಪ್ರಯೋಜನಮ್
[7]ವಿಜ್ಞಾಪನಾರ್ಥಂ ಗುರವೇ ಯಾಪಯೇ[7]ದಂತಿಕಂ ಗುರೋಃ ||೬೭||

ದಂಥಾ ತಾಲಪತ್ರಂ = ತಾಳೋಲೆ ಯಾತ್ರಾಲೇಖಾವಿಲೇಖನೇ = ಕಳುಹುವ ಓಲೆಯ ಬರಸುವಲ್ಲಿ ಅಶಸ್ತಂ = ಶ್ರೇಷ್ಠವಲ್ಲದಂಥಾದ್ದು ಸ್ಯಾತ್ = ಆಹುದು.

ಮಾತ್ರಾವಿಸರ್ಗಾನುಸ್ವಾರೈಃ = ಹಲ್ಮಾತ್ರ ವಿಸರ್ಗಬಿಂದುಗಳಿಂದ ವರ್ಣಸ್ಪಷ್ಟಂ = ಅಕ್ಷರವ್ಯಕ್ತವು ಯಥಾ = ಹೇಂಗೆ ಭವೇತ್ = ಆಹುದು ತಥೈವ = ಹಾಂಗೆ ಲೇಖ್ಯೇ = ಓಲೆಯಲ್ಲಿ ವಿಲಿಖೇತ್ = ಬರೆವುದು. ಜಾತುಚಿತ್ = ಒಮ್ಮೆಯೂ ವರ್ಣಂ = ಅಕ್ಷರವನು ನ ಛಿಂದ್ಯಾತ್ = ಕುಕ್ಕಲಾಗದು. ||೬೪||

ಸುಧೀಃ = ನಿರ್ಮಲ ಬುದ್ಧಿಯನುಳ್ಳಾತನು ಸಂದಿಗ್ಧಂ = ಸಂದೇಹವಹಂಥಾ ಛಿನ್ನವರ್ಣಂ ಚ = ಕುಕ್ಕಿದ ಅಕ್ಷರವನುಳ್ಳಂಥಾ ಪ್ರಶಸ್ತೇತರಭಾಷಣಂ = ಒಳ್ಳಿತಲ್ಲದ ಒಕ್ಕಣೆಯನು ಸ್ವಾಚಾರ್ಯವಶಗಂ = ತನ್ನ ಶ್ರೀಗುರುವಿನ ಬಳಿಗೆ ಎಯ್ದುವಂಥಾ *]ದ]*ನಾಗಿ ಕದಾಚಿತ್ = ಒಂದು ಬಾರಿಯೂ ಪತ್ರೇ = ಓಲೆಯಲ್ಲಿ ನ ಲಿಖೇತ್ = ಬರೆಯಲಾಗದು. ||೬೫||

ಗುರವೇ = ಶ್ರೀಗುರುವಿಂಗೋಸ್ಕರ ಯತ್ = ಆವುದಾನೊಂದು ಕಾರ್ಯಂ = ಕಾರ್ಯವು ವಿಜ್ಞಾಪನೀಯಂ = ಬಿನ್ನಹವ ಮಾಡಬೇಕಾದ್ದುಂಟು ತತ್ = ಆ ಕಾರ್ಯವನು ಪ್ರಶಸ್ತಭಾಷಾಸಂಯುಕ್ತಂ = ಒಳ್ಳಿಹ ಒಕ್ಕಣೆಯಿಂದ ಕೂಡಲುಟ್ಟಂಥಾ ವಿನಯಸ್ತುತಿಪೂರ್ವಕಂ = ವಿನಯಸ್ತುತಿ ಮೊದಲಾಗಿದ್ದಂಥಾದ್ದನ್ನಾಗಿ ಸಮಾಲಿಖೇತ್ = ಲೇಸಾಗಿ ಬರೆವುದು. ||೬೬||

ಗುರವೇ = ಶ್ರೀಗುರುವಿಂಗೋಸ್ಕರ ವಿಜ್ಞಾಪನಾರ್ಥಂ = ಬಿನ್ನಹಂ ಮಾಡಲು

1 ವಿಸರ್ಗಮಾತ್ರಾ (ಘ) 2 ವಿಲಿಖೇತ್ ಪತ್ರೇ (ಘ). 3 ಚಾಪ್ರಶಸ್ತಂ ಗೂಢ (ಘ) 4 ಸ್ವಾಚಾರ್ಯಾಯ ಸದಾ (ಘ) 5 ತತ್ಸಮಾವಿಶೇತ್ (ಗ). 6 ಪತ್ರಂ ಚಾಲ್ಪಮಿತಿ ಜ್ಞೇಯಂ (ಘ). 7 ಗುರೋರ್ವಿಜ್ಞಾಪನಾರ್ಥಾಯ ಪ್ರೇಷ (ಘ) * ತ (ಕ.ಖ.ಚ)

ಗಚ್ಛನ್ ತಿಷ್ಠನ್ ಸ್ವಪನ್ [1]ಭುಂಜನ್[1] ಯದ್ಯತ್ಕರ್ಮ ಸಮಾಚರೇತ್
ಸಮಕ್ಷಂ [2]ವಾ ಪ[2]ರೋಕ್ಷಂ ವಾ ಕರ್ತವ್ಯಂ ಗುರ್ವನುಜ್ಞಯಾ ||೬೮||

ಗುರೋರ್ಗುರುಸ್ತಸ್ಯ ಗುರುಸ್ತ[3]ದಗ್ರಾವರಜಾ[3] ಅಪಿ
[4]ತದ್ಯೋಷಾಶ್ಚ[4] ನಮಸ್ಕಾರ್ಯಾಃ ಸದಾ ವೈ [5]ವತ್ಸಲ್ಯೈರಪಿ[5] ||೬೯||

ತಥಾಪಿ ಸ್ವಗುರೋಃ ಪುತ್ರಂ ಪಶ್ಯೇದ್ಗುರುಮಿವಾ[6]ನಿಶಮ್[6]
'ಆತ್ಮಾ ವೈ ಪುತ್ರನಾಮಾಸಿ'[7]ತ್ಯಾಗ[7]ಮೋಕ್ತಿನಿದರ್ಶನಾತ್ ||೭೦||

---

ಪ್ರಯೋಜನಂ = ಪ್ರಯೋಜನವಹಂಥಾದನು ಪ್ರವಿಲಿಖ್ಯ = ಚೆನ್ನಾಗಿ ಬರೆದು ಸ್ವಲ್ಪ ಪತ್ರೇ = ಚಿಕ್ಕೋಲೆಯಲ್ಲಿ ಸ್ಥಿತಿರಿತಿ = ಬರೆದು ಕಳುಹಿದೇನೆಂದು ಈ ಪ್ರಕಾರದಲ್ಲಿ ಗುರೋಃ = ಆಚಾರ್ಯನ ಅಂತಿಕಂ = ಸಮೀಪವನು ಯಾಪಯೇತ್ = ಎಯ್ದಿಸೂದು ಯಾ ಪ್ರಾಪಣೇ ಎಂಬ ಧಾತು. ||೬೭||

ಗಚ್ಛನ್ = ನಡೆವುತ್ತವು ತಿಷ್ಠನ್ = ನಿಲ್ಲುತ್ತವು ಸ್ವಪನ್ = ನಿದ್ರೈಗೈಯುತ್ತವು ಭುಂಜನ್ = ಭೋಜನವ ಮಾಡುತ್ತವು ಯತ್ ಯತ್ = ಆವಾವ ಕರ್ಮ = ಕೃತ್ಯವನು ಸಮಾಚರೇತ್ = ಮಾಡುವನು ಸಮಕ್ಷಂ ವಾ = ಗುರುಸಮೀಪದಲ್ಲಿದ್ದರೂ ಪರೋಕ್ಷಂ ವಾ = ದೂರದಲ್ಲಿದ್ದರೂ ಗುರ್ವನುಜ್ಞಯಾ = ಶ್ರೀಗುರುನಿರೂಪದಿಂದ ಕರ್ತವ್ಯಂ = ಮಾಡಬೇಕು. ||೬೮||

ಗುರೋಃ = ಶ್ರೀಗುರುವಿನ ಗುರುಃ = ಗುರುವು ತಸ್ಯ = ಆ ಪರಮಗುರುವಿನ ಗುರುಃ = ಗುರುವು ತದಗ್ರಾವರಜಾ ಅಪಿ = ಆ ಶ್ರೀ ಗುರುವಿನ ಅಣ್ಣತಮ್ಮಂದಿರುಗಳೂ ತದ್ಯೋಷಾಶ್ಚ = ಅವರ ಸ್ತ್ರೀಯರುಗಳೂ ಸದಾ ವೈ = ಎಲ್ಲಾಗಳೂ ವತ್ಸಲ್ಯೈರಪಿ = ತಾತ್ಪರ್ಯಂಗಳಿಂದವೂ ನಮಸ್ಕಾರ್ಯಾಃ = ನಮಸ್ಕರಿಸಿಕೊಳ್ಳಲು ಯೋಗ್ಯರುಗಳು. ||೬೯||

ತಥಾಪಿ = ಹಾಂಗಾಯಿತ್ತಾದರೂ ಸ್ವಗುರೋಃ = ತನ್ನ ಶ್ರೀ ಗುರುವಿನ ಪುತ್ರಂ = ಪುತ್ರನನು ಗುರುಮಿವ = [8]ಗುರುವನ್ನು ಹೇಗೋ ಹಾಗೆ ಅನಿಶಂ = ಆವಾಗವೂ ಪಶ್ಯೇತ್ = [9]ಕಾಂಬುದು[9] ಆತ್ಮಾ ವೈ = ಆತ್ಮನೇ ಪುತ್ರನಾಮ =

---

[1] ಜಾಗ್ರನ್ (ಘ) [2] ತ್ವಪ (ಘ) ಚಾಪ (ಖ) [3] ದುಗ್ರೋರಗ್ರಜಾ (ಘ)
[4] ತದ್ಭಾರ್ಯಾ ಚ (ಘ) [5] ಪ್ರೀತಿವತ್ಸಲೈಃ (ಘ) [6] ಪರಂ (ಘ) [7] ದಾ (ಘ)
[8] ಗುರುವನೆಹಗಹಗೆ (ಖ) ಗುರುವನೀಗೆಹಗಹಗೆ (ಚ) [9] ಕಾಬುದು (ಖ. ಚ)

ಕದಾಚಿದಪಿ[1] ಯಃ ಶಿಷ್ಯೋ[1] ನ ನಿಂದೇದೀಶ್ವರಂ ಗುರುಮ್
ಶಿವಸ್ಯ ಚ ಗುರೋರ್ನಿಂದಾಂ [2]ತಥೈವ ಶೃಣುಯಾನ್ನ ಸಃ[2] ||೭೦||

ಸ್ವಮಾತೃಪಿತೃಭಾರ್ಯಾ[3]ಸು[3] ಭ್ರಾತೃಬಂಧುಸುತೇಷು ಚ
[4]ಯೇ ಗುರುದ್ವೇಷಿಣಃ ಶಿಷ್ಯಃ ಪ್ರಣಯನ್ ತಾನ್ಪರಿತ್ಯಜೇತ್[4] ||೭೧||

ಗುರುಂ ನಿಂದತಿ ಯಃ ಶಿಷ್ಯೋ ದ್ರವ್ಯಂ ಹರತಿ ತಸ್ಯ ಚ
ಕರೋತಿ ದ್ವೇಷಿಭಿಃ ಸ್ನೇಹಂ ಸ [5]ಚಂಡಾಲಸಮಃ ಸ್ಮೃತಃ[5] ||೭೨||

---

ಪುತ್ರನೆಂಬ ಹೆಸರುಳ್ಳಾತನು ಅಸಿ = ಅಹೆ ಇತಿ = ಹೀಂಗೆಂಬ ಆಗಮೋಕ್ತಿ-ನಿದರ್ಶನಾತ್ = ಆಗಮ ಹೇಳಿದಂಥಾ ದೃಷ್ಟಾಂತದ ದೆಸೆಯಿಂದ ಪಶ್ಯೇತ್ = ಕಾಂಬುದು. ||೭೦||

ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಕದಾಚಿದಪಿ = ಒಂದು ಬಾರಿಯಾಯಿತ್ತಾದರೂ ಈಶ್ವರಂ = ಪರಮೇಶ್ವರನನೂ ಗುರುಂ = ಗುರುವನೂ ನ ನಿಂದೇತ್ = ನಿಂದಿಸಲಾಗದು. ಣಿದಿ-ಕುತ್ಸಾಯಾಂ ಇತಿ ಧಾತುಃ. ತಥೈವ = ಹಾಂಗೆ ಸಃ = ಆ ಶಿಷ್ಯನು ಶಿವಸ್ಯ = ಶಿವನ ಗುರೋಶ್ಚ = ಗುರುವಿನ ನಿಂದಾಂಚ ಚ = ನಿಂದೆಯನೂ ನ ಶ್ರುಣುಯಾತ್ = ಕೇಳಲಾಗದು. ಶ್ರು-ಶ್ರವಣೇ ಎಂಬ ಧಾತು.

ಸ್ವಮಾತೃಪಿತೃಭಾರ್ಯಾಸು = ತನ್ನ ತಾಯಿ ತಂದೆ ಹೆಂಡಿರಲ್ಲಿ ಭ್ರಾತೃಬಂಧುಸುತೇಷು ಚ = ಒಡಹುಟ್ಟಿದ, ನಂಟಪುತ್ರರುಗಳಲ್ಲಿ ಯೇ = ಆರು ಕೆಲಬರು ಗುರುದ್ವೇಷಿಣಃ = ಗುರುವಿಂಗೆ ಸೇರದಿಹರು ತಾನ್ = ಅವರುಗಳನು ಶಿಷ್ಯಃ = ಶಿಷ್ಯನು ಪ್ರಣಯನ್ = ಕಳುಹುತವು ಪರಿತ್ಯಜೇತ್ = [6]ತ್ಯಜಿಸುವುದು.[6]

ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಗುರುಂ = ಶ್ರೀಗುರುವನು ನಿಂದತಿ = ನಿಂದಿಸುತ್ತಿಹನು ತಸ್ಯ = ಆ ಶ್ರೀಗುರುವಿನ ದ್ರವ್ಯಂ ಚ = ವಸ್ತುವನು ಹರತಿ = ಅಪಹರಿಸಿಕೊಳ್ಳುತ್ತಿಹನು ದ್ವೇಷಿಭಿಃ = ಆ ಗುರುವಿನ ದ್ವೇಷಿಗಳೊಡನೆ ಸ್ನೇಹಂ = ಸ್ನೇಹವನು ಕರೋತಿ = ಮಾಡುತ್ತಿಹನು ಸಃ = ಆತನು ಚಂಡಾಲಸಮಃ = ಚಂಡಾಲಂಗೆ ಸಮಾನನೆಂದು ಸ್ಮೃತಃ = ಹೇಳಲ್ಪ[7]ಟ್ಟನು.[7] ||೭೨||

---

[1] ಶಿಷ್ಯೋ ವೈ (ಘ) [2] ತಥಾನ ಶೃಣುಯಾತ್ ಸದಾ (ಘ)
[3] ದಿ (ಘ) [4] ಯೇ ಗುರುದ್ವೇಷಿಣಸ್ತಾನ್ ಹಿ ದತ್ವಾ ಶಿಷ್ಯಃ ಪರಿತ್ಯಜೇತ್ (ಘ).
[5] ಚಾಂಡಾಲೋ ನ ಸಂಶಯಃ (ಘ).
[6] ತ್ಯಜಿಸೂದು (ಖ. ಚ) [7] ಟ್ಟಿತ್ತು (ಕ)

ಸನ್ಮಾನಂ ಗುರುಭಾಷಾಯಾಂ ಗುರೋಃ ಶಿಷ್ಯೋ ಯ ಇಚ್ಛತಿ
ಸ ಮಹಾಪಾತಕೀ ಜ್ಞೇಯಃ ಪತತ್ಯೇವ [1]ಸುದುರ್ಗತೌ[1] ||೭೪||

ಯಃ ಪಶ್ಯತಿ ಗುರುಂ ಶಿಷ್ಯಃ ಸಾಧಾರಣಮನುಷ್ಯವತ್
ತಸ್ಯ ಭಕ್ತಿರ್ವೃಥಾ [2]ಬ್ರಹ್ಮನ್ ಮಯಿ ನಾಸ್ತ್ಯತ್ರ[2] ಸಂಶಯಃ ||೭೫||

[3]ಯೋ ವೀಕ್ಷತೇ[3] ಗುರುಂ ಶಿಷ್ಯಃ ಉದಾಸೀನಮನೀಷಯಾ
ಸ ಪಾಪಾತ್ಮಾ ಮಹಾಘೋರೇ ನರಕೇ ಪರಿವರ್ತತೇ ||೭೬||

ದೂರತೋ ಯೋ ಗುರುಂ ದೃಷ್ಟ್ವಾ [4]ಉದಾಸೀನೋಽಥ ನ[4] ವ್ರಜೇತ್
ಶ್ವಾನಯೋನಿಶತಂ ಗತ್ವಾ ಭವೇ[5]ಚ್ಚಂ[5]ಡಾಲವೇಶ್ಮನಿ ||೭೭||

---

ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಗುರುಭಾಷಾಯಾಂ = ಗುರುವಿನ ವಾಕ್ಯದಲ್ಲಿಯೂ ಗುರೋಃ = ಗುರುವಿನ ದೆಸೆಯಿಂದಲು ಸನ್ಮಾನಂ = ಸತ್ಕಾರವನು ಇಚ್ಛತಿ = ಇಚ್ಛಿಸುತ್ತಿಹನು ಸಃ = ಆತನು ಮಹಾಪಾತಕೀ = ಮಹಾಪಾಪಿಯೆಂದು ಜ್ಞೇಯಃ = ಅರಿಯಲ್ತಕ್ಕಾತನು ಸುದುರ್ಗತೌ ಏವ = ಅತ್ಯಂತ ನರಕದಲ್ಲಿಯೇ ಪತತಿ = ಬೀಳುತ್ತಿಹನು. ||೭೪||

ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಗುರುಂ = ಶ್ರೀಗುರುವನು ಸಾಧಾರಣಮನುಷ್ಯವತ್ = ಉಳಿದ ಮನುಷ್ಯರೋಪಾದಿ ಪಶ್ಯತಿ = ಕಾಣುತ್ತಿಹನು ಭೋ ಬ್ರಹ್ಮನ್ = ಎಲೆ ಬ್ರಹ್ಮನೇ ಮಯಿ = ನನ್ನಲ್ಲಿ ತಸ್ಯ = ಆತನ ಭಕ್ತಿಃ = ಗುರುಭಕ್ತಿ ವೃಥಾ = ವ್ಯರ್ಥವು. ಅತ್ರ = ಈ ಅರ್ಥದಲ್ಲಿ ಸಂಶಯಃ = ಸಂದೇಹವು ನಾಸ್ತಿ = ಇಲ್ಲ. ||೭೫||

ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಗುರುಂ = ಶ್ರೀಗುರುವನು ಉದಾಸೀನಮನೀಷಯಾ = ಉದಾಸೀನಬುದ್ಧಿಯಿಂದ ವೀಕ್ಷತೇ = ಕಾಣುತ್ತಿಹನು. ಸಃ = ಆತನು ಪಾಪಾತ್ಮಾ = ಪಾಪಶರೀರಿಯಾಗಿ . ಮಹಾಘೋರೇ = ಅತಿಭಯಂಕರ ವಹಂಥಾ ನರಕೇ = ನರಕೇ = ನರಕದಲ್ಲಿ ಪರಿವರ್ತತೇ = ವರ್ತಿಸುತ್ತಿಹನು. ||೭೬||

ಯಃ = ಅವನಾನೊಬ್ಬನು ದೂರತಃ = ದೂರದಲ್ಲಿ ಗುರುಂ = ಶ್ರೀಗುರುವನು ದೃಷ್ಟ್ವಾ = ಕಂಡು ಅಥ = ಅನಂತರದಲ್ಲಿ ಉದಾಸೀನಃ = ಉದಾಸೀನನಾಗಿ ನ ವ್ರಜೇತ್ = ಇದಿರಾಗಿ ಬಾರನು, ಶ್ವಾನಯೋನಿ ಶತಂ = ಶ್ವಾನಯೋನಿಗಳ

---

1 ಸ ದುರ್ಗತೌ (ಘ). 2 ಬ್ರಹ್ಮನ್ನೇವಾಸ್ತ್ಯತ್ರ ನ (ಘ) 3 ಯಃ ಪಶ್ಯತಿ (ಘ)
4 ಚೋದಾಸೀನತಯಾ ವ್ರಜೇತ್ (ಘ). 5 ಚ್ಚಾಂ ಕ).

ಸಮಸ್ತದೇವತಾವಾಸಂ ಸರ್ವಮಂತ್ರಾಸ್ಪದಂ ಗುರುಮ್
[1]ಉಪೇಕ್ಷತೇ ಸ ಪಾಪಾತ್ಮಾ ಯಃ ಶಿಷ್ಯೋ ರೌರವಂ ವ್ರಜೇತ್[1] ||೭೮||

ಹೃದಿ ನಾಽಯಂ ಮಮಾಚಾರ್ಯ ಇತ್ಯುಪೇಕ್ಷಾಂ ಕರೋತಿ ಚೇತ್
ಮಯಿ ಭಕ್ತಿರ್ವೃಥಾ ತಸ್ಯ ತಥೈವ ಚ ಸಮರ್ಚನಮ್ ||೭೯||

ಯೋಗ್ಯಮಾದ್ಯಂ ಗುರುಂ ತ್ಯಕ್ತ್ವಾ ಶಿಷ್ಯಃ ಕ್ಷುದ್ರಕ್ರಿಯಾ[2]ವಹಮ್[2]
ಗುರುಂ ಸಮಾಶ್ರಯೇದನ್ಯಂ ಯಸ್ಸ ಯಾತಿ ಸುದುರ್ಗತಿಮ್ ||೮೦||

ಶಿಷ್ಯಸ್ತು ಶಿಕ್ಷಣೀಯತ್ವಾತ್ ಗುರುರ್ಗೌರವಕಾರಣಾತ್
ತಸ್ಮಾತ್ಸರ್ವಪ್ರಯತ್ನೇನ ಗುರೋರ್ಗೌರವಮಾಚರೇತ್ ||೮೧||

---

ನೂರನು ಗತ್ವಾ=ಎಯ್ದಿ ಚಂಡಾಲವೇಶ್ಮನಿ=ಹೊಲೆಯರ ಮನೆಯಲ್ಲಿ ಭವೇತ್ =ಹುಟ್ಟುವನು. ||೭೭||

ಯಃ=ಆವನಾನೊಬ್ಬನು ಶಿಷ್ಯಃ=ಶಿವನು ಸಮಸ್ತದೇವತಾವಾಸಂ = ಸರ್ವದೇವರ್ಕಳಿಗೆ ಮನೆಯುಹಂಥಾ ಸರ್ವಮಂತ್ರಾಸ್ಪದಂ= ಸಮಸ್ತ ಮಂತ್ರಂಗಳಿಗೆ ಸ್ಥಾನವಹಂಥಾ ಗುರುಂ=ಶ್ರೀಗುರುವನು ಉಪೇಕ್ಷತೇ=ಉದಾಸೀನವ ಮಾಡುತ್ತಿಹನು ಸಃ=ಆತನು ಪಾಪಾತ್ಮಾ=ಪಾಪಶರೀರಿಯಾಗಿ ರೌರವಂ = ರೌರವ ನರಕವನು ವ್ರಜೇತ್ =ಎಯ್ದುವನು. ||೭೮||

ಮಮ=ನನ್ನ ಅಯಂ=ಈ ಆಚಾರ್ಯಃ=ಗುರುವು ನಾ=ಮನುಷ್ಯನು ಇತಿ=ಹೀಂಗೆಂದು ಹೃದಿ=ಚಿತ್ತದಲ್ಲಿ ಉಪೇಕ್ಷಾಂ=ಉದಾಸೀನವನು ಕರೋತಿ ಚೇತ್=[ಮಾಡಿದ್ದಾದರೆ] ಮಯಿ=ಎನ್ನಲ್ಲಿಯ ಭಕ್ತಿಃ = ಭಕ್ತಿ ತಸ್ಯ = ಆತಂಗೆ ವೃಥಾ=ವ್ಯರ್ಥವು ಸಮರ್ಚನಂ—ಅರ್ಚನೆಯೂ ತಥೈವ ಚ = ಆ ಪ್ರಕಾರದಲೆ ವ್ಯರ್ಥವು. ||೭೯||

ಯಃ=ಆವನಾನೊಬ್ಬ ಶಿಷ್ಯಃ=ಶಿಷ್ಯನು ಯೋಗ್ಯಂ=ಯೋಗ್ಯವಹಂಥಾ ಆದ್ಯಂ ಗುರುಂ=ಮೊದಲಗುರುವನು ತ್ಯಕ್ತ್ವಾ=ಬಿಟ್ಟು ಕ್ಷುದ್ರಕ್ರಿಯಾವಹಂ= ಕುಟಿಲವಹ ಕ್ರಿಯಾವರ್ತನೆಯ ಧರಿಸಿದಹಂಥಾ ಅನ್ಯಂ ಗುರುಂ = ಮತ್ತೊಬ್ಬ ಗುರುವನು ಸಮಾಶ್ರಯೇತ್=ಆಶ್ರೈಸುವನು ಸಃ=ಆತನು ಸುದುರ್ಗತಿಂ= ಅತ್ಯಂತ ನರಕವನು ಯಾತಿ=ಎಯ್ದುತ್ತಿಹನು. ||೮೦||

ಶಿಕ್ಷಣೀಯತ್ವಾತ್=ಶಿಕ್ಷಿಸಿಕೊಳಲುಯೋಗ್ಯ[3]ನಹತನದ[3]ದೆಸೆಯಿಂದ ಶಿಷ್ಯಸ್ತು

---

[1] ಉಪೇಕ್ಷತೇ ಯಃ ಪಾಪಾತ್ಮಾ ರೌರವಂ ನರಕಂ ವ್ರಜೇತ್ (ಘ) [2] ನ್ವಿತಂ (ಘ)
[3] ನಹುದರ (ಕ)

*ಗುರೋರತ್ಯಂತಭಕ್ತಸ್ಯ ಶಿಷ್ಯಸ್ಯೇಹ ಪರತ್ರ ಚ
ನ ಕಿಂಚಿದ್ದುರ್ಲಭಂ ಬ್ರಹ್ಮನ್ ಸಮಸ್ತಂ ಸುಲಭಂ ಸದಾ ||೮೨||

ಅಥ ಕಿಂ ಬಹುನೋಕ್ತೇನ [1]ಗುರುರೇವ[1] ಮಹೇಶ್ವರಃ
ಪ್ರತ್ಯಕ್ಷೇ ವಾ ಪರೋಕ್ಷೇ ವಾ ಗುರೋಃ ಪ್ರೀತಿಂ ಸಮಾಚರೇತ್ ||

ಗುರುಪ್ರೀತಿಕರಃ ಶಿಷ್ಯೋ ಯಸ್ಸ ಪ್ರೀತಿಕರೋ ಮಮ
[2]ತಸ್ಯಾಪ್ರೀತಿಕರಃ[2] ಶಿಷ್ಯೋ [3]ಮಮಾಪ್ರೀತಿಕರೋ[3] ಭೃಶಮ್ ||೮೪||

=ಶಿಷ್ಯನೆನಿಸುವನು. ಗೌರವಕಾರಣಾತ್ = ಗುರುತ್ವವಹ ಕಾರಣದ ದೆಸೆಯಿಂದ ಗುರುಃ = ಗುರುವೆನಿಸುವನು. ತಸ್ಮಾತ್ = ಅದು ಕಾರಣವಾಗಿ ಸರ್ವಪ್ರಯತ್ನೇನ = ಸರ್ವಪ್ರಯತ್ನದಿಂದವು ಗುರೋಃ = ಗುರುವಿಂಗೆ ಗೌರವಂ = ಗುರುತ್ವವನು ಆಚರೇತ್ = ಮಾಡುವುದು. ||೮೧||

ಗುರೋಃ = ಶ್ರೀಗುರುವಿಂಗೆ ಅತ್ಯಂತಭಕ್ತಸ್ಯ = ಅತಿಭಕ್ತಿಯನುಳ್ಳಂಥಾ ಶಿಷ್ಯಸ್ಯ = ಶಿಷ್ಯಂಗೆ ಇಹ = ಈ ಲೋಕದಲ್ಲಿ ಪರತ್ರ ಚ = ಪರಲೋಕದಲ್ಲಿಯೂ ದುರ್ಲಭಂ = ಹಡೆಯಲು ಬಾರದೇ ಇದ್ದಂಥಾದು ಕಿಂಚಿತ್ = ಒಂದಿಷ್ಟೂ ನ = ಇಲ್ಲ. ಭೋ ಬ್ರಹ್ಮನ್ = ಎಲೆ ಬ್ರಹ್ಮನೆ ಸದಾ = ಎಲ್ಲಾಗವೂ ಸಮಸ್ತಂ = ಸರ್ವವೂ ಸುಲಭಂ = ಸುಲಭವು. ||೮೨||

ಅಥ = ಅನಂತರದಲ್ಲಿ ಬಹುನಾ ಉಕ್ತೇನ = ಹಲವ ನುಡಿದುದರಿಂದ ಕಿಂ = [4]ಏನು ?[4] ಗುರುರೇವ = ಗುರುವೇ ಮಹೇಶ್ವರಃ = ಪರಮೇಶ್ವರನು. ಪ್ರತ್ಯಕ್ಷೇ ವಾ = ಸಮೀಪದಲ್ಲಿಯಾದರೂ ಪರೋಕ್ಷೇ ವಾ = ದೂರದಲ್ಲಿಯಾದರೂ ಗುರೋಃ = ಗುರುವಿಂಗೆ ಪ್ರೀತಿಂ = ಸಂತೋಷವನು ಸಮಾಚರೇತ್ = ಲೇಸಾಗಿ ಮಾಡುವುದು

ಯಃ = ಆವನಾನೊಬ್ಬ ಶಿಷ್ಯಃ = ಶಿಷ್ಯನು ಗುರುಪ್ರೀತಿಕರಃ = ಗುರುವಿಂಗೆ ಸಂತೋಷವ ಮಾಡುವನು ಸಃ = ಆತನು ಮಮ = ಎನಗೆ ಪ್ರೀತಿಕರಃ = ಸಂತೋಷವ ಮಾಡುವಾತನು. ತಸ್ಯ = ಆ ಗುರುವಿಂಗೆ ಅಪ್ರೀತಿಕರಃ = ಅಪ್ರೀತಿಯ (ಅಪ್ರಿಯವ) ಮಾಡುವಂಥಾ ಶಿಷ್ಯಃ = ಶಿಷ್ಯನು ಮಮ = ಎನಗೆ ಭೃಶಂ = ಅತ್ಯಂತ ಅಪ್ರೀತಿಕರಃ = ಅಪ್ರಿಯವ (ಅಪ್ರೀತಿಯ) ಮಾಡುವಾತನು.

* ಈ ಶ್ಲೋಕ 'ಶಿಷ್ಯಸ್ತು ಶಿಕ್ಷಣೀಯತ್ವಾತ್' ಎಂಬುದರ ಮೊದಲು (ಘ) ದಲ್ಲಿ ಬಂದಿದೆ.

1 ಗುರುರ್ದೇವೋ (ಘ) 2 ತಸ್ಯ ಪ್ರಿಯಕರಃ (ಘ)

3 ಮಮ ಪ್ರಿಯಕರೋ (ಘ). 4 ಏನು ಪ್ರಯೋಜನವು (ಖ. ಚ)

ತಸ್ಮಾತ್ಸರ್ವಪ್ರಯತ್ನೇನ ಗುರೋಃ ಪ್ರೀತಿಕರೋ ಭವೇತ್
[1]ಗುರುಭಕ್ತಿವಿಹೀನಸ್ಯ[1] ಮಯಿ ಭಕ್ತಿರ್ವೃಥಾ ಭವೇತ್ ||೮೫||

ಶಿಷ್ಯಸ್ತಸ್ಮಾತ್ಪ್ರಯತ್ನೇನ [2]ಗುರೋರ್ಭಕ್ತಿಂ[2] ಸಮಾಚರೇತ್
ಯಃ ಕಶ್ಚಿದ್ಗುರುಭಕ್ತ[3]ಶ್ಚೇತ್ಸ[3] ಯಾತಿ ಪರಮಾಂ ಗತಿಮ್ ||೮೬||

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಸುಧಾರ್ಣವ-
ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ-
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ
"ಗುರುಶುಶ್ರೂಷಾಕ್ರಮೋ" ನಾಮ ಸಪ್ತಮೋಽಧ್ಯಾಯಃ ||

---

ತಸ್ಮಾತ್ = ಅದು ಕಾರಣವಾಗಿ ಸರ್ವಪ್ರಯತ್ನೇನ = ಸರ್ವಪ್ರಯತ್ನದಿಂದವೂ ಗುರೋಃ = ಶ್ರೀಗುರುವಿಂಗೆ ಪ್ರೀತಿಕರಃ = ಸಂತೋಷವ ಮಾಡುವಾತನು ಭವೇತ್ = ಅಹುದು. ಗುರುಭಕ್ತಿವಿಹೀನಸ್ಯ = ಗುರುಭಕ್ತಿಯಿಲ್ಲದಾತಂಗೆ ಮಯಿ = ಎನ್ನಲ್ಲಿ ಭಕ್ತಿಃ = ಭಕ್ತಿಯು ವೃಥಾ = ವ್ಯರ್ಥವು ಭವೇತ್ = ಅಹುದು. ||೮೫||

ತಸ್ಮಾತ್ = ಅದು ಕಾರಣವಾಗಿ ಶಿಷ್ಯಃ = ಶಿಷ್ಯನು ಪ್ರಯತ್ನೇನ = ಪ್ರಯತ್ನದಿಂದವು ಗುರೋಃ = ಶ್ರೀಗುರುವಿಂಗೆ ಭಕ್ತಿಂ = ಭಕ್ತಿಯನು ಸಮಾಚರೇತ್ = ಮಾಡುವುದು. ಯಃ ಕಶ್ಚಿತ್ = ಆವನಾನೊಬ್ಬಾತನು ಗುರುಭಕ್ತಶ್ಚೇತ್ = ಗುರುಭಕ್ತನಹನೆ ಸಃ = ಆತನು ಪರಮಾಂ = ಉತ್ಕೃಷ್ಟವಹಂಥಾ ಗತಿಂ = ಮೋಕ್ಷಮಾರ್ಗವನು ಯಾತಿ = ಎಯ್ದುತ್ತಿಹನು. ||೮೬||

---

[1] ಗುರುಭಕ್ತಿಂ ವಿನಾ ತಸ್ಯ (ಘ) [2] ಗುರೌ ಭಕ್ತಿಂ (ಘ) [3] ಸ್ಸ್ಯಾತ್ಸ (ಘ)

15*

# ಅಷ್ಟಮೋಽಧ್ಯಾಯಃ

## ( ಪಂಚಾಕ್ಷರೀಮಾಹಾತ್ಮ್ಯಂ )

ಶ್ರೀ ಶೈವೇ ವಾಯವೀಯಸಂಹಿತಾಯಾಂ—

[1]ಕೃಷ್ಣ ಉವಾಚ—

ಮಹರ್ಷಿವರ ಸರ್ವಜ್ಞ ಸರ್ವಜ್ಞಾನಮಹೋದಧೇ
ಪಂಚಾಕ್ಷರಸ್ಯ ಮಾಹಾತ್ಮ್ಯಂ ಶ್ರೋತುಮಿಚ್ಛಾಮಿ ತತ್ತ್ವತಃ ॥೧॥

ಉಪಮನ್ಯುರುವಾಚ—

ಪಂಚಾಕ್ಷರಸ್ಯ ಮಾಹಾತ್ಮ್ಯಂ ವರ್ಷಕೋಟಿಶತೈರಪಿ
ನ ಶಕ್ಯಂ ವಿಸ್ತರಾದ್ವಕ್ತುಂ ತಸ್ಮಾತ್ಸಂಕ್ಷೇಪತಃ ಶೃಣು ॥೨॥

---

ಶ್ರೀಶೈವೇ ವಾಯವೀಯ ಸಂಹಿತಾಯಾಂ = ಶೈವಪುರಾಣದಲ್ಲಿ ವಾಯುವೀಯ ಸಂಹಿತೆಯಲ್ಲಿ

ಕೃಷ್ಣ ಉವಾಚ = ಕೃಷ್ಣನು ನುಡಿದನು.

ಸರ್ವಜ್ಞ = ಸರ್ವಜ್ಞನಹಂಥಾ ಸರ್ವಜ್ಞಾನಮಹೋದಧೇ = ಸಮಸ್ತ ಜ್ಞಾನಂಗಳಿಗೆ ಮಹಾಸಮುದ್ರನಹಂಥಾ ಮಹರ್ಷಿವರ = ಮಹಾಋಷಿಗಳಿಗೆ ಶ್ರೇಷ್ಠನಹಂಥಾ ಉಪಮನ್ಯುಋಷಿಯೇ ! ಪಂಚಾಕ್ಷರಸ್ಯ = ಪಂಚಾಕ್ಷರದ ಮಾಹಾತ್ಮ್ಯಂ = ಮಹಿಮೆಯನು ತತ್ತ್ವತಃ = ನಿಶ್ಚಯದಿಂದ ಶ್ರೋತುಂ = ಕೇಳಲು ಇಚ್ಛಾಮಿ = ಇಚ್ಛೈಸು[2]ತ್ತಿರ್ದ್ದೇನು[2]. ॥೧॥

ಉಪಮನ್ಯುರುವಾಚ = ಉಪಮನ್ಯುಮಹಾಋಷಿ ನುಡಿದನು.

ಪಂಚಾಕ್ಷರಸ್ಯ = ಶ್ರೀ ಪಂಚಾಕ್ಷರದ ಮಾಹಾತ್ಮ್ಯಂ = ಮಹಿಮೆಯನು ವರ್ಷಕೋಟಿಶತೈರಪಿ = ವರುಷ ಕೋಟಿಶತಂಗಳಿಂದವೂ ವಿಸ್ತರಾತ್ = ವಿಸ್ತರದ ದೆಸೆಯಿಂದ ವಕ್ತುಂ = ನುಡಿಯಲು ನ ಶಕ್ಯಂ = ಶಕ್ಯವಲ್ಲ. ತಸ್ಮಾತ್ = ಅದು ಕಾರಣವಾಗಿ ಸಂಕ್ಷೇಪತಃ = ಸಂಕೋಚದಿಂದ ಶೃಣು = ಕೇಳು. ॥೨॥

---

1 ವಿಷ್ಣುರುವಾಚ (ಘ) 2 ತಿಹೆನು (ಕ)

ವೇದೇ-ಶಿವಾಗಮೇ ಚಾಯಮುಭಯತ್ರ ಷಡಕ್ಷರಃ
ಮಂತ್ರಃ ಸ್ಥಿತಸ್ಸದಾ ಮುಖ್ಯೋ ಲೋಕೇ ಪಂಚಾಕ್ಷರಃ ಸ್ಮೃತಃ ||೩||

ಸರ್ವಮಂತ್ರಾಧಿಕಶ್ಚಾಯಮೋಂಕಾರಾದ್ಯಃ ಷಡಕ್ಷರಃ
ಸರ್ವೇಷಾಂ ಶಿವಭಕ್ತಾನಾಮಶೇಷಾರ್ಥಪ್ರದಾಯಕಃ ||೪||

ತದಲ್ಪಾಕ್ಷರಮರ್ಥಾಢ್ಯಂ ವೇದಸಾರಂ ವಿಮುಕ್ತಿದಂ
ಆಜ್ಞಾ ಸಿದ್ಧಮಸಂದಿಗ್ಧಂ ವಾ[1][ಕ್ಯ][1]ಮೇತಚ್ಛಿವಾತ್ಮಕಮ್ ||೫||

ನಾನಾಸಿದ್ಧಿಯುತಂ ದಿವ್ಯಂ ಲೋಕಚಿತ್ತಾನುರಂಜಕಮ್
ಸುನಿಶ್ಚಿತಾರ್ಥಗಂಭೀರಂ ವಾಕ್ಯಂ ತತ್ಪಾರಮೇಶ್ವರಮ್ ||೬||

---

ವೇದೇ = ವೇದದಲ್ಲಿ ಶಿವಾಗಮೇ ಚ = ಶಿವಾಗಮದಲ್ಲಿಯೂ ಉಭಯತ್ರ = ಎರಡರಲ್ಲಿಯೂ ಅಯಂ = ಈ ಷಡಕ್ಷರಃ = ಷಡಕ್ಷರವಹಂಥಾ ಮಂತ್ರಃ = ಮಂತ್ರವು ಸ್ಥಿತಃ = ಇರಲ್ಪಟ್ಟಿತ್ತು. ಲೋಕೇ = ಲೋಕದಲ್ಲಿ ಪಂಚಾಕ್ಷರಃ = ಪಂಚಾಕ್ಷರ ಮಂತ್ರವು ಸದಾ = ಎಲ್ಲಾಗಳೂ ಮುಖ್ಯಃ = ಮುಖ್ಯವಹಂಥಾದೆಂದು ಸ್ಮೃತಃ = ಹೇಳಲ್ಪಟ್ಟಿತ್ತು. ||೩||

ಓಂಕಾರಾದ್ಯಃ = ಓಂಕಾರ ಮೊದಲಹಂಥಾ ಅಯಂ = ಈ ಷಡಕ್ಷರಶ್ಚ = ಷಡಕ್ಷರಮಂತ್ರವೂ ಸರ್ವಮಂತ್ರಾಧಿಕಃ = ಸಮಸ್ತಮಂತ್ರಂಗಳಿಗೆ ಅಧಿಕವಹವು. ಸರ್ವೇಷಾಂ = ಸಮಸ್ತವಹಂಥಾ ಶಿವಭಕ್ತಾನಾಂ = ಶಿವಭಕ್ತರುಗಳಿಗೆ ಅಶೇಷಾರ್ಥ ಪ್ರದಾಯಕಃ = ಸಮಸ್ತ ಇಷ್ಟಾರ್ಥಂಗಳ ಕೊಡುವಂಥಾದು. ||೪||

ತತ್ = ಆ ಷಡಕ್ಷರ ಮಂತ್ರವು ಅಲ್ಪಾಕ್ಷರಂ = ಅಲ್ಪಾಕ್ಷರವನುಳ್ಳಂಥಾದ್ದು. ಅರ್ಥಾಢ್ಯಂ = ಅರ್ಥಬಹಳವಹಂಥಾದ್ದು. ವೇದಸಾರಂ = ವೇದಂಗಳ ಸಾರವಹಂಥಾದ್ದು ವಿಮುಕ್ತಿದಂ = ಮುಕ್ತಿಯ ಕೊಡುವಂಥಾದ್ದು. ಆಜ್ಞಾಸಿದ್ಧಂ = ಸಾಮರ್ಥ್ಯದ ಸಿದ್ಧಿಯನುಳ್ಳದು. ಅಸಂಧಿಗ್ಧಂ = ಸಂದೇಹವಿಲ್ಲದಂಥಾದ್ದು. ಏತತ್ = ಈ ಮಂತ್ರವು ಶಿವಾತ್ಮಕಂ = ಶಿವಸಂಬಂಧವಹಂಥಾ ವಾ[1][ಕ್ಯಂ] = [1]ವಾಕ್ಯವು. ||೫||

ಪಾರಮೇಶ್ವರಂ = ಪರಮೇಶ್ವರನ ಸಂಬಂಧವಹಂಥಾ ವಾಕ್ಯಂ = ವಾಕ್ಯವಹಂಥಾ ದಿವ್ಯಂ = ದಿವ್ಯವಹಂಥಾ ತತ್ = ಆ ಷಡಕ್ಷರ ಮಂತ್ರವು ನಾನಾಸಿದ್ಧಿಯುತಂ = ನಾನಾಸಿದ್ಧಿಗಳಿಂದ ಕೂಡಲ್ಪಟ್ಟಂಥಾದ್ದು ಲೋಕಚಿತ್ತಾನುರಂಜಕಂ = ಲೋಕವ ಚಿತ್ತವ ಮೋಹಿಸುವಂಥಾದ್ದು ಸುನಿಶ್ಚಿತಾರ್ಥಗಂಭೀರಂ = ಅತ್ಯಂತ ನಿಶ್ಚೈಸಲ್ಪಟ್ಟ ಅರ್ಥಗಂಭೀರವಹಂಥಾದ್ದು. ||೬||

---

1 ಜ್ಯ (ಕ. ಖ. ಚ) ಕ್ಯ (ಘ)

[1]ಮಂತ್ರಃ[1] ಸುಖಮುಖೋಚ್ಚಾ[2][ರ್ಯಃ ಅ][2] ಶೇಷಾರ್ಥಪ್ರಸಿದ್ಧಯೇ
ಪ್ರಾಹೋಂನಮಶ್ಶಿವಾಯೇತಿ ಸರ್ವಜ್ಞಃ ಸರ್ವದೇಹಿನಾಮ್ ||೭||

ತದ್ಬೀಜಂ ಸರ್ವವಿದ್ಯಾನಾಂ ಮಂತ್ರಮಾದ್ಯಂ ಷಡಕ್ಷರಮ್
ಅತಿಸೂಕ್ಷ್ಮಂ ಮಹಾರ್ಥಂ ಚ ಜ್ಞೇಯಂ ತದ್ವಟಬೀಜವತ್ ||೮||

ದೇವೋ ಗುಣತ್ರಯಾತೀತಃ ಸರ್ವಜ್ಞಃ ಸರ್ವಕೃತ್ಪ್ರಭುಃ
ಓಮಿತ್ಯೇಕಾಕ್ಷರೇ ಮಂತ್ರೇ ಸ್ಥಿತಸ್ಸರ್ವಗತಶ್ಶಿವಃ ||೯||

ಈಶಾನಾದ್ಯಾನಿ ಸೂಕ್ಷ್ಮಾಣಿ ಬ್ರಹ್ಮಾಣ್ಯೇಕಾಕ್ಷರಾಣಿ ತು
ಮಂತ್ರೇ ನಮಶ್ಶಿವಾಯೇತಿ ಸಂಸ್ಥಿತಾನಿ ಯಥಾಕ್ರಮಮ್ ||೧೦||

---

ಸರ್ವಜ್ಞಃ = ಸಮಸ್ತವನು ಬಲ್ಲಂಥಾ ಶಿವನು ಸರ್ವದೇಹಿನಾಂ = ಸಮಸ್ತ ಪ್ರಾಣಿಗಳಿಗೆ ಅಶೇಷಾರ್ಥಪ್ರಸಿದ್ಧಯೇ = ಸಮಸ್ತ ಇಷ್ಟಾರ್ಥಸಿದ್ಧಿಗೋಸ್ಕರ ಓಂ ನಮಶ್ಶಿವಾಯೆ ೯ತಿ = ಓಂ ನಮಶ್ಶಿವಾಯ ಎಂದು ಪ್ರಾಹ = ನುಡಿದನು ಮಂತ್ರಃ[1] = ಷಡಕ್ಷರಮಂತ್ರವು ಸುಖಮುಖೋಚ್ಚಾ[3][ರ್ಯಃ][3] = ಸುಖವಾಗಿ ಮುಖದಿಂದ ಉಚ್ಚರಿಸಲು ಯೋಗ್ಯವಹಂಥಾದ್ದು. ||೭||

ತತ್ = ಅದು ಕಾರಣವಾಗಿ ಷಡಕ್ಷರಂ ಮಂತ್ರಂ = ಷಡಕ್ಷರಮಂತ್ರವು ಸರ್ವವಿದ್ಯಾನಾಂ = ಸಮಸ್ತವಹಂಥಾ ಚತುರ್ದಶವಿದ್ಯೆಗಳಿಗೆ ಆದ್ಯಂ = ಮೊದಲ ಹಂಥಾ ಬೀಜಂ = ಬೀಜವು. ತತ್ = ಆ ಷಡಕ್ಷರಮಂತ್ರವು ಅತಿಸೂಕ್ಷ್ಮಂ = ಅತ್ಯಂತ ಸೂಕ್ಷ್ಮವಹಂಥಾದ್ದು. ಮಹಾರ್ಥಂ ಚ = ಮಹಾರ್ಥವನುಳ್ಳದು. ವಟಬೀಜವತ್ = ಆಲದ ಬೀಜದೋಪಾದಿಯೆಂದು ಜ್ಞೇಯಂ = ಅರಿಯಲು ಯೋಗ್ಯವು. ||೮||

ಸರ್ವಕೃತ್ = ಸಮಸ್ತ ಜಗತ್ತನೂ ಮಾಡಿದಂಥಾ ಪ್ರಭುಃ = ಒಡೆಯನ ಹಂಥಾ ಸರ್ವಜ್ಞಃ = ಸರ್ವಜ್ಞನಹಂಥಾ ಗುಣತ್ರಯಾತೀತಃ = ಸತ್ತ್ವರಜಸ್ತಮಂ ಗಳೆಂಬ ಗುಣತ್ರಯಂಗಳ ಮೀರಿದಂಥಾ ದೇವಃ = ಪ್ರಕಾಶಸ್ವರೂಪನಹಂಥಾ ಸರ್ವಗತಃ = ಪರಿಪೂರ್ಣನಹಂಥಾ ಶಿವಃ = ಶಿವನು ಓಮಿತ್ಯೇಕಾಕ್ಷರೇ = ಓಂ ಎಂಬ ಏಕಾಕ್ಷರವಹಂಥಾ ಮಂತ್ರೇ = ಮಂತ್ರದಲ್ಲಿ ಸ್ಥಿತಃ = ಇರುತ್ತಿಹನು. ಪ್ರಣವದಲ್ಲಿ ಪರಮೇಶ್ವರನಿಹನೆಂಬುದರ್ಥ. ||೯||

ಈಶಾನಾದ್ಯಾನಿ = ಈಶಾನ ಮೊದಲಾದಂಥಾ ಸೂಕ್ಷ್ಮಾಣಿ = ಸೂಕ್ಷ್ಮಂಗಳ

---

[1] ಮಂತ್ರಂ (ಗ, ಘ) [2] ರ್ಯಂ (ಕ. ಖ. ಚ).

ಮಂತ್ರೇ ಷಡಕ್ಷರೇ ಸೂಕ್ಷ್ಮೇ ಪಂಚಬ್ರಹ್ಮತನುಶ್ಶಿವಃ
ವಾಚ್ಯ-ವಾಚಕಭಾವೇನ ಸ್ಥಿತಃ ಸಾಕ್ಷಾತ್ಸ್ವಭಾವತಃ ||೧೧||

ವಾಚ್ಯಶ್ಶಿವಃ ಪ್ರಮೇಯತ್ವಾತ್ ಮಂತ್ರಸ್ತದ್ವಾಚಕಸ್ಸ್ಮೃತಃ
ವಾಚ್ಯ-ವಾಚಕಭಾವೋಽಯಮನಾದಿಸ್ಸಂಸ್ಥಿತಸ್ತಯೋಃ ||೧೨||

ಯಸ್ಸರ್ವಜ್ಞಸ್ಸುಸಂಪೂರ್ಣಃ ಸ್ವಭಾವವಿಮಲಶ್ಶಿವಃ
ತಸ್ಯಾಭಿಧಾನಮಂತ್ರೋಽಯಮಭಿಧೇಯಶ್ಚ ಸ ಸ್ಮೃತಃ ||೧೩||

---

ಹಂಥಾ ಏಕಾಕ್ಷರಾಣಿ = ಪ್ರಣವವೆಂಬ ಏಕಾಕ್ಷರವನುಳ್ಳಂಥಾ ಬ್ರಹ್ಮಾಣಿ ತು = ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನರೆಂಬ ಪಂಚಬ್ರಹ್ಮಂಗಳು ನಮಶ್ಶಿವಾಯೇತಿ = ನಮಃ ಶಿವಾಯ ಎಂಬಂಥಾ ಮಂತ್ರೇ = ಮಂತ್ರದಲ್ಲಿ ಯಥಾಕ್ರಮಂ = ಕ್ರಮತಪ್ಪದೆ ಸಂಸ್ಥಿತಾನಿ = ಇರಲ್ಪಟ್ಟವು. ||೧೦||

ಸೂಕ್ಷ್ಮೇ = ಸೂಕ್ಷ್ಮವಹಂಥಾ ಷಡಕ್ಷರೇ ಮಂತ್ರೇ = ಷಡಕ್ಷರಮಂತ್ರದಲ್ಲಿ ಪಂಚಬ್ರಹ್ಮತನುಃ = ಪಂಚಬ್ರಹ್ಮಸ್ವರೂಪನಹಂಥಾ ಶಿವಃ = ಶಿವನು ವಾಚ್ಯ-ವಾಚಕಭಾವೇನ = ವಾಚ್ಯ-ವಾಚಕವು ಎಂಬ ಅಭಿಪ್ರಾಯದಿಂದ ಸ್ವಭಾವತಃ = ಸ್ವಭಾವದ ದೆಸೆಯಿಂದ ಸಾಕ್ಷಾತ್ = ಪ್ರತ್ಯಕ್ಷವಾಗಿ ಸ್ಥಿತಃ = ಇಹನು. ಸಾಕ್ಷಾಚ್ಛಬ್ದ ಅವ್ಯಯವು. ||೧೧||

ಶಿವಃ = ಶಿವನು ಪ್ರಮೇಯತ್ವಾತ್ = ಪ್ರಮಾಣಿಸಿಕೊಳಲು ಯೋಗ್ಯನಹ ತನದ ದೆಸೆಯಿಂದ ವಾಚ್ಯಃ = ವಾಚ್ಯನೆನಿಸುವನು. ಮಂತ್ರಃ = ಮಂತ್ರವು ತದ್ವಾಚಕಃ = ಆ ಶಿವನನೇ ಹೇಳುವುದಾಗಿ ವಾಚಕವೆಂದು ಸ್ಮೃತಃ = ಹೇಳಲ್ಪಟ್ಟಿತ್ತು. ವಾಚ್ಯ-ವಾಚಕಭಾವಃ = ವಾಚ್ಯವಾಚಕಸ್ವಭಾವವನುಳ್ಳಂಥಾ ಅನಾದಿಃ = ಅನಾದಿಯ ಹಂಥಾ ಅಯಂ = ಈ ಶಿವನು ತಯೋಃ = ಅವೆರಡು ಸ್ವರೂಪಂಗಳಲ್ಲಿ ಸಂಸ್ಥಿತಃ = ಇರುತ್ತಿಹನು. ||೧೨||

ಸರ್ವಜ್ಞಃ = ಸರ್ವಜ್ಞನಹಂಥಾ ಸುಸಂಪೂರ್ಣಃ = ಪರಿಪೂರ್ಣನಹಂಥಾ ಸ್ವಭಾವವಿಮಲಃ = ಸ್ವಭಾವದಿಂದ ನಿರ್ಮಲನಹಂಥಾ ಯಃ = ಆವನಾನೊಬ್ಬ ದೇವನುಂಟು ಸಃ = ಆ ದೇವನು ಶಿವಃ = ಶಿವನೆಂಬಂಥಾ ಅಭಿಧೇಯಶ್ಚ = ಹೆಸರುಳ್ಳಾತನೆಂದು ಸ್ಮೃತಃ = ಹೇಳಲ್ಪಟ್ಟನು. ಅಯಂ = ಈ ಪಂಚಾಕ್ಷರವು ತಸ್ಯ = ಆ ಶಿವನ ಅಭಿಧಾನಮಂತ್ರಃ = ಹೆಸರಮಂತ್ರವು. ||೧೩||

ಅಭಿಧಾನಾಭಿಧೇಯತ್ವಾತ್ [1]ಮಂತ್ರಾತ್ ಸಿದ್ಧಃ[1] ಪರಃ ಶಿವಃ
[2]ಏತಾವದ್ಧಿ[2] ಶಿವಜ್ಞಾನಮೇತಾ[3]ವದ್ಧಿ ಪರಂ[3]ಪದಮ್ ||೧೪||

ಯದೋಂನ್ನಮಃ ಶಿವಾಯೇತಿ ಶಿವವಾಕ್ಯಂ ಷಡಕ್ಷರಮ್
ವಿಧಿವಾಕ್ಯಮಿದಂ ಶೈವಂ ನಾರ್ಥವಾದಃ ಶಿವಾತ್ಮಕಮ್ ||೧೫||

ಬಹುತ್ವೇಽಪಿ ಹಿ ಮಂತ್ರಾಣಾಂ ಸರ್ವಜ್ಞೇನ ಶಿವೇನ ಯತ್
ಪ್ರಣೀತಮಮಲಂ [4]ವಾಕ್ಯಂ[4] ನ ತೇನ ಸದೃಶಂ ಕ್ವಚಿತ್ ||೧೬||

ಸಾಂಗಾನಿ ವೇದಶಾಸ್ತ್ರಾಣಿ ಸಂಸ್ಥಿತಾನಿ ಷಡಕ್ಷರೇ
ನ ತೇನ ಸದೃಶಸ್ತಸ್ಮಾತ್ ಮಂತ್ರೋಽಪ್ಯಸ್ತ್ಯಪರಃ ಕ್ವಚಿತ್ ||೧೭||

ಪರಶಿವಃ = ಪರಶಿವನು ಅಭಿಧಾನಾಭಿಧೇಯತ್ವಾತ್ = ನಾಮವು ನಾಮವ ನುಂಟಹತನದ ದೆಸೆಯಿಂದ ಮಂತ್ರಾತ್ = ಶ್ರೀ ಪಂಚಾಕ್ಷರದ ಮಂತ್ರದ ದೆಸೆಯಿಂದ ಸಿದ್ಧಃ = ಪ್ರಸಿದ್ಧನಾದಾತನು. ಏತಾವತ್ = ಇದೀಗ ಶಿವಜ್ಞಾನಂ ಹಿ = ಶಿವ ಜ್ಞಾನವಲಾ. ಏತಾವತ್ = ಇದೀಗ ಪರಂ ಪದಂ ಹಿ = ಪರಮಪದವಲಾ. ಪರಮೇಶ್ವರಂಗೆ ಸಹಸ್ರನಾಮವುಂಟಾದರೆಯೂ ನಿಜನಾಮ ಶಿವನೆಂಬುದರ್ಥ. ಆ ನಿಜ ನಾಮದಲ್ಲಿಯೇ ಶ್ರೀ ಪಂಚಾಕ್ಷರ ಮಂತ್ರ ಹುಟ್ಟಿತೆಂದರಿವುದು.[5] ||೧೪||

ಓಂ ನಮಃ ಶಿವಾಯೇತಿ = ಓಂ ನಮಃ ಶಿವಾಯ ಎಂಬಂಥಾ ಯತ್ = ಆವು ದಾನೊಂದು ಷಡಕ್ಷರಂ = ಷಡಕ್ಷರಮಂತ್ರವು ಶಿವವಾಕ್ಯಂ = ಶಿವನ ವಾಕ್ಯವು. ಶಿವಾತ್ಮಕಂ = ಶಿವಸ್ವರೂಪವಹಂಥಾ ಶೈವಂ = ಶಿವಸಂಬಂಧವಹುಥಾ ಇದಂ ಇದು ವಿಧಿವಾಕ್ಯಂ = ತಾತ್ಪರ್ಯವಹಂಥಾ ವಾಕ್ಯವು. ಅರ್ಥವಾದಃ = ಸ್ತುತಿಯು ನ = ಅಲ್ಲ. ||೧೫||

ಹಿ = ಆವುದಾನೊಂದು ಕಾರಣವಾಗಿ ಮಂತ್ರಾಣಾಂ = ಸಪ್ತಕೋಟಿ ಮಹಾ ಮಂತ್ರಂಗಳ ಬಹುತ್ವೇಽಪಿ = ಬಹಳದಲ್ಲಿಯೂ ಸರ್ವಜ್ಞೇನ = ಸರ್ವಜ್ಞನಹಂಥಾ ಶಿವೇನ = ಶಿವನಿಂದ ಯತ್ = ಆವುದಾನೊಂದು ಅಮಲಂ = ನಿರ್ಮಲವಹಂಥಾ ವಾಕ್ಯಂ = ವಾಕ್ಯವು ಪ್ರಣೀತಂ = ಮಾಡಲ್ಪಟ್ಟಿತು. ತೇನ = ಆ ಶಿವನ ವಾಕ್ಯವಹ ಶ್ರೀ ಪಂಚಾಕ್ಷರದೊಡನೆ ಸದೃಶಂ = ಸಮಾನವಹಂಥಾ ಮಂತ್ರವು ಕ್ವಚಿತ್ = ಒಂದೆಡೆಯಲ್ಲಿಯೂ ನ = ಇಲ್ಲ. ||೧೬||

ಷಡಕ್ಷರೇ = ಷಡಕ್ಷರದಲ್ಲಿ ಸಾಂಗಾನಿ = ಶಿಕ್ಷಾ ಕಲ್ಪ ನಿರುಕ್ತ ಛಂದೋ ಜ್ಯೋತಿಷ ವ್ಯಾಕರಣವೆಂಬ ಷಡಂಗಂಗಳಿಂದ ಸಹಿತವಹುಥಾ ವೇದಶಾಸ್ತ್ರಾಣಿ = ವೇದ

[1] ಮಂತ್ರಸಿದ್ಧಃ (ಕ) ಮೂಲ. [2] ಏತಾವತತ್ತು (ಘ) [3] ವತ್ಪರಮಂ (ಘ)
[4] ಮಂತ್ರಂ (ಘ) [5] ಲುಪ್ತ (ಕ)

ಶಿವಜ್ಞಾನಾನಿ ಯಾವಂತಿ ವಿದ್ಯಾಸ್ಥಾನಾನಿ ಯಾನಿ ಚ
ಷಡಕ್ಷರಸ್ಯ ಸೂತ್ರಸ್ಯ ತಾನಿ ಭಾಷ್ಯಂ ಸಮಾಸತಃ ॥೧೮॥

ಕಿಂ ತಸ್ಯ ಬಹುಭಿರ್ಮಂತ್ರೈಃ ಶಾಸ್ತ್ರೈರ್ವಾ ಬಹುವಿಸ್ತರೈಃ
ಯಸ್ಯೋಂ ನಮಃ ಶಿವಾಯೇತಿ ಮಂತ್ರೋಽಯಂ ಹೃದಿ ಸಂಸ್ಥಿತಃ ॥

ತೇನಾಧೀತಂ ಶ್ರುತಂ ತೇನ[1] ತೇನ[1] ಸರ್ವಮನುಷ್ಠಿತಮ್
ಯೇನೋಂನಮಃಶಿವಾಯೇತಿ ಮಂತ್ರಾಭ್ಯಾಸಃ ಸ್ಥಿರೀಕೃತಃ ॥೨೦॥

---

ಶಾಸ್ತ್ರಂಗಳೂ ಸಂಸ್ಥಿತಾನಿ = ಇರಲ್ಪಟ್ಟವು. ತಸ್ಮಾತ್ = ಆದು ಕಾರಣವಾಗಿ ತೇನ = ಆ ಷಡಕ್ಷರ ಮಂತ್ರದೊಡನೆ ಸದೃಶಃ = ಸಮಾನವಹಂಥಾ ಅಪರಃ = ಮತ್ತೊಂದು ಮಂತ್ರೋಽಪಿ = ಮಂತ್ರವೂ ಕ್ವಚಿತ್ = ಒಂದೆಡೆಯಲ್ಲಿಯೂ ನಾಸ್ತಿ = ಇಲ್ಲ. ॥೧೭॥

ಶಿವಜ್ಞಾನಾನಿ = ಶಿವನನರುಹಿಸುವಂಥಾ ಯಾನಿ = ಆವವು ಕೆಲವು ವಿದ್ಯಾಸ್ಥಾನಾನಿ ಚ = ವಿದ್ಯಂಗಳಿಗೆ ಸ್ಥಾನಂಗಳಹ ಶಾಸ್ತ್ರಂಗಳೂ ಯಾವಂತಿ = ಎಷ್ಟುಂಟು ತಾನಿ = ಅವು ಷಡಕ್ಷರಸ್ಯ ಸೂತ್ರಸ್ಯ = ಷಡಕ್ಷರಸೂತ್ರಕ್ಕೆ ಸಮಾಸತಃ = ವಿಸ್ತರವಹಂಥಾ ಭಾಷ್ಯಂ = ಭಾಷ್ಯವು. ಭಾಷ್ಯವೆಂದರೆ ವ್ಯಾಖ್ಯಾನವೆಂಬುದರ್ಥ.

ಯಸ್ಯ = ಆವನಾನೊಬ್ಬನ ಹೃದಿ = ಚಿತ್ತದಲ್ಲಿ ಓಂ ನಮಃಶಿವಾಯೇತಿ = ಓಂ ನಮಃ ಶಿವಾಯ ಎಂಬಂಥಾ ಅಯಂ = ಈ ಮಂತ್ರಃ = ಮಂತ್ರವು ಸಂಸ್ಥಿತಃ = ಇರುತ್ತಿಹುದು ತಸ್ಯ = ಆತಂಗೆ ಬಹುಭಿಃ = ಬಹಳವಹಂಥಾ ಮಂತ್ರೈಃ = ಮಂತ್ರಂಗಳಿಂದ ಕಿ = ಏನು ಪ್ರಯೋಜನವು ? ಬಹುವಿಸ್ತರೈಃ = ಬಹಳ ವಿಸ್ತರವಹಂಥಾ ಶಾಸ್ತ್ರೈರ್ವಾ = ಶಾಸಂಗಳಿಂದವು ಕಿಂ = ಏನು ಪ್ರಯೋಜನವು ? ॥೧೧॥

ಯೇನ = ಆವನಾನೊಬ್ಬನಿಂದ ಓಂ ನಮಃ ಶಿವಾಯೇತಿ = ಓಂ ನಮಃ ಶಿವಾಯ ಎಂಬಂಥಾ ಮಂತ್ರಾಭ್ಯಾಸಃ = ಮಂತ್ರಾಭ್ಯಾಸವು ಸ್ಥಿರೀಕೃತಃ = ಸ್ಥಿರವಾಗಿ ಮಾಡಲ್ಪಟ್ಟಿತ್ತು ತೇನ = ಆತನಿಂದ ಸರ್ವಂ = ಸಮಸ್ತ ವೇದವು ಅಧೀತಂ = ಓದಲ್ಪಟ್ಟಿತ್ತು. ತೇನ = ಅವನಿಂದ ಸರ್ವಂ = ಸಮಸ್ತವಹಂಥಾ ಸತ್ಕರ್ಮವು ಅನುಷ್ಠಿತಂ = ಮಾಡಲುಪಟ್ಟಿತ್ತು. ॥೨೦॥

---

[1] ಕೃತಂ (ಘ)

ನಮಸ್ಕಾರಾದಿ ಸಂಯುಕ್ತಂ ಶಿವಾಯೇತ್ಯಕ್ಷರತ್ರಯಮ್
ಜಿಹ್ವಾಗ್ರೇ ವರ್ತತೇ ಯಸ್ಯ ಸಫಲಂ ತಸ್ಯ ಜೀವಿತಮ್ ||೨೧||

ಅಂತ್ಯಜೋ ವಾಧಮೋ ವಾಪಿ ಮೂರ್ಖೋ ವಾ ಪಂಡಿತೋಽಪಿ ವಾ
ಪಂಚಾಕ್ಷರಜಪೇ ನಿಷ್ಠೋ ಮುಚ್ಯತೇ ಪಾಪಬಂಧನಾತ್ ||೨೨||

ಇತ್ಯುಕ್ತಂ ಪರಮೇಶೇನ ದೇವ್ಯಾ ಪೃಷ್ಟೇನ ಶೂಲಿನಾ
ಹಿತಾಯ ಸರ್ವಮರ್ತ್ಯಾನಾಂ[1] ತಿರ್ಯಗ್ಜಾನಾಂ[1] ವಿಶೇಷತಃ ||೨೩||

ದೇವ್ಯುವಾಚ—

ಕಲೌ ಕಲುಷಿತೇ ಕಾಲೇ ದುರ್ಜಯೇ ದುರತಿಕ್ರಮೇ
ಅಪುಣ್ಯ[2]ಮನಸಾ[2]ಚ್ಛನ್ನೇ ಲೋಕೇ ಧರ್ಮಪರಾಙ್ಮುಖೇ ||೨೪||

---

ನಮಸ್ಕಾರಾದಿಸಂಯುಕ್ತಂ=ನಮಃ ಎಂಬ ಶಬ್ದವು ಮೊದಲಲ್ಲಿ ಕೂಡಿದಂಥಾ ಶಿವಾಯೇತಿ=ಶಿವಾಯ ಎಂಬಂಥಾ ಅಕ್ಷರತ್ರಯಂ= ಮೂರು ಅಕ್ಷರವು ಯಸ್ಯ =ಆವನಾನೊಬ್ಬನ ಜಿಹ್ವಾಗ್ರೇ=ನಾಲಗೆಯ ತುದಿಯಲ್ಲಿ ವರ್ತತೇ= ವರ್ತಿಸುತ್ತಿಹುದು. ವೃತು–ವರ್ತನೇ ಎಂಬ ಧಾತು ಆತ್ಮನೇ ಪದವು. ತಸ್ಯ = ಆತನ ಜೀವಿತಂ=ಬದುಕು ಸಫಲಂ=ಸಫಲವು. ||೨೧||

ಅಂತ್ಯಜೋ ವಾ=ಹೊಲೆಯನಾಗಲಿ ಅಧಮೋ ವಾಽಪಿ=ಅಧಮನಾಗಲಿ ಮೂರ್ಖೋ ವಾ = ಮೂರ್ಖನಾಗಲಿ ಪಂಡಿತೋಽಪಿ ವಾ= ವಿದ್ವಾಂಸನಾಗಲಿ ಪಂಚಾಕ್ಷರಜಪೇ=ಪಂಚಾಕ್ಷರ ಮಂತ್ರ ಜಪದಲ್ಲಿ ನಿಷ್ಠಃ= ತಾತ್ಪರ್ಯವನುಳ್ಳಾತನಹನು ಪಾಪಬಂಧನಾತ್=ಪಾಪಬಂಧನದ ದೆಸೆಯಿಂದ ಮುಚ್ಯತೇ= ಬಿಡಲ್ಪಡುತ್ತಿಹನು. ಮುಚುಲೃ-ಮೋಕ್ಷಣೇ ಎಂಬ ಧಾತು ಆತ್ಮನೇಪದವು. ||೨೨

ಇತಿ=ಈ ಪ್ರಕಾರದಲ್ಲಿ ದೇವ್ಯಾ= ಪಾರ್ವತೀದೇವಿಯಿಂದ ಪೃಷ್ಟೇನ = ಬೆಸಗೊಳಲುಪಟ್ಟಂಥಾ ಶೂಲಿನಾ = ತ್ರಿಶೂಲವನುಳ್ಳಂಥಾ ಪರಮೇಶೇನ = ಪರಮೇಶ್ವರನಿಂದ ಸರ್ವಮರ್ತ್ಯಾನಾಂ = ಸಮಸ್ತ ಮನುಷ್ಯರುಗಳಿಗೆ [1]ತಿರ್ಯಗ್ಜಾನಾಂ[1]=ತಿರ್ಯಕ್ ಜಾತಿಗಳಿಗೆ ಹಿತಾಯ=ಹಿತಕ್ಕೋಸ್ಕರ ವಿಶೇಷತಃ = ವಿಶೇಷವಾಗಿ ಉಕ್ತಂ—ನುಡಿಯಲ್ಪಟ್ಟಿತ್ತು. ||೨೩||

ದೇವ್ಯುವಾಚ—ದೇವಿಯು ನುಡಿದಳು

ದುರ್ಜಯೇ=ಗೆಲಲುಬಾರದೇ ಇದ್ದಂಥಾ ದುರತಿಕ್ರಮೇ=ಮೀರಬಾರದಂಥಾ

---

[1] ತಿರಶ್ಚಾಂಚ (ಕ). ತಿಷ್ಯಜಾನಾಂ (ಘ) [2] ತಮಸಾ (ಘ)

ಕ್ಷೀಣೇ ವರ್ಣಾಶ್ರಮಾಚಾರೇ ಸಂಕರೇ ಸಮುಪಾಗತೇ
ಸರ್ವಾಧಿಕಾರೇ ಸನ್ದಿಗ್ಧೇ [1]ನಿಶ್ಚಯೇ[1]ವಾ ವಿಪರ್ಯಯೇ ||
*ಕೇನೋಪಾಯೇನ ಮುಚ್ಯಂತೇ ಭಕ್ತಾಸ್ತವ ಮಹೇಶ್ವರ ||೨೫||

[2]ಈಶ್ವರ ಉವಾಚ[2]—

ಆಶ್ರಿತ್ಯ ಪರಮಾಂ ವಿದ್ಯಾಂ ಹೃದ್ಯಾಂ ಪಂಚಾಕ್ಷರೀಂ ಮಮ
ಭಕ್ತ್ಯಾ ಚ ಭಾವಿತಾತ್ಮಾನೋ ಮುಚ್ಯಂತೇ ಕಲಿಜಾ ನರಾಃ ||
ಮನೋವಾಕ್ಕಾಯಜೈರ್ದೋಷೈರ್ವಕ್ತುಂ ಸ್ಮರ್ತುಮಗೋಚರೈಃ ||

---

ಕಲುಷಿತೇ = ಕದಡಿದಂಥಾ ಕಲೌ ಕಾಲೇ = ಕಲಿಕಾಲದಲ್ಲಿ ಅಪುಣ್ಯಮನಸಾ = ಪಾಪಬುದ್ಧಿಯಿಂದ ಛನ್ನೇ = ಮುಸುಕಿದಂಥಾ ಲೋಕೇ = ಜನವು ಧರ್ಮಪರಾಙ್ಮುಖೇ ಸತಿ = ಧರ್ಮದಲ್ಲಿ ತಿರುಗಿದ ಮುಖವನುಳ್ಳದಾಗುತ್ತಿರಲೂ ||೨೪||

ವರ್ಣಾಶ್ರಮಾಚಾರೇ = ವರ್ಣಾಶ್ರಮಾಚಾರವು ಕ್ಷೀಣೇ ಸತಿ = ನಷ್ಟವಾಗುತ್ತಿರಲು ಸಂಕರೇ = ಜಾತಿಸಂಕರವು ಸಮುಪಾಗತೇ ಸತಿ = ಆಗುತ್ತಂವಿರಲು ಸರ್ವಾಧಿಕಾರೇ = ಸರ್ವ ಧರ್ಮದ ಅಧಿಕಾರವು ಸನ್ದಿಗ್ಧೇ ಸತಿ = ಸಂಶಯವಾಗುತ್ತಿರಲು ನಿಶ್ಚಯೇ = ತಾತ್ಪರ್ಯವು ವಿಪರ್ಯಯೇ ಸತಿ = ವಿಪರೀತವಾಗುತ್ತಿರಲು. ಭೋ ಮಹೇಶ್ವರ = ಎಲೆ [3]ಮಹೇ[3]ಶ್ವರನೇ! ತವ = ನಿನ್ನ ಭಕ್ತಾಃ = ಭಕ್ತರುಗಳು ಕೇನೋಪಾಯೇನ = ಆವ ಉಪಾಯದಿಂದ ಮುಚ್ಯಂತೇ = ಮುಕ್ತರಾಗುತ್ತಿಹರು. ||೨೫||

ಈಶ್ವರ ಉವಾಚ—ಪರಮೇಶ್ವರ ನುಡಿದನು.

ಕಲಿಜಾಃ = ಕಲಿಯುಗದಲ್ಲಿ ಹುಟ್ಟಿದಂಥಾ ನರಾಃ = ಮನುಷ್ಯರುಗಳು ಪರಮಾಂ = ಉತ್ಕೃಷ್ಟವಹಂಥಾ ಹೃದ್ಯಾಂ = ಮನೋಹರವಹಂಥಾ ಮಮ = ಎನ್ನ ಪಂಚಾಕ್ಷರೀಂ ವಿದ್ಯಾಂ = ಪಂಚಾಕ್ಷರೀ ಮಂತ್ರವಿದ್ಯೆಯನು ಆಶ್ರಿತ್ಯ = ಆಶ್ರಯಿಸಿ ಭಕ್ತ್ಯಾ ಚ = ಭಕ್ತಿಯಿಂದವೂ ಭಾವಿತಾತ್ಮಾನಃ = ಭಾವಿಸಲ್ಪಟ್ಟ ಬುದ್ಧಿಯನುಳ್ಳವರುಗಳಾಗಿ ವಕ್ತುಂ = ನುಡಿಯಲು ಸ್ಮರ್ತುಂ = ನೆನೆಯಲು ಅಗೋಚರೈಃ = ಗೋಚರವಲ್ಲದೇ ಇದ್ದಂಥಾ ಮನೋವಾಕ್ಕಾಯಜೈಃ = ಮನಸ್ಸು ವಾಕ್ಕುಕಾಯದಿಂದ ಹುಟ್ಟಿದಂಥಾ ದೋಷೈಃ = ದೋಷಂಗಳಿಂದ ಮುಚ್ಯಂತೇ = ಬಿಡಲ್ಪಡುತ್ತಿಹರು. ||೨೬||

---

1 ನಿಶ್ಚಿತೇ (ಘ) 2 ಮಹೇಶ್ವರ ಉವಾಚ (ಘ) 3 ಪರಮೇ (ಖ. ಚ)

* ಈ ಶ್ಲೋಕದ ಪೂರ್ವಾರ್ಧ (ಘ) ದಲ್ಲಿ ಮಾತ್ರ ಹೀಗಿದೆ : 'ತದೋಪದೇಶೇ ವಿಹತೇ ಗುರುಶಿಷ್ಯಕ್ರಮೇ ಗತೇ' ಎಂದು. ಮತ್ತುಳಿದ ಪ್ರತಿಗಳಲ್ಲಿ ಈ ಪೂರ್ವಾರ್ಧಬಂದಿಲ್ಲ.

ದೂಷಿತಾನಾಂ ಕೃತಘ್ನಾನಾಂ ನಿರ್ದಯಾನಾಂ ಖಲಾತ್ಮನಾಮ್
ಲುಬ್ಧಾನಾಂ ವಕ್ರಮನಸಾಮಪಿ ಮತ್ಪ್ರವಣಾತ್ಮನಾಮ್ ||
ಮಮ ಪಂಚಾಕ್ಷರೀವಿದ್ಯಾ ಸಂಸಾರಭಯತಾರಿಣೀ ||೨೭||

ಮಯೈವಮಸಕೃದ್ದೇವಿ ಪ್ರತಿಜ್ಞಾತಂ ಧರಾತಲೇ
[1]ಪತಿತೋ ವಾಽಪಿ ಮುಚ್ಯೇತ[1] ಮದ್ಭಕ್ತೋ ವಿದ್ಯಯಾಽನಯಾ ||೨೮||

ದೇವ್ಯುವಾಚ

ಕರ್ಮಯೋಗ್ಯೋ ಭವೇನ್ಮರ್ತ್ಯಃ ಪತಿತೋ ಯದಿ ಸರ್ವದಾ
ಕರ್ಮಯೋಗ್ಯೇನ ಯತ್ಕರ್ಮ ಕೃತಂ ತನ್ನರಕಾಯ ಹಿ ||
ತತಃ ಕಥಂ ವಿಮುಚ್ಯೇತ ಪತಿತೋ ವಿದ್ಯಯಾಽನಯಾ ||೨೯||

---

ದೂಷಿತಾನಾಂ = [2]ದೂಷಿತ[2]ರುಗಳಿಗೆ ಕೃತಘ್ನಾನಾಂ = ಮಾಡಿದ ಧರ್ಮವ ನಳಿವವರುಗಳಿಗೆ ನಿರ್ದಯಾನಾಂ = ಕೃಪೆಯಿಲ್ಲದವರುಗಳಿಗೆ ಖಲಾತ್ಮನಾಂ = ದುರ್ಜನರುಗಳಿಗೆ ಲುಬ್ಧಾನಾಂ = ಲೋಭಿಗಳಿಗೆ ವಕ್ರಮನಸಾಂ ಅಪಿ = ಕಪಟ ಚಿತ್ತವನ್ನುಳ್ಳವರುಗಳಿಗೆಯೂ ಮತ್ಪ್ರವಣಾತ್ಮನಾಂ = [3]ನನ್ನ[3] ನೆನೆವ ಬುದ್ಧಿಯ ನುಳ್ಳವರುಗಳಿಗೆ. ಮಮ = ಎನ್ನ ಪಂಚಾಕ್ಷರೀವಿದ್ಯಾ = ಪಂಚಾಕ್ಷರೀವಿದ್ಯವು ಸಂಸಾರಭಯತಾರಿಣೀ = ಸಂಸಾರದ ಭೀತಿಯ ದಾಂಟಿಸುವುದು. ||೨೭||

ಹೇ ದೇವಿ—ಎಲೈ ಪಾರ್ವತಿದೇವಿ! ಮಯಾ = ಎನ್ನಿಂದ ಏವಂ = ಈ ಪ್ರಕಾರದಲ್ಲಿ ಅಸಕೃತ್ = ಹಲವು ಬಾರಿ ಧರಾತಳೇ = ಭೂಮಿಯಲ್ಲಿ ಪ್ರತಿಜ್ಞಾತಂ = ಹೇಳಲ್ಪಟ್ಟಿತ್ತು. ಪತಿತೋಽಪಿ ವಾ = ಪಾತಕನಾದರೂ ಮದ್ಭಕ್ತಃ = ನನ್ನ ಭಕ್ತನಾದ ಪಕ್ಷೇ ಅನಯಾ ವಿದ್ಯಯಾ = ಈ ಪಂಚಾಕ್ಷರಿಯ ವಿದ್ಯೆಯಿಂದ ಮುಚ್ಯೇತ = ಮುಕ್ತನಹನು. ||೨೮||

ದೇವ್ಯುವಾಚ = ಪಾರ್ವತಿದೇವಿ ನುಡಿದಳು.

ಯದಿ = ಎತ್ತಲಾನು ಕರ್ಮಯೋಗ್ಯಃ = ಕರ್ಮಕ್ಕೆ ಯೋಗ್ಯನಹಂಥಾ ಮರ್ತ್ಯಃ = ಮನುಷ್ಯನು ಸರ್ವದಾ = ಎಲ್ಲಾಗವೂ ಪತಿತಃ = ಪಾತಕನು ಭವೇತ್ = ಅಹನು. ಕರ್ಮಯೋಗ್ಯೇನ = ಕರ್ಮಕ್ಕೆ ಯೋಗ್ಯನಹಂಥಾ ಆತನಿಂದ ಯತ್ = ಆವುದಾನೊಂದು ಕರ್ಮ = ಕರ್ಮವು ಕೃತಂ = ಮಾಡಲ್ಪಟ್ಟಿತ್ತು ತತ್ = ಅದು ನರಕಾಯ ಹಿ = ನರಕಕ್ಕೋಸ್ಕರವಲಾ. ತತಃ = ಅದು ಕಾರಣವಾಗಿ ಪತಿತಃ

---

[1] ಪತಿತೋಽಪಿ ವಿಮುಚ್ಯೇತ (ಕ). [2] ದೂಷಕ (ಕ) [3] ನಮ್ಮ (ಕ).

ಈಶ್ವರ ಉವಾಚ

ತಥ್ಯಮೇತತ್ತ್ವಯಾ ಪ್ರೋಕ್ತಂ ತಥಾಪಿ ಶೃಣು ಸುಂದರಿ !
ರಹಸ್ಯಮಿತಿ ಮತ್ವೈತದ್ಗೋಪಿತಂ ಯನ್ಮಯಾ ಪುರಾ ॥೩೦॥

ಅಮಂತ್ರಕರ್ಮಾ ಪತಿತಃ ಪೂಜಯೇದ್ಯದಿ ಮೋಹಿತಃ
ನಾರಕೀ ಸ್ಯಾನ್ನ ಸಂದೇಹೋ ಮಮ ಪಂಚಾಕ್ಷರೀಂ ವಿನಾ ॥೩೧॥

ಅಬ್ಭಕ್ಷಾ ವಾಯುಭಕ್ಷಾಶ್ಚ ಯೇ ಚಾನ್ಯೇ ವ್ರತಕರ್ಶಿತಾಃ
ತೇಷಾಮೇತೈರ್ವ್ರತೈರ್ನಾಸ್ತಿ ಮಮ ಲೋಕಸಮಾಗಮಃ ॥೩೨॥

---

= ಪಾತಕವ ಮಾಡಿದಾತನು ಅನಯಾ ವಿದ್ಯಯಾ = ಈ ಪಂಚಾಕ್ಷರಿಯ ವಿದ್ಯೆಯಿಂದ ಕಥಂ = ಹೇಗೆ ವಿಮುಚ್ಯೇತ = ಮುಕ್ತನಹನು ? ॥೨೯॥

ಈಶ್ವರ ಉವಾಚ = ಮಹೇಶ್ವರ ನುಡಿದನು.

ಭೋ ಸುಂದರಿ = ಎಲೆ [1]ಮನೋಹರಿಯೆ[1] ತ್ವಯಾ = ನಿನ್ನಿಂದ ಪ್ರೋಕ್ತಂ = ನುಡಿಯಲ್ಪಟ್ಟಂಥಾ ಏತತ್ = ಇದು ತಥ್ಯಂ = ತಾತ್ಪರ್ಯವು. ತಥಾಽಪಿ — ಹಾಂಗಾಯಿತ್ತಾದರೂ ಶೃಣು = ಕೇಳು. ಪುರಾ = ಪೂರ್ವದಲ್ಲಿ ಮಯಾ = ಎನ್ನಿಂದ ಮತ್ವಾ = ಅರಿದು ಯತ್ = ಅವುದಾನೊಂದು ರಹಸ್ಯಂ = ರಹಸ್ಯವಹಂಥಾ ಏತತ್ = ಈ ಮಂತ್ರವು ಇತಿ = ಈ ಪ್ರಕಾರದಲ್ಲಿ ಗೋಪಿತಂ = ಗೋಪ್ಯವಮಾಡಲ್ಪಟ್ಟಿತ್ತು. ॥೩೦॥

ಅಮಂತ್ರಕರ್ಮಾ = ಮಂತ್ರಕರ್ಮವಿಲ್ಲದಂಥಾ ಪತಿತಃ = ಪಾತಕನಹಂಥಾ ಮೋಹಿತಃ = ಅಜ್ಞಾನಿಯು ಮಮ = ಎನ್ನ ಪಂಚಾಕ್ಷರೀಂ ವಿನಾ = ಪಂಚಾಕ್ಷರೀ ಮಂತ್ರವಿಲ್ಲದೇ ಯದಿ = ಎತ್ತಲಾನು ಪೂಜಯೇತ್ = ಪೂಜಿಸುವನು, [ಅವನು] ನಾರಕೀ ಸ್ಯಾತ್ = ನರಕಿ ಅಹನು. ಸಂದೇಹಃ = [2]ಸಂಶಯುವು[2] ನ = ಇಲ್ಲ. ॥೩೧॥

ಅಬ್ಭಕ್ಷಾಃ = ಉದಕವ ಕೊಂಡಿಹವರುಗಳು ವಾಯುಭಕ್ಷಾಶ್ಚ = ವಾಯುವನೆ ಆಹಾರವಾಗಿ ಉಳ್ಳವರುಗಳು ಅನ್ಯೇ = ಮತ್ತೆ ಕೆಲಂಬರು ವ್ರತಕರ್ಶಿತಾಃ = ವ್ರತಂಗಳಿಂದ ಬಡವಾದಂಥಾವರುಗಳು ಯೇ ಚ = ಆರು ಕೆಲಂಬರುಂಟು ತೇಷಾಂ = ಅವರುಗಳಿಗೆ ಏತೈರ್ವ್ರತೈಃ = ಈ ವ್ರತಂಗಳಿಂದ ಮಮ = ಎನ್ನ ಲೋಕಸಮಾಗಮಃ = ಲೋಕವನೆಯ್ದುಹವು ನಾಸ್ತಿ = ಇಲ್ಲ. ॥೩೨॥

---

[1] ಮನೋಹರಿಯಹಂಥಾ ಆಯಕನೆ (ಖ. ಚ.) [2] ಸಂದೇಹವು (ಕ)

ಭಕ್ತ್ಯಾ ಪಂಚಾಕ್ಷರೇಣೈವ ಯೋ[1]ಹಿ ಮಾಂ ಸಕೃದರ್ಚಯೇತ್
ಸೋಽಪಿ ಗಚ್ಛೇನ್ಮಮ ಸ್ಥಾನಂ ಮಂತ್ರಸ್ಯಾಸ್ಯೈವ ಗೌರವಾತ್ ||೩೩||

ತಸ್ಮಾತ್ತಪಾಂಸಿ ಯಜ್ಞಾಶ್ಚ ವ್ರತಾನಿ ನಿಯಮಾಸ್ತಥಾ
ಪಂಚಾಕ್ಷರಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ||೩೪||

ತಸ್ಮಾ[2]ದೇತೇನ[2]ಮಂತ್ರೇಣ ಮನೋವಾಕ್ಕಾಯಭೇದತಃ
ಯಥಾಪ್ರಜ್ಞಂ ಯಥಾಶ್ರದ್ಧಂ ಯಥಾಕಾಲಂ ಯಥಾ[3]ಸ್ಮೃತಿ[3] ||೩೫||

ಯಥಾಶಕ್ತಿ ಯಥಾಸಂಪತ್ ಯಥಾಯೋಗಂ ಯಥಾರತಿ
ಯದಾ ಕದಾಽಪಿ ವಾ ಭಕ್ತ್ಯಾ ಯತ್ರಕುತ್ರಾಽಪಿ ವಾ ಕೃತಾ ||

---

ಯಃ = ಆವನಾನೊಬ್ಬನು ಭಕ್ತ್ಯಾ ಹಿ = ಭಕ್ತಿಯಿಂದವು ಮಾಂ = ಎನ್ನನು ಪಂಚಾಕ್ಷರೇಣೈವ = ಪಂಚಾಕ್ಷರದಿಂದವೇ ಸಕೃತ್ = ಒಂದು ಬಾರಿ ಅರ್ಚಯೇತ್ = ಅರ್ಚಿಸುವನು ಸೋಽಪಿ = ಆತನೂ ಅಸ್ಯ ಮಂತ್ರಸ್ಯ = ಈ ಮಂತ್ರದ ಗೌರವಾದೇವ = ಸಾಮರ್ಥ್ಯದ ದೆಸೆಯಿಂದವೆ ಮಮ = ಎನ್ನ ಸ್ಥಾನಂ = ಸ್ಥಾನವನು ಗಚ್ಛೇತ್ = ಎಯ್ದುವನು. ||೩೩||

ತಸ್ಮಾತ್ = ಅದು ಕಾರಣವಾಗಿ ತಪಾಂಸಿ = ತಪಸ್ಸುಗಳು ಯಜ್ಞಾಶ್ಚ = ಯಜ್ಞಂಗಳು ವ್ರತಾನಿ = ವ್ರತಂಗಳು ತಥಾ = ಹಾಗೆ ನಿಯಮಾಃ = ನಿಯಮಂಗಳು ಪಂಚಾಕ್ಷರಾರ್ಚನಸ್ಯ = ಪಂಚಾಕ್ಷರದಿಂದ ಅರ್ಚಿಸಿದ ಫಲಕ್ಕೆ ಏತೇ = ಇವು ಕೋಟ್ಯಂಶೇನಾಪಿ = ಕೋಟಿಯಂಶದಿಂದವೂ ಸಮಾಃ = ಸಮಾನಂಗಳು [4]ನೋ[4] = ಅಲ್ಲ. ||೩೪||

ತಸ್ಮಾತ್ = ಆದು ಕಾರಣವಾಗಿ ಏತೇನ ಮಂತ್ರೇಣ = ಈ ಮಂತ್ರದಿಂದ ಮನೋವಾಕ್ಕಾಯ—ಭೇದತಃ = ಮನ ವಚನಕಾಯಂಗಳ ಭೇದದಿಂದ ಯಥಾಪ್ರಜ್ಞಂ = ಬುದ್ಧಿ ತಪ್ಪದೆ ಯಥಾಶ್ರದ್ಧಂ = ವಿಶ್ವಾಸ ತಪ್ಪದೆ ಯಥಾಕಾಲಂ = ಕಾಲ ತಪ್ಪದೆ ಯಥಾಸ್ಮೃತಿ = ನೆನಹು ತಪ್ಪದೆ. ||೩೫||

ಯಥಾಶಕ್ತಿ = ಶಕ್ತಿ ತಪ್ಪದೇ ಯಥಾಸಂಪತ್ = ಸಮೃದ್ಧಿ ತಪ್ಪದೇ ಯಥಾಯೋಗಂ = ಧ್ಯಾನ ತಪ್ಪದೆ ಯಥಾರತಿ = ತಾತ್ಪರ್ಯ ತಪ್ಪದೆ ಯದಾ = ಆವಾಗವೂ ಕದಾಪಿ ವಾ = ಒಂದಾನೊಂದು ವೇಳೆಯು ಭಕ್ತ್ಯಾ = ಭಕ್ತಿಯಿಂದ ಯತ್ರ = ಆವಲ್ಲಿ ಕುತ್ರಾಪಿ ವಾ = ಒಂದು ಠಾವಿನಲ್ಲಿ ಯೇನ ಕೇನಾಪಿ ವಾ = ಆವನಾನೊಬ್ಬ

---

[1] ಪಿ (ಖ ಚ.) [2] ದನೇನ (ಘ)
[3] ಮತಿ (ಘ) [4] ನ (ಕ)

ಯೇನ ಕೇನಾಪಿ ವಾ ದೇವಿ*ಪೂಜಾ* ಮುಕ್ತಿಂ ನಯಿಷ್ಯತಿ ||೩೬||

ಅಶುದ್ಧೋ ವಾ ವಿಶುದ್ಧೋ ವಾ ಸಕೃತ್ಪಂಚಾಕ್ಷರೇಣ ಯಃ
ಪೂಜಯೇತ್ಪತಿತೋ ವಾಽಪಿ ಮುಚ್ಯತೇ ನಾತ್ರ ಸಂಶಯಃ ||೩೭||

ಕಿಮತ್ರ ಬಹುನೋಕ್ತೇನ ಭಕ್ತಾಸ್ಸರ್ವೇಽಧಿಕಾರಿಣಃ
ಮಮ ಪಂಚಾಕ್ಷರೀಮಂ[1]ತ್ರೇ[1] ತಸ್ಮಾಚ್ಛ್ರೇಷ್ಠತರೋ ಹಿ ಸಃ ||೩೮||

ಪಂಚಾಕ್ಷರಪ್ರಭಾವಾಚ್ಚ ಲೋಕಾ ದೇವಾ ಮಹರ್ಷಯಃ
ತಿಷ್ಠಂತಿ ಶಾಶ್ವತಾ ಧರ್ಮಾ ವೇದಾಃ ಸರ್ವಮಿದಂ ಜಗತ್ ||೩೯||

---

ನಿಂದವೂ ಪೂಜಾ=ಪೂಜೆಯು ಕೃತಾ=ಮಾಡಲುಪಟ್ಟಿತ್ತು. ಹೇ ದೇವಿ = ಎಲೈ ಪಾರ್ವತೀದೇವಿ! ಮುಕ್ತಿಂ=ಮುಕ್ತಿಯನು ನಯಿಷ್ಯತಿ=ಎಯ್ದಿಸುವುದು ನೀಞ್—ಪ್ರಾಪಣೇ ಎಂಬ ಧಾತು ಲೃಟ್. ||೩೬||

ಯಃ = ಆವನಾನೊಬ್ಬನು ಅಶುದ್ಧೋ ವಾ = ಶುದ್ಧನಲ್ಲದಾತನಾಗಲಿ ವಿಶುದ್ಧೋ ವಾ=ಶುದ್ಧನಾಗಲಿ ಪತಿತೋಽಪಿ ವಾ=[2]ಪಾಪವ[2]ಮಾಡಿದಾತನಾಗಲಿ ಸಕೃತ್=ಒಂದು ಬಾರಿ ಪಂಚಾಕ್ಷರೇಣ=ಪಂಚಾಕ್ಷರ ಮಂತ್ರದಿಂದ ಪೂಜಯೇತ್ =ಪೂಜಿಸುವನು ಮುಚ್ಯತೇ = ಮುಕ್ತನಾಗುತ್ತಿಹನು. ಅತ್ರ=ಈ ಅರ್ಥದಲ್ಲಿ ಸಂಶಯಃ=ಸಂದೇಹವು ನ=ಇಲ್ಲ.

ಅತ್ರ=ಇಲ್ಲಿ ಬಹುನಾ ಉಕ್ತೇನ=ಹಲವ ನುಡಿದದ್ದರಿಂದ ಕಿಂ = ಏನು ಪ್ರಯೋಜನವು? ಮಮ=ಎನ್ನ ಪಂಚಾಕ್ಷರೀಮಂತ್ರೇ=ಪಂಚಾಕ್ಷರಮಂತ್ರದಲ್ಲಿ ಸರ್ವೇ ಭಕ್ತಾಃ=ಸಮಸ್ತ ಭಕ್ತರುಗಳು ಅಧಿಕಾರಿಣಃ=ಅಧಿಕಾರಿಗಳು. ತಸ್ಮಾತ್ =ಅದು ಕಾರಣವಾಗಿ ಸಃ=ಆ ಶ್ರೀಪಂಚಾಕ್ಷರೀಮಂತ್ರವು ಶ್ರೇಷ್ಠತರೋ ಹಿ= ಅತ್ಯಂತ ಶ್ರೇಷ್ಠವಲಾ. ತರಶಬ್ದವು ಅತಿಶಯದಲ್ಲಿ ವರ್ತಿಸೂದು. ದ್ವಿವಚನ— ವಿಭಜ್ಯೋಪಪದೇ ತರಬೀಯಸುನೌ' 'ಅತಿಶಾಯಿನೇ ತರಪ್ತಮಬಿಷ್ಠನೌ' ಇತಿ ಪಾಣಿನಿ ಸೂತ್ರ[3][ಗಳು].[3] ||೩೮||

ಪಂಚಾಕ್ಷರಪ್ರಭಾವಾತ್=ಪಂಚಾಕ್ಷರದ ಸಾಮರ್ಥ್ಯದ ದೆಸೆಯಿಂದ ಲೋಕಾಶ್ಚ =ಹದಿನಾಲ್ಕು ಲೋಕಂಗಳೂ ದೇವಾಃ = ತ್ರಯಸ್ತ್ರಿಂಶತ್ಕೋಟಿ ದೇವರ್ಕಳೂ ಮಹರ್ಷಯಃ=ತ್ರಿಕೋಟಿ ಮಹಾಋಷಿಗಳೂ ಇದಂ ಸರ್ವಂ ಜಗತ್ =ಈ ಸಮಸ್ತ

---

* ಪ್ರಜಾಂ (ಘ) ಮೂಲ. ಪೂಜಾ (ಘ) ಪಾಠಾಂತರ

1 ತ್ರಃ (ಘ) 2 ಪಾವನವ (ಕ) 3 ವತ್ (ಕ.ಖ.ಚ)

ಆದೌ ನಮಃಪ್ರಯೋಕ್ತವ್ಯಂ ಶಿವಾಯೇತಿ ತತಃಪರಮ್
ಸೈಷಾ ಪಂಚಾಕ್ಷರೀವಿದ್ಯಾ ಸರ್ವಶ್ರುತಿಶಿರೋಗತಾ ||೪೦||

ಶಬ್ದಜಾತಸ್ಯ ಸರ್ವಸ್ಯ ಬೀಜಭೂತಾ ಸಮಾಸತಃ
ಪ್ರಥಮಂ ಮನ್ಮುಖೋದ್ಗೀರ್ಣಾ ಸಾ ಮದ್ಯೈವಾತ್ಮವಾಚಿಕಾ ||೪೧||

ಮಮ ಪಂಚಮುಖಾನ್ಯಾಹುಃ ಸ್ಥಾನಂ ತೇಷಾಂ ವರಾನನೇ |
ಪೂರ್ವಾದಿ ಚೋರ್ಧ್ವಪರ್ಯಂತಂ ನಕಾರಾದಿಯಥಾಕ್ರಮಮ್||೪೨||

---

ಜಗತ್ತು ಶಾಶ್ವತಾಃ=ನಿತ್ಯವಹಂಥಾ ಧರ್ಮಾಃ=ಸಮಸ್ತ ಧರ್ಮಂಗಳೂ ವೇದಾಃ =ನಾಲ್ಕು ವೇದಂಗಳೂ ತಿಷ್ಠಂತಿ=ಇರುತ್ತಿಹವು. ||೩೯||

ಆದೌ=ಮೊದಲಲ್ಲಿ ನಮಃ=ನಮಶ್ಶಬ್ದವು ತತಃ ಪರಂ=ಆಷ್ಟರಮೇಲೆ ಶಿವಾಯೇತಿ=ಶಿವಾಯ ಎಂಬಂಥಾ ಶಬ್ದವು ಪ್ರಯೋಕ್ತವ್ಯಂ = ಪ್ರಯೋಗಿಸಲು ಯೋಗ್ಯವು. ಸಾ= ಆ ಏಷಾ = ಈ ಪಂಚಾಕ್ಷರೀ ವಿದ್ಯಾ = ಪಂಚಾಕ್ಷರೀ ವಿದ್ಯೆಯು ಸರ್ವಶ್ರುತಿಶಿರೋಗತಾ = ಸಮಸ್ತ ವೇದಂಗಳ ಶಿರಸ್ಸಿನಲ್ಲಿ ಎಯ್ದಲ್ಪಟ್ಟಿತ್ತು. ||೪೦||

ಪ್ರಥಮಂ=ಮೊದಲು ಮನ್ಮುಖೋದ್ಗೀರ್ಣಾ = ನನ್ನ ಮುಖ[1]ದಲ್ಲಿ[1] ಹುಟ್ಟಿದಂಥಾ ಪಂಚಾಕ್ಷರಿ = ಸಮಸ್ಯ = ಸಮಸ್ತವಹಂಥಾ ಶಬ್ದಜಾತಸ್ಯ = ಶಬ್ದ ಸಮೂಹಕ್ಕೆ ಸಮಾಸತಃ = ವಿಸ್ತರದಿಂದ ಬೀಜಭೂತಾ = ಬೀಜವಹಂಥಾದ್ದು ಸ್ಯೈವ=ಆ ಪಂಚಾಕ್ಷರಿಯೇ ಮಮ = ಎನ್ನ ಆತ್ಮವಾಚಿಕಾ = ಪ್ರಯತ್ನದಿಂದ ನುಡಿಯಲ್ಪಟ್ಟಂಥಾದ್ದು. ||೪೧||

ಭೋ ವರಾನನೇ !=ಎಲೆ ಒಪ್ಪುತ್ತಿದ್ದ ಮುಖವನುಳ್ಳಂಥಾ ಪಾರ್ವತಿದೇವಿಯೆ ನಕಾರಾದಿ=ನಕಾರ ಮೊದಲಾಗಿ ಯಥಾಕ್ರಮಂ=ಕ್ರಮತಪ್ಪದೆ ತೇಷಾಂ=ಆ ಐದಕ್ಷರಂಗಳಿಗೆ ಪೂರ್ವಾದಿ=ಮೂಡಣದಿಕ್ಕು ಮೊದಲಾಗಿ ಊರ್ಧ್ವಪರ್ಯಂತಂ ಚ=ಆಕಾಶಪರ್ಯಂತವೂ ಮಮ=ಎನ್ನ ಪಂಚಮುಖಾನಿ=ಪಂಚಮುಖಂಗಳು ಸ್ಥಾನಂ=ಸ್ಥಾನವೆಂದು ಆಹುಃ= ಹೇಳುತ್ತಿಹರು. ಬ್ರೂಞ್ — ವ್ಯಕ್ತಾಯಾಂ ವಾಚಿ ಎಂಬ ಧಾತು. ಲಿಟ್ ಪರಸ್ಮೈಪದ ಪ್ರಥಮಪುರುಷ ಬಹುವಚನವು. ಆದಕ್ಕೆ ವ್ಯಾಕರಣಸೂತ್ರವುಂಟು. 'ಬ್ರುವಃ ಪಂಚಾನಾಮಾದಿತ ಆಹೋಬ್ರುವಃ' ಇತಿ ಸೂತ್ರಮ್. ||೪೨||

---

[1] ದಿಂದ (ಚ)

ಮೂಲವಿದ್ಯಾ ಶಿವಂ ಶೈವಂ [1]ಸೂತ್ರಂ[1] ಪಂಚಾಕ್ಷರಂ ತಥಾ
ನಾಮಾನ್ಯಸ್ಯ ವಿಜಾನೀಯಾತ್ ಸೈವ ಮೇ ಹೃದಯಂ ಮತಮ್ ||೪೩||

ರಹಸ್ಯಮನ್ಯದ್ವಕ್ಷ್ಯಾಮಿ ಗೋಪನೀಯಮಿದಂ ಪ್ರಿಯೇ
ನ ವಾಚ್ಯಂ ಯಸ್ಯ ಕಸ್ಯಾಪಿ ನಾಸ್ತಿಕಸ್ಯಾಥವಾ ಪಶೋಃ ||೪೪||

ಸದಾಚಾರವಿಹೀನಸ್ಯ ಪತಿತಸ್ಯಾಂತ್ಯಜಸ್ಯ ವಾ
ಪಂಚಾಕ್ಷರಾತ್ಪರಂ ನಾಸ್ತಿ ಪರಿತ್ರಾಣಂ ಕಲೌ ಯುಗೇ ||೪೫||

ಗಚ್ಛತಸ್ತಿಷ್ಠತೋ ವಾಽಪಿ ಸ್ವೇಚ್ಛಯಾ ಕರ್ಮ ಕುರ್ವತಃ
ಅಶುಚೇರ್ವಾ ಶುಚೇರ್ವಾಪಿ ಮಂತ್ರೋಽಯಂ ನ ಚ ನಿಷ್ಫ[2]ಲಃ[2] ||೪೬||

---

ಶೈವಂ = ಶಿವಸಂಬಂಧವಹಂಥಾ ಪಂಚಾಕ್ಷರಂ = ಪಂಚಾಕ್ಷರವು ಶಿವಂ ಸೂತ್ರಂ = ಶಿವಸೂತ್ರವೆನಿಸುವುದು. ತಥಾ = ಹಾಂಗೆ ಮೂಲವಿದ್ಯಾ = ಮೂಲವಿದ್ಯವಹಂಥಾ ಸೈವ = ಆ ಪಂಚಾಕ್ಷರಿಯೇ ಮೇ = ಎನ್ನ ಮತಂ = ಇಷ್ಟವಹಂಥಾ ಹೃದಯಂ = ಹೃದಯವು. ಅಸ್ಯ = ಈ ಪಂಚಾಕ್ಷರಿಯ ನಾಮಾನಿ = ನಾಮಂಗಳನು ವಿಜಾನೀಯಾತ್ = ಅರಿವುದು. ||೪೩||

ಭೋ ಪ್ರಿಯೆ! = ಎಲೆಪ್ರಿಯಳಹಂಥಾ ಪಾರ್ವತೀದೇವಿ! ಅನ್ಯತ್ = ಮತ್ತೊಂದು ರಹಸ್ಯಂ = ರಹಸ್ಯವನು ವಕ್ಷ್ಯಾಮಿ = ಹೇಳಿಹೆನು ಇದಂ = ಈ ಪಂಚಾಕ್ಷರೀಮಂತ್ರವು ಗೋಪನೀಯಂ = ಗೋಪ್ಯಮಾಡಬೇಕಂಥಾದ್ದು ಯಸ್ಯ ಕಸ್ಯಾಪಿ = ಯಾವನಾದರೊಬ್ಬಂಗೆಯೂ ನಾಸ್ತಿಕಸ್ಯ = ನಾಸ್ತಿಕಂಗೆಯೂ ಅಥವಾ = ಅಲ್ಲದಿರ್ದಪಕ್ಷೇ ಪಶೋಃ = ಪಶುಪ್ರಾಣಿಗೆಯೂ ನ ವಾಚ್ಯಂ = ಹೇಳಲಾಗದು. ನಾಸ್ತಿಕನೆಂದಡೆ ಶೂನ್ಯವಾದಿ ಎಂಬುದರ್ಥ. ||೪೪||

ಸದಾಚಾರವಿಹೀನಸ್ಯ = ಸದಾಚಾರವಿಲ್ಲದಾತನ, ಪತಿತಸ್ಯ = ಪಾಪವ ಮಾಡಿದಾತನ, ಅಂತ್ಯಜಸ್ಯ ವಾ = ಹೊಲೆಯನ, ಪರಿತ್ರಾಣಂ = ರಕ್ಷಿಸುವಂಥಾದ್ದು ಕಲೌಯುಗೇ = ಕಲಿಯುಗದಲ್ಲಿ ಪಂಚಾಕ್ಷರಾತ್ = ಪಂಚಾಕ್ಷರಮಂತ್ರದ ದೆಸೆಯಿಂದವು ಪರಂ = ಮತ್ತೊಂದು ಮಂತ್ರವು ನಾಸ್ತಿ = ಇಲ್ಲವು. ||೪೫||

ಗಚ್ಛತಃ = ನಡವುತಿದ್ದಾತಂಗೆ ತಿಷ್ಠತೋ ವಾಪಿ = ನಿಂದಿರ್ದಾತಂಗೆಯೂ ಸ್ವೇಚ್ಛಯಾ ತನ್ನಿಚ್ಛೆಯಿಂದ ಕರ್ಮ = ಉದ್ಯೋಗವನು ಕುರ್ವತಃ = ಮಾಡುತಿರ್ದಾತಂಗೆ ಅಶುಚೇರ್ವಾ = ಅಶುಚಿಯಾಗಲಿ ಶುಚೇರ್ವಾಪಿ = ಶುಚಿಯಾಗಲಿ

---

1 ಸೂಕ್ಷ್ಮಂ (ಖ. ಗ) 2 ಲಂ (ಗ. ಚ)

ಅಂತ್ಯಜಸ್ಯಾಪಿ ಮೂರ್ಖಸ್ಯ ಮೂಢಸ್ಯ ಪತಿತಸ್ಯ ಚ
ನಿರ್ಮರ್ಯಾದಸ್ಯ ನೀಚಸ್ಯ ಮಂತ್ರೋಽಯಂ ನ ಚ ನಿಷ್ಫಲಃ ||೪೭||

ಸರ್ವಾವಸ್ಥಾಂ ಗತಸ್ಯಾಪಿ ಮಯಿ ಭಕ್ತಿಮತಃ ಪ್ರಿಯೆ
ಸಿಧ್ಯತ್ಯೇಷ ನ ಸಂದೇಹೋ ನಾಪರಸ್ಯ ತು ಕಸ್ಯಚಿತ್ ||೪೮||

ನ ಲಗ್ನತಿಥಿನಕ್ಷತ್ರವಾರಯೋಗಾದಯಃ ಪ್ರಿಯೇ
ಅಸ್ಯಾತ್ಯಂತಮ¹ಪೇ¹ಕ್ಷಾ್ಯಸ್ಸ್ಯುರ್ನೈಷ ಸುಪ್ತಃ ಸದೋದಿತಃ ||೪೯||

ಅಯಂ ಮಂತ್ರಶ್ಚ = ಈ ಪಂಚಾಕ್ಷರ ಮಂತ್ರವು ನ ನಿಷ್ಫಲಃ = ನಿಷ್ಫಲವಹಂಥಾದ್ದಲ್ಲ. ಎಂಥಾವಂಗೆಯೂ ಫಲವ ಕೊಡುವುದೆಂಬುದರ್ಥ. ||೪೬||

ಅಂತ್ಯಜಸ್ಯಾಪಿ = ಹೊಲೆಯಂಗೆಯು ಮೂರ್ಖಸ್ಯ = ಮೂರ್ಖಂಗೆ ಮೂಢಸ್ಯ = ಅಜ್ಞಾನಿಗೆ ಪತಿತಸ್ಯ ಚ = ಪಾತಕಂಗೆಯೂ ನಿರ್ಮರ್ಯಾದಸ್ಯ = ಸದ್ವರ್ತನೆ ಇಲ್ಲದಾತಂಗೆ ನೀಚಸ್ಯ = ನೀಚಂಗೆ ಅಯಂ ಮಂತ್ರಶ್ಚ = ಈ ಮಂತ್ರವು ನಿಷ್ಫಲಃ = ನಿಷ್ಫಲವಹಂಥಾದ್ದು ನ = ಅಲ್ಲ. ನೀಚನೆಂದಡೆ ಚಾತುರ್ವರ್ಣದವನಲ್ಲವೆಂಬುದರ್ಥ. 'ವಿವರ್ಣಃ ಪಾಮರೋ ನೀಚಃ' ಇತ್ಯಮರಸಿಂಹಃ. ||೪೭||

ಭೋ ಪ್ರಿಯೆ! = ಎಲೈ ಪ್ರಿಯಳಹಂಥಾ ಪಾರ್ವತೀದೇವಿ! ಸರ್ವಾವಸ್ಥಾಂಗತಸ್ಯಾಪಿ = ಸಮಸ್ತ ವ್ಯಾಪಾರ ನೆಯ್ದಿದಾತನಾದಂಥಾ ಮಯಿ = ಎನ್ನಲ್ಲಿ ಭಕ್ತಿಮತಃ = ಭಕ್ತಿಯುಳ್ಳಾತಂಗೆ ಏಷಃ = ಈ ಪಂಚಾಕ್ಷರ ಮಂತ್ರವು ಸಿಧ್ಯತಿ = ಸಿದ್ಧಿಸುತ್ತಿಹುದು. ನ ಸಂದೇಹಃ = ಸಂದೇಹವಿಲ್ಲ. ಅಪರಸ್ಯ ಕಸ್ಯಚಿತ್ = ಮತ್ತಾವನಾನೊಬ್ಬಂಗೆಯೂ ನ = ಸಿದ್ಧಿಸದು. ಭಕ್ತಿಬೇಕೆಂಬುದರ್ಥ. ||೪೮||

ಭೋ ಪ್ರಿಯೆ! = ಎಲೆ ಪ್ರಿಯಳೆ! ಲಗ್ನತಿಥಿನಕ್ಷತ್ರವಾರಯೋಗಾದಯಃ = ಲಗ್ನ ತಿಥಿ ನಕ್ಷತ್ರ ವಾರ ಯೋಗ ಮೊದಲಾದಂಥವು ಅಸ್ಯ = ಈ ಪಂಚಾಕ್ಷರ ಮಂತ್ರವ ಜಪಿಸುವುದಕ್ಕೆ ಅತ್ಯಂತಂ = ಮಿಗಿಲಾಗಿ ಅಪೇಕ್ಷ್ಯಾಃ = ಅಪೇಕ್ಷಿಸುವಂಥವು ನ ಸ್ಯುಃ = ಆಗವು. ಏಷಃ = ಈ ಮಂತ್ರವು ಸುಪ್ತಃ = ನಿದ್ರೆಗೆಯ್ವಂಥಾದ್ದು ನ = ಅಲ್ಲ. ಸದಾ = ಎಲ್ಲಾಗವೂ ಉದಿತಃ = ಎಚ್ಚತ್ತಿಹಂಥಾದ್ದು. ಉಳಿದ ಮಂತ್ರಗಳು ನಿದ್ರೆ ಎಚ್ಚರಿಕೆಯುಳ್ಳವು. ಈ ಪಂಚಾಕ್ಷರ ಮಂತ್ರವು ಅಂಥಹುದಲ್ಲವೆಂಬುದರ್ಥ. ||೪೯||

1 ವೇ (ಝ)

ಮಂತ್ರಾಂತರೇಷು ಸಿದ್ಧೇಷು ಮಂತ್ರ ಏಷ ನ ಸಿಧ್ಯತಿ
ಅಸ್ಮಿನ್ ಸಿದ್ಧೇ ಮಹಾಮಂತ್ರೇ ತೇಽಪಿ ಸಿದ್ಧಾ ಭವಂತ್ಯುತ ॥೫೦॥

ಯಥಾ ದೇವೇಷ್ವಲಬ್ಧೋಽಸ್ಮಿ ಲಬ್ಧೇಷ್ವಪಿ ಮಹೇಶ್ವರಿ
ಮಯಿ ಲಬ್ಧೇ ತು ತೇ ಲಬ್ಧಾಃ ಮಂತ್ರೇಽಪ್ಯೇಷ[1]ಸಮೋ[1] ವಿಧಿಃ॥೫೧॥

ತಥಾಽಪಿ ನೈನಂ ಕ್ಷುದ್ರೇಷು ಫಲೇಷು ಪ್ರತಿಯೋಗಿಷು
ಸಹಸಾ ವಿನಿಯುಂಜೀತ ಯಸ್ಮಾದೇಷ ಮಹಾಬಲಃ ॥೫೨॥

ತಸ್ಮಾನ್ಮಂತ್ರಾಂತರಾನ್ ತ್ಯಕ್ತ್ವಾ ಸಾಧಯನ್ನಾಧಿಕಾರತಃ
ಆಶ್ರಯೇತ್ಪರಮಾಂ ವಿದ್ಯಾಂ ಹೃದ್ಯಾಂ ಪಂಚಾಕ್ಷರೀಂ ಬುಧಃ ॥೫೩॥

---

ಮಂತ್ರಾಂತರೇಷು = ಉಳಿದ ಮಂತ್ರಂಗಳು ಸಿದ್ಧೇಷು ಸತ್ಸು = ಸಿದ್ಧಿಗಳಾಗುತ್ತಿರಲು ಏಷಮಂತ್ರಃ = ಈ ಮಂತ್ರವು ನ ಸಿಧ್ಯತಿ = ಸಿದ್ಧಿಸದು. ಅಸ್ಮಿನ್ ಮಹಾಮಂತ್ರೇ = ಈ ಮಹಾಮಂತ್ರವು ಸಿದ್ಧೇ ಸತಿ = ಸಿದ್ಧಿಯಾಗುತ್ತಿರಲು ತೇಽಪಿ = ಆ ಉಳಿದ ಮಂತ್ರಂಗಳೂ ಸಿದ್ಧಾಃ = ಸಿದ್ಧಿಗಳು ಭವಂತಿ ಉತ = ಆಗುತ್ತಿಹವಲಾ. ॥೫೦॥

ಭೋ ಮಹೇಶ್ವರಿ! = ಎಲೆ ಮಹೇಶ್ವರಿ! ದೇವೇಷು = ದೇವರ್ಕಳು ಲಬ್ಧೇಷು ಸತ್ಸ್ವಪಿ = ಪ್ರಸನ್ನರುಗಳಾಗುತ್ತಿರಲೂ ಯಥಾ = ಹೇಂಗೆ ಅಲಬ್ಧಃ = ದುರ್ಲಭನು ಅಸ್ಮಿ = ಆಗುತ್ತಿದ್ದೇನು ಮಯಿ = ನಾನು ಲಬ್ಧೇಸತಿ = ಪ್ರಸನ್ನನಾಗುತ್ತಿರಲು ತೇ = ಆ ದೇವರ್ಕಳು ಲಬ್ಧಾಸ್ತು = ಪ್ರಸನ್ನರುಗಳಹರು. ಮಂತ್ರೇಽಪಿ = ಪಂಚಾಕ್ಷರಮಂತ್ರದಲ್ಲಿಯೂ ಏಷ ವಿಧಿಃ = ಈ ಪ್ರಕಾರವಹೆಂಥಾ[2] ಉಪಮಾನ ವಿಧಾನವು[2] ಸಮಃ = ಸಮಾನವು. ॥೫೧॥

ತಥಾಽಪಿ = ಹಾಂಗೆಯೂ ಏನಂ = ಈ ಪಂಚಾಕ್ಷರ ಮಂತ್ರವನು ಕ್ಷುದ್ರೇಷು ಫಲೇಷು = ಅಲ್ಪಫಲವನುಳ್ಳಂಥಾ ಪ್ರತಿಯೋಗಿಷು = ಉಳಿದ ಮಂತ್ರಂಗಳಲ್ಲಿ ಸಹಸಾ = ಪ್ರಯತ್ನದಿಂದ ನ ವಿನಿಯುಂಜೀತ = ಕೂಟ ಮಾಡಲಾಗದು (ಕೊಡಲಾಗದು). ಯಸ್ಮಾತ್ = ಆವುದಾನೊಂದು ಕಾರಣವಾಗಿ ಏಷಃ = ಈ ಪಂಚಾಕ್ಷರ ಮಂತ್ರವು ಮಹಾಬಲಃ = ಅತಿಸತ್ವವನುಳ್ಳಂಥಾದ್ದು. ಸಹಸಾಶಬ್ದ ಅವ್ಯಯವು. ಉಚಿತಾರ್ಥವ ನುಡಿವುದು. ॥೫೨॥

ತಸ್ಮಾತ್ = ಆದು ಕಾರಣವಾಗಿ ಮಂತ್ರಾಂತರಾನ್ = ಉಳಿದ ಮಂತ್ರಗಳನು ಅಧಿಕಾರತಃ = ಅತ್ಯಂತವಾಗಿ ನ ಸಾಧಯನ್ = ಸಾಧಿಸದೆ ತ್ಯಕ್ತ್ವಾ = ಬಿಟ್ಟು

---

1 ಸಮಾ (ಖ) 2 ಉಪಮಾವಿಧಾನವು (ಕ).

ಉಪಮನ್ಯುರುವಾಚ

ಏವಂ ಸಾಕ್ಷಾನ್ಮಹಾದೇವ್ಯೈ ಮಹಾದೇವೇನ ಶೂಲಿನಾ
ಹಿತಾಯ ಜಗತಾಮುಕ್ತಃ ಪಂಚಾಕ್ಷರವಿಧಿಕ್ರಮಃ ||೫೪||

ಯ ಇಮಂ ಕೀರ್ತಯೇದ್ಭಕ್ತ್ಯಾ ಶೃಣುಯಾದ್ವಾ ಸಮಾಹಿತಃ
ಸರ್ವಪಾಪವಿನಿರ್ಮುಕ್ತಃ ಸ ಯಾತಿ ಪರಮಾಂ ಗತಿಮ್ ||೫೫||

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಸುಧಾರ್ಣವ-
ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ-
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ
" ಶ್ರೀಮತ್ಪಂಚಾಕ್ಷರೀಮಾಹಾತ್ಮ್ಯಕಥನಂ " ನಾಮ
ಅಷ್ಟಮೋಽಧ್ಯಾಯಃ ||

---

ಪರಮಾಂ = ಉತ್ಕೃಷ್ಟವಹಂಥಾ ಹೃದ್ಯಾಂ = ಮನೋಹರವಹಂಥಾ ಪಂಚಾಕ್ಷರೀಂ ವಿದ್ಯಾಂ = ಪಂಚಾಕ್ಷರಿ ಮಂತ್ರವನು ಬುಧಃ = ಬಲ್ಲಾತನು ಆಶ್ರಯೇತ್ = ಆಶ್ರಯಿಸುವುದು. ||೫೩||

ಉಪಮನ್ಯುರುವಾಚ = ಉಪಮನ್ಯುಮಹಾಮುನೀಶ್ವರನು ನುಡಿವುತ್ತಿದ್ದಾನು. ಏವಂ = ಈ ಪ್ರಕಾರದಲ್ಲಿ ಪಂಚಾಕ್ಷರವಿಧಿಕ್ರಮಃ = ಪಂಚಾಕ್ಷರ ವಿಧಾನದ ಕ್ರಮವು ಸಾಕ್ಷಾನ್ಮಹಾದೇವ್ಯೈ = ಸಾಕ್ಷಾತ್ಪಾರ್ವತೀದೇವಿಗೋಸ್ಕರ ಶೂಲಿನಾ = ತ್ರಿಶೂಲವನುಳ್ಳಂಥಾ ಮಹಾದೇವೇನ = ಪರಮೇಶ್ವರನಿಂದ ಜಗತಾಂ = ಸಮಸ್ತ ಲೋಕಂಗಳ ಹಿತಾಯ = ಹಿತಕ್ಕೋಸ್ಕರ ಉಕ್ತಃ = ನುಡಿಯಲ್ಪಟ್ಟಿತ್ತು.

ಯಃ = ಆವನಾನೊಬ್ಬನು ಇಮಂ = ಈ ಪಂಚಾಕ್ಷರ ಮಹಿಮೆಯು ಅಧ್ಯಾಯವನು ಭಕ್ತ್ಯಾ = ಭಕ್ತಿಯಿಂದ ಕೀರ್ತಯೇತ್ = ಕೊಂಡಾಡುವನು ವಾ = [1]ಅಥವಾ[1] ಸಮಾಹಿತಃ = ಸಮಾಧಾನಿಕೆ[2]ಯನುಳ್ಳಾತನಾಗಿ ಶೃಣುಯಾತ್ = ಹೇಳುವನು ಸಃ = ಆತನು ಸರ್ವಪಾಪವಿನಿರ್ಮುಕ್ತಃ = ಸಮಸ್ತ ಪಾಪಂಗಳಿಂದ ಬಿಡಲ್ಪಟ್ಟಾತನಾಗಿ ಪರಮಾಂ = ಉತ್ಕೃಷ್ಟವಹಂಥಾ ಗತಿಂ = ಮೋಕ್ಷವನು (ಮೋಕ್ಷಮಾರ್ಗವನು) ಯಾತಿ = ಎಯ್ದುತ್ತಿಹನು. ||೫೫||

---

1 ಅಲ್ಲಾ (ಖ) 2 ಯು (ಕ)

# ನವಮೋಽಧ್ಯಾಯಃ

## ( ಸಾನಂದಚರಿತಮ್ )

ಸ್ಕಾಂದೇ ಸನತ್ಕುಮಾರಸಂಹಿತಾಯಾಮ್

ಸನತ್ಕುಮಾರ ಉವಾಚ

ಭಗವನ್ನಂದಿಕೇಶಾನ ಶಿವಧರ್ಮಾರ್ಥಸಾಗರ
ಪಂಚಾಕ್ಷರಸ್ಯ ಮಾಹಾತ್ಮ್ಯಂ ವದ ಪರ್ಯಾಯಶಂಕರ ॥೧॥

ತಸ್ಯ ತದ್ವಚನಂ ಶ್ರುತ್ವಾ ಭಗವಾನ್ನಂದಿಕೇಶ್ವರಃ
ಪ್ರಾಹ ಗಂಭೀರಯಾ ವಾಚಾ ಶಿವಮಂತ್ರಸ್ಯ ವೈಭವಮ್ ॥೨॥

ನಂದಿಕೇಶ್ವರ ಉವಾಚ

ಪಂಚಾಕ್ಷರಸಮೋ ಮಂತ್ರೋ ನಾಸ್ತಿ ನಾಸ್ತಿ ಮಹಾಮುನೇ
ಮಹಾದೇವಸಮೋ ನಾಸ್ತಿ ಯಥಾ ದೇವೋ ಜಗತ್ರಯೇ ॥೩॥

---

ಸ್ಕಾಂದೇ ಸನತ್ಕುಮಾರಸಂಹಿತಾಯಾಮ್ = ಸ್ಕಂದಪುರಾಣದಲ್ಲಿ ಸನತ್ಕುಮಾರ ಸಂಹಿತೆಯಲ್ಲಿ ಹೇಳುತ್ತಿದ್ದುದು.

ಸನತ್ಕುಮಾರ ಉವಾಚ = ಸನತ್ಕುಮಾರನು ನುಡಿದನು.

ಭಗವಾನ್ = ಎಲೈ ಮಹಿಮೆಯನುಳ್ಳಂಥಾ ಶಿವಧರ್ಮಾರ್ಥಪಾರಗ = ಶಿವ ಧರ್ಮದ ಅರ್ಥದ ಕಡೆಯನೈದಿದಂಥಾ ಪರ್ಯಾಯಶಂಕರ = ಅಪರಶಂಭುವಹಂಥ ಭೋ ನಂದಿಕೇಶಾನ = ಎಲೈ ನಂದಿಕೇಶ್ವರನೇ ! ಪಂಚಾಕ್ಷರಸ್ಯ = ಪಂಚಾಕ್ಷರದ ಮಾಹಾತ್ಮ್ಯಂ = ಮಹಿಮೆಯನು ವದ = ಹೇಳು. ॥೧॥

ತಸ್ಯ = ಆ ಸನತ್ಕುಮಾರನ ತದ್ವಚನಂ = ಆ ವಾಕ್ಯವನು ಶ್ರುತ್ವಾ = ಕೇಳಿ ಭಗವಾನ್ = ಸಾಮರ್ಥ್ಯವನುಳ್ಳಂಥಾ ನಂದಿಕೇಶ್ವರಃ = ನಂದಿಕೇಶ್ವರನು ಗಂಭೀರಯಾ = ಗಂಭೀರವಹಂಥಾ ವಾಚಾ = ವಾಕ್ಯದಿಂಡ ಶಿವಮಂತ್ರಸ್ಯ = ಶ್ರೀ ಪಂಚಾಕ್ಷರೀ ಮಂತ್ರದ ವೈಭವಂ = ಸಾಮರ್ಥ್ಯವನು ಪ್ರಾಹ = ನುಡಿದನು. ॥೨॥

ನಂದಿಕೇಶ್ವರ ಉವಾಚ — ನಂದಿಕೇಶ್ವರನು ನುಡಿದನು.

ಭೋ ಮುನೇ = ಎಲೈ ಋಷಿಯೇ ! ಪಂಚಾಕ್ಷರಸಮಃ = ಪಂಚಾಕ್ಷರಕ್ಕೆ

ಉಮಾಸಮಾ ಯಥಾ ನಾರೀ ಯಥಾ ಗಂಗಾಸಮಾ ನದೀ
ಯಥಾ ಮೇರುಸಮೋ ಭೂಭೃತ್ಸಾಗರೇಣ ಸಮಂ ಸರಃ ||೪||

ಶಿವಭಕ್ತಿಸಮಾ ನಾಸ್ತಿ ಯಥಾ ಮುಕ್ತಿವಿಧಾಯಿನೀ
ಶಂಭೋರ್ದಯಾಸಮಾ ನಾಸ್ತಿ ನೌರ್ಭವಾಂಬುಧಿತಾರಿಣೀ ||
ತಥೈವ ಶಿವಮಂತ್ರಸ್ಯ ತುಲ್ಯೋ ನಾಸ್ತ್ಯಧಿಕೋಽಪಿ ವಾ ||೫||

*ವೇದೇಷು ಶಾಸ್ತ್ರೇಷು ಶಿವಾಗಮೇಷು
ಸಾರಂ ಸಮುದ್ಧೃತ್ಯ ಜಗದ್ಧಿತಾಯ
[1]ಭಕ್ತ[1]ಪ್ರಿಯಃ ಪಾರ್ವತಿವಲ್ಲಭಶ್ಚ
ಪಂಚಾಕ್ಷರಂ ಪ್ರಾಹ ಪರಃ ಶಿವೋಽಸೌ ||೬||

---

ಸಮಾನವಹಂಥಾ ಮಂತ್ರಃ = ಮಂತ್ರವು ನಾಸ್ತಿ ನಾಸ್ತಿ = ಇಲ್ಲ. ಇಲ್ಲ. ಜಗತ್ತ್ರಯೇ = ಮೂರು ಲೋಕದಲ್ಲಿ ಯಥಾ = ಹೇಗೆ ಮಹಾದೇವಸಮಃ = ಪರಮೇಶ್ವರಂಗೆ ಸಮಾನವಹಂಥಾ ದೇವಃ = ದೇವನು ನಾಸ್ತಿ = ಇಲ್ಲ. ||೩||

ಉಮಾಸಮಾ = ಪಾರ್ವತೀದೇವಿಗೆ ಸಮಾನವಹಂಥಾ ನಾರೀ = ಸ್ತ್ರೀ ಯಥಾ = ಹೇಂಗೆ ನಾಸ್ತಿ = ಇಲ್ಲ ಗಂಗಾಸಮಾ = ಗಂಗೆಗೆ ಸಮಾನಹಹಂಥಾ ನದೀ = ನದಿಯು ಯಥಾ = ಹೇಂಗೆ ನಾಸ್ತಿ = ಇಲ್ಲ, ಮೇರುಸಮಃ = ಮೇರುವಿಗೆ ಸಮಾನವಹಂಥಾ ಭೂಭೃತ್ = ಪರ್ವತವು ಯಥಾ = ಹೇಂಗೆ ನಾಸ್ತಿ = ಇಲ್ಲ, ಸಾಗರೇಣ ಸಮಂ = ಸಮುದ್ರದೊಡನೆ ಸಮಾನವಹಂಥಾ ಸರಃ = ಸರೋವರವು [ಯಥಾ = ಹೇಗೆ] ನಾಸ್ತಿ = ಇಲ್ಲ. ||೪||

ಶಿವಭಕ್ತಿಸಮಾ = ಶಿವಭಕ್ತಿಗೆ ಸಮಾನವಹಂಥಾ ಮುಕ್ತಿವಿಧಾಯಿನೀ = ಮುಕ್ತಿಯಂ ಕೊಡುತ್ತಂವಿದ್ದಂಥಾದ್ದು ಯಥಾ = ಹೇಂಗೆ ನಾಸ್ತಿ = ಇಲ್ಲ, ಶಂಭೋಃ = ಪರಮೇಶ್ವರನ ದಯಾಸಮಾ = ಕೃಪೆಗೆ ಸಮಾನವಹಂಥಾ ಭವಾಂಬುಧಿತಾರಿಣೀ = ಸಂಸಾರಸಮುದ್ರವ ದಾಂಟಿಸುವಂಥಾ ನೌಃ = ನಾವೆ ನಾಸ್ತಿ = ಇಲ್ಲ.

ತಥೈವ = ಹಾಂಗೆ ಶಿವಮಂತ್ರಸ್ಯ = ಪಂಚಾಕ್ಷರಮಂತ್ರಕ್ಕೆ ತುಲ್ಯಃ = ಸಮಾನವಹಂಥಾ ಮಂತ್ರವು ವಾ = ಅಲ್ಲಾ (ಅಥವಾ) ಅಧಿಕೋಽಪಿ = ಅಧಿಕವಹಂಥಾದ್ದು ನಾಸ್ತಿ = ಇಲ್ಲ. ||೫||

ಭಕ್ತಪ್ರಿಯಃ = ಭಕ್ತರುಗಳಿಗೆ ಪ್ರಿಯನಹಂಥಾ ಪಾರ್ವತಿವಲ್ಲಭಃ = ಪಾರ್ವತಿ

---

[1] ಭಕ್ತಿ (ಖ) ಮೂಲ *ಉಪೇಂದ್ರವಜ್ರ

ಕೃತ್ವಾ ಸರ್ವಾಣಿ ಪಾಪಾನಿ ಹತ್ವಾ ಚ ಭುವನತ್ರಯಮ್
ಸಕೃತ್ಪಂಚಾಕ್ಷರೀಂ ಜಪ್ತ್ವಾ ಸರ್ವಪಾಪೈರ್ನ ಲಿಪ್ಯತೇ ||೭||

ನಮಶ್ಶಿವಾಯೇತ್ಯಸ್ತ್ಯೇವ ಮಂತ್ರೋಽಯಂ ವಶಗಾ ಚ ವಾಕ್
ನರಕೇಷು ನರಾಃ ಕೇಚಿತ್ ಪತಂತೀತ್ಯೇತದದ್ಭುತಮ್ ||೮||

ಪುರಾ ಸಾನಂದದೇವೋಽಸೌ ಶಿವಭಕ್ತೋ ಗಣೇಶ್ವರಃ
ಪಂಚಾಕ್ಷರೇಣ ನರಕಾತ್ ಸರ್ವಾಂಸ್ತಾರಿತವಾನಹೋ ||೯||

ಸನತ್ಕುಮಾರ ಉವಾಚ—

---

ವಲ್ಲಭನಹಂಥಾ ಅಸೌ = ಈ ಪರಃ ಶಿವಃ = ಪರಮೇಶ್ವರನು ವೇದೇಷು = ವೇದಂಗಳಲ್ಲಿ ಶಾಸ್ತ್ರೇಷು = ಶಾಸ್ತ್ರಂಗಳಲ್ಲಿ ಶಿವಾಗಮೇಷು = ಶಿವಾಗಮಂಗಳಲ್ಲಿ ಸಾರಂ = ತಿರುಳನು (ಸಾರವನು) ಸಮುದ್ಧೃತ್ಯ = ತೆಗೆದು ಜಗದ್ಧಿತಾಯ = [2]ಲೋಕದ[2] ಹಿತಕ್ಕೋಸ್ಕರ ಪಂಚಾಕ್ಷರಂ = ಪಂಚಾಕ್ಷರಮಂತ್ರವನು ಪ್ರಾಹ = ನುಡಿದನು. ||೬||

ಸರ್ವಾಣಿ = ಸಮಸ್ತವಹಂಥಾ ಪಾಪಾನಿ = ಪಾಪಂಗಳನ್ನು ಕೃತ್ವಾ = ಮಾಡಿ ಭುವನತ್ರಯಂ = ಲೋಕಮೂರನು ಹತ್ವಾ ಚ = ಕೊಂದು ಸಕೃತ್ = ಒಂದು ಬಾರಿ ಪಂಚಾಕ್ಷರೀಂ = ಶ್ರೀಪಂಚಾಕ್ಷರ ಮಂತ್ರವನು ಜಪ್ತ್ವಾ = ಜಪಿಸಿ ಸರ್ವಪಾಪೈಃ = ಸಮಸ್ತ ಪಾಪಂಗಳಿಂದ ನ ಲಿಪ್ಯತೇ = ಲೇಪಿಸಲ್ಪಡುತ್ತಿರನು. ||೭||

ನಮಶ್ಶಿವಾಯೇತಿ = ನಮಶ್ಶಿವಾಯ ಎಂಬಂಥಾ ಅಯಂ ಮಂತ್ರಃ = ಈ ಪಂಚಾಕ್ಷರ ಮಂತ್ರವು ಅಸ್ತ್ಯೇವ = ಉಂಟು. ವಾಕ್ ಚ = ವಾಕ್ಯವೂ ವಶಗಾ = ತಮ್ಮ ವಶವನೆಯ್ದಿದಂಥಾದ್ದು. ಕೇಚಿನ್ನರಾಃ = ಕೆಲಬರು ಮನುಷ್ಯರುಗಳು ನರಕೇಷು — ನರಕಂಗಳಲ್ಲಿ ಪತಂತಿ = ಬೀಳುತ್ತಿಹರು. ಇತಿ = ಈ ಪ್ರಕಾರದಲ್ಲಿ ಏತತ್ = ಇದು ಅದ್ಭುತಂ = ಆಶ್ಚರ್ಯವು. ||೮||

ಪುರಾ = ಪೂರ್ವದಲ್ಲಿ ಶಿವಭಕ್ತಃ = ಶಿವಭಕ್ತನಹಂಥಾ ಗಣೇಶ್ವರಃ = ಗಣೇಶ್ವರನಹಂಥಾ ಅಸೌ ಸಾನಂದದೇವಃ = = ಈ ಸಾನಂದಮುನೀಶ್ವರನು ಪಂಚಾಕ್ಷರೇಣ = ಶ್ರೀಪಂಚಾಕ್ಷರ ಮಂತ್ರದಿಂದ ನರಕಾತ್ = ನರಕದ ದೆಸೆಯಿಂದ ಸರ್ವಾನ್ = ಸಮಸ್ತ ಪ್ರಾಣಿಗಳನು ತಾರಿತವಾನ್ = ದಾಟಿಸಿದನು. ಅಹೋ = ಆಶ್ಚರ್ಯವು

ಸನತ್ಕುಮಾರ ಉವಾಚ = ಸನತ್ಕುಮಾರನು ನುಡಿವುತ್ತಿದ್ದಾನು.

---

[2] ಜಗತ್ತಿನ (ಕ)

ಕಥಂ ಸಾನಂದದೇವೇನ ಭಗವನ್ನಂದಿಕೇಶ್ವರ
ಪಂಚಾಕ್ಷರೇಣ ಸಕಲಂ ನರಕಾದುದ್ಧೃತಂ ಪುರಾ ||೧೦||

ಪೂರ್ಣವಿತ್ತಸ್ಯ ಚ ಸುತಃ ಪುರಾ ಕಶ್ಚಿದ್ದ್ವಿಜೋತ್ತಮಃ
ಸಾನಂದ ಇತಿ ವಿಖ್ಯಾತಃ ಪರಾನಂದಮಹಾಧನಃ ||೧೧||

ಸಾನಂದಮಖಿಲಂ ಕೃತ್ವಾ ಲೋಕಂ ಸ್ವೇನೈವ ತೇಜಸಾ
ಸಾನಂದಚಿತ್ತಸ್ಸತತಂ ಸಾನಂದಸ್ತೇನ ಸೋಽಭವತ್ ||೧೨||

ಜನ್ಮಪ್ರಭೃತಿ ದೇವೇಶಂ ಲೋಕನಾಥಮುಮಾಪತಿಮ್
ಕರ್ಮಣಾ ಮನಸಾ ವಾಚಾ ಪ್ರತಿಪನ್ನೋಽಭವದ್ದ್ವಿಜಃ ||೧೩||

---

ಭಗವನ್ = ಭಗವಾನ್ನುಳ್ಳವನಹಂಥಾ ನಂದಿಕೇಶ್ವರ = ಎಲೆ ನಂದಿಕೇಶ್ವರನೆ! ಸಾನಂದದೇವೇನ = ಸಾನಂದಮುನೀಶ್ವರನಿಂದ ಪುರಾ = ಪೂರ್ವದಲ್ಲಿ ಪಂಚಾಕ್ಷರೇಣ = ಶ್ರೀ ಪಂಚಾಕ್ಷರಮಂತ್ರದಿಂದ ಸಕಲಂ = ಸಮಸ್ತಜನವು ನರಕಾತ್ = ನರಕದ ದೆಸೆಯಿಂದ ಕಥಂ = ಹೇಂಗೆ ಉದ್ಧೃತಂ = ತೆಗೆಯಲ್ಪಟ್ಟಿತ್ತು? ||೧೦||

ಶ್ರೀ ನಂದಿಕೇಶ್ವರ ಉವಾಚ = ಶ್ರೀ ನಂದಿಕೇಶ್ವರನು ನುಡಿವುತ್ತಿದ್ದಾನು.

ಪುರಾ = ಪೂರ್ವದಲ್ಲಿ ಪೂರ್ಣವಿತ್ತಸ್ಯ = ಪೂರ್ಣವಿತ್ತಋಷಿಯ ಸುತಃ = ಪುತ್ರನಹಂಥಾ ಸಾನಂದ ಇತಿ = ಸಾನಂದನೆಂದು ವಿಖ್ಯಾತಃ = ಖ್ಯಾತನಹಂಥಾ ಕಶ್ಚಿದ್ವಿಜೋತ್ತಮಃ = ಒಬ್ಬಾನೊಬ್ಬ ಬ್ರಾಹ್ಮಣೋತ್ತಮನು ಪರಾನಂದಮಹಾಧನಃ = ಪರಾನಂದವೇ ಮಹಾಧನವಾಗಿ ಉಳ್ಳಾತನಾಗಿದ್ದನು. ||೧೧||

ಅಖಿಲಂ ಲೋಕಂ = ಸಮಸ್ತ ಲೋಕವನು ಸ್ವೇನ ತೇಜಸೈವ = ತನ್ನ ತೇಜಸ್ಸಿನಿಂದವೇ ಸಾನಂದಂ = ಆನಂದದೊಡನೆ ಕೊಡಲ್ಪಟ್ಟಂಥಾದನಾಗಿ ಕೃತ್ವಾ = ಮಾಡಿ ಸತತಂ = ಆವಾಗಲೂ ಸಾನಂದಚಿತ್ತಃ = ಆನಂದದಿಂದ ಸಹಿತವಹ ಚಿತ್ತವನುಳ್ಳಂಥಾ ಸಃ = ಆತನು ತೇನ = ಅದು ಕಾರಣದಿಂದ ಸಾನಂದಃ = ಸಾನಂದನೆಂಬ ಹೆಸರನುಳ್ಳಾತನು ಅಭವತ್ = ಆದನು. ||೧೨||

ದ್ವಿಜಃ = ಬ್ರಾಹ್ಮಣೋತ್ತಮನಹಂಥಾ ಸಾನಂದಋಷಿ ಜನ್ಮಪ್ರಭೃತಿ = ಹುಟ್ಟಿದಂದು ತೊಡಗಿ ದೇವೇಶಂ = ದೇವರ್ಕಳಿಗೊಡೆಯನಹಂಥಾ ಲೋಕನಾಥಂ = ಲೋಕಂಗಳಿ[1]ಗೆ ಪತಿಯ[1]ಹಂಥಾ ಉಮಾಪತಿಂ = ಪಾರ್ವ[2]ತಿಗೆ[2]ವಲ್ಲಭನಹಂಥಾ ಶಿವನನು

---

[1] ಗೊಡೆಯನ (ಖ) [2] ತೀ (ಕ)

ಮಾತರಂ ಪಿತರಂ ಭ್ರಾತೄನ್ ಬಾಂಧವಾನ್ ಸುಹೃದೋ ಧನಮ್
ತ್ಯಕ್ತ್ವಾ ತಪಶ್ಚಚಾರಾಸೌ ಶರ್ವೇ ಚಿತ್ತಂ[1] ನಿ[1]ವೇಶ್ಯ ಚ ||೧೪||

ಗಚ್ಛನ್ ತಿಷ್ಠನ್ ಸ್ವಪನ್ ಜಾಗ್ರನ್ ಉನ್ಮಿಷನ್ನಿಮಿಷನ್ನಪಿ
ಭುಂಜನ್ ಪಿಬನ್ ಪಠನ್ ನಿತ್ಯಂ ಶಿವಚಿಂತಾಪರೋಽಭವತ್[2] ||೧೫||

ಏವಮೇವ ಪ್ರವೃತ್ತೋಽಸೌ ಸರ್ವಂ ಶಿವಮಯಂ ಜಗತ್
ದೃಷ್ಟವಾನ್ ಶಿಷ್ಟದೃಕ್ ಶಿಷ್ಟಮದೃಷ್ಟಮಕೃತಾತ್ಮಭಿಃ ||೧೬||

---

ಕರ್ಮಣಾ = ಕ್ರಿಯೆಯಿಂದ ಮನಸಾ = ಮನಸ್ಸಿನಿಂದ ವಾಚಾ = ವಾಕ್ಯದಿಂದ ಪ್ರತಿಪನ್ನಃ = ಎಯ್ದಿದಂಥಾತನು ಅಭವತ್ = ಆದನು ||೧೩||

ಅಸೌ = ಈ ಸಾನಂದಮುನಿ ಮಾತರಂ = ತಾಯನು ಪಿತರಂ = ತಂದೆಯನು ಭ್ರಾತೄನ್ = ಒಡಹುಟ್ಟಿದವರುಗಳನು ಬಾಂಧವಾನ್ = ನಂಟರುಗಳನು ಸುಹೃದಃ = ಸಂಗಾತಿಗಳನು ಧನಂ = ಧನವನು ತ್ಯಕ್ತ್ವಾ = ಬಿಟ್ಟು ಶರ್ವೇ = ಶಿವನಲ್ಲಿ ಚಿತ್ತಂ ಚ = ಚಿತ್ತವನು ನಿವೇಶ್ಯ = ಇರಿಸಿ ತಪಃ = ತಪಸ್ಸನ್ನು ಚಚಾರ = ಮಾಡಿದನು ||೧೪||

ಗಚ್ಛನ್ = ನಡವುತ್ತವು ತಿಷ್ಠನ್ = ನಿಂದಿರುತ್ತವು ಸ್ವಪನ್ = ನಿದ್ರೆಗೆಯ್ಯುತ್ತವು ಜಾಗ್ರನ್ = ಎಚ್ಚರಿರುತ್ತವು ಉನ್ಮಿಷನ್ = ಎವೆಯಿಕ್ಕದೆ[3]ಯುಂ ನಿಮಿಷನ್ = ಎವೆಯಿಕ್ಕುತವು ಭುಂಜನ್ = ಭೋಜನವ ಮಾಡುತ್ತವು ಪಿಬನ್ = ಉದಕವ ಪಾನವ ಮಾಡುತ್ತವು ಪಠನ್ = ವೇದಪಾಠವ ಮಾಡುತ್ತವು ನಿತ್ಯಮಪಿ = ಆವಾಗನೂ ಶಿವಚಿಂತಾಪರಃ = ಶಿವನ ನೆನವಲ್ಲಿ ತಾತ್ಪರ್ಯವನುಳ್ಳಾತನು ಅಭವತ್ = ಆದನು. ||೧೫||

ಏವಮೇವ = ಈ ಪ್ರಕಾರದಲ್ಲಿಯೇ ಪ್ರವೃತ್ತಃ = ವರ್ತಿಸುತ್ತಿದ್ದಂಥಾ ಅಸೌ = ಈ ಸಾನಂದಮುನಿ ಸರ್ವಂ ಜಗತ್ = ಸಮಸ್ತ ಲೋಕವನು ಶಿವಮಯಂ = ಶಿವಸ್ವರೂಪವಾಗಿ ದೃಷ್ಟವಾನ್ = ಕಂಡನು. ಅದಕ್ಕೆ ದೃಷ್ಟಾಂತವ ಹೇಳುತ್ತಿದ್ದೂದು ಶಿಷ್ಟದೃಕ್ = ಜ್ಞಾನದೃಷ್ಟಿಯನುಳ್ಳಾತನು ಶಿಷ್ಟಂ = ಜ್ಞಾನಮಯವೆಂದು ದೃಷ್ಟವಾನ್ = ಕಾಂಬನು. ಅಕೃತಾತ್ಮಭಿಃ = ಕೃತಾರ್ಥರಲ್ಲದವರುಗಳಿಂದ ಅದೃಷ್ಟಂ = ಕಾಣಲ್ಪಡದು. ||೧೬||

---

1 ನ್ಯ (ಘ) 2 ಭವೇತ್ (ಕ) ಮೂಲಮಂತ್ರ 3 ವು (ಕ.ಚ)
* ಉಪಜಾತಿವೃತ್ತಂ ವೃತ್ತ (ಕ.ಖ.ಚ)

ಲೋಕಾನ್ಸಮಸ್ತಾನ್ಸಕಲಾನ್ಮುನೀಂದ್ರಾನ್
ಸುರಾಸುರಾನ್ಸಾಗರಭೂಧರಾದೀನ್ ।
ವಿದ್ಯಾಧರಾನ್ಸಿದ್ಧಗಣಾನಶೇಷಾ
ನ್ವಿಲೋಕಯಾಮಾಸ ಶಿವಾತ್ಮಕಾನ್ ಸಃ ||೧೭||

ಏವಂ ಶಿವಮಯಂ ಸರ್ವಂ ದೃಷ್ಟ್ವಾ ತುಷ್ಟಮನಾ ಮುನಿಃ
ಆತ್ಮಾನಂ ಚ ಶಿವಂ ಜ್ಞಾತ್ವಾ ಹ್ಯಾತ್ಮ[1]ನ್ಯೇವಾಯಜಚ್ಛಿ[1]ವಮ್ ||೧೮||

ತಸ್ಯೈವಂ ವರ್ತಮಾನಸ್ಯ ದರ್ಶನಂ ಪ್ರದದೌ ಶಿವಃ
ಯೋಗಿನಾಂ ಯೋಗಗಮ್ಯೋಽಸೌ ಸಕಲೀಭೂಯ ನಿಷ್ಕಲಃ ||೧೯||

---

ಸಃ = ಆ ಸಾನಂದಮುನೀಶ್ವರನು ಸಮಸ್ತಾನ್ ಲೋಕಾನ್ = ಸರ್ವ ಲೋಕಂಗಳನು ಸಕಲಾನ್ಮುನೀಂದ್ರಾನ್ = ಸಮಸ್ತ ಋಷೀಶ್ವರರುಗಳನು ಸುರಾಸುರಾನ್ = ದೇವರ್ಕಳು ರಾಕ್ಷಸರುಗಳನು ಸಾಗರಭೂಧರಾದೀನ್ = ಸಮುದ್ರಂಗಳು ಪರ್ವತಂಗಳನು ವಿದ್ಯಾಧರಾನ್ = ವಿದ್ಯಾಧರರುಗಳನು ಅಶೇಷಾನ್ = ಸಮಸ್ತವಹಂಥಾ ಸಿದ್ಧಗಣಾನ್ = ಸಿದ್ಧಗಣಂಗಳನು ಶಿವಾತ್ಮಕಾನ್ = ಶಿವ-ಸ್ವರೂಪಂಗಳನಾಗಿ ವಿಲೋಕಯಾಮಾಸ = ಕಂಡನು. ||೧೭||

ಮುನಿಃ = ಸಾನಂದಮುನೀಶ್ವರನು ತುಷ್ಟಮನಾಃ = ಸಂತೋಷವಹ ಚಿತ್ತ-ವುಳ್ಳಾತನಾಗಿ ಏವಂ = ಈ ಪ್ರಕಾರದಲ್ಲಿ ಸರ್ವಂ = ಸಮಸ್ತವನು ಶಿವಮಯಂ = ಶಿವಸ್ವರೂಪನಾಗಿ ದೃಷ್ಟ್ವಾ = ಕಂಡು ಆತ್ಮಾನಂ ಚ = ತನ್ನನು ಶಿವಂ = ಶಿವನೆಂದು ಜ್ಞಾತ್ವಾ = ಅರಿದು ಆತ್ಮನ್ಯೇವ = ತನ್ನಲ್ಲಿಯೇ ಶಿವಂ = ಶಿವನನು ಅಯಜತ್ ಹಿ = ಅರ್ಚಿಸಿದನಲಾ. ||೧೮||

ಏವಂ = ಈ ಪ್ರಕಾರದಲ್ಲಿ ವರ್ತಮಾನಸ್ಯ = ವರ್ತಿಸುತ್ತಿದ್ದಂಥಾ ತಸ್ಯ = ಆ ಸಾನಂದ ಮುನೀಶ್ವರಂಗೆ ಯೋಗಿನಾಂ = ಯೋಗಿಗಳ ಯೋಗಗಮ್ಯಃ = ಯೋಗದಿಂದ ಎಯ್ದಲು ಯೋಗ್ಯವಹಂಥಾ ನಿಷ್ಕಲಃ = ನಿರ್ಗುಣನಹಂಥಾ ಅಸೌ = ಈ ಶಿವಃ = ಶಿವನು ಸಕಲೀಭೂಯ = ಸಾಕಾರವಾಗಿ ದರ್ಶನಂ = ದರ್ಶನವನು ಪ್ರದದೌ = ಕೊಟ್ಟನು. ಪ್ರತ್ಯಕ್ಷನಾದನೆಂಬುದರ್ಥ. ||೧೯||

---

1 ನ್ಯೆವ ಯಜೇ (ಘ)

ಉವಾಚ ಚೈನಮವ್ಯಗ್ರೋ ವಚಸಾನಂದದಾಯಿನಾ
ತುಷ್ಟೋಽಸ್ಮಿ ವತ್ಸ ಭದ್ರಂ ತೇ ಯದ್ಯದಿಷ್ಟಂ ತದುಚ್ಯತಾಮ್ ||೨೦||

ಏವಂ ಭಗವತಾ ಪ್ರೋಕ್ತೇ ಭಗನೇತ್ರನಿಪಾತಿನಾ
ಆನಂದಕ್ಲಿನ್ನಸರ್ವಾಂಗಃ ಸಾನಂದ ಇದಮಬ್ರವೀತ್ ||೨೧||

ಸಾನಂದ ಉವಾಚ

ನಮಸ್ಸಕಲಕಲ್ಯಾಣಕಾರಣಾಯ ಕಪರ್ದಿನೇ
ಕಲ್ಯಾಣರಮಣೀಯಾಯ ಕಲ್ಯಾಣಾತ್ಮಸ್ವರೂಪಿಣೇ ||೨೨||

ಕರುಣಾಕರ ಕಾಲಾರೇ ಕಪಾಲಾವಲಿಭೂಷಣ
ಕಲಾಪಾಲ ಕಲಾಧಾರ ಕರುಣಾಂ ಕುರು ಮೇ ಪ್ರಭೋ ||೨೩||

---

ಏವಂ ಚ = ಈ ಸಾನಂದ ಮುನೀಶ್ವರನನು ಕುರಿತು ಅವ್ಯಗ್ರಃ = ವ್ಯಗ್ರವಿಲ್ಲದಾತನಾಗಿ ಆನಂದದಾಯಿನಾ = ಆನಂದವನು ಕೊಡುತ್ತಿರ್ದಂಥಾ ವಚಸಾ = ವಾಕ್ಯದಿಂದ ಉವಾಚ = ನುಡಿದನು. ಭೋ! ವತ್ಸ = ಎಲೆ ಮಗನೆ! ತೇ = ನಿನಗೆ ತುಷ್ಟಃ = ಸಂತುಷ್ಟನು ಅಸ್ಮಿ = ಆದೆನು (ಆಗುತ್ತಿಹೆನು.) ಭದ್ರಂ = ಮಂಗಳವ ಹಂಥಾ ಯತ್ ಯತ್ = ಆವುದಾವುದು[1] ಇಷ್ಟಂ = ಬಯಸಿದುದಹುದು ತತ್ = ಅದು ಉಚ್ಯತಾಂ = ನುಡಿಯಲ್ಪಡಲಿ. ||೨೦||

ಭಗನೇತ್ರನಿಪಾತಿನಾ = ಭಗನೆಂಬ ಸೂರ್ಯನ ನಯನವ ಮೀಂಟಿದಂಥಾ ಭಗವತಾ = ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಶಿವನಿಂದ ಏವಂ = ಈ ಪ್ರಕಾರದಲ್ಲಿ ಪ್ರೋಕ್ತೇ ಸತಿ = ನುಡಿಯಲ್ಪಡುತ್ತಿರಲು ಸಾನಂದಃ = ಸಾನಂದಮುನೀಶ್ವರನು ಆನಂದಕ್ಲಿನ್ನಸರ್ವಾಂಗಃ = ಸಂತೋಷದಿಂದ ನೆನೆಯಲ್ಪಟ್ಟ ಸರ್ವಾಂಗವನುಳ್ಳಾತನಾಗಿ ಇದಂ = ಈ ವಾಕ್ಯವನು ಅಬ್ರವೀತ್ = ನುಡಿದನು. ||೨೧||

ಸಾನಂದ ಉವಾಚ = ಸಾನಂದಮುನೀಶ್ವರ ನುಡಿವುತ್ತಿದ್ದಾನು.

ಸಕಲಕಲ್ಯಾಣಕಾರಣಾಯ = ಸಮಸ್ತ ಮಂಗಳಂಗಳಿಗೆ ಕಾರಣನಹಂಥಾ ಕಪರ್ದಿನೇ = ಜಟಾಜೂಟವನುಳ್ಳಂಥಾ ಕಲ್ಯಾಣರಮಣೀಯಾಯ = ಮಂಗಳದಿಂದ ಒಪ್ಪುತ್ತಿರ್ದಂಥಾ ಕಲ್ಯಾಣಾತ್ಮಸ್ವರೂಪಿಣೇ = ಮಂಗಳವಹ ಪರಮಾತ್ಮ ಸ್ವರೂಪನಹಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೨೨||

ಕರುಣಾಕರ = ಕರುಣಕ್ಕೆ ಸ್ಥಾನವಹಂಥಾ ಕಾಲಾರೇ = ಕಾಲಂಗೆ ಶತ್ರುವಹಂಥಾ

---

1 ನೊಂದು (ಖ)

ತ್ವಮೇವ ಸರ್ವಲೋಕೇಶಃ ತ್ವತ್ತೋsನ್ಯನ್ನ ಚ ದೃಶ್ಯತೇ
ತ್ವನ್ಮಯಂ ಜಗದೀಶಾನ ತ್ವಂ ಜಗನ್ಮಯ ಏವ ಚ ॥೨೪॥

ತ್ವಯಿ ಸರ್ವಮಿದಂ ದೃಷ್ಟಂ ತ್ವಂ ಚ ಸರ್ವತ್ರ ದೃಶ್ಯಸೇ
ತ್ವಮಾದಿಃ ಸಕಲಸ್ಯಾಸ್ಯ ತ್ವಮಂತಶ್ಚಾಸಿ ಮಧ್ಯಮಃ ॥೨೫॥

*ಪಾದೋದರಂ ಸರ್ವಪಾತಾಲಮೂಲಂ
ಲೋಕೇಶ ಮೂರ್ಧಾ ಚ ಲೋಕಾದಿರೇಷಃ ॥
ನಾಸಾಮರುಚ್ಚಂದ್ರಸೂರ್ಯೌ ದೃಶೌ ತೇ
ಹ್ಯಾಶಾ ಭುಜಾಃ ಕಾಯ ಆಕಾಶ ಏಷಃ ॥೨೬॥

---

ಕಪಾಲಾವಲಿಭೂಷಣ = ಕಪಾಲಂಗಳ ಸಮೂಹವೇ ಆಭರಣವಾಗಿ ಉಳ್ಳಂಥಾ ಕಲಾಪಾಲ = ನಿವೃತ್ತಿ-ಪ್ರತಿಷ್ಠಾ-ವಿದ್ಯಾ-ಶಾಂತಿ-ಅತೀತಶಾಂತಿಗಳೆಂಬ ಕಲೆಗಳ ಪಾಲಿಸುತ್ತಿದ್ದಂಥಾ ಕಲಾಧಾರ=ಚತುಷ್ಷಷ್ಟಿಕಳೆಗಳಿಗೆ ಆಧಾರವಹಂಥಾ ಭೋಃಪ್ರಭೋ =ಎಲೆ ಒಡೆಯನೇ ಮೇ=ಎನಗೆ ಕರುಣಾಂ=ಕೃಪೆಯನು ಕುರು=ಮಾಡು.

ತ್ವಮೇವ=ನೀನೇ ಸರ್ವಲೋಕೇಶಃ = ಸಮಸ್ತ ಲೋಕಂಗಳಿಗೆ ಒಡೆಯನ ಹಂಥಾತನು. ತ್ವತ್ತಃ= ನಿನ್ನಿಂದ ಅನ್ಯತ್ ಚ= ಬೇರಹಂಥಾದ್ದು ನ ದೃಶ್ಯತೇ = ಕಾಣಲ್ಪಡುತ್ತಿರದು. ಭೋ ಈಶಾನ = ಎಲೆ ಪರಮೇಶ್ವರನೇ ! ಜಗತ್ = ಲೋಕವು ತ್ವನ್ಮಯಂ = ನಿನ್ನ ಸ್ವರೂಪವಹಂಥಾದ್ದು. ವಿಕಾರೇಮಯಟ್ ಇತಿ ವ್ಯಾಕರಣಸೂತ್ರಮ್. ತ್ವಮೇವ=ನೀನೇ ಜಗನ್ಮಯಶ್ಚ=ಜಗದ್ರೂಪನು. ॥೨೪॥

ಇದಂ ಸರ್ವಂ=ಈ ಸಮಸ್ತ ಲೋಕವು ತ್ವಯಿ=ನಿನ್ನಲ್ಲಿ ದೃಷ್ಟಂ=ಕಾಣಲ್ಪಟ್ಟಿತ್ತು. ತ್ವಂ ಚ=ನೀನು ಸರ್ವತ್ರ= ಸಮಸ್ತಲೋಕದಲ್ಲಿಯೂ ದೃಶ್ಯಸೇ =ಕಾಣಲ್ಪಡುತ್ತಿಹೆ. ತ್ವಂ=ನೀನು ಅಸ್ಯ=ಈ ಸಕಲಸ್ಯ=ಸಮಸ್ತಲೋಕಕ್ಕೆ ಆದಿಃ=ಮೊದಲಹಂಥಾ ಆತನು. ತ್ವಂ=ನೀನು ಮಧ್ಯಮಃ= ಮಧ್ಯಮವಹಂಥಾ ಆತನು. ಅಂತಃ=ಕಡೆಯಹಂಥಾ ಆತನು ಅಸಿ=ಆಗುತ್ತಿದೆ. ॥೨೫॥

ಲೋಕೇಶಃ = ಲೋಕಂಗಳಿಗೆ ಒಡೆಯನಹಂಥಾ ಶಿವನೇ ! ಸರ್ವಪಾತಾಳ ಮೂಲಂ=ಸಮಸ್ತಪಾತಾಳಲೋಕದ ಮೊದಲು ತೇ=ನಿನ್ನ ಪಾದತಳವು. ಏಷಃ= ಈ ಲೋಕಾದಿಃ=ಲೋಕಂಗಳಿಗೆ ಮೊದಲಹಂಥಾ ಬ್ರಹ್ಮಾಂಡವು ಮೂರ್ಧಾಚ=

---

*ಇಂದ್ರವಜ್ರಾವೃತ್ತಂ * ವೃತ್ತ (ಕ. ಖ. ಚ) ಇದು 'ಮಾಲತೀ' ಎಂಬ ವೃತ್ತವಾಗುತ್ತದೆ. ಇಂದ್ರವಜ್ರಾ ಎಂದು ಭ್ರಮೆ ಯಿರಬಹುದು

ಸೃಜಸೇ ಸಕಲಂ ದೇವ[1]ಗ್ರಸಸೀಶ[1]ಪುನಃ ಪುನಃ
ಸ್ಥಾಪಯಸ್ಯಖಿಲೇಶಾನ ಕಿಮೇತತ್ತವ ಚೇಷ್ಟಿತಮ್ ||೨೭||

ಬ್ರಹ್ಮವಿಷ್ಣುಸುರಾಸ್ಸರ್ವೇ ಸ್ಥಾವರಾಣಿ ಚರಾಣಿ ಚ
ಸಂಭೂತಾನ್ಯೇವ ಭವತೋ ವಿಲೀನಾನಿ ಭವಂತ್ಯಹೋ ||೨೮||

ದುಸ್ತಾರತರವಿಸ್ತಾರಸಂಸಾರೋತ್ತಾರಸಾರಥೇ !
ನಮಸ್ಸಕಲಲೋಕೇಶ ಕಾರಣಾಯ ನಮೋಽಸ್ತು ತೇ ||೨೯||

---

ಮಸ್ತಕವು. ಮರುತ್ = ವಾಯು ನಾಸಾ = ನಾಸಿಕವು. ಚಂದ್ರಸೂರ್ಯೌ = ಚಂದ್ರಸೂರ್ಯರುಗಳು ದೃಶೌ = ದೃಷ್ಟಿಗಳು. ಆಶಾಃ = ದಿಕ್ಕುಗಳು ಭುಜಾಃ ಭುಜಂಗಳು. ಏಷಃ = ಈ ಆಕಾಶಃ = ಆಕಾಶವು ಕಾಯೋ ಹಿ = ಶರೀರವಲಾ ||೨೬||

ಭೋ ದೇವ = ಎಲೈ ದೇವನೆ ಸಕಲಂ = ಸಮಸ್ತವಹಂಥಾ ಲೋಕವನು ಸೃಜಸೇ = ಸೃಷ್ಟಿಮಾಡುತ್ತಿಹೆ. ಭೋ ಈಶ = ಎಲೈ ಈಶ್ವರನೇ ಗ್ರಸಸಿ = ಸಂಹರಿಸುತ್ತಿಹೆ. ಪುನಃಪುನಃ = ಮರಳಿ ಮರಳಿ ಸ್ಥಾಪಯಸಿ = ಪ್ರತಿಷ್ಠಿಸುತ್ತಿಹೆ. ಅಖಿಲೇಶಾನ = ಸಮಸ್ತಕ್ಕೆ ಒಡೆಯನಹಂಥಾ ಆತನೆ! ತವ = ನಿನ್ನ ಏತತ್ = ಈ ಚೇಷ್ಟಿತಂ = ವ್ಯಾಪಾರವು ಕಿಮ್? = ಎಂಥಹದು ? ||೨೭||

ಸರ್ವೇ = ಸರ್ವಸ್ತವಹಂಥಾ ಬ್ರಹ್ಮವಿಷ್ಣುಸುರಾಃ = ಬ್ರಹ್ಮವಿಷ್ಣುದೇವರ್ಕಳು ಭವತಃ = ನಿನ್ನ ದೆಸೆಯಿಂದ ಭವಂತಿ = ಆಗುತ್ತಿಹರು. ಸ್ಥಾವರಾಣಿ = ಸ್ಥಾವರಗಳು ಚರಾಣಿ ಚ = ಮನುಷ್ಯರು ಮೊದಲಾದಂಥಾ ಜಂಗಮಾತ್ಮಕಂಗಳು ಭವತಃ ಏವ = ನಿನ್ನ ದೆಸೆಯಿಂದವೇ ಸಂಭೂತಾನಿ = ಹುಟ್ಟುತ್ತಿಹವು. ವಿಲೀನಾನಿ = ಅಡಗುತ್ತಿಹವು. ಅಹೋ = ಆಶ್ಚರ್ಯವು. ||೨೮||

ದುಸ್ತಾರತರವಿಸ್ತಾರಸಂಸಾರೋತ್ತಾರಸಾರಥೇ ! = ಅತ್ಯಂತ ದಾಂಟಲಾಬಾರದೇ ಇದ್ದ ಬಹಳವಹ ಸಂಸಾರವ ದಾಂಟಿಸುವುದಕ್ಕೆ ಸಾರಥಿಯುಹಂಥಾ ದೇವನೇ ! ತೇ = ನಿನಗೋಸ್ಕರ ನಮಃ = ನಮಸ್ಕಾರವು. ಸಕಲಲೋಕೇಶ = ಸಮಸ್ತಲೋಕಂಗಳಿಗೆ ಒಡೆಯುನಹಂಥಾ ಶಿವನೇ ! ಕಾರಣಾಯ = ಕಾರಣಸ್ವರೂಪನಹಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು ಅಸ್ತು = ಆಗಲಿ. ||೨೯||

---

[1] ಗ್ರಸಸೇ ಚ (ಕ) ಮೂಲ

ಗಂಗಾ ತವ ಜಟಾಜೂಟೇ ಧೃತಾ ನೀಹಾರಬಿಂದುವತ್
ಏಕೈಕಾವಯವೇ [1]ವಿಶ್ವಮಭೂದ್ಯಸ್ಯ ಕಥಂ ಸ್ತುತಿಃ[1] ||೩೦||

*ಅಣೋರಣೀಯಾನ್ಮಹತೋ ಮಹೀಯಾ-
ನ್ಪರಾತ್ಪರಃ ಕಾರಣಕಾರಣಾನಾಮ್ !
ಸರ್ವಾಧಿಕಸ್ಸರ್ವಗಃಸರ್ವ ಶರ್ವ-[2]
ಸ್ತೋಷ್ಯೇ ಕಥಂ ತ್ವಾಮಗುಣಂ[3]ಗುಣಸ್ಥಃ[2] ||೩೧||

ಯಸ್ತ್ವದ್ದಾಸಸ್ಯ ದಾಸಸ್ಯ ದಾಸದಾಸಸ್ಯ ವಲ್ಲಭಃ
ದಾಸಸ್ತಸ್ಯಾಪಿ ದಾಸಸ್ಯ ದಾಸೋऽಹಂ ದಾಸವಲ್ಲಭಃ ||೩೨||

---

ತವ=ನಿನ್ನ ಜಟಾಜೂಟೇ=ಜಟಾಜೂಟದಲ್ಲಿ ಗಂಗಾ=ಮಂದಾಕಿನಿಯು ನೀಹಾರಬಿಂದುವತ್=ಮಂಜಿನ ಹನಿಯೋಪಾದಿಯಲ್ಲಿ ಧೃತಾ = ಧರಿಸಲ್ಪಟ್ಟಳು. ತವ=ನಿನ್ನ ಏಕೈಕಾವಯವೇ = ಒಂದೊಂದವಯವದಲ್ಲಿ ವಿಶ್ವಂ = ಸಮಸ್ತ ಲೋಕವು ಅಭೂತ್=ಆಯಿತ್ತು. ಯಸ್ಯ= ಆವನಾನೊಬ್ಬನಿಂದ ಕಥಂ = ಹೇಂಗೆ ಸ್ತುತಿಃ=ಸ್ತುತಿಸಃಹವು ? ||೩೦||

ಅಣೋಃ = ಸೂಕ್ಷ್ಮಕ್ಕೆ ಅಣೀಯಾನ್ =ಸೂಕ್ಷ್ಮವಹಂಥಾ ಆತನು. ಮಹತಃ=ಸ್ಥೂಲಕ್ಕೆ ಮಹೀಯಾನ್=ಸ್ಥೂಲನಹಂಥಾ ಆತನು. ಪರಾತ್= ಪ್ರಕೃತಿಯಿಂದವು ಪರಃ = ಮೇಲಿಹಾತನು. ಕಾರಣಾನಾಂ = ಜಗದುತ್ಪತ್ತಿ ಮೊದಲಾದ ಕಾರಣಂಗಳಿಗೆ ಕಾರಣಃ= ಕಾರಣನಹಂಥಾತನು. ಸರ್ವಾಧಿಕಃ = ಸಮಸ್ತಕ್ಕೆಯೂ ಅಧಿಕನಹಂಥಾತನು. ಸರ್ವಗಃ=ಸರ್ವಗತನು. ಸರ್ವಃ=ವಿಶ್ವ ಮೂರ್ತಿಯಹಂಥಾತನು. ಶರ್ವಃ= ಸಂಹಾರರೂಪನಹಂಥಾತನು. ಶೃ-ಹಿಂಸಾಯಾಂ ಎಂಬ ಧಾತುವಿನಲ್ಲಿ ಹುಟ್ಟಿದ ಪದವು. ಗುಣಸ್ಥಃ=ಸತ್ತ್ವರಜಸ್ತಮೋಗುಣಂಗಳಲ್ಲಿ ಇಹಾತನು. ಅಗುಣಂ=ಗುಣತ್ರಯರಹಿತನಾದಂಥಾ ತ್ವಾಂ= ನಿನ್ನನ್ನು ಕಥಂ =ಹೇಂಗೆ ಸ್ತೋಷ್ಯೇ=ಸ್ತೋತ್ರವ ಮಾಡೇನು ? ||೩೧||

ತ್ವದ್ದಾಸಸ್ಯ=ನಿನ್ನ ಭೃತ್ಯನ ದಾಸಸ್ಯ=ಭೃತ್ಯನ ದಾಸದಾಸಸ್ಯ=ಭೃತ್ಯನ ಭೃತ್ಯಂಗೆ ವಲ್ಲಭಃ=ಒಪ್ಪುತ್ತಿರ್ದಂಥಾ ದಾಸಃ=ಬಂಟನು ಯಃ= ಆವನಾನೊಬ್ಬ ನುಂಟು, ತಸ್ಯ=ಆ ಭೃತ್ಯನ ದಾಸಸ್ಯಾಪಿ=ಭೃತ್ಯಂಗೆಯೂ ಅಹಂ = ನಾನು ದಾಸವಲ್ಲಭಃ=ಬಂಟರೊಳಗೆ ಒಪ್ಪುತ್ತಿರ್ದಂಥಾ ದಾಸಃ=ಬಂಟನು. ||೩೨||

---

[1] ವಿಶ್ವಮಾಬಧ್ಯಸಿ ಕಥಂ ಸ್ತುವೇ (ಘ) * ಉಪಜಾತಿವೃತ್ತ ವೃತ್ತ (ಕ. ಖ. ಚ)
[2] ಶರ್ವ ಸರ್ವ (ಕ) ಮೂಲ (ಘ) [3] ಗುಣಸ್ಥಮ್ (ಘ)

*ಬೇತಾಳವೃಂದಪರಿಗೀತವಿಶೇಷನಾಟ್ಯ-
ಪಾತಾಳಪಾಲಫಣಿರಾಜಪರಿಷ್ಕೃತಾಂಗ
ನೀತಾಳಕಾಧಿಪ[1]ಸಖಿತ್ವ[1] ಸಮೃದ್ಧವೃತ್ತೇ
[2]ಪಾತಾಽಲ[2]ಮಾಶು ಭವಭಾವ ಭಯಾತ್ಸದಾ ಮೇ ||೩೩||

ತ್ವತ್ಪಾದಭೃತ್ಯಭೃತ್ಯಾನಾಂ ಭೃತ್ಯಭೃತ್ಯತ್ವಮುತ್ತಮಮ್
ಇಚ್ಛಾಮಿ ದೇವದೇವೇಶ ದೇವಾನಾಮತಿದುರ್ಲಭಮ್ ||೩೪||

ಏವಂ ವಿಲಪಮಾನೋಽಸಾವಾನಂದಾ[3]ಸ್ರಾವಿಲೇಕ್ಷಣಃ[3]
ಶಂಭೋಃ ಪಾದಾಂಬುಜದ್ವಂದ್ವೇ ನಿಪಪಾತ *ಮಹಾಮುನಿಃ* ||೩೫||

---

ಬೇತಾಳವೃಂದ ಪರಿಗೀತವಿಶೇಷನಾಟ್ಯ = ಬೇತಾಳರುಗಳ ಮೊತ್ತಗಳ ಗೀತಗಳಿಂದ ಅಧಿಕವಹ ನಾಟ್ಯವನುಳ್ಳಂಥಾ. ಪಾತಾಳಪಾಲಫಣಿರಾಜಪರಿಷ್ಕೃತಾಂಗ = ಪಾತಾಳ ಲೋಕವ ಪಾಲಿಸುತ್ತಿಹ ಸರ್ಪಶ್ರೇಷ್ಠರುಗಳಿಂದ ಅಲಂಕರಿಸಲ್ಪಟ್ಟ ಶರೀರವನುಳ್ಳಂಥಾ ನೀತಾಳಕಾಧಿಪಸಖಿತ್ವಸಮೃದ್ಧವೃತ್ತೇ = ನಿಯತವಹ ಕುಬೇರನ ಸಂಗಡಿಗನಹತನ ದಿಂದ ಹೆಚ್ಚುತ್ತಿದ್ದ ವಿಲಾಸದ ವರ್ತನೆಯನುಳ್ಳಂಥಾ ದೇವನೇ ! ಮೇ = ಎನಗೆ ಸದಾ = ಎಲ್ಲಾಗವೂ ಭವಭಾವಭಯಾತ್ = ಸಂಸಾರದ ಕರ್ಮದ ಭೀತಿಯು ದೆಸೆ ಯಿಂದ ಪಾತಾ [ಅಲಂ = ನಿವೃತ್ತಿಂ ? ಅಲಂ = ಪೂರ್ಣವಾಗಿ ಪಾತಾ = ರಕ್ಷಕನು] ಆಶು = ಶೀಘ್ರದಲಾಗಲಿ (?) [ಆಶು = ಶೀಘ್ರದಲ್ಲಿ ಭವ = ಆಗು]. ||೩೩||

ದೇವೇಶ = ದೇವರ್ಕಳಿಗೊಡೆಯನಹಂಥಾ ಹೇ ದೇವ = ಎಲೆ ದೇವನೆ ! ದೇವಾನಾಂ = ದೇವರ್ಕಳಿಗೆ ಅತಿದುರ್ಲಭಂ = ಹಡೆಯಲು ಬಾರದೇ ಇದ್ದಂಥಾ ಉತ್ತಮಂ = ಉತ್ಕೃಷ್ಟವಹಂಥಾ ತ್ವತ್ಪಾದಭೃತ್ಯಭೃತ್ಯಾನಾಂ = ನಿನ್ನ ಚರಣ ದಲ್ಲಿಯ ಸೇವಕರ ಸೇವಕರುಗಳ ಭೃತ್ಯಭೃತ್ಯತ್ವಂ = ಸೇವಕರುಗಳಿಗೆ ಭೃತ್ಯನಹತನ ವನು ಇಚ್ಛಾಮಿ = ಇಚ್ಛೈಸುತ್ತಿದ್ದೇನು. ||೩೪||

ಏವಂ = ಈ ಪ್ರಕಾರದಲ್ಲಿ ವಿಲಪಮಾನಃ = ವ್ಯಕ್ತವಾಗಿ ಸ್ತುತಿಮಾಡುತ್ತಿದ್ದಂಥಾ ಅಸೌ ಮಹಾಮುನಿಃ = ಈ ಸಾನಂದಮುನೀಶ್ವರನು [3]ಆನಂದಾಸ್ರಾವಿಲೇಕ್ಷಣಃ[3] =

---

* ವಸಂತತಿಲಕವೃತ್ತಮ್

1 ಸಖುತ್ವ (ಕ. ಘ. ಚ) 2 ಪಾತಾಲ (ಘ) ಪಾತಾಳ (ಕ. ಖ. ಚ) * ಮುಹುರ್ಮುನಿಃ (ಘ) 3 ದಾಶ್ರುವಿಲೋಚನಃ (ಕ) ಆನಂದಾಶ್ರುಗಳಿಂದ 'ಕದಡಲ್ಪಟ್ಟಂಥಾ' ನಯನಂ ಗಳನುಳ್ಳಾತನಾಗಿ (ಕ). ಆನಂದಾಸ್ರಾವಿಲೇಕ್ಷಣಃ (ಗ) ಅನಂದಾಶ್ರುವಿಲೇಕ್ಷಣಃ (ಖ) ವ್ಯಾಖ್ಯಾ, ಆನಂದಾಸ್ರವಿಲೇಕ್ಷಣಃ (ಖ) ಮೂಲ

ಸಾನಂದಂ ಸಾರ್ಥನಾಮಾನಂ ಪ್ರಣತಂ ಪರಮೇಶ್ವರಃ
ಆನಂದಕ್ಲಿನ್ನಸರ್ವಾಂಗಂ ದೃಷ್ಟ್ವಾ ತುಷ್ಟಮನಾ ಹ್ಯಭೂತ್ ॥೩೬॥

ಕರಾಭ್ಯಾಂ ಸುಶುಭಾಭ್ಯಾಂ ವೈ ದೇವದೇವ ಉಮಾಪತಿಃ
ಉತ್ಥಾಪ್ಯ ಮುನಿಮಾಘ್ರಾಯ[1]ಮೂರ್ಧನ್ಯೇವಮುವಾಚ ಹ ॥೩೭॥

ಜನ್ಮನಾ ಜರಯಾ ತ್ಯಕ್ತಃ ಸರ್ವದುಃಖವಿವರ್ಜಿತಃ
ಗಣೇಶ್ವರೋ ಮೇ ಸುರಪಸ್ಕಂದನಂದಿಸಮೋ ಭವ ॥೩೮॥

ಯತ್ರಾಹಂ ಸಂಸ್ಥಿತೋ ನಿತ್ಯಂ ಭವಾನ್ ತತ್ರಾಪಿ ಸಂಸ್ಥಿತಃ
ತ್ವಮೇವಾಹಮಹಂ ತ್ವಂ ವೈ ಭೇದೋ ನಾಸ್ತಿ ಸದಾಽಽವಯೋಃ ॥

---

ಆನಂದಾಶ್ರುಗಳಿಂದ ಕದಡಲ್ಪಟ್ಟಂಥಾ ನಯನಂಗಳನುಳ್ಳಾತನಾಗಿ ಶಂಭೋಃ = ಪರಮೇಶ್ವರನ ಪಾದಾಂಬುಜದ್ವಂದ್ವೇ = ಪದಕಮಲವೆರಡರಲ್ಲಿ ನಿಪಪಾತ = ಬಿದ್ದನು. ॥೩೫॥

ಪರಮೇಶ್ವರಃ = ಪರಮೇಶ್ವರನು ಪ್ರಣತಂ = ನಮಸ್ಕರಿಸಿದಂಥಾ ಆನಂದ-ಕ್ಲಿನ್ನಸರ್ವಾಂಗಂ = ಆನಂದದಿಂದ ನೆನೆಯಲ್ಪಟ್ಟ ಸರ್ವಾಂಗವನುಳ್ಳಂಥಾ ಸಾರ್ಥ-ನಾಮಾನಂ = ಸಾರ್ಥಕವಹ ನಾಮವನುಳ್ಳಂಥಾ ಸಾನಂದಂ = ಸಾನಂದ ಮುನಿ-ಯನು ದೃಷ್ಟ್ವಾ = ಕಂಡು ತುಷ್ಟಮನಾಃ = ಸಂತುಷ್ಟವಹಂಥಾ ಮನಸ್ಸ ನುಳ್ಳಾತನು ಅಭೂತ್ ಹಿ = ಆದನಲಾ. ॥೩೬॥

ದೇವದೇವಃ = ದೇವರ್ಕಳಿಗೆ ಒಡೆಯ (ದೇವ) ನಹಂಥಾ ಉಮಾಪತಿಃ = ಪಾರ್ವತೀಪತಿಯಹಂಥಾ ಶಿವನು ಸುಶುಭಾಭ್ಯಾಂ = ಅತ್ಯಂತ ಒಪ್ಪುತ್ತಂವಿದ್ದಂಥಾ ಕರಾಭ್ಯಾಂ ವೈ = ಹಸ್ತಂಗಳಿಂದವೇ ಮುನಿಂ = ಸಾನಂದಋಷಿಯನು ಉತ್ಥಾಪ್ಯ = ನೆಗಹಿ ಮೂರ್ಧನಿ = ಶಿರಸ್ಸಿನಲ್ಲಿ ಆಘ್ರಾಯ = ಆಘ್ರಾಣಿಸಿ ಏವಂ = ಈ ಪ್ರಕಾರದಲ್ಲಿ ಉವಾಚ ಹ = ನುಡಿದನು. ॥೩೭॥

ಜನ್ಮನಾ = ಉತ್ಪತ್ತಿಯಿಂದ ಜರಯಾ = ವೃದ್ಧಾಪ್ಯದಿಂದ ತ್ಯಕ್ತಃ = ಬಿಡಲುಪಟ್ಟಂಥಾ ಸರ್ವದುಃಖವಿವರ್ಜಿತಃ = ಸಮಸ್ತ ದುಃಖಂಗಳಿಂದ ಬಿಡಲು ಪಟ್ಟಂಥಾ ಆತನಾಗಿ ಸುರಪ-ಸ್ಕಂದ-ನಂದಿಸಮಃ = ಸುರಪಸ್ಕಂದ ನಂದಿಕೇಶ್ವರಂಗೆ ಸಮಾನಹಂಥಾ ಮೇ = ಎನ್ನ ಗಣೇಶ್ವರಃ = ಗಣೇಶ್ವರನು ಭವ = ಆಗು. ॥೩೮॥

ಯತ್ರ = ಆವುದಾನೊಂದು ಠಾವಿನಲ್ಲಿ ಅಹಂ = ನಾನು ಸಂಸ್ಥಿತಃ = ಇಹೆನು ಭವಾನ್ = ನೀನು ತತ್ರಾಪಿ = ಆ ಠಾವಿನಲ್ಲಿಯೂ ನಿತ್ಯಂ = ಆವಾಗವು ಸಂಸ್ಥಿತಃ

---

1 ಮೂರ್ಧ್ನಿ ಚೈವಮುವಾಚ ಹ (ಘ)

ಸಮಃ ಶಕ್ತಿಪ್ರಭಾವಾಭ್ಯಾಂ ಮಯಾ ಸುಖಮಿಹಾವಸ
ಏವಂ ತಮನುಗೃಹ್ಯೇಶಃ ಸಾನಂದಂ ಗಣನಾಯಕಮ್ ||
ಸೋಮೋ ಗಣೇಶ್ವರೈಸ್ಸಾರ್ಧಂ ತತ್ರೈವಾಂತರಧೀಯತ ||೪೦||

ತತಃ ಪ್ರಭೃತಿ ದೇವೇಶಂ ಶಂಕರಂ ಶಶಿಭೂಷಣಮ್
ಅರ್ಚಯಾಮಾಸ ಸತತಂ ಪೂರ್ಣವಿತ್ತಸುತೋ ಮಹಾನ್ ||೪೧||

ಪ್ರಾತಃ ಸ್ನಾತ್ವಾ ಶಿವಂ ಪೂಜ್ಯ ಶ್ರುತ್ವಾ ಸರ್ವಶಿವಾಗಮಾನ್
ಮಧ್ಯಾಹ್ನೇ [1]ಶಿವಭಕ್ತಾಂಸ್ತು[1] [2]ಭೋಜಯಿತ್ವಾ[2] ಸಮಶ್ನುತೇ ||೪೨||

---

= ಇಹಾತನು. ತ್ವಮೇವ = ನೀನೇ ಅಹಂ = ನಾನು ತ್ವಂ ವೈ = ನೀನೇ ಅಹಂ = ನಾನು ಆವಯೋಃ = ನಮ್ಮಿಬ್ಬರಿಗೆ ಭೇದಃ = ಭೇದವು ಸದಾ = ಎಲ್ಲಾಗವೂ ನಾಸ್ತಿ = ಇಲ್ಲ. ||೩೯||

ಶಕ್ತಿಪ್ರಭಾವಾಭ್ಯಾಂ = ಸತ್ತ್ವಸಾಮರ್ಥ್ಯಂಗಳಿಂದ ಮಯಾ = ಎನ್ನೊಡನೆ ಸಮಃ = ಸಮಾನನಾಗಿ ಇಹ = ಈ ಲೋಕದಲ್ಲಿ ಸುಖಂ = ಸುಖವಾಗಿ ಆವಸ = ಇರು. ವಸ—ನಿವಾಸೇ ಇತಿ ಧಾತುಃ ಏವಂ = ಈ ಪ್ರಕಾರದಲ್ಲಿ ಸೋಮಃ = ಉಮೆಯಿಂದ ಸಹಿತನಹಂಥಾ ಈಶಃ = ಪರಮೇಶ್ವರನು ಗಣನಾಯಕಂ = ಗಣೇಶ್ವರನಹಂಥಾ ತಂ = ಆ ಸಾನಂದಂ = ಸಾನಂದ ಋಷೀಶ್ವರನನು ಅನುಗೃಹ್ಯ = ಪತಿಕರಿಸಿ ಗಣೇಶ್ವರೈಸ್ಸಾರ್ಧಂ = ಗಣೇಶ್ವರರುಗಳಿಂದ ಸಹಿತವಾಗಿ ತತ್ರೈವ = ಅಲ್ಲಿಯೇ ಅಂತರಧೀಯತ = ಮಾಯವಾದನು. ||೪೦||

ತತಃಪ್ರಭೃತಿ = ಅಂದು ಮೊದಲುಗೊಂಡು ಮಹಾನ್ = ಮಹಾನ್ನುವಹಂಥಾ ಪೂರ್ಣವಿತ್ತಸುತಃ = ಪೂರ್ಣವಿತ್ತಋಷಿಯ ಪುತ್ರನಹಂಥಾ ಸಾನಂದಮುನಿ ದೇವೇಶಂ = ದೇವರ್ಕಳಿಗೊಡೆಯನಹಂಥಾ ಶಶಿಭೂಷಣಂ = ಚಂದ್ರಭೂಷಣನಹಂಥಾ ಶಂಕರಂ = ಸುಖವನು ಮಾಡುತ್ತಿದ್ದಂಥಾ ಶಿವನನು ಸತತಂ = ಆವಾಗವೂ ಅರ್ಚಯಾಮಾಸ = ಅರ್ಚಿಸಿದನು. ಅರ್ಚ—ಪೂಜಾಯಾಂ ಇತಿ ಧಾತುಃ. ||೪೧||

ಪ್ರಾತಃ = ಉದಯದಲ್ಲಿ ಸ್ನಾತ್ವಾ = ಸ್ನಾನವ ಮಾಡಿ ಶಿವಂ = ಶಿವನನು ಪೂಜ್ಯ = ಪೂಜಿಸಿ ಸರ್ವಶಿವಾಗಮಾನ್ = ಸಮಸ್ತಶಿವಾಗಮಂಗಳನು ಶ್ರುತ್ವಾ = ಕೇಳಿ ಮಧ್ಯಾಹ್ನೇ = ಮಧ್ಯಾಹ್ನದಲ್ಲಿ ಶಿವಭಕ್ತಾಂಸ್ತು = ಶಿವಭಕ್ತರುಗಳನು ಶ್ರುತ್ವಾ = ಕೇಳಿ ಮಧ್ಯಾಹ್ನೇ = ಮಧ್ಯಾಹ್ನದಲ್ಲಿ ಶಿವಭಕ್ತಾಂಸ್ತು = ಶಿವಭಕ್ತರು

---

[1] ಶಿವಭಕ್ತಾಂಶ್ಚ (ಘ) [2] ಪ್ರಣವಂ ಪಿಠಿತ್ವಾ (ಗ)

ರುದ್ರಾವತಾರಕ್ರೀಡಾದಿವಾರ್ತಾಮೃತರಸೋತ್ತಮಮ್
[1]ಅಪರಾಹ್ಣೇ[1] ಶಿವಂ ಪೀತ್ವಾ ಕಾಲಯಾತ್ರಾಮಥಾಕರೋತ್ ||೪೩||

ಕದಾಚಿಚ್ಛಿವಧರ್ಮಾದಿಶಾಸ್ತ್ರಾಖ್ಯಾನಕಥಾಸು ಚ
ನರಕಾನ್ನರಕಸ್ಥಾಂಶ್ಚ ನರಕೇಷು ಚ ಯಾತನಾಃ ||
ಶ್ರುತವಾನ್ ಶ್ರುತಿಸಾರಜ್ಞಃ ಶ್ರುತ್ವಾ ದ್ರಷ್ಟುಮನಾ ಹ್ಯಭೂತ್ ||೪೪||

* ವಿಮಾನಮಾರುಹ್ಯ ಮುನಿಃ ಪ್ರಭಾಸುರಂ
ಮುನೀಶ್ವರೈಃ ಕಿನ್ನರಸಾಧ್ಯಚಾರಣೈಃ ||
ಗಣೇಶ್ವರೈಃ ರುದ್ರಗಣೈಸ್ಸಮಾವೃತೋ
ಗಣೇಶ್ವರಸ್ಸತ್ವರಿತಂ ಜಗಾಮ ಸಃ ||೪೫||

---

ಗಳನು ಭೋಜಯಿತ್ವಾ = ಭೋಜನವ ಮಾಡಿಸಿ ಸಮಶ್ನುತೇ = ಆರೋಗಣೆಯ ಮಾಡುತ್ತಿಹನು. ||೪೨||

ಅಪರಾಹ್ಣೇ = ಸಾಯಂಕಾಲದಲ್ಲಿ ಶಿವಂ = ಮಂಗಳವಹಂಥಾ, ರುದ್ರಾವತಾರ ಕ್ರೀಡಾದಿವಾರ್ತಾಮೃತರಸೋತ್ತಮಂ = ಪರಮೇಶ್ವರನ ಅವತಾರ ಕ್ರೀಡೆ ಮೊದಲ-ಹಂಥಾ ಕಥಾಮೃತರಸದ ಅತಿಶಯವನು ಪೀತ್ವಾ = ಪಾನವ ಮಾಡಿ ಅಥ = ಅನಂತರದಲ್ಲಿ ಕಾಲಯಾತ್ರಾಂ = ಕಾಲವ ಕಳಿಹವನು ಅಕರೋತ್ = ಮಾಡಿದನು ||೪೩||

ಕದಾಚಿತ್ = ಒಂದಾನೊಂದು ವೇಳೆಯಲ್ಲಿ ಶಿವಧರ್ಮಾದಿಶಾಸ್ತ್ರಾಖ್ಯಾನ-ಕಥಾಸು ಚ = ಶಿವಧರ್ಮ ಮೊದಲಾಗಿದ್ದಂಥಾ ಶಾಸ್ತ್ರಂಗಳಲ್ಲಿ ಹೇಳಲ್ಪಟ್ಟ ಕಥೆಗಳಲ್ಲಿಯೂ ನರಕಾನ್ = ನರಕಂಗಳನು ನರಕಸ್ಥಾಂಶ್ಚ = ನರಕದಲ್ಲಿ ಇದ್ದವರುಗಳನು ನರಕೇಷು = ನರಕಂಗಳಲ್ಲಿಯ ಯಾತನಾಶ್ಚ = ಯಾತನೆಗಳನು ಶ್ರುತ್ವಾ = ಕೇಳಿ ಶ್ರುತವಾನ್ = ಶಾಸ್ತ್ರವನುಳ್ಳಂಥಾ ಶ್ರುತಿಸಾರಜ್ಞಃ = ವೇದದ ಸಾರವನು ಬಲ್ಲಂಥಾ ಸಾನಂದ ಋಷೀಶ್ವರನು ದ್ರಷ್ಟುಮನಾಃ = ನೋಡಲಿಚ್ಛೆಯನುಳ್ಳಾತನು ಅಭೂದ್ಧಿ = ಆದನಲಾ

ಗಣೇಶ್ವರಃ = ಗಣೇಶ್ವರನಹಂಥಾ ಸಃ ಮುನಿಃ = ಆ ಸಾನಂದ ಮಹಾಋಷಿ ಪ್ರಭಾಸುರಂ = ಅತ್ಯಂತ ಒಪ್ಪುತ್ತಂವಿದ್ದಂಥಾ ವಿಮಾನಂ = ಪುಷ್ಪಕವನು ಆರುಹ್ಯ = ಏರಿ ಮುನೀಶ್ವರೈಃ = ಋಷೀಶ್ವರರುಗಳಿಂದ ಕಿನ್ನರಸಿದ್ಧಚಾರಣೈಃ = ಕಿನ್ನರರು ಸಿದ್ಧರು ಚಾರಣರುಗಳಿಂದ ಗಣೇಶ್ವರೈಃ = ಗಣೇಶ್ವರರುಗಳಿಂದ ರುದ್ರಗಣೈಃ = ರುದ್ರಗಣಂಗಳಿಂದ ಸಮಾವೃತಃ = ಲೇಸಾಗಿ ಮುಸುಕಲ್ಪಟ್ಟಾತನಾಗಿ ಸತ್ವರಿತಂ

---

1 ಅಪ ಏವ (ಗ) * ಅನುಷ್ಟುಪ್‌ಛಂದದಲ್ಲಿಯು ಉಪೇಂದ್ರವಜ್ರಾವೃತ್ತಂ ||

ರುದ್ರಕನ್ಯಾಗಣೈಸ್ಸರ್ವೈರಪ್ಸರೋಭಿಶ್ಚ ಸರ್ವಶಃ
ಗೀಯಮಾನಃ ಸ ಪುಣ್ಯಾತ್ಮಾ [1]ಧೂಯಮಾನ[1]ಸ್ಸ ಚಾಮರೈಃ ||೪೬||

ವಿಮಾನೈಃ ಸೇವ್ಯಮಾನಶ್ಚ ದೇವದೇವ ಇವಾಪರಃ
ಧರ್ಮರಾಜಪುರಂ[2]ಪ್ರಾಪ್ತಃ[2] ಧರ್ಮವೃದ್ಧ್ಯರ್ಥಮವ್ಯಯಃ ||೪೭||

ಧರ್ಮರಾಜೋಽಪಿ ತಂ ದೃಷ್ಟ್ವಾ ಧರ್ಮವೃದ್ಧಂ ಗಣೇಶ್ವರಮ್
ಅಭ್ಯುತ್ಥಾಯ ನಮಸ್ಕೃತ್ಯ ಪಾದ್ಯಾರ್ಘ್ಯೈರಭ್ಯಪೂಜಯತ್ ||೪೮||

---

= ವೇಗದಿಂದ ಸಹಿತ ಹೇಗಹುದು ಹಾಂಗೆ (ಸಹಿತವೆಹಗಹುದಹಗೆ) ಜಗಾಮ = ಎಯ್ದಿದನು. ಗಮ್ಲೃ-ಗತೌ ಎಂಬ ಧಾತು. ||೪೫||

ಸಚಾಮರೈಃ = ಚಾಮರಂಗಳಿಂದ ಸಹಿತವಹಂಥಾ ಸರ್ವೈಃ = ಸಮಸ್ತವ-ಹಂಥಾ ರುದ್ರಕನ್ಯಾಗಣೈಃ = ರುದ್ರಕನ್ನಿಕೆಯರುಗಳ ಮೊತ್ತಂಗಳಿಂದ ಧೂಯ-ಮಾನಃ = ಚಾಮರವನಿಕ್ಕಿಸಿಕೊಳುತ್ತಿದ್ದಂಥಾ ಸರ್ವಶಃ ಅಪ್ಸರೋಭಿಶ್ಚ = ಸಮಸ್ತ ಅಪ್ಸರ ಸ್ತ್ರೀಯರುಗಳಿಂದವೂ ಗೀಯಮಾನಃ = ಹಾಡಿಸಿಕೊಳುತ್ತಿದ್ದಂಥಾ ಪುಣ್ಯಾತ್ಮಾ = ಪುಣ್ಯಶರೀರಿಯಹಂಥಾ ಸಃ = ಆ ಸಾನಂದ ಮಹಾ ಋಷಿಯು, ||೪೬||

ವಿಮಾನೈಃ = ಪುಷ್ಪಕಂಗಳಿಂದ ಸೇವ್ಯಮಾನಃ = ಓಲೈಸಿಕೊಳಲುಪಟ್ಟಂಥಾತ ನಾಗಿ ಅಪರಃ = ಎರಡನೆಯ ದೇವದೇವ ಇವ = ಶಿವನಕ್ಕೈ ಎಂಬ ಹಾಂಗಿದ್ದಂಥಾ ಅವ್ಯಯಶ್ಚ = ನಿತ್ಯನಹಂಥಾ ಸಾನಂದಋಷೀಶ್ವರನು ಧರ್ಮವೃದ್ಧ್ಯರ್ಥಂ = ಧರ್ಮದ ಬೆಳವಿಗೆಗೋಸ್ಕರ ಧರ್ಮರಾಜಪುರಂ = ಯಮನ ಪಟ್ಟಣವನು ಪ್ರಾಪ್ತಃ = ಎಯ್ದಿದನು. ||೪೭||

ಧರ್ಮರಾಜೋಽಪಿ = ಧರ್ಮರಾಜನು ಧರ್ಮವೃದ್ಧಂ = ಧರ್ಮದಿಂದ ವೃದ್ಧನಹಂಥಾ ಗಣೇಶ್ವರಂ = ಗಣಂಗಳಿಗೆ ಒಡೆಯನಹಂಥಾ ತಂ = ಆ ಸಾನಂದ-ಋಷೀಶ್ವರನನು ದೃಷ್ಟ್ವಾ = ಕಂಡು ಅಭ್ಯುತ್ಥಾಯ = ಇದಿರೆದ್ದು ನಮಸ್ಕೃತ್ಯ = ನಮಸ್ಕರಿಸಿ ಪಾದ್ಯಾರ್ಘ್ಯೈಃ = ಪಾದ್ಯ ಅರ್ಘ್ಯಂಗಳಿಂದ ಅಭ್ಯಪೂಜಯತ್ = ಪೂಜಿಸಿದನು. ||೪೮||

---

[1] ದೋಯಮಾನ (ಘ)

[2] ಪ್ರಾಪ (ಗ)

ಪೂಜಯಿತ್ವಾ ಸುಖಾಸೀನಂ ಗಣೇಶಾನಂ [1]ಗಣಾಗ್ರಣೀಂ[1]
ವಿನಯಪ್ರತಿಪತ್ತ್ಯರ್ಥಮಿದಂ ವಾಕ್ಯಮುವಾಚ ಹ ॥೪೯॥

ಯಮ ಉವಾಚ

ಅಹಂ ಪುಣ್ಯಕೃತಾಂ ಮಧ್ಯೇ ಗಣಿತೋ ಗಣನಾಯಕ !
ತವ ದೃಷ್ಟಿನಿಪಾತೇನ ಪೂತೋ ಭೂತಿವಿಭೂಷಣ ! ॥೫೦॥

ಅಹಂ ಹಿ ಪರಮೇಶೇನ ಲೋಕಕರ್ತ್ರಾ ಪಿನಾಕಿನಾ
ಪ್ರಾಯೇಣಾನುಗೃಹೀತೋ ವೈ ಭವಾನ್ಯಸ್ಮಾತ್ಸಮಾಗತಃ ॥೫೧॥

---

ಪೂಜಯಿತ್ವಾ = ಪೂಜಿಸಿ ಸುಖಾಸೀನಂ = ಸುಖದಲ್ಲಿ ಕುಳ್ಳಿದ್ದಂಥಾ ಗಣೇಶಾನಂ = ಗಣೇಶ್ವರನಹಂಥಾ [2]ಗಣಾಗ್ರಣೀಂ[2] = ಗಣಂಗಳಿಗೆ ಮುಖ್ಯನಹಂಥಾ ಸಾನಂದ ಋಷಿಯನು ಕುರಿತು ವಿನಯಪ್ರತಿಪತ್ತ್ಯರ್ಥಂ = ವಿನಯದ ವರ್ತನೆ ಗೋಸ್ಕರ ಇದಂ ವಾಕ್ಯಂ = ಈ ವಾಕ್ಯವನು ಉವಾಚ ಹ = ನುಡಿದನು. ॥೪೯॥

ಪ್ರತಿಪತ್ತಿಶಬ್ದವು ವರ್ತನೆಯಲ್ಲಿ ವರ್ತಿಸುವುದು 'ಪ್ರತಿಪತ್ತಿಃ ಪದಪ್ರಾಪ್ತೌ ಪ್ರವೃತ್ತೌ ಗೌರವೇಽಪಿ ಚ' ಇತಿ ವಿಶ್ವಪ್ರಕಾಶಃ

ಯಮ ಉವಾಚ—ಯಮನು ನುಡಿವುತ್ತಿದ್ದಾನು.

ಭೂತಿವಿಭೂಷಣ! = ವಿಭೂತಿಭೂಷಣನಹಂಥಾ ಭೋ ಗಣನಾಯಕ ! = ಎಲೈ ಗಣಶ್ರೇಷ್ಠನಹುಥಾ ಸಾನಂದ ಮಹಾಋಷಿಯೆ ! ತವ = ನಿನ್ನ ದೃಷ್ಟಿ-ನಿಪಾತೇನ = ದೃಷ್ಟಿ ಬಿದ್ದದ್ದರಿಂದ ಅಹಂ = ನಾನು ಪೂತಃ = ಪಾವನನು. ಪುಣ್ಯ-ಕೃತಾಂ = ಪುಣ್ಯವನು ಮಾಡಿದಂಥಾವರುಗಳ ಮಧ್ಯೇ = ಮಧ್ಯದಲ್ಲಿ ಗಣಿತಃ = ಯೋಗ್ಯನಹಂಥಾ ಆತನು. ॥೫೦॥

ಯಸ್ಮಾತ್ = ಆವುದಾನೊಂದು ಕಾರಣವಾಗಿ ಭವಾನ್ = ನೀನು ಸಮಾಗತಃ = ಬಿಜಯಂಗೆಯ್ದೆ. ಲೋಕಕರ್ತ್ರಾ = ಲೋಕಕ್ಕೆ ಒಡೆಯನಂಥಾ ಪಿನಾಕಿನಾ = ಪಿನಾಕವನುಳ್ಳಂಥಾ ಪರಮೇಶೇನ = ಪರಮೇಶ್ವರನಿಂದ ಅಹಂ = ನಾನು ಪ್ರಾಯೇಣ = ಸ್ವಭಾವದಿಂದ ಅನುಗೃಹೀತೋ ವೈಹಿ = ಅನುಗ್ರಹಿಸಲುಪಟ್ಟಾತನಲಾ ಪತಿಕರಿಸಲ್ಪಟ್ಟೆನೆಂಬುದರ್ಥ. ॥೫೧॥

---

[1,2] ಗಣಾಗ್ರಣೀಃ (ಖ.ಗ) ಆರ್ಷೇಯಪ್ರಯೋಗಃ ಗ್ರಣಾಗ್ರಣೀಂ (ಕ)

*ಕೃತಂ ಪುಣ್ಯಂ ಕರಿಷ್ಯಾಮಿ ಕ್ರಿಯತೇ ವಾಽಧುನಾ ತಥಾ
ಅಪುಣ್ಯಕೃದ್ಭಿರಪ್ರಾಪ್ಯೋ ಯಸ್ಮಾತ್ತ್ವಂ ಸಮುಪೇಯಿವಾನ್ ||೫೨||

ಶರೀರಸ್ಥೋಽಪ್ಯಹಂ ಜಾತೋ ಭವದಾನಂದದರ್ಶನಾತ್
ಸಾಕ್ಷಾತ್ತ್ರೈಲೋಕ್ಯನಾಥಸ್ಯ ಶಂಭೋರಿವ ಸಮಾಗಮಃ ||೫೩||

ಕಿಂ ಕರ್ತವ್ಯಂ ಮಯಾ ನಾಥ ತ್ವದಾಜ್ಞಾವಶವರ್ತಿನಾ
[1]ನಿಗದ ತ್ವಂ[1] ತಮೇವಂ ವೈ [2]ಜಗದಾನಂದಕಾರಣಮ್[2] ||೫೪||

ಸಾನಂದೋ ವಚನಂ ಪ್ರಾಹ ವಚಸಾಽಽನಂದಯನ್ನಿವ ||೫೫||

---

ಯಸ್ಮಾತ್ = ಆವುದಾನೊಂದು ಕಾರಣವಾಗಿ ಸಮುಪೇಯಿವಾನ್ = ಬಿಜಯಂಗೆಯ್ದಂಥಾ ತ್ವಂ = ನೀನು ಅಪುಣ್ಯಕೃದ್ಭಿಃ = ಪಾಪವ ಮಾಡಿದವರುಗಳಿಂದ ಅಪ್ರಾಪ್ಯಃ = ಹಡೆಯಲು ಬಾರದಾತನಾಗಿ ಕ್ರಿಯತೇ = ಮಾಡಲ್ಪಟ್ಟಾತನು. ತಥಾ = ಹಾಂಗೆ ಅಧುನಾ = ಈಗಳು ಪುಣ್ಯಂ = ಪುಣ್ಯವನು ಕೃತಂ = ಮಾಡಲ್ಪಟ್ಟಾತನಾಗಿ ಕರಿಷ್ಯಾಮಿ = ಮಾಡೇನು. ||೫೨||

ಅಹಂ = ನಾನು ಶರೀರಸ್ಥೋಽಪಿ = ಶರೀರದಲ್ಲಿದ್ದಾತನಾಯಿತ್ತಾದರೂ ಭವದಾನಂದದರ್ಶನಾತ್ = ನಿನ್ನ ಆನಂದವಹ ದರ್ಶನದ ದೆಸೆಯಿಂದ ಜಾತಃ = ಹುಟ್ಟಿದಾತನು. ತ್ರೈಲೋಕ್ಯನಾಥಸ್ಯ = ತ್ರೈಲೋಕಕ್ಕೆ ಒಡೆಯನಹಂಥಾ ಸಾಕ್ಷಾತ್ = ಪ್ರತ್ಯಕ್ಷವಹ ಶಂಭೋಃ = ಪರಮೇಶ್ವರನ ಸಮಾಗಮ ಇವ = ಬರವಕ್ಕೈ ಎಂಬ ಹಾಂಗಾಯಿತ್ತು. ||೫೩||

ಭೋ ನಾಥ = ಎಲೈ ಒಡೆಯನೇ! ತ್ವದಾಜ್ಞಾವಶವರ್ತಿನಾ = ನಿನ್ನಾಜ್ಞೆಯ ವಶವರ್ತಿಯಹಂಥಾ ಮಯಾ = ಎನ್ನಿಂದ ಕರ್ತವ್ಯಂ = ಮಾಡಬೇಕಾದಂಥಾದು ಕಿಂ = ಏನು? ಜಗದಾನಂದಕಾರಣಂ = ಲೋಕಕ್ಕೆ ಆನಂದವ ಮಾಡುತ್ತಂವಿದ್ದಂಥಾ ತಂ ವೈ = ಆ ಕಾರ್ಯವನೆ ತ್ವಂ = ನೀನು ಏವಂ = ಈ ಪ್ರಕಾರವೆಂದು ನಿಗದ = ಹೇಳು. ಗದ–ವ್ಯಕ್ತಾಯಾಂ ವಾಚಿ ಇತಿ ಧಾತುಃ ||೫೪||

ಸಾನಂದಃ = ಸಾನಂದ ಋಷಿಯು ವಚಸಾ = ವಾಕ್ಯದಿಂದ ಆನಂದಯನ್ನಿವ = ಸಂತೋಷವಹ ಹಾಂಗೆ ವಚನಂ = ವಾಕ್ಯವನು ಪ್ರಾಹ = ನುಡಿದನು. ||೫೫||

---

* ''ಪುಣ್ಯಮಾಡದವರಿಗೆ ಅಲಭ್ಯರಾದ ನೀವು ಇಲ್ಲಿಗೆ ದಯಮಾಡಿಸಿರುವುದರಿಂದ ನನ್ನಿಂದ ಪುಣ್ಯ ಮಾಡಲ್ಪಟ್ಟಿತ್ತು ಅಥವಾ ಪುಣ್ಯವನ್ನು ಮುಂದಾದರೂ ಮಾಡತಕ್ಕವನು. ಅಥವಾ ಈಗ ಪುಣ್ಯವನ್ನು ಮಾಡುತ್ತಿದ್ದೇನೆ ಎಂಬ ಅಭಿಪ್ರಾಯ ಸೂಕ್ತವೆನಿಸುತ್ತದೆ.

1 ನಿಗದ್ಯತಾಂ (ಘ) ನಿಗದತ್ವಂ ತದೇವಂ (ಗ) 2 ಜಗದಾನಂದಕಾರಣ (ಘ)

ಸಾನಂದ ಉವಾಚ

ತ್ವಮೇವ ಧರ್ಮರಾಜೋಽವೈ[1] ದಕ್ಷಃ ಪಾಪವಿಶೋಧನೇ
[2]ಲಬ್ಧಪ್ರಸಾದೋ ಭಗವನ್[2] ಶಿವಾತ್ಸರ್ವಸುರಾಧಿಪಾತ್ ||೫೬||

ತ್ವತ್ತೋಽನ್ಯಃ ಕಃ ಪುಮಾನ್ ಲೋಕೇ ಧರ್ಮಸ್ಥಿತಿಮಥಾಚರೇತ್

ಯಮ ಉವಾಚ

ನೂನಂ ಭಗವತಾ ತೇನ ಲೋಕಕರ್ತ್ರಾ ಪಿನಾಕಿನಾ
ಕೃತಾನುಗ್ರಹ ಏವಾಹಂ ಯತ್ತ್ವಯೈವಂ ಪ್ರಭಾಷಿತಃ ||೫೮||

ತ್ವಾದೃಶಾ ನ ಹಿ ಯೋಗೀಂದ್ರಾಃ ಸತ್ಯಧರ್ಮಪರಾಯಣಾಃ
ಶಿವಾಗಮಾರ್ಥಸಾರಜ್ಞಾಃ [3]ಸೂನೃತಂ ಭಾಷಿತುಂ[3] ಕ್ಷಮಾಃ ||೫೯||

---

ಸಾನಂದ ಉವಾಚ—ಸಾನಂದ ಮಹಾಋಷಿ ನುಡಿವುತ್ತಿದ್ದಾನು.

ಹೇ ಭಗವನ್=ಎಲೆ ಸಾಮರ್ಥ್ಯವನುಳ್ಳಂಥಾ ಆತನೆ ತ್ವಮೇವ = ನೀನೇ ಧರ್ಮರಾಜೋ ವೈ=ಧರ್ಮರಾಯನು. ಪಾಪವಿಶೋಧನೇ=ಪಾಪಂಗಳ ಶುದ್ಧವ ಮಾಡುವಲ್ಲಿ ಸರ್ವಸುರಾಧಿಪಾತ್ = ಸಮಸ್ತ ದೇವರ್ಕಳಿಗೆ ಒಡೆಯನಹಂಥಾ ಶಿವಾತ್=ಪರಮೇಶ್ವರನ ದೆಸೆಯಿಂದ ಲಬ್ಧಪ್ರಸಾದಃ=ಹಡೆಯಲ್ಪಟ್ಟ ಪ್ರಸನ್ನತಿಕೆ ಯನುಳ್ಳಂಥಾ ದಕ್ಷಃ=ಸಮರ್ಥನು. ||೫೬||

ಅಥ=ಅನಂತರದಲ್ಲಿ ಲೋಕೇ=ಲೋಕದಲ್ಲಿ ಧರ್ಮಸ್ಥಿತಿಂ = ಧರ್ಮದ ನಿರ್ಣಯವನು ತ್ವತ್ತಃ = ನಿನ್ನಿಂದಲು ಅನ್ಯಃ ಪುಮಾನ್ = ಮತ್ತೊಬ್ಬ ಪುರುಷನು ಕಃ=ಆವಾತನು ಆಚರೇತ್=ಆಚರಿಸುವನು? ನೀನೇ ಆಚರಿಸುವ ನೆಂಬುದರ್ಥ. ||೫೭||

ಯಮ ಉವಾಚ—ಯಮನು ನುಡಿವುತ್ತಿದ್ದಾನು.

ಯತ್=ಆವುದಾನೊಂದು ಕಾರಣವಾಗಿ ತ್ವಯಾ=ನಿನ್ನಿಂದ ಏವಂ=ಈ ಪ್ರಕಾರದಲ್ಲಿ ಪ್ರಭಾಷಿತಃ = ನುಡಿಯಲುಪಟ್ಟಂಥಾ ಅಹಂ ಏವ = ನಾನೇ ಭಗವತಾ = ಷಡ್ಗುಣೈಶ್ವರ್ಯಸಂಪನ್ನನಹಂಥಾ ಲೋಕಕರ್ತ್ರಾ = ಲೋಕಕ್ಕೆ ಒಡೆಯನಹಂಥಾ ತೇನ ಪಿನಾಕಿನಾ=ಆ ಪರಮೇಶ್ವರನಿಂದ ನೂನಂ = ಅತ್ಯಂತ ವಾಗಿ ಕೃತಾನುಗ್ರಹಃ=ಮಾಡಲ್ಪಟ್ಟ ಪತಿಕರಣೆಯನುಳ್ಳಾತನು. ||೫೮||

ಸತ್ಯಧರ್ಮಪರಾಯಣಾಃ = ಸತ್ಯ ಧರ್ಮಂಗಳಲ್ಲಿ ತಾತ್ಪರ್ಯವೆನುಳ್ಳಂಥಾ ಶಿವಾಗಮಾರ್ಥಸಾರಜ್ಞಾಃ = ಶಿವಾಗಮಂಗಳ ಅರ್ಥದ ಸಾರವನ್ನು ಬಲ್ಲಂಥಾ

---

[1] ಹಿ (ಘ) [2] ಲಬ್ಧಪ್ರಸಾದೋಽಹಿ ಭವಾನ್ (ಘ) [3] ಸೂನೃತಾಭಾಷಣ (ಘ)

ದರ್ಶನೇನ ಕೃತಾರ್ಥೋಽಹಂ ಕೃತಃ ಕೃತಿಮತಾಂ ವರ
ತಥಾಽಪಿ ನಿಃಸ್ಪೃಹಸ್ಯೇಹ ಕಿಂ ತವಾಸ್ತಿ ಪ್ರಯೋಜನಮ್ ||೬೦||

ಸಾನಂದ ಉವಾಚ

ಶೈವೇ ಪುರಾಣೇಽಥ ಮಯಾ ನರಕಾಖ್ಯಾನವರ್ಣನೇ
[1]ನರಕಾನ್[1] ನರಕಸ್ಥಾಂಶ್ಚ ಶ್ರುತ್ವಾ ತತ್ರ ಕುತೂಹಲೀ ||೬೧||

ದ್ರಷ್ಟುಮಾಗತವಾನಸ್ಮಿ ನರಕಾನ್ ನರಕಾಲಯಾನ್
ತ್ವನ್ಮುಖೇನ ಮಹಾಬಾಹೋ ಕ್ಷಿಪ್ರಮೇವ ಪ್ರದರ್ಶಯ ||೬೨||

---

ಸೂನೃತಂ=ಮೃದುವಾಕ್ಯವನು ಭಾಷಿತುಂ=ನುಡಿಯಲು ಕ್ಷಮಾಃ=ಸಮರ್ಥರಹಂಥಾ ತ್ವಾದೃಶಾಃ=ನಿನ್ನೋಪಾದಿಯಹಂಥಾ ಯೋಗೀಂದ್ರಾಃ=ಯೋಗೀಶ್ವರರುಗಳು ನಹಿ=ಇಲ್ಲವಲಾ. ||೫೯||

ಕೃತಿಮತಾಂ=[2]ಸುಕೃತವ ಮಾಡಿದಂಥಾ[2]ವರುಗಳಿಗೆ ವರಃ=ಶ್ರೇಷ್ಠನಹಂಥಾ ಸಾನಂದಮುನೀಶ್ವರನೆ! ತವ=ನಿನ್ನ ದರ್ಶನೇನ=ದರ್ಶನದಿಂದ ಅಹಂ=ನಾನು ಕೃತಾರ್ಥಃ=ಕೃತಾರ್ಥನಾಗಿ ಕೃತಃ=ಮಾಡಲ್ಪಟ್ಟಾತನು. ತಥಾಽಪಿ=ಹೀಂಗಾಯಿತ್ತಾದರೂ ನಿಸ್ಪೃಹಸ್ಯ=ನಿಸ್ಪೃಹನಹಂಥಾ ತವ=ನಿನಗೆ ಇಹ=ಈ ನನ್ನ ಲೋಕವಲ್ಲಿ ಪ್ರಯೋಜನಂ=ಪ್ರಯೋಜನವು ಕಿಮಸ್ತಿ=ಏನುಂಟು? ಸಾನಂದ ಉವಾಚ—ಸಾನನಂದಮಹಾ ಋಷಿ ನುಡಿವುತ್ತಿದ್ದಾನು.

ಅಥ=ಅನಂತರದಲ್ಲಿ ಶೈವೇ ಪುರಾಣೇ=ಶಿವಪುರಾಣದಲ್ಲಿ ನರಕಾಖ್ಯಾನ-ವರ್ಣನೇ=ನರಕಂಗಳ ಹೆಸರ ವರ್ಣಿಸುವಲ್ಲಿ ನರಕಾನ್=ನರಕಂಗಳನು ನರಕ-ಸ್ಥಾಂಶ್ಚ=ನರಕದಲ್ಲಿ ಇದ್ದಂಥಾವರುಗಳನು ಮಯಾ=ಎನ್ನಿಂದ ಶ್ರುತ್ವಾ=ಕೇಳಿ ತತ್ರ=ಅಲ್ಲಿ ಕುತೂಹಲೀ=ಆಶ್ಚರ್ಯವನುಳ್ಳಾತನಾಗಿ, ||೬೧||

ನರಕಾನ್=ನರಕಂಗಳನು ನರಕಾಲಯಾನ್=ನರಕದಲ್ಲಿ ಇದ್ದಂಥಾವರುಗಳನು ದ್ರಷ್ಟುಂ=ನೋಡಲು ಆಗತವಾನ್=ಬಂದಾತನು ಅಸ್ಮಿ=ಆಗುತ್ತಿದ್ದೇನು. ಮಹಾಬಾಹೋ!=ಎಲೈ ದೊಡ್ಡಿಹ ಭುಜಂಗಳನುಳ್ಳಾತನೆ! ತ್ವನ್ಮುಖೇನ=ನಿನ್ನ ಮುಖದಿಂದ ಕ್ಷಿಪ್ರಮೇವ=ಬೇಗವೇ ಪ್ರದರ್ಶಯ=ತೋರಿಸು. ||೬೨||

---

1 ನಾರಕಾನ್ (ಘ) 2 ಲುಪ್ತ (ಕ)

ಯಮ ಉವಾಚ

ತ್ವಂ ಶಿವಾಗಮತತ್ತ್ವಜ್ಞಃ ಪರಮೇಶಗಣೇಶ್ವರಃ
ಕಿಮರ್ಥಂ ನರಕಾನ್ ದ್ರಷ್ಟುಮತ್ರೈವಾಗತವಾನಸಿ ||೬೩||

ಪಾಪಿನಃ ಕ್ರೂರಕರ್ಮಾಣಃ ಶಿವನಿಂದಾಪರಾಯಣಾಃ
ಪಶ್ಯಂತಿ ನರಕಾನ್ ಘೋರಾನ್ ತ್ವಾದೃಶಾ ನ ತು ಯೋಗಿನಃ ||೬೪||

ಯೇ ಮನಾಗಪಿ ದೇವೇಶಂ ಪ್ರತಿಪನ್ನಾ ಮಹೇಶ್ವರಮ್
ತೇ ನ ಪಶ್ಯಂತಿ ನರಕಾನ್ನರಕಸ್ಥಾನ್ನ ಸಂಶಯಃ ||೬೫||

ಕಿಂ ಪುನಶ್ಶಿವಭಕ್ತಸ್ಯ ಶಿವಾಚಾರಪ್ರವರ್ತಿನಃ
ನರಾಣಾಂ ನರಕಸ್ಥಾನಾಂ ದರ್ಶನಂ ತವ ಯುಜ್ಯತೇ ||೬೬||

---

ಯಮ ಉವಾಚ = ಯಮನು ನುಡಿಯುತ್ತಿದ್ದಾನು.

ತ್ವಂ = ನೀನು ಶಿವಾಗಮತತ್ತ್ವಜ್ಞಃ = ಶಿವಾಗಮಂಗಳ ನಿಶ್ಚಯವ ಬಲ್ಲಾತನು ಪರಮೇಶಗಣೇಶ್ವರಃ = ಪರಮೇಶ್ವರನ ಗಣೇಶ್ವರನಹಂಥಾ ಆತನು. ಕಿಮರ್ಥಂ = ಏನು ಕಾರಣ ನರಕಾನ್ = ನರಕಂಗಳನು ದ್ರಷ್ಟುಂ = ನೋಡಲು ಅತ್ರೈವ = ಇಲ್ಲಿಗೇ ಆಗತವಾನ್ = ಬಂದಾತನು ಅಸಿ = ಆಹೆ. ||೬೩||

ಕ್ರೂರಕರ್ಮಾಣಃ = ಕ್ರೂರವಹ ಕರ್ಮವ ಮಾಡಿದಂಥಾ ಶಿವನಿಂದಾಪರಾಯಣಾಃ = ಶಿವನ ನಿಂದಿಸುವಲ್ಲಿ ತತ್ಪರರಹಂಥಾ ಪಾಪಿನಃ = ಪಾಪಿಗಳು ಘೋರಾನ್ = ಭಯಂಕರವಹಂಥಾ ನರಕಾನ್ = ನರಕಂಗಳನು ಪಶ್ಯಂತಿ = ಕಾಣುತ್ತಿಹರು. ತ್ವಾದೃಶಾಃ = ನಿನ್ನಂಥಾ ಯೋಗಿನಸ್ತು = ಯೋಗಿಗಳು ನ ಪಶ್ಯಂತಿ = ಕಾಣರು.

ಯೇ = ಆರು ಕೆಲಂಬರು ದೇವೇಶಂ = ದೇವರ್ಕಳಿಗೊಡೆಯನಹಂಥಾ ಮಹೇಶ್ವರಂ = ಪರಮೇಶ್ವರನನು ಮನಾಗಪಿ = ಒಂದು ಬಾರಿ ಆಯಿತಾದರೂ ಪ್ರತಿಪನ್ನಾಃ = ಮರೆಯೊಗುವರು, ತೇ = ಅವರುಗಳು ನರಕಾನ್ = ನರಕಂಗಳನು ನರಕಸ್ಥಾನ್ = ನರಕದಲ್ಲಿ ಇದ್ದಂಥಾವರುಗಳನು ನ ಪಶ್ಯಂತಿ = ಕಾಣುತ್ತಿರರು. ಸಂಶಯಃ = ಸಂದೇಹವು ನ = ಇಲ್ಲ. ||೬೫||

ಶಿವಭಕ್ತಸ್ಯ = ಶಿವಭಕ್ತನಹಂಥಾ ಶಿವಾಚಾರಪ್ರವರ್ತಿನಃ = ಶಿವಾಚಾರದಲ್ಲಿ ಪ್ರವರ್ತಿಸುತ್ತಂಪಿದ್ದಂಥಾ ತವ = ನಿನಗೆ ನರಕಸ್ಥಾನಾಂ = ನರಕಂಗಳಲ್ಲಿ ಇದ್ದಂಥಾ ನರಾಣಾಂ = ನರರುಗಳ ದರ್ಶನಂ = ನೋಡುಹವು ಕಿಂ ಪುನಃ ಯುಜ್ಯತೇ = ಹೇಗೆ ಕೂಡಲ್ಪಡುವುದು? ಅವ್ಯಯಪದ, ಉಚಿತಾರ್ಥವ ನುಡಿಯುತ್ತಿದ್ದಾನು. ||೬೬||

ಸಾನಂದ ಉವಾಚ

ನ ಜಾನೇ ಕಾರಣಂ ತತ್ರ [1]ಸುರೇತರನಿಷೂದನ[1]
ಔತ್ಸುಕ್ಯಂ ಮಮ ಸಂಜಾತಂ ನರಕಾಣಾಂ ನಿದರ್ಶನೇ ||೬೭||

ಯದಿ ಶಕ್ಯಂ ಮಯಾ ದ್ರಷ್ಟುಂ ತ್ವಯಾ ದರ್ಶಯಿತುಂ ತಥಾ
ನ ರಹಸ್ಯಂ ನ ದುಷ್ಕಾರ್ಯಂ ಕ್ಷಿಪ್ರಮೇವ ಪ್ರದರ್ಶಯ ||೬೮||

ಯಮ ಉವಾಚ

ನ ಚ ಲಂಘಯಿತುಂ ಶಕ್ತಿಸ್ತ್ವದೀಯಂ ವಚನಂ ಮಮ
ಅಲಂಘ್ಯಮಖಿಲೈರ್ದೇವೈಃ ಶಿವಸ್ಯ ವಚನಂ ಯಥಾ ||೬೯||

---

ಸಾನಂದ ಉವಾಚ — ಸಾನಂದಮುನಿ ನುಡಿವುತ್ತಿದ್ದಾನು.

ಸುರೇತರನಿಷೂದನ = ದೇವರ್ಕಳಿಗೆ ಅನ್ಯರಹ ಮನುಷ್ಯರ ಮರ್ದಿಸುತ್ತಿರ್ದ್ದಂಥಾ ಆತನೆ ತತ್ರ = ಆ ನರಕದಲ್ಲಿ ಕಾರಣಂ = ಕಾರಣವನು ನ ಜಾನೇ = ಅರಿಯೆನು. ನರಕಾಣಾಂ = ನರಕಂಗಳ ನಿದರ್ಶನೇ = ನೋಡುವಲ್ಲಿ ಮಮ = ಎನಗೆ ಔತ್ಸುಕ್ಯಂ = *ಅರ್ಥಿ (ಆರ್ತಿ) ಸಂಜಾತಂ = ಆಯಿತ್ತು. ||೬೭||

ಯದಿ = ಎತ್ತಲಾದನ ಮಯಾ = ಎನ್ನಿಂದ ದ್ರಷ್ಟುಂ = ನೋಡಲೋಸ್ಕರ ತ್ವಯಾ = ನಿನ್ನಿಂದ ತಥಾ = ಹಾಂಗೆ ದರ್ಶಯಿತುಂ = ತೋರಿಸಲು ಶಕ್ಯಂ = ಸಮರ್ಥವು. ರಹಸ್ಯಂ = ಏಕಾಂತವು ನ = ಅಲ್ಲ. ದುಷ್ಕಾರ್ಯಂ = ಮಾಡಬಾರದಂಥಾದ್ದು ನ = [2]ಅಲ್ಲ[2] ಕ್ಷಿಪ್ರಮೇವ = ಬೇಗವೇ ಪ್ರದರ್ಶಯ = ತೋರಿಸು. ||೬೮||

ಯಮ ಉವಾಚ — ಯಮನು ನುಡಿವುತ್ತಿದ್ದಾನು.

ತ್ವದೀಯಂ = ನಿನ್ನ ಸಂಬಂಧವಹಂಥಾ ವಚನಂ = ವಾಕ್ಯವು ಲಂಘಯಿತುಂ = ಮೀರಲು ಶಕ್ತಿಶ್ಚ = ಶಕ್ತಿಯೂ ಮಮ = ಎನಗೆ ನ = ಇಲ್ಲ. ಶಿವಸ್ಯ = ಶಿವನ ವಚನಂ ಯಥಾ = ವಾಕ್ಯವೆಹೆಗೊ ಹಾಗೆ ಅಖಿಲೈಃ = ಸಮಸ್ತವಹಂಥಾ ದೇವೈಃ = ದೇವರ್ಕಳಿಂದವು ಅಲಂಘ್ಯಂ = ಮೀರಬಾರದು. ||೬೯||

---

[1] ಸುರಾರಿವರಸೂದನ (ಘ) [1] ಇಲ್ಲ (ಕ)

* ಅರ್ಥಿಪದದ ತದ್ಭವ ಆರ್ತಿ. ಆರ್ತಿ ಎಂದರೆ ಬಯಕೆ, ಆಶೆ ಎಂದೂ, ಅಟ್ಟಿ ಆರ್ತಿ ಎಂದರೆ ಪ್ರೀತಿ ಎಂದೂ ಕಿಟಲ್ ನಿಘಂಟು.

ಪುರಾ ಮೃಕಂಡುತನಯಮವಮತ್ಯ ಪುರಂ ಮಮ
ದಗ್ಧಮಾಸೀತ್ ಕ್ಷಣೇನೈವ ಸಂಭ್ರಾಂತಾ ವಿವಶಾ ವಯಮ್ ||೭೦||

ಭಗ್ನಕಾಯೋ ಮೃತಃ ಕಾಲಃ ಪಾದಾಘಾತೇನ ಶೂಲಿನಃ
ಅಹಂ ಬದ್ಧೋ ದೃಢಂ ಪಾಶೈಃ ಪುನಸ್ತೇನೈವ ರಕ್ಷಿತಃ ||೭೧||

ತಸ್ಮಾದ್ಬಿಭೇಮಿ ಸತತಂ ಶಂಭೋಃ ಕಿಂಕರವರ್ಗತಃ
ದರ್ಶಯಿಷ್ಯೇ ಕ್ಷಣಾದೇವ ನರಾನ್ನರಕವಾಸಿನಃ ||೭೨||

ನಂದೀಶ್ವರ ಉವಾಚ—

---

ಪುರಾ = ಪೂರ್ವದಲ್ಲಿ ಮೃಕಂಡುತನಯಂ = ಮೃಕಂಡುಋಷಿಯ ಪುತ್ರನಹಂಥಾ ಮಾರ್ಕಂಡೇಯ ಮುನಿಯನು ಅವಮತ್ಯ = ಅವುನ್ನಣೆಯ ಮಾಡಿ ಮಮ = ಎನ್ನ ಪುರಂ = ಪಟ್ಟಣವು ಕ್ಷಣೇನೈವ = ಕ್ಷಣಮಾತ್ರದಿಂದವೇ ದಗ್ಧಂ = ದಹಿಸಲು ಟ್ಟದು ಆಸೀತ್ = ಆಯಿತ್ತು. ವಯಂ = ನಾವು ವಿವಶಾಃ = ಮುಂದುಗೆಟ್ಟವರುಗಳಾಗಿ ಸಂಭ್ರಾಂತಾಃ = ಸ್ಥಾನಭ್ರಷ್ಟರಾದೆವು. ಭ್ರಮು — ಅನವಸ್ಥಾನೇ ಎಂಬ ಧಾತುವಿನಲ್ಲಿ ಹುಟ್ಟಿದ ಕಾರಕಪದವು. ||೭೦||

ಕಾಲಃ = ಕಾಲನು ಶೂಲಿನಃ = ಪರಮೇಶ್ವರನ ಪಾದಾಘಾತೇನ = ಪಾದದ ಒದೆತದಿಂದ ಭಗ್ನಕಾಯಃ = ಜರ್ಝರಿತವಾದ ಶರೀರವನುಳ್ಳಾತನಾಗಿ ಮೃತಃ = ಸತ್ತನು. ಅಹಂ = ನಾನು ಪಾಶೈಃ = ನೇಣುಗಳಿಂದ ದೃಢಂ = ಬಲುಹಾಗಿ ಬದ್ಧಃ = ಕಟ್ಟಿಸಿಕೊಳಲ್ಪಟ್ಟಾತನಾಗಿ ಪುನಃ = ಮರಳಿ ತೇನೈವ = ಆ ಶಿವನಿಂದವೇ ರಕ್ಷಿತಃ = ಪಾಲಿಸಿಕೊಳಲ್ಪಟ್ಟಾ[1]ತನು.[1] ||೭೧||

ತಸ್ಮಾತ್ = ಅದು ಕಾರಣವಾಗಿ ಶಂಭೋಃ = ಪರಮೇಶ್ವರನ ಕಿಂಕರವರ್ಗತಃ = ಭಕ್ತಸಮೂಹಕ್ಕೆ ಸತತಂ = ಆವಾಗವೂ ಬಿಭೇಮಿ = ಅಂಜುತ್ತಂವಿಹೆನು. ಞಿಭೀ-ಭಯಚಲನಯೋಃ ಎಂಬ ಧಾತು. ಕ್ಷಣಾದೇವ = ಒಂದು ಕ್ಷಣದ ದೆಸೆಯಿಂದವೇ ನರಕವಾಸಿನಃ = ನರಕಂಗಳಲ್ಲಿರುತ್ತಿದ್ದಂಥಾ ನರಾನ್ = ಮನುಷ್ಯರುಗಳನು ದರ್ಶಯಿಷ್ಯೇ = ತೋರಿ[2]ಸುವೆನು.[2] ದೃಶಿರ್—ಪ್ರೇಕ್ಷಣೇ ಎಂಬ ಧಾತು. ||೭೨||

ನಂದೀಶ್ವರಉವಾಚ = ನಂದೀಶ್ವರನು ನುಡಿವುತ್ತಿದ್ದಾನು

---

[2] ನಾಗಿ (ಕ) [3] ಸೇನು (ಖ. ಚ)

ದರ್ಶಯಾಮಾಸ ಸರ್ವಾಣಿ ಗಣೇಶಾಯ ಮಹಾತ್ಮನೇ
ಪಾತಾಳಾನಾಮಧೋಭಾಗೇ ಹ್ಯಷ್ಟಾವಿಂಶತಿಕೋಟಯಃ ||೭೩||
ತಾಸ್ಸರ್ವಾ ದರ್ಶಯಾಮಾಸ ಯಥಾವದ್ಧರ್ಮರಾಟ್ ಸ್ವಯಮ್
ಕರ್ಮಾಣಿ ನರಕಸ್ಥಾನಾಂ ಪ್ರಾಣಿನಾಂ ಯಾತನಾಸ್ತಥಾ ||೭೪||
ಕಾಲಮಾತ್ರಪ್ರಭೇದಂ ಚ ದರ್ಶಯಿತ್ವಾ[1] ಜಗಾಮ[1] ಸಃ
ರೌರವಾದಿಷು ದೃಷ್ಟೇಷು ನರಕೇಷು ಸುದಾರುಣಮ್ ||೭೫||
ಅತಿಘೋರಾಹ್ವಯಂ ಘೋರಂ ನರಕಂ ಚಾಪ್ಯದರ್ಶಯತ್ ||೭೬||
ತತ್ರ ಯಾ ಯಾತನಾ ದೃಷ್ಟ್ವಾ ಹ್ಯತಿಘೋರಾ ಭಯಂಕರಾಃ
ವಕ್ತುಂ ನ ಶಕ್ನುಮಃ ಶ್ರುತ್ವಾ ಮೃತಿಂ ಯಾಂತಿ [2]ಮ್ರದೀಯಸಃ[2]||೭೭||

---

ಪಾತಾಳಾನಾಂ = ಪಾತಾಳಂಗಳ ಅಧೋಭಾಗೇ = ಕೆಳಗಣ ಭಾಗದಲ್ಲಿ ಅಷ್ಟಾವಿಂಶತಿ ಕೋಟಯಃ = ಇಪ್ಪತ್ತೆಂಟು ಕೋಟಿ ನರಕಂಗಳುಂಟು. ಸರ್ವಾಣಿ = ಎಲ್ಲವನು ಮಹಾತ್ಮನೇ = ಮಹಾತ್ಮನಹಂಥಾ ಗಣೇಶಾಯ = ಗಣೇಶ್ವರಂಗೋಸ್ಕರ ದರ್ಶಯಾಮಾಸ ಹಿ = ತೋರಿದನಲಾ. ||೭೩||

ಧರ್ಮರಾಟ್ = ಯಮಧರ್ಮರಾಜನು ಸ್ವಯಂ = ತಾನೇ ಸರ್ವಾಃ = ಸಮಸ್ತವಹಂಥಾ ತಾಃ = ಆ ನರಕಂಗಳನು ನರಕಸ್ಥಾನಾಂ = ನರಕಂಗಳಲ್ಲಿದ್ದಂಥಾ ಪ್ರಾಣಿನಾಂ = ಪ್ರಾಣಿಗಳ ಕರ್ಮಾಣಿ = ಕರ್ಮಂಗಳನು ತಥಾ = ಹಾಂಗೆ ಯಾತನಾಃ = ಯಾತನೆಗಳನು ಯಥಾವತ್ = ತಪ್ಪದೆ ದರ್ಶಯಾಮಾಸ = ತೋರಿಸಿದನು. ||೭೪||

ಕಾಲಮಾತ್ರ ಪ್ರಭೇದಂ ಚ = ಕಾಲದ ಕಟ್ಟಳೆಯ ಭೇಧವನು ದರ್ಶಯಿತ್ವಾ = ತೋರಿಸಿ ಸಃ = ಆ ಯಮನು ಜಗಾಮ = ಎಯ್ದಿದನು. ||೭೫||

ರೌರವಾದಿಷು = ರೌರವ ಮೊದಲಾಗಿದ್ದಂಥಾ ನರಕೇಷು = ನರಕಂಗಳು ದೃಷ್ಟೇಷು ಸತ್ಸು = ಕಾಣಲುಪಡುತ್ತಂವಿರಲು ಸುದಾರುಣಂ = ಸುದಾರುಣವೆಂಬಂಥಾ ನರಕವನು ಅತಿಘೋರಾಹ್ವಯಂ ಚ = ಅತಿ ಘೋರವೆಂಬಂಥಾ ಹೆಸರನುಳ್ಳ ನರಕವನು ಘೋರಂ = ಘೋರವೆಂಬಂಥಾ ನರಕಮಪಿ = ನರಕವನೂ ಅದರ್ಶಯತ್ = ತೋರಿಸಿದನು. ||೭೬||

ತತ್ರ = ಅಲ್ಲಿ ಯಾಃ = ಆವವು ಕೆಲವು ಅತಿಘೋರಾಃ = ಅತ್ಯಂತ ಜುಗುಪ್ಸೆ

---

[1] ಜಗಾದ (ಘ) [2] ಮ್ರದೀಯಸಾಃ (ಘ) ಸುಕೋಮಲಾಃ (ಘ) ಪಾಠಾಂತರ. ಮ್ರದೀಯಾಂಸಃ ಎಂಬ ಪಾಠ ಉಚಿತ.

ತತ್ತದಾ ದರ್ಶಯನ್ ಘೋರಮತಿಘೋರಸಮಾಹ್ವಯಮ್
ನರಕಂ [1]ಧರ್ಮರಾಜೋsಸೌ[1] ಪುನರಾಹ ಗಣೇಶ್ವರಮ್ ||೩೮||

ಯಮ ಉವಾಚ

ಅತ್ರ ಯೇ [2]ನಾರಕಾಃ[2] ದೃಷ್ಟಾ ಪಾಪಾತ್ಮಾನೋ ನರಾಧಮಾಃ
ನ ಹಿ ತೇಷಾಂ ಭವೇನ್ಮುಕ್ತಿಃ ಕೇನಾಪಿ ಸುದುರಾತ್ಮನಾಮ್ ||೩೯||

ಸಾನಂದ ಉವಾಚ

ಅನ್ಯೇಷಾಂ ನರಕಸ್ಥಾನಾಂ ಮುಕ್ತಿರುಕ್ತಾ ಮಹಾತ್ಮನಾ
ಏಷಾಂ ಮುಕ್ತಿರನುದ್ದಿಷ್ಟಾ ವದ ಕೇನೈವ ಹೇತುನಾ ||೪೦||

---

ಯನುಳ್ಳಂಥಾ ಭಯಂಕರಾಃ = ಭಯಂಕರವಹಂಥಾ ಯಾತನಾಃ = ಬಾಧೆಗಳು ದೃಷ್ಟಾ ಹಿ = ಕಾಣಲುಪಟ್ಟವಲಾ. ವಕ್ತುಂ = ನುಡಿಯಲು ನ ಶಕ್ನುಮಃ = ಸಮರ್ಥರಾಗೆವು. ಶಕಲೃ-ಶಕ್ತೌ ಇತಿ ಧಾತುಃ. ಶ್ರುತ್ವಾ = ಕೇಳಿ ಮೃದೀಯಸಃ = ಮೃದುಚಿತ್ತವನುಳ್ಳವರುಗಳು ಮೃತಿಂ = ಮರಣವನು ಯಾಂತಿ = ಎಯ್ದುತ್ತಿಹರು. ||೩೭||

ಅಸೌ ಧರ್ಮರಾಜಃ = ಈ ಧರ್ಮರಾಜನು ತತ್ = ಆ ಘೋರಂ = ಘೋರವೆಂಬಂಥಾ ನರಕಂ = ನರಕವನು ಅತಿಘೋರಸಮಾಹ್ವಯಂ = ಅತಿಘೋರವೆಂಬ ಹೆಸರನುಳ್ಳಂಥಾ ನರಕಂ = ನರಕವನು ದರ್ಶಯನ್ = ತೋರಿಸುತ್ತವು ತದಾ = ಆಗ ಗಣೇಶ್ವರಂ = ಗಣೇಶ್ವರನಹಂಥಾ ಸಾನಂದಋಷಿಯನು ಕುರಿತು ಪುನಃ = ಮರಳಿ ಆಹ = ನುಡಿದನು. ||೩೮||

ಯಮ ಉವಾಚ—ಯಮನು ನುಡಿವುತ್ತಿದ್ದಾನು.

ಅತ್ರ = ಈ ನರಕದಲ್ಲಿ ಪಾಪಾತ್ಮಾನಃ = ಪಾಪಬುದ್ಧಿಯನುಳ್ಳಂಥಾ ನರಾಧಮಾಃ = ಮನುಷ್ಯರೊಳಗೆ [3]ಅಧಮ[3]ರಹಂಥಾ ಯೇ = ಆರು ಕೆಲಂಬರು ನಾರಕಾಃ = ನರಕಿಗಳು ದೃಷ್ಟಾಃ = ಕಾಣಲುಪಟ್ಟರು ಸುದುರಾತ್ಮನಾಂ = ಅತ್ಯಂತ ದುರಾತ್ಮರಹಂಥಾ ತೇಷಾಂ = ಅವರುಗಳಿಗೆ ಕೇನಾಪಿ = ಆವುದರಿಂದವು ಮುಕ್ತಿಃ = ಬಿಡುಗಡೆ ನ ಭವೇದ್ಧಿ = ಆಗದಲಾ. ||೩೯||

ಸಾನಂದ ಉವಾಚ—ಸಾನಂದ ಮಹಾಋಷಿ ನುಡಿವುತ್ತಿದ್ದಾನು.

ಅನ್ಯೇಷಾಂ = ಉಳಿದಂಥಾ ನರಕಸ್ಥಾನಾಂ = ನರಕದಲ್ಲಿ ಇದ್ದವರುಗಳಿಗೆ

---

[1] ಧರ್ಮರಾಜಾಽಸೌ (ಖ) [2] ನರಕಾ (ಖ) [3] ಅಯೋಗ್ಯ (ಕ)

ಯಮ ಉವಾಚ

ಏಷಾಂ [1]ದುಷ್ಕೃತರೂಪಾಣಿ[1] ನ ವಕ್ತುಂ ಶಕ್ನುಮೋ ವಯಮ್
ತಥಾಽಪಿ ಖಲು ಪಾಪಸ್ಯ ಸ್ಮೃತಿರಶ್ರೇಯಸೇ ಯತಃ ||೮೧||

ಸಾನಂದ ಉವಾಚ

ರಹಸ್ಯಮಪಿ [2]ನಾ[3]ಚ್ಛಾದ್ಯಂ ಯಥಾ ಜ್ಞಾತಂ ತ್ವಯಾ [3]ಯದಿ[3]
ಆಖ್ಯೇಯಮಾಖ್ಯಾಕುಶಲ ! ಮಮ ಪ್ರೀತೋ ಭವಾನ್ ಯತಃ||೮೨

---

ಮುಕ್ತಿಃ=[4]ಬಿಡುಗಡೆಯು[4] ಮಹಾತ್ಮನಾ=ಮಹಾಬುದ್ಧಿಯನುಳ್ಳಂಥಾ ನಿನ್ನಿಂದ ಉಕ್ತಾ=ನುಡಿಯಲ್ಪಟ್ಟಿತ್ತು. ಏಷಾಂ= ಈ ನರಕದಲ್ಲಿ ಇದ್ದವರುಗಳಿಗೆ ಮುಕ್ತಿಃ =ಬಿಡುಗಡೆ ಕೇನ ಹೇತುನ್ಯೈವ=ಆವ ಕಾರಣದಿಂದವೆ ಅನುದ್ದಿಷ್ಟಾ = ಹೇಳು ಲ್ಪಟ್ಟದಿಲ್ಲ. ವದ=ಹೇಳು. ||೮೦||

ಯಮ ಉವಾಚ—ಯಮನು ನುಡಿವುತ್ತಿದ್ದಾನು.

ಏಷಾಂ =ಈ ಪಾಪಿಗಳ ದುಷ್ಕೃತರೂಪಾಣಿ = ದುಷ್ಕರ್ಮಂಗಳ ಸ್ವರೂಪು ಗಳನು (ದುಃಷ್ಕೃತರೂಪಗಳನ್ನು) ವಕ್ತುಂ=ನುಡಿಯಲು ವಯಂ=ನಾವು ನ ಶಕ್ನುಮಃ= ಸಮರ್ಥರಾಗೆವು. ತಥಾಽಪಿ = ಹಾಗಾಯಿತಾದರೂ ಪಾಪಸ್ಯ = ಪಾಪದ ಸ್ಮೃತಿಃ=ಸ್ಮರಣೆ ಯತಃ=ಆವುದಾನೊಂದು ಕಾರಣವಾಗಿ ಅಶ್ರೇಯಸೆ! =ಲೇಸಿಂಗೋಸ್ಕರವಲ್ಲವಲಾ. ಯಮನ ಪಾರುಪತ್ಯಕ್ಕೆ ವಿಘ್ನವಹುದೆಂಬುದರ್ಥ. ೮೧

ಸಾನಂದ ಉವಾಚ—ಸಾನಂದ ಯೋಗೀಶ್ವರನು ನುಡಿವುತ್ತಿದ್ದಾನು.

ತ್ವಯಾ = ನಿನ್ನಿಂದ ಯಥಾ = ಹೇಂಗೆ ಜ್ಞಾತಂ = ಅರಿಯಲ್ಪಟ್ಟಿತ್ತು ರಹಸ್ಯಮಪಿ = ರಹಸ್ಯವಹಂಥಾದ್ದು ಯದಿ = ಎತ್ತಲಾನು ನಾಚ್ಛಾದ್ಯಂ = [5][ಮರಸಲ್ಪಡಬಾರದು][5] ಆಖ್ಯಾಕುಶಲ ! = ಹೇಳುವಲ್ಲಿ ಕುಶಲನಹಂಥಾ ಆತನೇ ಭವಾನ್=ನೀನು ಯತಃ= ಆವುದಾನೊಂದು ಕಾರಣವಾಗಿ ಮಮ = ಎನಗೆ ಪ್ರೀತಃ=ಪ್ರಿಯನಹಂಥಾ ಆತನು. ತತಃ=ಆದು ಕಾರಣವಾಗಿ ಆಖ್ಯೇಯಂ= ಹೇಳಬೇಕು.* ||೮೨||

---

1 ದುಷ್ಕೃತಕರ್ಮಾಣಿ (ಘ) 2 ಮಾ (ಖ). ನಾ (ಕ ಘ) ಮ (ಗ)
3 ತಥಾ (ಘ) 4 ಮುಕ್ತಿಯು (ಕ)
5 ಆಚ್ಛಾದ್ಯಂ=ಮುಚಿಸಲ್ಪಟ್ಟಿತ್ತು ಎಂದು ವ್ಯಾಖ್ಯಾನ. 'ನ'ಎಂಬುದು ವ್ಯಾಖ್ಯಾನದಲ್ಲಿಲ್ಲ.
* ನನಗೆ ನೀನು ಪ್ರಿಯನಾದುದರಿಂದ, ನಿನ್ನಿಂದ ರಹಸ್ಯವು ಹೇಗೆ ತಿಳಿಯಲ್ಪಟ್ಟಿರುವುದೋ

ಯಮ ಉವಾಚ

ಏತೇಷಾಂ ಪಾಪಕಥನೇ ಮುಕ್ತಿಸ್ಸ್ಯಾನ್ನರಕಾದತಃ
ನ ವಚ್ಮಿ ಭವತೋಽತ್ರಾಪಿ ಕಿಂ ಕರ್ತವ್ಯಂ [1]ಮಯಾ ವದ[1] ||೮೩||

ಸಾನಂದ ಉವಾಚ

ಮುಕ್ತಿ[2]ವಾನ್ ಭವತಾತ್ತೇಷಾಂ[2] ದುಃಖಂ ವಾ ದ್ವಿಗುಣೀಕೃತಮ್
ಏಷಾಂ ಪಾಪಾತ್ಮನಾಂ ಕರ್ಮ ಶೀಘ್ರಂ ವಕ್ತುಮಿಹಾರ್ಹಸಿ ||೮೪||

ಯಮ ಉವಾಚ

ಏತೇಷಾಂ ಭವಿತಾ ಮುಕ್ತಿಃ ಪ್ರಸಾದಾತ್ತವ ಸುವ್ರತ
ಕರ್ಮಣಾಂ ಕ್ಷಯಕಾಲೋ ವಾ ಶಿವಾಜ್ಞಾ ವಾ ಭವೇದಿಯಮ್|| ೮೫

---

[3]ಯಮ ಉವಾಚ—ಯಮ ನುಡಿವುತ್ತಿದ್ದಾನು.[2]

ಏತೇಷಾಂ=ಈ ನರಕಿಗಳ ಪಾಪಕಥನೇ=ಪಾಪವ ಹೇಳುವಲ್ಲಿ ನರಕಾತ್ =ನರಕದ ದೆಸೆಯಿಂದ ಮುಕ್ತಿಃ=ಬಿಡುಗಡೆ ಸ್ಯಾತ್=ಅಹುದು, ಅತಃ=ಅದು ಕಾರಣವಾಗಿ ನ ವಚ್ಮಿ=ಹೇಳೆನು. ವಚ=ಪರಿಭಾಷಣೇ ಎಂಬ ಧಾತು. ಭವತಃ= ನಿನಗೆ ಅತ್ರಾಪಿ=ಇಲ್ಲಿಯೂ ಮಯಾ=ಎನ್ನಿಂದ ಕಿಂಕರ್ತವ್ಯಂ=ಏನನ್ನಿ ಮಾಡ ಬೇಕು? ವದ=ಹೇಳು. ||೮೩||

ಸಾನಂದ ಉವಾಚ—ಸಾನಂದ[4]ಮುನೀ[4]ಶ್ವರನು ನುಡಿವುತ್ತಿದ್ದಾನು.

ತೇಷಾಂ=ಆವರುಗಳಿಗೆ ಮುಕ್ತಿವಾನ್= ಮುಕ್ತಿಯಾದರೂ ಭವತಾತ್ = ಆಗಲಿ. 'ಭೂ-ಸತ್ತಾಯಾಂ' ಎಂಬ ಧಾತು. ದುಃಖಂ ವಾ = ದುಃಖವಾದರೂ ದ್ವಿಗುಣೀಕೃತಂ=ಇಮ್ಮಡಿಯಾಗಿ ಮಾಡಲ್ಪಟ್ಟದು ಭವತಾತ್=ಆಗಲಿ. ಏಷಾಂ =ಈ ಪಾಪಾತ್ಮನಾಂ=ಪಾಪಶರೀರಿಗಳ ಕರ್ಮ=ಕರ್ಮವನು ಶೀಘ್ರಂ=ಬೇಗ ಇಹ=ಇಲ್ಲಿ ವಕ್ತುಂ= ನುಡಿಯಲು ಅರ್ಹಸಿ= [5]ಅರ್ಹನಾಗಿರುವೆ.[5] ಅರ್ಹ-ಪೂಜಾಯಾಂ ಎಂಬ ಧಾತು. ||೮೪||

ಯಮ ಉವಾಚ=ಯಮ[6]ನು ನುಡಿವುತ್ತಿದ್ದಾನು.[6]

ಭೋ ಸುವ್ರತ=ಎಲೈ ಒಪ್ಪುತ್ತಂವಿದ್ದಂಥಾ ವ್ರತವನುಳ್ಳಾತವೆ! ತವ=ನಿನ್ನ

---

ಹಾಗೆಯೇ ಆ ರಹಸ್ಯವು ನನಗೆ ಬಚ್ಚಿಡದೇ ಹೇಳಲ್ಪಡತಕ್ಕದ್ದು' ಎಂಬುದು ಈ ಶ್ಲೋಕದ ತಾತ್ಪರ್ಯ]. [1] ಮಯಾಽಧುನಾ (ಘ) [2] ರ್ವಾಪಿ ಭವೇತ್ತೇಷಾಂ (ಘ) [3] ಲುಪ್ತ (ಕ) [4] ಯೋಗೀ (ಕ) [5] ಯೋಗ್ಯನಾಗುತ್ತಿಹೆ (ಖ) [6] ನ ವಾಕ್ಯವು (ಖ)

ತವ ದೃಷ್ಟಿನಿಪಾತೇನ ಮುಕ್ತಾ ಏವ ನ ಸಂಶಯಃ
ತಸ್ಮಾದ್ವಕ್ಷ್ಯಾಮಿ ಸಕಲಂ ಮುಕ್ತಾಸ್ಸ್ಯುರ್ನರಕಾಲಯಾಃ ||೮೬||

ಸಕೃನ್ನಮಃ ಶಿವಾಯೇತಿ ನ ಶ್ರುತಂ ನ ಚ ಜಲ್ಪಿತಮ್
ಏತೈಃ ಪಾಪಾತ್ಮಭಿರ್ಘೋರೈರನೇಕೇಷ್ವಪಿ ಜನ್ಮಸು ||೮೭||

ಏತೇಷಾಂ ಕಥನಂ ಪಾಪಂ ಭವತೋ ವಾಕ್ಯಗೌರವಾತ್
ಕಥಿತಂ ಕರುಣಾರಾಶೇ ಯಥೇಷ್ಟಂ ಕರ್ತುಮರ್ಹಸಿ ||೮೮||

ಏವಮುಕ್ತ್ವಾ ಸ್ಥಿತೇ ತಸ್ಮಿನ್ ಧರ್ಮರಾಜೇ ಮಹಾತ್ಮನಿ
ಚಿಂತಯಾಮಾಸ ಗಣಪಶ್ಚೇತಸಾ ಶಿವನಂದನಃ ||೮೯||

---

ಪ್ರಸಾದಾತ್ = ಪ್ರಸನ್ನತೆಯ ದೆಸೆಯಿಂದ ಏತೇಷಾಂ = ಈ ನರಕಿಗಳಿಗೆ ಮುಕ್ತಿಃ = ಮುಕ್ತಿ ಭವಿತಾ = ಆಗಲುಳ್ಳುದು. ಭೂ = ಸತ್ತಾಯಾಂ ಎಂಬ ಧಾತು ಲುಟ್-ಪರಸ್ಮೈಪದವು. ಕರ್ಮಣಾಂ = ಕರ್ಮಂಗಳ ಕ್ಷಯಕಾಲೋ ವಾ = ಕ್ಷಯವಹ ಕಾಲವೊ ಶಿವಾಜ್ಞಾ ವಾ = ಶಿವನ ಆಜ್ಞೆಯೋ ಇಯಂ = ಇದು ಭವೇತ್ = ಅಹುದು. ||೮೫||

ತವ = ನಿನ್ನ ದೃಷ್ಟಿನಿಪಾತೇನ = ನೋಟದಿಂದ ಮುಕ್ತಾ ಏವ = ಮುಕ್ತರುಗಳೇ. ನ ಸಂಶಯಃ = ಸಂದೇಹವಿಲ್ಲ. ತಸ್ಮಾತ್ = ಅದು ಕಾರಣವಾಗಿ ಸಕಲಂ = ಸಮಸ್ತವನು ವಕ್ಷ್ಯಾಮಿ = ಹೇಳಿಹೆನು. ನರಕಾಲಯಾಃ = ನರಕದಲ್ಲಿ ಇಹವರುಗಳು ಮುಕ್ತಾಃ = ಮುಕ್ತರುಗಳು ಸ್ಯುಃ = ಅಹರು. ಅಸ-ಭುವಿ ಇತಿ ಧಾತುಃ.

ಘೋರೈಃ = ಭಯಂಕರವಹಂಥಾ ಏತೈಃ ಪಾಪಾತ್ಮಭಿಃ = ಈ ಪಾಪಶರೀರಿಗಳಿಂದ ಅನೇಕೇಷು ಜನ್ಮಸ್ವಪಿ = ಅನೇಕ ಜನ್ಮಂಗಳಲ್ಲಿಯೂ ನಮಃಶಿವಾಯೇತಿ = ನಮಃ ಶಿವಾಯ ಎಂಬ ಮಂತ್ರವು ಸಕೃತ್ = ಒಂದು ಬಾರಿಯೂ ನ ಶ್ರುತಂ = ಕೇಳಲುಪಟ್ಟುದಿಲ್ಲ. ನ ಜಲ್ಪಿತಂ = ನುಡಿಯಲುಪಟ್ಟುದಿಲ್ಲವು. ||೮೭||

ಏತೇಷಾಂ = ಈ ನರಕಿಗಳ ಕಥನಂ = ಕಥೆಯಹಂಥಾ ಪಾಪಂ = ಪಾಪವು ಭವತಃ = ನಿನ್ನ ವಾಕ್ಯಗೌರವಾತ್ = ವಾಕ್ಯದ ಗುರುತ್ವದ ದೆಸೆಯಿಂದ ಕಥಿತ = ಹೇಳಲ್ಪಟ್ಟಿತ್ತು. ಭೋ ಕರುಣಾರಾಶೇ! = ಎಲೈ ಕರುಣಕ್ಕೆ ರಾಸಿಯಹಂಥಾ ಯೋಗೀಶ್ವರನೇ! ಯಥೇಷ್ಟಂ = ಇಷ್ಟವು ಹೇಗಹುದೋ ಹಾಗೆ (ಹೇಗಹುದಹಗೆ) ಕರ್ತುಂ = ಮಾಡಲು ಅರ್ಹಸಿ = ಯೋಗ್ಯನಾಗುತ್ತಿಹೆ. ||೮೮||

ಏವಂ = ಈ ಪ್ರಕಾರದಲ್ಲಿ ಉಕ್ತ್ವಾ = ನುಡಿದು ಮಹಾತ್ಮನಿ = ಮಹಾತ್ಮನಹಂಥಾ ತಸ್ಮಿನ್ ಧರ್ಮರಾಜೇ = ಆ ಧರ್ಮರಾಜನು ಸ್ಥಿತೇ ಸತಿ = ಇರುತ್ತಂ

ನರಕೇಷ್ವೇಷು ಸರ್ವೇಷು [1]ಯಾತ್ಯಮಾನಾನ್ ಸುದುಃಖಿತಾನ್
ಶಿವಮಂತ್ರಪ್ರಭಾವೇಣ ಮೋಚಯಿಷ್ಯಾಮ್ಯಯತ್ನತಃ ॥೯೦॥

ಇತ್ಥಂ ಸುನಿಶ್ಚಿತಂ ಕೃತ್ವಾ ಸಾನಂದೋ ಗಣನಾಯಕಃ
ಅನಿವೇದ್ಯ ಯಮಸ್ಯಾಪಿ ತಾನ್ಮೋಕ್ತುಂ ಮತಿಮಾದಧೇ ॥೯೧॥

* ನಮಃ ಶಿವಾಯೇತಿ ಪುನಃ ಪುನರ್ಮುಹು-
ರ್ನಮಃ ಶಿವಾಯೇತಿ ಪುನಃ ಪುನರ್ಮುಹುಃ ॥
ನಮಃ ಶಿವಾಯೇತಿ ಪುನಃ ಪುನರ್ಮುಹು-
ರ್ಗಣೇಶ್ವರೋ ಮಂತ್ರಮಥೋಽಪಠಚ್ಚ ಸಃ ॥೯೨॥

ಇರಲು, ಶಿವನಂದನಃ = ಶಿವನ ಕುಮಾರನಹಂಥಾ ಗಣಪಃ = ಗಣೇಶ್ವರನಹಂಥಾ ಸಾನಂದ ಯೋಗೀಶ್ವರನು ಚೇತಸಾ = ಚಿತ್ತದಿಂದ ಚಿಂತಯಾಮಾಸ = ಚಿಂತಿಸಿದನು ಚಿತಿ = ಚಿಂತಾಯಾಮ್ ಇತಿ ಧಾತುಃ ॥೮೯॥

ಸರ್ವೇಷು = ಸಮಸ್ತವಹಂಥಾ ಏಷು ಸರ್ವೇಷು ನರಕೇಷು = ಈ ಸಮಸ್ತ ನರಕಂಗಳಲ್ಲಿ ಯಾತ್ಯಮಾನಾನ್ = ಎಯ್ದಿದಂಥಾ ಸುದುಃಖಿತಾನ್ = ಅತ್ಯಂತ ದುಃಖಿತರಹಂಥಾ ನರಕಿಗಳನು ಶಿವಮಂತ್ರ ಪ್ರಭಾವೇಣ = ಶಿವಮಂತ್ರದ ಸಾಮರ್ಥ್ಯ ದಿಂದ ಅಯತ್ನತಃ = ಸ್ವಾಯಸವಿಲ್ಲದೆ ಮೋಚಯಿಷ್ಯಾಮಿ = ಬಿಡಿಸುವೆನು ಮುಚಲೃ ಮೋಕ್ಷಣೇ ಇತಿ ಧಾತುಃ ॥೯೦॥

ಗಣನಾಯಕಃ = ಗಣಶ್ರೇಷ್ಠನಹಂಥಾ ಸಾನಂದಃ = ಸಾನಂದಯೋಗೀಶ್ವರನು ಇತ್ಥಂ = ಈ ಪ್ರಕಾರದಲ್ಲಿ ಸುನಿಶ್ಚಿತಂ = ಅತ್ಯಂತ ನಿಶ್ಚಯವನು ಕೃತ್ವಾ = ಮಾಡಿ ಯಮಸ್ಯಾಪಿ = ಯಮಗಂಗೆಯೂ ಅನಿವೇದ್ಯ = ಅರಿಹಿಸದೆ ತಾನ್ = ಆ ಪಾಪಿ ಗಳನು ಮೋಕ್ತುಂ = ಬಿಡಲೋಸ್ಕರ ಮತಿಂ = ಮತಿಯನು ಆದದೇ = ಅಂಗೀ ಕರಿಸಿದನು. ॥೯೧॥

ಅಥ = ಅನಂತರದಲ್ಲಿ ಗಣೇಶ್ವರಃ = ಗಣೇಶ್ವರನಹಂಥಾ ಸಃ = ಆ ಸಾನಂದ ಯೋಗೀಂದ್ರನು ಪುನಃ ಪುನಃ = ಮರಳಿ ಮರಳಿ ಮುಹುಃ = ಅಡಿಗಡಿಗೆ ನಮಃ ಶಿವಾಯೇತಿ = ನಮಃಶಿವಾಯ ಎಂದು ಹಾಂಗೆ ಪುನಃಪುನಶ್ಚ = ಮತ್ತೆ ಮತ್ತೆ (ಮರಳಿ ಮರಳಿ) ಮುಹುಃ = ಅಡಿಗಡಿಗೆ ನಮಃ ಶಿವಾಯೇತಿ = ನಮಃಶಿವಾಯ ಎಂದು ಈ ಪ್ರಕಾರದಲ್ಲಿ ಮಂತ್ರಂ = ಮಂತ್ರವನು ಅಪಠತ್ = ಪಠಿಸಿದನು. ಪಠ — ಪಾಠನೇ ಇತಿ ಧಾತುಃ. ॥೯೨॥

[1] ಪಾ (ಘ) * ಜಗತೀಛಂದದಲ್ಲಿಯ ವೃತ್ತ

ಹರ ಹರ ಇತಿ ಶಬ್ದಮಾದಿತೋ ವೈ
ಮುಹುರಭಿಧಾಯ ಮುನೀಂದ್ರವೃಂದವಂದ್ಯಃ
ಅಪಠದಖಿಲಮೋಘಘೋಷಸಾಮ್ಯಂ
ಸಕಲಹಿತಾಯ ನಮಃಶಿವಾಯಮಂತ್ರಮ್ ||೯೩||

ಪಠಿತಂ ಶಿವಮಂತ್ರಂ ತಂ ಶ್ರುತ್ವಾ ನರಕವಾಸಿನಃ
ಸಮುತ್ತೇರುಃ ಕ್ಷಣಾತ್ತಸ್ಮಾನ್ನರಕಾತ್ ನಾರಕಾ ಜನಾಃ ||೯೪||

ಕ್ಷುದ್ರಪಾಪಯುತಾಃ ಕ್ಷುದ್ರಾ ಮಹಾಪಾಪಯುತಾಶ್ಚ ಯೇ
ಅನಾಚಾರಾ ದುರಾಚಾರಾಸ್ಸದಾಚಾರವಿವರ್ಜಿತಾಃ ||೯೫||

ಅವಿಚಾರಪ್ರಚಾರಾಶ್ಚ ಶಿವಾಚಾರಬಹಿಷ್ಕೃತಾಃ
ವೇದನಿಂದಾಪರಾ ಯೇ ಚ ದೇವನಿಂದಾಪರಾಶ್ಚ ಯೇ ||೯೬||

---

ಮುನೀಂದ್ರವೃಂದವಂದ್ಯಃ = ಋಷಿಸಮೂಹದಿಂದ ವಂದಿಸಿಕೊಳ್ಳಲುಪಟ್ಟ ಸಾನಂದಯೋಗೀಂದ್ರನು ಆದಿತಃ = ಮೊದಲು ಹರ ಹರ ಇತಿ = ಹರ ಹರ ಎಂಬಂಥಾ ಶಬ್ದಂ = ಶಬ್ದವನು ಮುಹುರ್ವ್ಯ = ಅಡಿಗಡಿಗೆ ಅಭಿಧಾಯ = ಉಚ್ಚರಿಸಿ ಅಖಿಲಮೋಘಘೋಷಸಾಮ್ಯಂ = ಸಮಸ್ತ ಮೇಘಧ್ವನಿಗೆ ಸಮಾನವಹಂಥಾ ನಮಃಶಿವಾಯ ಮಂತ್ರಂ = ನಮಃಶಿವಾಯ ಎಂಬ ಮಂತ್ರವನು ಸಕಲಹಿತಾಯ = ಸಮಸ್ತರ ಹಿತಕ್ಕೋಸ್ಕರ ಅಪಠತ್ = ಪಠಿಸಿದನು. ||೯೩||

ಪಠಿತಂ = ನುಡಿಯಲ್ಪಟ್ಟಂಥಾ ತಂ ಶಿವಮಂತ್ರಂ = ಆ ಶಿವಮಂತ್ರವನು ಶ್ರುತ್ವಾ = ಕೇಳಿ ನರಕವಾಸಿನಃ = ನರಕದಲ್ಲಿ ಇದ್ದಂಥಾ ನಾರಕಾಃ = ನರಕಿಗಳಹಂಥಾ ಜನಾಃ = ಜನರುಗಳು ತಸ್ಮಾನ್ನರಕಾತ್ = ಆ ನರಕದ ದೆಸೆಯಿಂದ ಕ್ಷಣಾತ್ = ಒಂದು ಕ್ಷಣಮಾತ್ರದ ದೆಸೆಯಿಂದ ಸಮುತ್ತೇರುಃ = ಎದ್ದರು. ಸಮ್ ಪೂರ್ವಕ. ಮಹ ತೃ–ಪ್ಲವನತರಣಯೋಃ ಎಂಬ ಧಾತು. ||೯೪||

ಕ್ಷುದ್ರಪಾಪಯುತಾಃ = ಅಲ್ಪ ಪಾಪದಿಂದ ಕೂಡಿದಂಥಾ ಕ್ಷುದ್ರಾಃ = ಕಿರುಕುಳರು, ಮಹಾಪಾಪಯುತಾಃ = ಮಹಾಪಾಪಂಗಳಿಂದ ಕೂಡಲುಪಟ್ಟಂಥಾವರುಗಳು ಯೇ ಚ = ಆರು ಕೆಲಂಬರು ಅನಾಚಾರಾಃ = ಅನಾಚಾರಿಗಳು ದುರಾಚಾರಾಃ = ದುರಾಚಾರಿಗಳು ಸದಾಚಾರವಿವರ್ಜಿತಾಃ = ಸದಾಚಾರವಿಲ್ಲದವರುಗಳೂ. ||೯೫||

ಅವಿಚಾರಪ್ರಚಾರಾಶ್ಚ = ಅವಿಚಾರದಲ್ಲಿ ನಡೆದ ಅವರುಗಳು ಶಿವಾಚಾರ-ಬಹಿಷ್ಕೃತಾಃ = ಶಿವಾಚಾರಕ್ಕೆ ಹೊರಗಾದವರುಗಳು ಯೇ = ಆರು ಕೆಲಬರುಗಳು

ಬ್ರಹ್ಮಹತ್ಯಾದಿಭಿಃ ಪಾಪೈರಖಿಲೈರಪಿ ಸಂಯುತಾಃ
ಅಷ್ಟಾವಿಂಶತಿಕೋಟೀಷು ನರಕೇಷು ನರಾಧಮಾಃ ||೯೭||

[1]ಯಾತ್ಯಮಾನಾಃ ಸುದುಃಖಾರ್ತಾ ಮೋಚಿತಾಸ್ತೇನ ತತ್‌ಕ್ಷಣಾತ್
ಶಿವಮಂತ್ರಪ್ರಭಾವೇಣ ಯಮಸ್ಯಾಪ್ಯಸ್ಯ ಸನ್ನಿಧೌ ||೯೮||

ನರಕಸ್ಥಾ ವಿಮಾನಸ್ಥಾಸ್ಸರ್ವೇ ಸಂದೀಪ್ತತೇಜಸಃ ||೯೯||

*ಸರ್ವೇ ನರಾ ನರಕಯಾತನಯಾ ಕೃಶಾಂಗಾಃ
ಶುದ್ಧಾಃ ಸಮೃದ್ಧತನವಃ ಶುಭತೇಜಸಶ್ಚ ।
ಶೂನ್ಯಂ ಕೃತಂ ನರಕಮಂಡಲಮಾಶು ಸರ್ವಂ
ಶೈವಪ್ರಭಾವವಿಲಸದ್ಗಣಪುಂಗವೇನ ||೧೦೦||

ವೇದನಿಂದಾಪರಾಶ್ಚ=ವೇದವ ನಿಂದಿಸುವಲ್ಲಿಯೇ ಎರಕವನುಳ್ಳ (ಆಸಕ್ತಿಉಳ್ಳ)ವರುಗಳು ಯೇ ಚ=ಆರು ಕೆಲಂಬರು ದೇವನಿಂದಾಪರಾಃ=ದೇವರ್ಕಳ ನಿಂದಿಸುವರುಗಳು

ಬ್ರಹ್ಮಹತ್ಯಾದಿಭಿಃ=ಬ್ರಹ್ಮಹತ್ಯ ಮೊದಲಾಗಿದ್ದಂಥಾ ಅಖಿಲೈಃ= ಸಮಸ್ತವಹಂಥಾ ಪಾಪೈರಪಿ=ಪಾಪಂಗಳಿಂದವೂ ಸಂಯುತಾಃ = ಕೂಡಲುಪಟ್ಟಂಥಾ ನರಾಧಮಾಃ = ನರಾಧಮರುಗಳು ಅಷ್ಟಾವಿಂಶತಿಕೋಟೀಷು = ಇಪ್ಪತ್ತೆಂಟು ಕೋಟಿಗಳಹಂಥಾ ನರಕೇಷು=ನರಕಂಗಳಲ್ಲಿ, ||೯೭||

ಯಾತ್ಯಮಾನಾಃ=ಎಯ್ದಿದಂಥಾ ಸುದುಃಖಾರ್ತಾಃ=ಅತ್ಯಂತ ದುಃಖದಿಂದ ಪೀಡಿತರಹಂಥಾ ನರಕಿಗಳು ತತ್‌ಕ್ಷಣಾತ್=ಆ ಕ್ಷಣದ ದೆಸೆಯಿಂದ ತೇನ ಶಿವಮಂತ್ರ-ಪ್ರಭಾವೇಣ=ಆ ಶಿವಮಂತ್ರದ ಸಾಮರ್ಥ್ಯದಿಂದ ಅಸ್ಯ ಯಮಸ್ಯ=ಈ ಯಮನ ಸನ್ನಿಧಾವಪಿ=ಸಮೀಪದಲ್ಲಿಯೇ ಮೋಚಿತಾಃ=ಬಿಡಲುಪಟ್ಟರು. ||೯೮||

ನರಕಸ್ಥಾಃ=ನರಕದಲ್ಲಿ ಇದ್ದಂಥಾ ಸರ್ವೇ=ಸಮಸ್ತ ಪ್ರಾಣಿಗಳು ಸಂದೀಪ್ತತೇಜಸಃ= ಅತ್ಯಂತ ಪ್ರಕಾಶಿಸಲುಪಟ್ಟ ತೇಜಸ್ಸನುಳ್ಳವರುಗಳಾಗಿ ವಿಮಾನಸ್ಥಾಃ =ಪುಷ್ಪಕಂಗಳಲ್ಲಿ ಇದ್ದರು. ||೯೯||

ನರಕಯಾತನಯಾ = ನರಕದ ಬಾಧೆಯಿಂದ ಕೃಶಾಂಗಾಃ = ಬಡವಾದ ಶರೀರವನುಳ್ಳಂಥಾ ಸರ್ವೇ ನರಾಃ=ಸಮಸ್ತ ನರರುಗಳು ಶುದ್ಧಾಃ = ಶುದ್ಧರುಗಳಾಗಿ ಸಮೃದ್ಧತನವಃ= ಪುಷ್ಟಿಯಾದ ಶರೀರವನುಳ್ಳಂಥಾ ಶುಭತೇಜಸಃ = ಒಪ್ಪುತ್ತಿಂವಿದ್ದಂಥಾ ತೇಜಸ್ಸನುಳ್ಳವರಾದರು. ಸರ್ವಂ = ಸಮಸ್ತವಹಂಥಾ ನರಕ-

[1] ಪಾ (ಘ) * ವಸಂತತಿಲಕವೃತ್ತಂ

ನರಕಾಣಿ ವಿನಷ್ಟಾನಿ ನರೈರ್ನರಕವಾಸಿಭಿಃ
ದೃಷ್ಟ್ವಾ ಭೀತಿಯುತೋ ರಾಜಾ ಸಾನಂದಮಿದಮಬ್ರವೀತ್ ।೧೦೦।।

ಯಮ ಉವಾಚ

ಕಿಂ ಕೃತಂ ಗಣನಾಥೇನ ತ್ವಯಾ ಸರ್ವಾರ್ಥದರ್ಶಿನಾ
ವಿಮೋಚಿತಾ ವೈ ಪಾಪಿಷ್ಠಾ ನರಕೇಭ್ಯಃ ಪ್ರಸಹ್ಯ ಮಾಮ್ ।।೧೦೨।।

ನರಕೇಷು ವಿನಷ್ಟೇಷು ಸರ್ವೇ ಸ್ಯುಃ ಪಾಪಕಾರಿಣಃ
ದೇವತಿರ್ಯಙ್ಮನುಷ್ಯಾಣಾಂ [1][ನರಕಾದ್ಭೀತಿರ್ನ ನೇಷ್ಯತೇ][1] ।।೧೦೩।।

---

ಮಂಡಲಂ = ನರಕದ ಮೊತ್ತವು ಶೈವಪ್ರಭಾವವಿಲಸದ್ಗಣಪುಂಗವೇನ = ಶಿವಮಂತ್ರದ ಸಾಮರ್ಥ್ಯದಿಂದ ಒಪ್ಪುತ್ತಿರುವಿದ್ದ ಗಣಶ್ರೇಷ್ಠನಹ ಸಾನಂದನಿಂದ ಆಶು = ಬೇಗ ಶೂನ್ಯಂ = ಹಾಳಾಗಿ ಕೃತಂ = ಮಾಡಲುಪಟ್ಟಿತ್ತು. ।।೧೦೦।।

ನರಕವಾಸಿಭಿಃ = ನರಕದಲ್ಲಿ ಇದ್ದಂಥಾ ನರೈಃ = ನರರುಗಳೊಡನೆ[2] ವಿನಷ್ಟಾನಿ = ಹಾಳಾದಂಥಾ ನರಕಾಣಿ = ನರಕಂಗಳನು ದೃಷ್ಟ್ವಾ = ಕಂಡು ರಾಜಾ = ಧರ್ಮರಾಜನು ಭೀತಿಯುತಃ = ಭೀತಿಯಿಂದ ಕೂಡಲ್ಪಟ್ಟಾತನಾಗಿ ಸಾನಂದಂ = ಸಾನಂದಋಷಿಯನು ಕುರಿತು ಇದಂ = ಈ ವಾಕ್ಯವನು ಅಬ್ರವೀತ್ = ನುಡಿದನು. ।।೧೦೧।।

ಯಮ ಉವಾಚ = ಯಮನು ನುಡಿವುತ್ತಿದ್ದಾನು.

ಗಣನಾಥೇನ = ಗಣೇಶ್ವರನಹಂಥಾ ಸರ್ವಾರ್ಥದರ್ಶಿನಾ = ಸಮಸ್ತ ಶಾಸ್ತ್ರಾರ್ಥವ ಕಂಡಂಥಾ ತ್ವಯಾ = ನಿನ್ನಿಂದ ಕಿಂ ಕೃತಂ = ಇದೇನು ಮಾಡಲ್ಪಟ್ಟುದು? ಪಾಪಿಷ್ಠಾಃ = ಪಾಪಿಗಳು ಮಾಂ = ಎನ್ನನು ಪ್ರಸಹ್ಯ ವೈ = ಲೆಕ್ಕಿಸದೆ ನರಕೇಭ್ಯಃ = ನರಕಂಗಳ ದೆಸೆಯಿಂದ ವಿಮೋಚಿತಾಃ = ಮುಕ್ತರಾದರು. ।।೧೦೨।।

ನರಕೇಷು = ನರಕಂಗಳು ವಿನಷ್ಟೇಷು ಸತ್ಸು = ಹಾಳಾಗುತ್ತಿರಲು ಸರ್ವೇ = ಎಲ್ಲರೂ ಪಾಪಕಾರಿಣಃ = ಪಾಪಂಗಳ ಮಾಡುವವರುಗಳು ಸ್ಯುಃ = ಆಹರು. ದೇವತಿರ್ಯಙ್ಮನುಷ್ಯಾಣಾಂ = ದೇವರ್ಕಳು ತಿರ್ಯಕ್ ಜಾತಿಗಳು ಮಾನವರ

---

[1] ನರಕಾದ್ಭೀತಿರಿಷ್ಯತೇ (ಕ. ಘ) ನರಕಾದ್ಭೀತಿ ನೇಷ್ಯತೇ (ಖ.ಗ.ಚ). ವ್ಯಾಖ್ಯಾನದಲ್ಲಿ 'ನರಕಾತ್-ನರಕದ ದಿಸೆಯಿಂದ ಭೀತಿಃ-ಭಯವು ನೇಷ್ಯತೇ = ಇಚ್ಛಿಸಲ್ಪಡುತ್ತಿರದು. ಭೀತಿ ಹುಟ್ಟುತ್ತಿರದೆಂಬುದರ್ಥ' ಎಂದಿದೆಯಾಗಿ ಮೇಲೆ ಬಿಟ್ಟಿರುವ ಪಾಠವು ಅರ್ಥಾನುಸಾರಿಯಾಗಿರುತ್ತದೆ [2] ಳಿಂದ (ಕ)

ಆಜ್ಞಪ್ತೋsಹಂ ಭಗವತಾ ಲೋಕಕರ್ತ್ರಾ ಪಿನಾಕಿನಾ
ನರಕೇ ಯಾತನಾಭಿಸ್ತ್ವಂ ಪಾಪಿಷ್ಠಾನ್ ಶೋಧಯೇ[1]ತ್ಯಹಮ್[1] ೧೦೪

ಅಹಮಾಜ್ಞಾಂ ಮಹೇಶಸ್ಯ ಕಥಂ ಕುರ್ಯಾಂ ಗಣೇಶ್ವರ
ತಸ್ಯಾಜ್ಞಾಮಪ್ಯಕುರ್ವಾಣಃ ಪ್ರಥಮಂ ನರಕಂ ವ್ರಜೇತ್ ||೧೦೫||

ಆಜ್ಞಪ್ತಿಮಪ್ಯಕುರ್ವಾಣಃ ಕುರ್ವನ್ ವೈ ತದ್ವಿಪರ್ಯಯಮ್
ಸಮೌ ಹಿ ಶಿಷ್ಟೈರಾಮ್ನಾತೌ [2]ಭೃತ್ಯೌ[2] ಸ್ವೇಚ್ಛಾನುವರ್ತಿನೌ ||೧೦೬||

---

ಗಳಿಗೆ ನರಕಾತ್ = ನರಕದ ದೆಸೆಯಿಂದ ಭೀಃ = ಭಯವು ನೇಷ್ಯತೆ ಹಿ = ಇಚ್ಛಿಸಲುಪಡುತ್ತಿರದು. ಭೀತಿ ಹುಟ್ಟುತ್ತಿರದೆಂಬುದರ್ಥ. ||೧೦೩||

ಅಹಂ = ನಾನು ಭಗವತಾ = ಷಡ್ಗುಣೈಶ್ವರ್ಯಸಂಪನ್ನನಹಂಥಾ ಆ, ಲೋಕಕರ್ತ್ರಾ = ಲೋಕಕ್ಕೆ ಒಡೆಯನಹಂಥಾ ಪಿನಾಕಿನಾ = ಪರಮೇಶ್ವರನಿಂದ ಆಜ್ಞಪ್ತಃ = ಆಜ್ಞಾಪಿಸಲ್ಪಟ್ಟಾತನು. ನರಕೇ = ನರಕದಲ್ಲಿ ಪಾಪಿಷ್ಠಾನ್ = ಪಾಪಿಗಳನು ಯಾತನಾಭಿಃ = ಭಾಧೆಗಳಿಂದ ತ್ವಂ = ನೀನು ಶೋಧಯ = ಶುದ್ಧವಮಾಡು ಇತಿ = ಹೀಗೆಂದು ಅಹಂ = ನಾನು ಆಜ್ಞಪ್ತಃ = ಆಜ್ಞಾಪಿಸಲುಪಟ್ಟಾತನು. ||೧೦೪||

ಭೋ ಗಣೇಶ್ವರ = ಎಲೈ ಗಣೇಶ್ವರನೇ! ಮಹೇಶಸ್ಯ = ಪರಮೇಶ್ವರನ ಆಜ್ಞಾಂ = ಆಜ್ಞೆಯನು ಅಹಂ = ನಾನು ಕಥಂ = ಹೇಂಗೆ ಕುರ್ಯಾಂ = ಮಾಡುವೆನು. ತಸ್ಯ = ಆ ಶಿವನ ಆಜ್ಞಾಮಪಿ = ಆಜ್ಞೆಯನೂ ಅಕುರ್ವಾಣಃ = ಮಾಡದೇ ಇದ್ದಾತನಾಗಿ ಪ್ರಥಮಂ = ಮೊದಲೇ ನರಕಂ = ನರಕವನು ವ್ರಜೇತ್ = ಎಯ್ದುತ್ತಂವಿಹನು. ||೧೦೫||

ಆಜ್ಞಪ್ತಿಮಪಿ = ಆಜ್ಞಾಪಿಸಿದಂಥಾದನು ಅಕುರ್ವಾಣಃ = ಮಾಡದೇ ಇದ್ದಂಥಾ ನಾನು, ತದ್ವಿಪರ್ಯಯಂ = ಆ ಆಜ್ಞೆಗೆ ವಿಪರೀತವಹ ವರ್ತನೆಯನು ಕುರ್ವನ್ ವೈ = ಮಾಡುತ್ತವಿದ್ದಂಥಾ ನೀನು, ಭೃತ್ಯೌ = ಶಿವನ ಭೃತ್ಯರಹಂಥಾ ನೀನು-ನಾನು ಇಬ್ಬರು ಸ್ವೇಚ್ಛಾನುವರ್ತಿನೌ = ತಮ್ಮಿಚ್ಛೆಯಿಂದ ನಡೆದವರುಗಳೆಂದು ಶಿಷ್ಟೈಃ = ಶಿಷ್ಟರುಗಳಿಂದ ಸಮೌ = ಸಮಾನರುಗಳಾಗಿ ಆಮ್ನಾತೌ ಹಿ = ಹೇಳಲ್ಪಟ್ಟವರುಗಳಾ. ||೧೦೬||

---

[1] ತ್ಯಲಂ (ಕ) ಮೂಲಮಾತ್ರ ದ್ಯಪಿ (ಗ)
[2] ಭೃತೌ (ಘ)

ಬಿಭೇಮಿ ಭವತೋಽಹಂ ವೈ ಪರಮೇಶಗಣೇಶ್ವರ !
ನಿರ್ಭಯೋ [1]ನಾಪರಾಧಶ್ಚ[1] ಕೇನೋಪಾಯೇನ ತದ್ವದ ||೧೦೭||

ತಸ್ಯ ತದ್ವಚನಂ ಶ್ರುತ್ವಾ ಗಣೇಶೋ ವಾಕ್ಯಮಬ್ರವೀತ್
ಅಂತರ್ಹಾಸಯುತಃ ಪ್ರೀತ್ಯಾ ಶಿವಮಂತ್ರಸ್ಯ ವೈಭವಾತ್ ||೧೦೮||

ಸಾನಂದ ಉವಾಚ—

ಮಂತ್ರಃ ಶಿವಾಜ್ಞಾಸಿದ್ಧೋಽಯಮತಃ ಸರ್ವಾರ್ಥಸಾಧನಃ
ತೇನ ತೇ [2]ನಾರಕಾ[2] ಮುಕ್ತಾ ನಾಪರಾಧಸ್ತ್ವಿಹಾವಯೋಃ ||೧೦೯||

ಶ್ರುತ್ವಾಽಪಿ ತಸ್ಯ ವಚನಂ ಗಣೇಶಸ್ಯ ಹಿ ಧರ್ಮರಾಟ್
ಅವಿಜ್ಞಾಪ್ಯ ಮಹೇಶಾಯ ಸ್ಥಾತುಂ ನಾಶಕ್ನುವದ್ಭಯಾತ್ ||೧೧೦||

---

ಭೋ ಪರಮೇಶಗಣೇಶ್ವರ ! = ಎಲೆ ಪರಮೇಶ್ವರನ ಗಣೇಶ್ವರನೇ ! ಭವತಃ = ನಿನಗೆ ಅಹಂ ವೈ = ನಾನು ಬಿಭೇಮಿ = ಅಂಜುವೆನು. ಕೇನ ಉಪಾಯೇನ = ಆವಉಪಾಯದಿಂದ ನಿರ್ಭಯಃ = ಭೀತಿಯಿಲ್ಲದವನು ನಾಪರಾಧಶ್ಚ = ಅಪರಾಧವಿಲ್ಲದವನಹೆನು ? ತತ್ = ಅದನು ವದ = ಹೇಳು. ||೧೦೭||

ತಸ್ಯ = ಆ ಯಮನ ತದ್ವಚನಂ = ಆ ವಾಕ್ಯವನು ಶ್ರುತ್ವಾ = ಕೇಳಿ ಗಣೇಶಃ = ಗಣೇಶನಹಂಥಾ ಸಾನಂದನು ಶಿವಮಂತ್ರಸ್ಯ = ಶಿವಮಂತ್ರದ ವೈಭವಾತ್ = ಸಾಮರ್ಥ್ಯದ ದೆಸೆಯಿಂದ ಅಂತಃ = ಚಿತ್ತದಲ್ಲಿ ಹಾಸಯುತಃ = ನಗೆಯಿಂದ ಕೂಡಲುಪಟ್ಟಾತನಾಗಿ ಪ್ರೀತ್ಯಾ = ಸಂತೋಷದಿಂದ ವಾಕ್ಯಂ = ವಾಕ್ಯವನು ಅಬ್ರವೀತ್ = ನುಡಿದನು. ||೧೦೮||

ಸಾನಂದ ಉವಾಚ = ಸಾನಂದ ಋಷಿಯು ನುಡಿವುತ್ತಿದ್ದಾನು

ಅಯಂ ಮಂತ್ರಃ = ಈ ಪಂಚಾಕ್ಷರೀಮಂತ್ರವು ಶಿವಾಜ್ಞಾಸಿದ್ಧಃ = ಶಿವನ ಸಾಮರ್ಥ್ಯದ ಸಿದ್ಧಿಯನುಳ್ಳುದು. ಸರ್ವಾರ್ಥಸಾಧನಃ = ಸಮಸ್ತ ಪ್ರಯೋಜನಂಗಳಿಗೆ ಸಾಧನವಹಂಥಾದ್ದು. ಅತಃ = ಅದು ಕಾರಣವಾಗಿ ತೇನ = ಆ ಶ್ರೀ ಪಂಚಾಕ್ಷರೀ ಮಂತ್ರದಿಂದ ತೇ ನಾರಕಾಃ = ಆ ನಾರಕಿಗಳು ಮುಕ್ತಾಃ = ಮುಕ್ತರಾದರು ಇಹ = ಇಲ್ಲಿ ಆವಯೋಃ = ನಮ್ಮಿಬ್ಬರಿಗೆ ಅಪರಾಧಃ = ಅಪರಾಧವು ನ = ಇಲ್ಲ.

ಗಣೇಶಸ್ಯ = ಗಣೇಶ್ವರನಹಂಥಾ ತಸ್ಯ = ಆ ಸಾನಂದ ಗಣೇಶ್ವರನ ವಚನಂ

---

[1] ನಾಪರಾಧೀ (ಘ) [2] ನರಕಾಃ (ಘ)

ಮಹೇಶ್ವರದಿದೃಕ್ಷಾರ್ಥಂ ಮಂದರಂ ಚಾರುಕಂದರಮ್
ಧರ್ಮರಾಜೋ ಯಯೌ ಸದ್ಯಃ ಸಹ ತೇನ ಮಹಾತ್ಮನಾ ॥ ॥೧೧೧॥

ತತ್ರ ದೃಷ್ಟ್ವಾ ಮಹಾದೇವಂ ಸರ್ವಜ್ಞಂ ಸಕಲೇಶ್ವರಮ್
ಪಾದೌ ಪ್ರಣಮ್ಯ ಪ್ರೋವಾಚ ಭಯಸಂವಿಗ್ನಮಾನಸಃ ॥೧೧೨॥

ಯಮ ಉವಾಚ

ನಮಸ್ತೇ ಸರ್ವಲೋಕೇಶ ನಮಸ್ತೇ ಕಾಲನಾಶನ
ನರಕಸ್ವರ್ಗಮೋಕ್ಷಾಣಾಂ ವಿಧಾತ್ರೇ ಪಾಲಕಾಯ ಚ ॥೧೧೩॥

---

=ವಾಕ್ಯವನ್ನು ಶ್ರುತ್ವಾऽಪಿ=ಕೇಳಿಯೂ ಧರ್ಮರಾಟ್=ಯಮನು ಮಹೇಶಾಯ =ಪರಮೇಶ್ವರಂಗೋಸ್ಕರ ಭಯಾತ್ = ಭೀತಿಯ ದೆಸೆಯಿಂದ ಅವಿಜ್ಞಾಪ್ಯ= ಬಿನ್ನಹಂ ಮಾಡದೇ ಸ್ಥಾತುಂ= ಇರಲು ನಾಶಕ್ನುವತ್ ಹಿ = ಸಮರ್ಥನಾಗಲಿಲ್ಲಲಾ (ಸಮರ್ಥನಾದುದಿಲ್ಲಲಾ). ಶಕಲೃ=ಶಕ್ತೌ ಎಂಬ ಧಾತು. ॥೧೧೦॥

ಮಹೇಶ್ವರದಿದೃಕ್ಷಾರ್ಥಂ=ಪರಮೇಶ್ವರನ ದರ್ಶನವಾಗಲೋಸ್ಕರ ಧರ್ಮರಾಜಃ = ಯಮನು ಮಹಾತ್ಮನಾ = ಮಹಾತ್ಮನಹಂಥಾ ತೇನ ಸಹ= ಆ ಸಾನಂದ ಋಷಿಯೊಡನೆ ಸದ್ಯಃ=ಆ ಕ್ಷಣದಲ್ಲಿ ಚಾರುಕಂದರಂ=ಒಪ್ಪುತ್ತಂವಿದ್ದ ಗುಹೆಗಳನ್ನುಳ್ಳಂಥಾ ಮಂದರಂ=ಮಂದರಪರ್ವತವನು ಯಯೌ=ಎಯ್ದಿದನು. ॥೧೧೧॥

ತತ್ರ=ಆ ಮಂದರಪರ್ವತದಲ್ಲಿ ಸರ್ವಜ್ಞಂ=ಸರ್ವಜ್ಞನಹಂಥಾ ಸಕಲೇಶ್ವರಂ =ಸಮಸ್ತಕ್ಕೆ ಒಡೆಯ ನಹಂಥಾ ಮಹಾದೇವಂ=ಪರಮೇಶ್ವರನನು ದೃಷ್ಟ್ವಾ= ಕಂಡು ಪಾದೌ = ಶ್ರೀ ಚರಣಂಗಳನು ಕುರಿತು ಪ್ರಣಮ್ಯ = ನಮಸ್ಕರಿಸಿ ಭಯಸಂವಿಗ್ನಮಾನಸಃ = ಭೀತಿಯಿಂದ ಮುಂಮುಗೆಡಲ್ಪಟ್ಟ ಮನಸ್ಸನುಳ್ಳಾತನಾಗಿ ಪ್ರೋವಾಚ=ನುಡಿದನು. ॥೧೧೨॥

ಯಮ ಉವಾಚ=ಯಮನು ನುಡಿವುತ್ತಿದ್ದಾನು.

ಸರ್ವಲೋಕೇಶ=ಸಮಸ್ತ ಲೋಕಂಗಳಿಗೊಡೆಯನಹಂಥಾ ಆತನೇ ತೇ = ನಿನಗೋಸ್ಕರ ನಮಃ= ನಮಸ್ಕಾರವು ಕಾಲನಾಶನ= ಕಾಲನ ಸಂಹರಿಸಿದಾತನೇ ನರಕಸ್ವರ್ಗಮೋಕ್ಷಾಣಾಂ = ನರಕಸ್ವರ್ಗಮೋಕ್ಷಂಗಳಿಗೆ ವಿಧಾತ್ರೇ = ಒಡೆಯನಹಂಥಾ ಪಾಲಕಾಯ = ಪಾಲಕನಹಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು, ॥೧೧೩॥

ತ್ವದೀಯಗಣಪೋ ದೇವ ಸಾನಂದ ಇತಿ ವಿಶ್ರುತಃ
ನರಕೇಭ್ಯೋ ನರಾನ್ ಸರ್ವಾನ್ ಮೋಚಯಾಮಾಸ ಪಾಪಿನಃ॥೧೧೪॥

[1]ತಂ[1]ದೃಷ್ಟ್ವಾ[2]ಽಹಂ[2] ಭಯಾವಿಷ್ಟೋ ದೇವ ಸಂಪ್ರಾಪ್ತವಾನಹವ್
ಪ್ರಸಾದಂ ಕುರು ದೇವೇಶ ಸ್ವಕರ್ಮಪ್ರಚ್ಯುತಸ್ಯ ಮೇ ॥೧೧೫॥

ತಸ್ಯ ತದ್ವಚನಂ ಶ್ರುತ್ವಾ ದೇವದೇವ ಉಮಾಪತಿಃ
ಸಾನಂದಂ ಚ ಸಮಾಲೋಕ್ಯ ಪ್ರಹೃಷ್ಟೋ ವಾಕ್ಯಮಬ್ರವೀತ್॥೧೧೬॥

ಈಶ್ವರ ಉವಾಚ

ಮಾಭೈರ್ಮಾಭೈರ್ಮಹಾಬಾಹೋ ಧರ್ಮರಾಜ ಕಥಂ ತವ
ಅಪರಾಧೋ ಭವೇದೇಷಃ ಸಾನಂದಸ್ಯ ಕಥಂ ಭವೇತ್ ॥೧೧೭॥

---

ಭೋ ದೇವ = ಎಲೈ ದೇವನೆ ತ್ವದೀಯ = ನಿನ್ನ ಸಂಬಂಧವಹಂಥಾ ಗಣಪಃ = ಗಣೇಶ್ವರನಹಂಥಾ ಸಾನಂದ ಇತಿ = ಸಾನಂದನೆಂಬಂಥಾ ವಿಶ್ರುತಃ = ಪ್ರಖ್ಯಾತನಹಂಥಾತನು ನರಕೇಭ್ಯಃ = ನರಕಂಗಳ ದೆಸೆಯಿಂದ ಪಾಪಿನಃ = ಪಾಪಿಗಳಹಂಥಾ ಸರ್ವಾನ್ = ಸಮಸ್ತ ನರಾನ್ = ನರರುಗಳನು ಮೋಚಯಾಮಾಸ = ಬಿಡಿಸಿದನು. ॥೧೧೪॥

ಭೋ ದೇವ = ಎಲೈ ಪರಮೇಶ್ವರ ! ತಂ = ಆ ಸಾನಂದನನು ಅಹಂ = ನಾನು ದೃಷ್ಟ್ವಾ = ಕಂಡು ಭಯಾವಿಷ್ಟಃ = ಭೀತಿಯಿಂದ ಪ್ರವೇಶಿಸಲ್ಪಟ್ಟಾತನಾಗಿ ಅಹಂ = ನಾನು ಸಂಪ್ರಾಪ್ತವಾನ್ = ಬಂದಾತನು. ಭೋ ದೇವೇಶ = ಎಲೈ ದೇವತೆಗಳಿಗೊಡೆಯನಹಂಥಾತನೆ ! ಸ್ವಕರ್ಮಪ್ರಚ್ಯುತಸ್ಯ = ನಿಜವಹ ಅಧಿಕಾರದಿಂದ ಕೆಡಲುಪಟ್ಟಂಥಾ ಮೇ = ಎನಗೆ ಪ್ರಸಾದಂ = ಪ್ರಸನ್ನತಿಕೆಯನು ಕುರು = ಮಾಡು. ॥೧೧೫॥

ತಸ್ಯ = ಆ ಯಮನ ತದ್ವಚನಂ = ಆ ವಾಕ್ಯವನು ಶ್ರುತ್ವಾ = ಕೇಳಿ ದೇವದೇವಃ = ದೇವತೆಗಳಿಗೆ ದೇವನಹಂಥಾ ಉಮಾಪತಿಃ = ಪಾರ್ವತೀಪತಿಯಹಂಥಾ ಶಿವನು ಸಾನಂದಂ ಚ = ಸಾನಂದನನು ಸಮಾಲೋಕ್ಯ = ನೋಡಿ ಪ್ರಹೃಷ್ಟಃ = ಸಂತೋಷಿಸಿದಾತನಾಗಿ ವಾಕ್ಯಂ = ವಾಕ್ಯವನು ಅಬ್ರವೀತ್ = ನುಡಿದನು. ॥೧೧೬॥

ಈಶ್ವರ ಉವಾಚ = ಈಶ್ವರನ ವಾಕ್ಯವು.

ಮಹಾಬಾಹೋ = ದೊಡ್ಡಿತ್ತಹ ಭುಜಂಗಳನುಳ್ಳಂಥಾ ಧರ್ಮರಾಜ ! =

---

1 ತತ್ (ಘ) 2 ಚ (ಘ)

ಮಯ್ಯೈವ ಕಾರಿತಂ ಸರ್ವಂ ನರಕಾಣಾಂ ವಿಮೋಕ್ಷಣಮ್
ಮಮ [1]ಪಂಚಾಕ್ಷರಂ[1] ಶ್ರುತ್ವಾ ಮುಕ್ತಾ ಯಸ್ಮಾನ್ಮಹಾಭಯಾತ್ ೧೧೮

ಪ್ರಾಯಶ್ಚಿತ್ತಮಭೂತ್ತೇಷಾಂ ಮಮ ಪಂಚಾಕ್ಷರಶ್ರುತಿಃ
ತೇನ ತೇ ನರಕಾನ್ಮುಕ್ತಾಃ ಶುದ್ಧಾತ್ಮಾನಶ್ಚ ತೇಽಪಿ ಚ ||೧೧೯||

ಅನೇನ ಯತ್ಕೃತಂ ಸಾಧೋ ಮತ್ಕೃತಂ ತನ್ನ ಸಂಶಯಃ
ಶುಭಂ ವಾಽಪ್ಯಶುಭಂ ವಾಪಿ [2]ನಿರ್ವೃತ[2]ಶ್ಚಾಧುನಾ ಭವ ||೧೨೦||

---

ಎಲೈ ಯಮರಾಜನೇ! ಮಾಭೈಃ ಮಾಭೈಃ=ಅಂಜದಿರು, ಅಂಜದಿರು. ಞಿಭೀ-ಭಯ ಚಲನಯೋಃ ಇತಿ ಧಾತುಃ. ಲುಙ್. ತವ = ನಿನಗೆ ಅಪರಾಧಃ= ಅಪರಾಧವು ಕಥಂ=ಹೇಗೆ ಭವೇತ್=ಆಹುದು. ಸಾನಂದಸ್ಯ=ಸಾನಂದನಿಗೆ ಏಷಃ=ಈ ಅಪರಾಧವು ಕಥಂ=ಹೇಗೆ ಭವೇತ್=ಆಹುದು? ||೧೧೭||

ಮಯ್ಯೈವ=ಎನ್ನಿಂದವೇ ಸರ್ವಂ=ಸಮಸ್ತ ನರಕವು ಕಾರಿತಂ= ಮಾಡಲ್ಪಟ್ಟಿತ್ತು. ನರಕಾಣಾಂ=ನರಕಂಗಳ ವಿಮೋಕ್ಷಣಂ=ಬಿಡುಗಡೆಯು ಕಾರಿತಂ =ಮಾಡಲುಪಟ್ಟಿತ್ತು. ಮಮ=ಎನ್ನ ಪಂಚಾಕ್ಷರಂ = ಪಂಚಾಕ್ಷರಮಂತ್ರವನು ಶ್ರುತ್ವಾ=ಕೇಳಿ ಮಹಾಭಯಾತ್= ಅತ್ಯಂತ ಭೀತಿಯುಹಂಥಾ ಯಸ್ಮಾತ್= ಆವುದಾನೊಂದು ನರಕದ ದೆಸೆಯಿಂದ ಮುಕ್ತಾಃ=ಬಿಡಲುಪಟ್ಟರು. ||೧೧೮||

ಮಮ=ಎನ್ನ ಪಂಚಾಕ್ಷರಶ್ರುತಿಃ=ಪಂಚಾಕ್ಷರ ಶ್ರವಣವು ತೇಷಾಂ= ಆ ನರಕಿಗಳಿಗೆ ಪ್ರಾಯಶ್ಚಿತ್ತಂ=ಪ್ರಾಯಶ್ಚಿತ್ತವು ಅಭೂತ್=ಆಯಿತ್ತು. ತೇನ =ಅದರಿಂದ ತೇ=ಅವರುಗಳು ಶುದ್ಧಾತ್ಮಾನಶ್ಚ= ಶುದ್ಧಾತ್ಮರು. ತೇಽಪಿ ಚ = ಅವರುಗಳು ನರಕಾತ್ = ನರಕದ ದೆಸೆಯಿಂದ ಮುಕ್ತಾಃ = ಮುಕ್ತರುಗಳಾದರು. ||೧೧೯||

ಭೋ ಸಾಧೋಃ = ಎಲೈ ಸತ್ಪುರುಷನಹಂಥಾ ಯಮನೇ! ಅನೇನ=ಈ ಸಾನಂದನಿಂದ ಶುಭಂ ವಾಪಿ=ಶುಭವಾಗಲಿ ಅಶುಭಂ ವಾಪಿ=ಅಶುಭವಾಗಲಿ ಯತ್ = ಆವುದಾನೊಂದು ಕೃತಂ = ಮಾಡಲುಪಟ್ಟಿತ್ತು ತತ್ = ಅದು ಮತ್ಕೃತಂ=ನನ್ನಿಂದ ಮಾಡಲುಪಟ್ಟದು. ನ ಸಂಶಯಃ=ಸಂದೇಹವಿಲ್ಲ. ಅಧುನಾ =ಈಗಳು ನಿರ್ವೃತಶ್ಚ=ಸುಖಿಯುಹಂಥಾ ಆತನು ಭವ=ಆಗು. ||೧೨೦||

---

1 ಪಂಚಾಕ್ಷರೀಂ (ಘ) 2 ನಿವೃತ್ತ (ಘ)

ಅಯಂ ಸ ಭಗವಾನೀಶಃ ಸ್ವಯಂಜ್ಯೋತಿಸ್ಸನಾತನಃ
ಸ್ವಾನಂದಭೂತಾ ಕಥಿತಾ ದೇವೀ ನಾಗಂತುಕೀ ಶಿವಾ ||೨೧||

ಇತ್ಯೇವಮುಕ್ತೇಽಪಿ ತದಾ ಯಜ್ಞಮೂರ್ತೇರಜಸ್ಯ ಚ
[1]ನಾಜ್ಞಾನಮಗಮನ್ನಾಶಂ ಈಶ್ವರಸ್ಯೈವ ಮಾಯಯಾ ||೨೨||

ತದಂತರೇ ಮಹತ್ ಜ್ಯೋತಿರ್ವಿರಿಂಚೋ ವಿಶ್ವಭಾವನಃ
ಪ್ರಾಪಶ್ಯದದ್ಭುತಂ ದಿವ್ಯಂ ಪೂರಯದ್ಗಗನಾಂತರಮ್ ||೨೩||

[2]ಸೂತ ಉವಾಚ—

---

ಕೆಡಿಸುತ್ತಿದ್ದಂಥಾ ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಏಷಃ = ಈ ಮಹೇಶ್ವರೋಽಪಿ = ಶಿವನು ಸ್ವಾತ್ಮನಃ = ತನಗೆ ವ್ಯತಿರಿಕ್ತಯಾ = ಬೇರಾದಂಥಾ, ಪತ್ನ್ಯಾ = ಸ್ತ್ರೀಯೊಡನೆ ಕದಾಚಿತ್ = ಒಂದು ಬಾರಿಯೂ ನ ರಮತೇ ಹಿ = ಕ್ರೀಡಿಸುತ್ತಿರನಲಾ. ||೨೦||

ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಸನಾತನಃ = ಕೇಡಿಲ್ಲದೇ ಇದ್ದಂಥಾ ಸೋಽಯಮೀಶಃ = ಆ ಈ ಈಶ್ವರನು ಸ್ವಯಂ = ತಾನೇ ಜ್ಯೋತಿಃ = ಪರಂಜ್ಯೋತಿಸ್ವರೂಪನು. ಶಿವಾ = ಒಪ್ಪುತ್ತಿದ್ದಂಥಾ ದೇವೀ = ಪಾರ್ವತೀದೇವಿ ಸ್ವಾನಂದಭೂತಾ = ತನ್ನ ಆನಂದವೇ ಸ್ವರೂಪಾದಾಯಕ[ಳೆಂ]ದು ಕಥಿತಾ = ಹೇಳಲ್ಪಟ್ಟಳು. ಆಗಂತುಕೀ = ಬೇರೊಂದು ಸ್ವರೂಪವಹಂಥಾಯಕಳು ನ = ಅಲ್ಲ.

ಇತ್ಯೇವಂ = ಈ ಪ್ರಕಾರದಲ್ಲಿ ಉಕ್ತೇ ಸತ್ಯಪಿ = ನುಡಿವುತ್ತಿರಲು, ತದಾ = ಆಗ ಯಜ್ಞಮೂರ್ತೇಃ = ಯಜ್ಞಸ್ವರೂಪಂಗೆಯೂ ಅಜಸ್ಯ ಚ = ಬ್ರಹ್ಮಂಗೆಯೂ ಈಶ್ವರಸ್ಯ = ಪರಮೇಶ್ವರನ ಮಾಯಯೈವ = ಮಾಯೆಯಿಂದವೇ ಅಜ್ಞಾನಂ = ಅಜ್ಞಾನವು ನಾಶಂ = ಕೆಡುಹವನು ನಾಗಮತ್ = ಎಯ್ದಿದುದಿಲ್ಲ. ||೨೨||

ತದಂತರೇ = ಅದರ ತರುವಾಯಲ್ಲಿ [ಆ ಮಧ್ಯದಲ್ಲಿ] ವಿಶ್ವಭಾವನಃ = ಹಲವ ನೆನವುತ್ತಿದ್ದಂಥಾ ವಿರಿಂಚಃ = ಬ್ರಹ್ಮನು ಗಗನಾಂತರಂ = ಆಕಾಶಮಧ್ಯವನು ಪೂರಯತ್ = ತುಂಬುತ್ತಿದ್ದಂಥಾ ಅದ್ಭುತಂ = ಆಶ್ಚರ್ಯವಹಂಥಾ ಮಹತ್ = ಉತ್ಕೃಷ್ಟವಹಂಥಾ ದಿವ್ಯಂ ಜ್ಯೋತಿಃ = ದಿವ್ಯ ತೇಜಸ್ಸನು ಪ್ರಾಪಶ್ಯತ್ = ಕಂಡನು

ಸೂತ ಉವಾಚ = ಸೂತನ ವಾಕ್ಯವು

---

1 ಸುಜ್ಞಾನಂ ನಾಗಮತ್ಕಿಂಚಿತ್ (ಘ)

2 ಈ ಶ್ಲೋಕಾನಂತರ (ಗಖ) ದಲ್ಲಿ ಬಂದಿದೆ.

ತನ್ಮಧ್ಯಸಂಸ್ಥಂ ವಿಮಲಂ ಮಂಡಲಂ ತೇಜಸೋಜ್ಜ್ವಲಮ್
ವ್ಯೋಮಮಧ್ಯಗತಂ ಶುಭ್ರಂ ಪ್ರಾದುರಾಸೀದ್ದ್ವಿಜೋತ್ತಮಾಃ ||೨೪||

ಸ ಸೃಷ್ಟ್ವಾ ವದನಂ ದಿವ್ಯಂ ಮೂರ್ಧ್ನಿ ಲೋಕಪಿತಾಮಹಃ
ತೇನ ತನ್ಮಂಡಲಂ ಘೋರಮಾಲೋಕಯದನಿಂದಿತಮ್ ||೨೫||

ಪ್ರಜಜ್ವಾಲಾತಿಕೋಪೇನ ಬ್ರಹ್ಮಣಃ ಪಂಚಮಂ ಶಿರಃ
[1]ಕ್ಷಣಾದದೃಶ್ಯತ [1]ಮಹಾನ್ ಪುರುಷೋ ನೀಲಲೋಹಿತಃ ||೨೬||

ತ್ರಿಶೂಲೀ ಪಿಂಗಲೋ ದೇವೋ ನಾಗಯಜ್ಞೋಪವೀತವಾನ್
ತಂ ಪ್ರಾಹ ಭಗವಾನ್ ಬ್ರಹ್ಮಾ ಶಂಕರಂ ನೀಲಲೋಹಿತಮ್ ||೨೭||

---

ಭೋ ದ್ವಿಜೋತ್ತಮಾಃ = ಎಲೈ ಬ್ರಾಹ್ಮಣೋತ್ತಮರುಗಳಿರಾ! ತನ್ಮಧ್ಯಸಂಸ್ಥಂ = ಆ ಪ್ರಕಾಶದ ಮಧ್ಯದಲ್ಲಿ ಇರುತ್ತಿದ್ದಂಥಾ ವಿಮಲಂ = ನಿರ್ಮಲವಹಂಥಾ ತೇಜಸಾ = ತೇಜಸ್ಸಿನಿಂದ ಉಜ್ಜ್ವಲಂ = ಅತ್ಯಂತ ಪ್ರಕಾಶಿಸುತ್ತಿದ್ದಂಥಾ ವ್ಯೋಮ-ಮಧ್ಯಗತಂ = ಆಕಾಶಮಧ್ಯವನೆಯ್ದಿದಂಥಾ ಶುಭ್ರಂ = ಶ್ವೇತವರ್ಣವಹಂಥಾ ಮಂಡಲಂ = ವೃತ್ತಾಕಾರವು ಪ್ರಾದುರಾಸೀತ್ = ಪ್ರತ್ಯಕ್ಷವಾಯಿತ್ತು. ||೨೪||

ಲೋಕಪಿತಾಮಹಃ = ಲೋಕಕ್ಕೆ ಪಿತಾಮಹನಂಥಾ ಸಃ = ಆ ಬ್ರಹ್ಮನು ಮೂರ್ಧ್ನಿ = ಶಿರಸ್ಸಿನಲ್ಲಿ ದಿವ್ಯಂ = ದಿವ್ಯವಹಂಥಾ ವದನಂ = ಮುಖವನು ಸೃಷ್ಟ್ವಾ = ಸೃಜಿಸಿ, ತೇನ = ಆ ಮುಖದಿಂದ ಘೋರಂ = ಭಯಂಕರವಹಂಥಾ ಅನಿಂದಿತಂ = ನಿಂದೆಯಿಲ್ಲದಿದ್ದಂಥಾ ತನ್ಮಂಡಲಂ = ಆ ಜ್ಯೋತಿರ್ಮಂಡಲವನು ಆಲೋಕಯತ್ = ನೋಡಿದನು. ||೨೫||

ಬ್ರಹ್ಮಣಃ = ಬ್ರಹ್ಮನ ಪಂಚಮಂ = ಐದನೆಯದಹಂಥಾ ಶಿರಃ = ಶಿರಸ್ಸು ಅತಿಕೋಪೇನ = ಅತ್ಯಂತ ಕೋಪದಿಂದ ಪ್ರಜಜ್ವಾಲ = ಜ್ವಲಿಸಿತು- ಉರಿದೆದ್ದಿ-ತ್ತೆಂಬರ್ಥ. ಕ್ಷಣಾತ್ = ಕ್ಷಣಮಾತ್ರದ ದೆಸೆಯಿಂದ ಮಹಾನ್ ಪುರುಷಃ = ಮಹಾನ್‌ಪುರುಷನಹಂಥಾ ನೀಲಲೋಹಿತಃ = ಶಿವನು ಅದೃಶ್ಯತ = ಕಾಣಲು-ಪಟ್ಟನು. ದೃಶಿರ್-ಪ್ರೇಕ್ಷಣೇ ಎಂಬ ಧಾತು ಲಙಾತ್ಮನೇಪದಮ್. ||೨೬||

ದೇವಃ = ಪರಮೇಶ್ವರನು ಪಿಂಗಲಃ = ಜಟಾಜೂಟದಲ್ಲಿ ಪಿಂಗಲವರ್ಣವ ನುಳ್ಳಂಥಾ ತ್ರಿಶೂಲೀ = ತ್ರಿಶೂಲವ ಧರಿಸಿದಂಥಾ ನಾಗಯಜ್ಞೋಪವೀತವಾನ್ = ಸರ್ಪಯಜ್ಞೋಪವೀತವನುಳ್ಳಾತನು. ಶಂಕರಂ = ಸುಖವನು ಮಾಡುತ್ತಿದ್ದಂಥಾ

---

[1] ಕ್ಷಣಾದದೃಶ್ಯತ್ (ಘ)

ಜಾನಾಮಿ ಭವತಃ ಪೂರ್ವಂ ಲಲಾಟೇ ಮಮ ಶಂಕರ
ಪ್ರಾದುರ್ಭಾವಂ ಮಹೇಶಾನ ಮಾಮೇವ ಶರಣಂ ವ್ರಜ ||೨೮||

ಶ್ರುತ್ವಾ ಸಗರ್ವಂ ವಚನಂ ಪದ್ಮಯೋನೇರಥೇಶ್ವರಃ
ಸಸರ್ಜ ಸ್ವಾತ್ಮನಃ ಕಂಚಿದ್ಭೈರವಂ ಲೋಕದಾಹಕಮ್ ||೨೯||

ಸ್ವಯಂ ಸಾಕ್ಷಾನ್ಮಹಾದೇವಃ ಕ್ಷಣಾದ್ವೈ ಕಾಲಭೈರವಃ
ಚಕರ್ತ ಕರಜಾಗ್ರೇಣ ಬ್ರಹ್ಮಣಃ ಪಂಚಮಂ ಶಿರಃ ||೩೦||

ನಿಕೃತ್ತವದನೋ ದೇವೋ ಬ್ರಹ್ಮಾ ದೇವೇನ ಶಂಭುನಾ
ಮಮಾರ ಚೇಶಯೋಗೇನ ಜೀವಿತಂ ಪ್ರಾಪ ವಿಶ್ವಸೃಟ್ ||೩೧||

---

ತಂ = ಆ ನೀಲಲೋಹಿತಂ = ಕೊರಳ ಕಪ್ಪು ಜೆಡೆಯು ಕೆಂಪನುಳ್ಳಂಥಾ ಶಿವನನು ಭಗವಾನ್ = ಸಾಮರ್ಥ್ಯವನುಳ್ಳಂಥಾ ಬ್ರಹ್ಮಾ ಬ್ರಹ್ಮನು ಪ್ರಾಹ = ಗರ್ವದಿಂದ ನುಡಿದನು.

ಶಂಕರ = ಸುಖವನ್ನು ಮಾಡುತ್ತಿದ್ದಂಥಾ ಮಹೇಶಾನ = ಎಲೈ ಈಶ್ವರನೇ ! ಪೂರ್ವಂ = ಪೂರ್ವದಲ್ಲಿ ಮಮ = ಎನ್ನ ಲಲಾಟೇ = ನೊಸಲಲ್ಲಿ ಭವತಃ = ನಿನ್ನ ಪ್ರಾದುರ್ಭಾವಂ = ಉತ್ಪತ್ತಿಯನು ಜಾನಾಮಿ = ಬಲ್ಲೆನು. ಮಾಮೇವ = ಎನ್ನನೇ ಶರಣಂ = ಮೊರೆಯೋಗುಹವನು ವ್ರಜ = ಎಯ್ದು. ||೨೮||

ಅಥ = ಅನಂತರದಲ್ಲಿ ಈಶ್ವರಃ = ಪರಮೇಶ್ವರನು ಪದ್ಮಯೋನೇಃ = ತಾವರೆಯಲ್ಲಿ ಉತ್ಪತ್ತಿಯನುಳ್ಳಂಥಾ ಬ್ರಹ್ಮನ ಸಗರ್ವಂ = ಗರ್ವದಿಂದ ಸಹಿತ ವಾದಂಥಾ ವಚನಂ = ವಾಕ್ಯವನು ಶ್ರುತ್ವಾ = ಕೇಳಿ, ಲೋಕದಾಹಕಂ = ಲೋಕ ವನು ಸುಡುವಂಥಾ ಕಂಚಿತ್ = ಒಬ್ಬಾನೊಬ್ಬ ಭೈರವಂ = ಭೈರವನನು ಸ್ವಾತ್ಮನಃ = ತನ್ನ ಶರೀರದ ದೆಸೆಯಿಂದ ಸಸರ್ಜ = ಸೃಜಿಸಿದನು. ||೨೯||

ಸಾಕ್ಷಾತ್ = ಪ್ರತ್ಯಕ್ಷವಹಂಥಾ ಮಹಾದೇವಃ ಸ್ವಯಂ = ಪರಮೇಶ್ವರ ತಾನೇ ಕಾಲಭೈರವಃ = ಕಾಲಭೈರವನಾಗಿ ಕ್ಷಣಾದ್ವೈ = ಕ್ಷಣಮಾತ್ರದ ದೆಸೆ ಯಿಂದವೇ ಕರಜಾಗ್ರೇಣ = ಉಗುರಿನ ತುದಿಯಿಂದ ಬ್ರಹ್ಮಣಃ = ಬ್ರಹ್ಮನ ಪಂಚಮಂ ಶಿರಃ = ಐದನೆಯ ಶಿರಸ್ಸನು ಚಕರ್ತ = ಛೇದಿಸಿದನು. ಕೃತೀ-ಛೇದನೇ ಎಂಬ ಧಾತು. ||೩೦||

ದೇವೇನ = ಪ್ರಕಾಶಸ್ವರೂಪನಹಂಥಾ ಶಂಭುನಾ = ಪರಮೇಶ್ವರನಿಂದ ನಿಕೃತ್ತವದನಃ = ಛೇದಿಸಲುಪಟ್ಟ ಮುಖವನುಳ್ಳಂಥಾ ದೇವಃ = ದೇವನಹಂಥಾ ಬ್ರಹ್ಮಾ ಚ = ಬ್ರಹ್ಮನು ಮಮಾರ = ಮೃತನಾ(ನಾ)ದನು. ಈಶಯೋಗೇನ =

ತತ್ಕಂಧರಾಂತರ್ಧಮನೀನಿಷ್ಕ್ರಾಂತೈಃ[1] ಶೋಣಿತಸ್ರವೈಃ[1]
ಜಗನ್ಮಗ್ನಂ ತದಾ ದೇವೋ ವಹ್ನಿನೇತ್ರೋದ್ಭವಸ್ಯ ತು ||೩೨||

ಜ್ವರಲೇಶಸ್ಯ ಕೃತವಾನಾಹುತಿಂ ರಕ್ತವಾರಿಧಿಮ್
ಕಪಾಲಗಹ್ವರಗತಂ ರಕ್ತಮಾಂಸಾದಿಕಂ ತಥಾ ||೩೩||

[2]ತೇನೈವಾಶೋಷಯತ್ಸದ್ಯೋ[2] ಜ್ವರಲೇಶೇನ ಭೈರವಃ
ಅಥಾನ್ವಪಶ್ಯದ್ಗಿರಿಶಂ ಮಂಡಲಾಂತರಸಂಸ್ಥಿತಮ್ ||೩೪||

ಸಮಾಸೀನಂ ಮಹಾದೇವ್ಯಾ ಮಹಾದೇವಂ ತ್ರಿಲೋಚನಮ್
ಭುಜಂಗರಾಜವಲಯಂ ಚಂದ್ರಾವಯವಭೂಷಣಮ್ ||೩೫||

---

ಈಶ್ವರನ ಧ್ಯಾನದಿಂದ ವಿಶ್ವಸೃಟ್ = ಬ್ರಹ್ಮನು ಜೀವಿತಂ = ಸಪ್ರಾಣಿಸಿಕೊಳುಹ ವನು (ಬದುಕುವಿಕೆಯನ್ನು] ಪ್ರಾಪ = ಎಯ್ದಿದನು. ||೩ ||

ತತ್ಕಂಧರಾಂತರ್ಧಮನೀನಿಷ್ಕ್ರಾಂತೈಃ = ಆ ಬ್ರಹ್ಮನ ಶಿರಸ್ಸಿನೊಳಗಣ ನಾಳದಿಂದ ಹೊರಹೊಮ್ಮುತ್ತಿದ್ದಂಥಾ ಶೋಣಿತಸ್ರವೈಃ = ರಕ್ತದ ಪ್ರವಾಹಂಗಳಿಂದ ಜಗತ್ = ಲೋಕವು ಮಗ್ನಂ = ಮುಳುಗಲುಪಟ್ಟಿತ್ತು. ತದಾ = ಆಗ ದೇವಃ = ಕಾಲಭೈರವನು ವಹ್ನಿನೇತ್ರೋದ್ಭವಸ್ಯ = ನೊಸಲ ಕಿಚ್ಚುಗಣ್ಣಿನಿಂದ ಹುಟ್ಟಿದಂಥಾ ಜ್ವರಲೇಶಸ್ಯ ತು = ಉರಿಯ ಅಣುಮಾತ್ರಕ್ಕೆ ರಕ್ತವಾರಿಧಿಂ = ರಕ್ತದ ಸಮುದ್ರವನು ತಥಾ = ಹಾಂಗೆ ಕಪಾಲಗಹ್ವರಗತಂ = ಕಪಾಲವೆಂಬ ಗೊಹೆಯು ನೆಯ್ದಿದಂಥಾ ರಕ್ತಮಾಂಸಾದಿಕಂ = ರಕ್ತ ಮಾಂಸ ಮೊದಲಾದಂಥಾದ್ದನು ಆಹುತಿಂ = ಆಹುತಿ ಯನ್ನಾಗಿ ಕೃತವಾನ್ = ಮಾಡಿದನು. ||೩೩||

ಭೈರವಃ = ಕಾಲಭೈರವನು ತೇನ ಜ್ವರಲೇಶೇನೈವ = ಆ ನೊಸಲ ಕಣ್ಣ ಉರಿಯ ಕಿಂಚಿನ್ಮಾತ್ರದಿಂದವೇ ಸದ್ಯಃ = ಆ ಕ್ಷಣದಲ್ಲಿ ಅಶೋಷಯತ್ = ರಕ್ತ ಸಮುದ್ರವ ಬತ್ತಿಸಿದನು. ಅಥ = ಅನಂತರದಲ್ಲಿ ಬ್ರಹ್ಮನು ಮಂಡಲಾಂತರಸಂಸ್ಥಿತಂ = ಜ್ಯೋತಿರ್ಮಂಡಲದ ಮಧ್ಯದಲ್ಲಿ ಇರುತ್ತಿದ್ದಂಥಾ ಗಿರಿಶಂ = [3]ಶಿವನನು[3] ಅನ್ವಪಶ್ಯತ್ = ನೋಡಿದನು (ಕಂಡನು). ||೩೪||

ಮಹಾದೇವ್ಯಾ = ಪಾರ್ವತೀದೇವಿಯೊಡನೆ ಸಮಾಸೀನಂ = [4]ಕುಳ್ಳಿರ್ದಂಥಾ[4] ಮಹಾದೇವಂ = ಉತ್ಕೃಷ್ಟವಹ ದೇವನಹಂಥಾ ತ್ರಿಲೋಚನಂ = ಮೂರು ನಯನಂಗಳ ನುಳ್ಳಂಥಾ ಭುಜಂಗರಾಜವಲಯಂ = ಸರ್ಪರಾಜನಹಂಥಾ ವಾಸುಕಿಯ ಕಂಕಣವ-

---

[1] ಶೋಣಿತಸ್ಪ್ಲವೈಃ (ಖ) ಶೋಣಿತಪಲ್ಲವೈಃ (ಗ) [2] ತೇನೈವ ಶೋಷಯೇತ್ಸದ್ಯೋ(ಘ)
[3] ಪರಮೇಶ್ವರನನು (ಖ) [4] ಕುಳಿತಿದ್ದಂಥಾ (ಖ)

ಕೋಟಿಸೂರ್ಯಪ್ರತೀಕಾಶಂ ಜಟಾಜೂಟವಿರಾಜಿತಮ್
ಶಾರ್ದೂಲಚರ್ಮವಸನಂ ದಿವ್ಯಮಾಲಾಸಮನ್ವಿತಮ್ ॥೩೬॥
ತ್ರಿಶೂಲಪಾಣಿಂ ದುಷ್ಪ್ರೇಕ್ಷ್ಯಂ [1]ಯೋಗಿನಂ[1] ಭೂತಿಭೂಷಣಮ್
[2]ಯಮಂತರಾ ಯೋಗನಿಷ್ಠಾಃ[2] ಪ್ರಪಶ್ಯಂತಿ ಹೃದೀಶ್ವರಮ್ ॥೩೭॥

ತಮಾದಿಮೇಕಂ ಬ್ರಹ್ಮಾಣಂ ಬ್ರಹ್ಮಾ ದೇವಂ ದದರ್ಶ ಹ ॥೩೮॥

ಯಸ್ಯ ಸಾ ಪರಮಾ ದೇವೀ ಶಕ್ತಿರಾಕಾಶಸಂಜ್ಞಿತಾ
ಸೋಽನಂತೈಶ್ವರ್ಯಯೋಗಾತ್ಮಾ ಮಹೇಶೋ ದೃಶ್ಯತೇ ಕಿಲ ॥೩೯॥

---

ಸುಳ್ಳಂಥಾ ಚಂದ್ರಾವಯವಭೂಷಣಂ = ಚಂದ್ರನ ಶರೀರವೇ ಭೂಷಣವಾಗಿ ಉಳ್ಳಂಥಾ, ॥೩೫॥

ಕೋಟಿಸೂರ್ಯಪ್ರತೀಕಾಶಂ = ಕೋಟಿ ಸೂರ್ಯರ ಪ್ರಕಾಶನಹಂಥಾ ಜಟಾಜೂಟವಿರಾಜಿತಂ = ಜಟಾಮುಕುಟದಿಂದ ಒಪ್ಪುತ್ತಿರ್ದಂಥಾ ಶಾರ್ದೂಲಚರ್ಮವಸನಂ = ಪುಲಿಯ ಚರ್ಮವೇ ವಸ್ತ್ರವಾಗಿ ಉಳ್ಳಂಥಾ ದಿವ್ಯಮಾಲಾಸಮನ್ವಿತಂ = ಸ್ವರ್ಗಲೋಕದ ಪುಷ್ಪಮಾಲೆಯಿಂದ ಕೂಡಲುಪಟ್ಟಂಥಾ ತ್ರಿಶೂಲಪಾಣಿಂ = ತ್ರಿಶೂಲವು ಹಸ್ತದಲ್ಲಿ ಉಳ್ಳಂಥಾ ದುಷ್ಪ್ರೇಕ್ಷ್ಯಂ = ನೋಡಲು ಬಾರದೇ ಇದ್ದಂಥಾ ಯೋಗಿನಂ = ಯೋಗಿಯಹಂಥಾ ಭೂತಿಭೂಷಣಂ = ವಿಭೂತಿಭೂಷಣನಹಂಥಾ ಯಂ = ಆವನಾನೊಬ್ಬ ಈಶ್ವರಂ = ಪರಮೇಶ್ವರನನು ಯೋಗನಿಷ್ಠಾಃ = ಯೋಗನಿಷ್ಠರುಗಳು ಅಂತರಾ = ಅಂತರಂಗವಹಂಥಾ ಹೃದಿ = ಚಿತ್ತದಲ್ಲಿ ಪ್ರಪಶ್ಯಂತಿ = ಕಾಣುತ್ತಿಹರು, ಅಂತರಾ ಎಂಬ ಶಬ್ದ ಅವ್ಯಯವು. ॥೩೭॥

ತಂ = ಆ ಏಕಂ = ಏಕನಹಂಥಾ ಬ್ರಹ್ಮಾಣಂ = ಪರಬ್ರಹ್ಮವಹಂಥಾ ಆದಿಂದೇವಂ = ಮೊದಲ ದೆ ವನಹಂಥಾ ಪರಮೇಶ್ವರನನು ಬ್ರಹ್ಮಾ = ಬ್ರಹ್ಮನು ದದರ್ಶ ಹ = ಕಂಡನು. ॥೩೮॥

ಸಾ ದೇವೀ = ಆ ಪಾರ್ವತೀ ದೇವಿಯು ಯಸ್ಯ = ಆವನಾನೊಬ್ಬ ಪರಮೇಶ್ವರಂಗೆ ಆಕಾಶಸಂಜ್ಞಿತಾ = ಆಕಾಶಸ್ವರೂಪಿಣಿಯಹಂಥಾ ಪರಮಾ = ಉತ್ಕೃಷ್ಟವಹಂಥಾ ಶಕ್ತಿಃ = ಶಕ್ತಿ, ಅನಂತೈಶ್ವರ್ಯಯೋಗಾತ್ಮಾ = ಅನಂತೈಶ್ವರ್ಯದೊಡನೆ ಕೂಡಲುಪಟ್ಟ ಸ್ವರೂಪವನುಳ್ಳಂಥಾ ಸ ಮಹೇಶಃ = ಆ ಪರಮೇಶ್ವರನು ದೃಶ್ಯತೇ ಕಿಲ = ಪ್ರತ್ಯಕ್ಷನಾದನು. ॥೩೯॥

---

1 ಯೋಗಿನಾಂ (ಘ) 2 ಯಮಂತರ್ಯೋಗನಿಷ್ಠಾಶ್ಚ (ಘ)

ಯಸ್ಯ ಬ್ರಹ್ಮಾದಯೋ ದೇವಾ ಋಷಯೋ ಬ್ರಹ್ಮವಾದಿನಃ
ಅರ್ಚಯಂತಿ ಸದಾ ಲಿಂಗಂ ವಿಶ್ವೇಶಃ ಖಲು ದೃಶ್ಯತೇ ||೪೦||

ಯಸ್ಯಾಶೇಷಜಗತ್ಸೂತಿರ್ವಿಜ್ಞಾನತನುರೀಶ್ವರೀ
ನ ಮುಂಚತಿ ಸದಾ ಪಾರ್ಶ್ವಂ ಶಂಕರೋ ದೃಶ್ಯತೇ ಕಿಲ ||೪೧||

ಪುಷ್ಪಂ ವಾ ಯದಿ ವಾ ಪತ್ರಂ ಯತ್ಪಾದಯುಗಳೇ ನರಃ
ದತ್ವಾ ತರತಿ ಸಂಸಾರಂ ರುದ್ರೋಽಸೌ ದೃಶ್ಯತೇ ಕಿಲ ||೪೨||

ಯತ್ಸನ್ನಿಧಾನೇ ಸಕಲಂ ನಿಯಚ್ಛತಿ ಸನಾತನಃ
ಕಾಲಃ ಕಿಲ ಸ ಯೋಗಾತ್ಮಾ ಕಾಲಕಾಲೋ ಹಿ ದೃಶ್ಯತೇ ||೪೩||

---

ಯಸ್ಯ=ಆವನಾನೊರ್ವ ಶಿವನ ಲಿಂಗಂ=ಲಿಂಗವನು ಸದಾ=ಎಲ್ಲಾಗಳೂ ಬ್ರಹ್ಮಾದಯಃ=ಬ್ರಹ್ಮಮೊದಲಾಗಿದ್ದಂಥಾ ದೇವಾಃ = ದೇವರ್ಕಳು ಋಷಯಃ =ಋಷಿಗಳು ಬ್ರಹ್ಮವಾದಿನಃ=ವೇದಾಂತಿಗಳು ಅರ್ಚಯಂತಿ=ಅರ್ಚಿಸುತ್ತಿಹರು, [ಅಂತಪ್ಪ] ವಿಶ್ವೇಶಃ= ವಿಶ್ವಕ್ಕೆ ಒಡೆಯನಹಂಥಾ ಶಿವನು ದೃಶ್ಯತೇ ಖಲು = ಕಾಣಲುಪಟ್ಟನಲಾ. ||೪೦||

ಅಶೇಷಜಗತ್ಸೂತಿಃ =ಸಮಸ್ತ ಜಗತ್ತನು ಪಡದಂಥಾ ವಿಜ್ಞಾನತನುಃ= ಜ್ಞಾನಶರೀರವನುಳ್ಳಂಥಾ ಈಶ್ವರೀ=ಪಾರ್ವತೀದೇವಿಯು ಯಸ್ಯ=ಆವನಾನೊಬ್ಬ ಪರಮೇಶ್ವರನ ಪಾರ್ಶ್ವಂ=ಸಮೀಪವನು ಸದಾ = ಎಲ್ಲಾಗವೂ ನ ಮುಂಚತಿ =ಬಿಡುತ್ತಿರಳು [ಅಂತಪ್ಪ] ಶಂಕರಃ = ಸುಖವನು ಮಾಡುತ್ತಿದ್ದಂಥಾ ಪರಮ- ಶಿವನು ದೃಶ್ಯತೇ ಕಿಲ=ಪ್ರತ್ಯಕ್ಷವಾದನು. ||೪೧||

ನರಃ=ಮನುಷ್ಯನು ಪುಷ್ಪಂ ವಾ=ಪುಷ್ಪವಾಗಲಿ ಯದಿ ವಾ=ಎತ್ತಲಾನು ಪತ್ರಂ ವಾ=ಪತ್ರೆಯಾಗಲಿ ಯತ್ಪಾದಯುಗಳೇ = ಆವನಾನೊಬ್ಬ ಪರಮೇಶ್ವರನ ಪಾದವೆರಡರಲ್ಲಿ ದತ್ವಾ = ಸಮರ್ಪಿಸಿ ಸಂಸಾರಂ = ಸಂಸಾರವನು ತರತಿ= ದಾಂಟುತ್ತಿಹನು. ತೄ-ಪ್ಲವನ ತರಣಯೋಃ ಇತಿ ಧಾತುಃ| ಅಸೌ ರುದ್ರಃ=ಈ ರುದ್ರನು ದೃಶ್ಯತೇ ಕಿಲ=ಕಾಣಲುಪಟ್ಟನು. ||೪೨||

ಕಾಲಃ=ಕಾಲನು ಹಿ=ಆವುದಾನೊಂದು ಕಾರಣವಾಗಿ ಯತ್ಸನ್ನಿಧಾನೇ= ಆವನಾನೊಬ್ಬ ದೇವನ ಸಮೀಪದಲ್ಲಿ ಸಕಲಂ = ಸಮಸ್ತವನು ನಿಯಚ್ಛತಿ= ಮಾಡುತ್ತಿಹನು, ಸನಾತನಃ=ಕೇಡಿಲ್ಲದೇ ಇದ್ದಂಥಾ ಯೋಗಾತ್ಮಾ= ಯೋಗ- ಶರೀರಿಯಹಂಥಾ ಕಾಲಕಾಲಃ =ಕಾಲಂಗೆ ಕಾಲನಹಂಥಾ ಸಃ = ಆ ಪರಶಿವನ ದೃಶ್ಯತೇ ಕಿಲ=ಕಾಣಲುಪಟ್ಟನು. ||೪೩||

ಜೀವನಂ [1]ಸರ್ವಲೋಕಾನಾಂ[1] ತ್ರಿಲೋಕಸ್ಯೈಕಭೂಷಣಮ್
ಸ ಸೋಮೋ ದೃಶ್ಯತೇ ದೇವಃ ಸೋಮೋ ಯಸ್ಯ ವಿಭೂಷಣಮ್ ॥೪೩॥

ದೇವ್ಯಾ ಸಹ ಸದಾ ಸಾಕ್ಷಾದ್ಯಸ್ಯ ಯೋಗಃ ಸ್ವಭಾವತಃ
[2]ಗೀಯತೇ[2] ಪರಮಾ ಮುಕ್ತಿಃ ಮಹಾದೇವಸ್ಸ ದೃಶ್ಯತೇ ॥೪೪॥

ಯಸ್ಯ ವೇದವಿದಃ ಶಾಂತಾ ನಿರ್ದ್ವಂದ್ವಾ ಬ್ರಹ್ಮಚಾರಿಣಃ
ವಿದಂತಿ ವಿಮಲಂ ರೂಪಂ ಸ ಶಂಭುರ್ದೃಶ್ಯತೇ ಕಿಲ ॥೪೫॥

ಯೋಽಪ್ಯನಾಚಾರನಿರತಾನ್ ಸ್ವಭಕ್ತಾನೇವ ಕೇವಲಮ್
ವಿ[3]ಮೋಚಯತಿ[3] ಲೋಕಾನಾಂ ನಾಯಕೋ ದೃಶ್ಯತೇ ಕಿಲ ॥೪೬॥

---

ಸರ್ವಲೋಕಾನಾಂ = ಸಮಸ್ತ ಲೋಕಂಗಳಿಗೆ ಜೀವನಂ = ಜೀವನವಹಂಥಾ ತ್ರಿಲೋಕಸ್ಯ = ಮೂರು ಲೋಕಕ್ಕೆ ಏಕಭೂಷಣಂ = ಒಬ್ಬನೇ ಅಲಂಕಾರವಹಂಥಾ ಸೋಮಃ = ಚಂದ್ರನು ಯಸ್ಯ = ಆವನಾನೊಬ್ಬ ದೇವಂಗೆ ವಿಭೂಷಣಂ = ಆಭರಣವು, ಸೋಮಃ = ಉಮೆಯಿಂದ ಸಹಿತವಹಂಥಾ ಸ ದೇವಃ = ಆ ಪರಮೇಶ್ವರನು ದೃಶ್ಯತೇ = ಪ್ರತ್ಯಕ್ಷನಾದನು. ॥೪೩॥

ಯಸ್ಯ = ಆವನಾನೊಬ್ಬ ದೇವಂಗೆ ಸದಾ = ಎಲ್ಲಾಗವೂ ಸಾಕ್ಷಾತ್ = = ಪ್ರತ್ಯಕ್ಷವಹಂಥಾ ದೇವ್ಯಾ ಸಹ = ಪರಮಶಕ್ತಿಯೊಡನೆ ಸ್ವಭಾವತಃ = ಸ್ವಭಾವದಿಂದ ಯೋಗಃ = ಕೂಟವೆಂದು ಪರಮಾ ಮುಕ್ತಿಃ = ಉತ್ಕೃಷ್ಟವಹಂಥಾ ಮುಕ್ತಿವನಿತೆ ಗೀಯತೇ = ಕೊಂಡಾಡಲ್ಪಡುತ್ತಿಹಳು, ಸ ಮಹಾದೇವಃ = ಆ ಮಹಾದೇವನು ದೃಶ್ಯತೇ = ಪ್ರತ್ಯಕ್ಷನಾದನು. ॥೪೪॥

ವೇದವಿದಃ = ವೇದವಿತ್ತುಗಳಹಂಥಾ ಶಾಂತಾಃ = ಶಾಂತರುಗಳಹಂಥಾ ನಿರ್ದ್ವಂದ್ವಾಃ = ದ್ವಂದ್ವರಹಿತರಹಂಥಾ ಬ್ರಹ್ಮಚಾರಿಣಃ = ಬ್ರಹ್ಮಚಾರಿಗಳು ಯಸ್ಯ = ಆವನಾನೊಬ್ಬ ದೇವನ ವಿಮಲಂ = ನಿರ್ಮಲವಹಂಥಾ ರೂಪಂ = ಸ್ವರೂಪವನು ವಿದಂತಿ = ಅರಿವುತ್ತಿಹರು, ಸ ಶಂಭುಃ = ಆ ಪರಮೇಶ್ವರನು ದೃಶ್ಯತೇ ಕಿಲ = ಪ್ರತ್ಯಕ್ಷವಾದನು. ॥೪೫॥

ಯೋಽಪಿ = ಆವನಾನೊಬ್ಬ ದೇವನು ಕೇವಲಂ = ಬರಿಯ ಅನಾಚಾರ ನಿರತಾನ್ = ಅನಾಚಾರದಲ್ಲಿ ತತ್ಪರರಹಂಥಾ ಸ್ವಭಕ್ತಾನೇವ = ತನ್ನ ಭಕ್ತರುಗಳನೇ ವಿಮೋಚಯತಿ = ಮೋಕ್ಷವನೆಯ್ದಿಸುತ್ತಿಹನು, ಲೋಕಾನಾಂ = ಸಮಸ್ತ ಲೋಕಂ

---

[1] ಸರ್ವಭೂತಾನಾ (ಕ) ಮೂಲಮಾತ್ರ [2] ನಿಯತಾ (ಘ) ಮೂಲ. ಗೀಯ್ಯತೇ (ಘ) ಪಾಠಾಂತರ [3] ವಿಮೋಹಯತಿ (ಕ) ಮೂಲ ಮಾತ್ರ

[1]ಸೋsನುವೀಕ್ಷ್ಯ[1] ಮಹಾದೇವ್ಯಾ ಮಹಾದೇವಂ ಸನಾತನಮ್
ವರಾಸನೇ ಸಮಾಸೀನಮವಾಪ ಪರಮಾಂ ಸ್ಮೃತಿಮ್ ||೪೮||

ಲಬ್ಧ್ವಾ ಮಾಹೇಶ್ವರೀಂ ದಿವ್ಯಾಂ ಸಂಸ್ಮೃತಿಂ ಭಗವಾನಜಃ
ತೋಷಯಾಮಾಸ ವರದಂ ಸೋಮಂ ಸೋಮಾರ್ಧಭೂಷಣಮ್ ೪೯

ಬ್ರಹ್ಮೋವಾಚ—

ನಮೋ ದೇವಾಯ ಮಹತೇ ಮಹಾದೇವ್ಯೈ ನಮೋ ನಮಃ
ನಮಃ ಶಿವಾಯ ಶಾಂತಾಯ ಶಿವಾಯೈ ಶಾಂತಯೇ ನಮಃ ||೫೦||

---

ಗಳಿಗೆ ನಾಯಕಃ=ಒಡೆಯನಹಂಥಾ [ಆ] ಪರಮಶಿವನು ದೃಶ್ಯತೇಕಿಲ=ಪ್ರತ್ಯಕ್ಷವಾದನು. ||೪೬||

ಸಃ=ಆ ಬ್ರಹ್ಮನು ವರಾಸನೇ = ಸಿಂಹಾಸನದಲ್ಲಿ ಮಹಾದೇವ್ಯಾ = ಪಾರ್ವತೀದೇವಿಯೊಡನೆ ಸಮಾಸೀನಂ=ಕುಳ್ಳಿರ್ದಂಥಾ ಸನಾತನಂ=ನಿತ್ಯನಹಂಥಾ ಮಹಾದೇವಂ=ಪರಮೇಶ್ವರನನು ಅನುವೀಕ್ಷ್ಯ=ಕಂಡು ಪರಮಾಂ=ಉತ್ಕೃಷ್ಟವಹಂಥಾ ಸ್ಮೃತಿಂ=ನೆನಹನು ಅವಾಪ=ಪಡದನು. ||೪೮||

ಭಗವಾನ್=ಸಾಮರ್ಥ್ಯವನುಳ್ಳಂಥಾ ಅಜಃ=ಬ್ರಹ್ಮನು ಮಾಹೇಶ್ವರೀಂ =ಶಿವಸಂಬಂಧವಹಂಥಾ ದಿವ್ಯಾಂ=ಮನೋಹರವಹಂಥಾ ಸಂಸ್ಮೃತಿಂ=ನೆನಹನು ಲಬ್ಧ್ವಾ=ಪಡದು ವರದಂ=ವರವ ಕೊಡುತ್ತಿದ್ದಂಥಾ ಸೋಮಾರ್ಧಭೂಷಣಂ =ಚಂದ್ರಾರ್ಧಭೂಷಣನಹಂಥಾ ಸೋಮಂ=ಉಮೆಯಿಂದ ಸಹಿತನಹಂಥಾ ಶಿವನನು ತೋಷಯಾಮಾಸ=ಸಂತೋಷಬಡಿಸಿದನು. ||೪೯||

ಬ್ರಹ್ಮೋವಾಚ=ಬ್ರಹ್ಮನ ವಾಕ್ಯವು.

ಮಹತೇ=ಉತ್ಕೃಷ್ಟವಹಂಥಾ ದೇವಾಯ=ದೇವಂಗೋಸ್ಕರ ನಮಃ = ನಮಸ್ಕಾರವು. ಮಹಾದೇವ್ಯೈ = ಮಹಾದೇವಿಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. ಶಾಂತಾಯ = ಶಾಂತನಹಂಥಾ ಶಿವಾಯ = ಶಿವಂಗೋಸ್ಕರ ನಮಃ = ನಮಸ್ಕಾರವು. ಶಾಂತಯೇ = ಶಾಂತಿಯಹಂಥಾ ಶಿವಾಯೈ=ಪಾರ್ವತೀದೇವಿಗೋಸ್ಕರ ನಮಃ=ನಮಸ್ಕಾರವು. ||೫೦||

---

[1] ಸೋಮಂ ವೀಕ್ಷ್ಯ (ಘ)

ಓಂ ನಮೋ ಬ್ರಹ್ಮಣೇ ತುಭ್ಯಂ ವಿದ್ಯಾಯೈ ಚ ನಮೋ ನಮಃ
ನಮೋ ನಮಸ್ತೇ ಕಾಲಾಯ[1] ಮಾಯಾಯೈ ಚ ನಮೋ ನಮಃ[2] ೫೧

ನಿಯಂತ್ರೇ ಸರ್ವಕಾರ್ಯಾಣಾಂ ಕ್ಷೋಭಿತಾಯೈ ನಮೋಽಸ್ತು ತೇ
ನಮೋ ಮೂಲಪ್ರಕೃತಯೇ ಮಹೇಶಾಯ ನಮೋ ನಮಃ ||೫೨||

ನಮೋ ವಿಜ್ಞಾನದೇಹಾಯ ಸ್ಮೃತಯೇ ಚ ನಮೋ ನಮಃ
ನಮೋ ನಮೋಽಸ್ತು ರುದ್ರಾಯ ರುದ್ರಾಣ್ಯೈ ಚ ನಮೋ ನಮಃ ೫೩

ನಮೋಽಸ್ತು ತೇ ಪ್ರಕೃತಯೇ ನಮೋ ನಾರಾಯಣಾಯ ಚ
ಯೋಗದಾಯೈ ನಮಸ್ತುಭ್ಯಂ ಯೋಗಿನಾಂ ಗುರವೇ ನಮಃ ||೫೪||

---

ಬ್ರಹ್ಮಣೇ = ಪರಬ್ರಹ್ಮನಹಂಥಾ ತುಭ್ಯಂ = ನಿನಗೋಸ್ಕರ ಓಂ ನಮಃ = ಪ್ರಣವಸಹಿತವಾಗಿ ನಮಸ್ಕಾರವು. ವಿದ್ಯಾಯೈ ಚ = ವಿದ್ಯಾರೂಪಿಣಿಯಹಂಥಾ ದೇವಿಗೋಸ್ಕರವು ನಮೋ ನಮಃ = ನಮಸ್ಕಾರವು ನಮಸ್ಕಾರವು, ಕಾಲಾಯ = ಕಾಲಸ್ವರೂಪನಹಂಥಾ ತೇ = ನಿನಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. [2]ಮಾಯಾಯೈಚ = ಮಾಯೆಯಹಾಥಾ ದೇವಿಗೋಸ್ಕರವು ನಮೋ ನಮಃ = ನಮಸ್ಕಾರವು ನಮಸ್ಕಾರವು.[3] ||೫೧||

ಸರ್ವಕಾರ್ಯಾಣಾಂ = ಸಮಸ್ತ ಕಾರ್ಯಂಗಳ ನಿಯಂತ್ರೇ = ನಿರ್ಮಿಸಿದಂಥಾ ಮಹೇಶಾಯ = ಮಹದೈಶ್ವರ್ಯವನುಳ್ಳಂಥಾ ತೇ = ನಿನಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. ಕ್ಷೋಭಿತಾಯೈ = ಸಂಸಾರವನು ನಡುಗಿಸುತ್ತಿದ್ದಂಥಾ ಮೂಲಪ್ರಕೃತಯೇ = ಆದಿಶಕ್ತಿಯಹಂಥಾ ದೇವಿಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು ಅಸ್ತು = ಆಗಲಿ. ||೫೨||

ವಿಜ್ಞಾನದೇಹಾಯ = ಜ್ಞಾನಶರೀರಿಯಹಂಥಾ ನಿನಗೋಸ್ಕರ ನಮಃ = ನಮಸ್ಕಾರವು. ಸ್ಮೃತಯೇ ಚ = ಧ್ಯಾನರೂಪಿಣಿಯಹಂಥಾ ಪಾರ್ವತೀದೇವಿಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. ರುದ್ರಾಯ = ರುದ್ರಂಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು ಅಸ್ತು = ಆಗಲಿ. ರುದ್ರಾಣ್ಯೈ ಚ = ರುದ್ರಾಣಿಯಹಂಥಾ ದೇವಿಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. ||೫೩||

ಪ್ರಕೃತಯೇ = ಶಕ್ತಿಯಹಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು ಅಸ್ತು = ಆಗಲಿ. ನಾರಾಯಣಾಯ ಚ = ನಾರಾಯಣನಹಂಥಾ ನಿನಗೋಸ್ಕರವು

---

[2] ಈ ಪಾಠವೂ (ಖ) ದಲ್ಲಿದೆ. ಆದರೆ ವ್ಯಾಖ್ಯಾನ ಭಾಗ (ಖ) ದಲ್ಲಿ ಬಿಟ್ಟುಹೋಗಿದೆ.

ಭೂತಯೇ ಸರ್ವಭೂತಾನಾಂ ನಮೋ [1]ಯೋ[ಗ]ರ್ದ್ಧಯೇ[1] ನಮಃ
ನಮಃ ಸಂಸಾರನಾಶಾಯ ಸಂಸಾರೋತ್ಪತ್ತಯೇ ನಮಃ ||೫೫||

ನಿತ್ಯಾನಂದಾಯ ವಿಭವೇ ನಮೋಽಸ್ತ್ವಾನಂದಮೂರ್ತಯೇ
ನಮಃ ಕಾರ್ಯವಿಹೀನಾಯ ವಿಶ್ವಪ್ರಕೃತಯೇ ನಮಃ ||೫೬||

ಓಂಕಾರಮೂರ್ತಯೇ ತುಭ್ಯಂ ತದಂತಸ್ಸಂಸ್ಥಿತಾಯ ತೇ
ನಮಸ್ತೇ ವ್ಯೋಮಸಂಸ್ಥಾಯ ವ್ಯೋಮಶಕ್ತ್ಯೈ ನಮೋ ನಮಃ ೫೭

ನಮಃ = ನಮಸ್ಕಾರವು. ಯೋಗದಾಯೈ = ಯೋಗವನು ಕೊಡುತ್ತಿದ್ದಂಥಾ ಪಾರ್ವತೀದೇವಿಗೋಸ್ಕರ ನಮಃ = ನಮಸ್ಕಾರವು. ಯೋಗಿನಾಂ = ಯೋಗಿಗಳಿಗೆ ಗುರವೇ = ಗುರುವಹಂಥಾ ತುಭ್ಯಂ = ನಿನಗೋಸ್ಕರ ನಮಃ = ನಮಸ್ಕಾರವು. ||೫೪||

ಸರ್ವಭೂತಾನಾಂ = ಸಮಸ್ತ ಪ್ರಾಣಿಗಳ ಭೂತಯೇ = ಉತ್ಪತ್ತಿಯ ಮಾಡುತ್ತಿದ್ದಂಥಾ ನಿನಗೋಸ್ಕರ ನಮಃ = ನಮಸ್ಕಾರವು. ಯೋಗರ್ದ್ಧಯೇ = ಯೋಗವ ಹೆಚ್ಚಿಸುತ್ತಿದ್ದಂಥಾ ಪಾರ್ವತೀದೇವಿಗೋಸ್ಕರ ನಮಃ = ನಮಸ್ಕಾರವು ಅಸ್ತು = ಆಗಲಿ. ಸಂಸಾರನಾಶಾಯ = ಸಂಸಾರವ ನಾಶವ ಮಾಡುವಂಥಾ ನಿನಗೋಸ್ಕರ ನಮಃ = ನಮಸ್ಕಾರವು. ಸಂಸಾರೋತ್ಪತ್ತಯೇ = ಸಂಸಾರವ ಹುಟ್ಟಿಸುವಂಥಾ ದೇವಿಗೋಸ್ಕರ ನಮಃ = ನಮಸ್ಕಾರವು. ||೫೫||

ನಿತ್ಯಾನಂದಾಯ = ಸದಾ ಆನಂದವನುಳ್ಳಂಥಾ ವಿಭವೇ = ಪರಿಪೂರ್ಣ ನಹಂಥಾ ಆನಂದಮೂರ್ತಯೇ = ಆನಂದವೇ ರೂಪಾದಂಥಾ ನಿನಗೋಸ್ಕರ ನಮಃ = ನಮಸ್ಕಾರವು ಅಸ್ತು = ಆಗಲಿ. ಕಾರ್ಯವಿಹೀನಾಯ = ಕಾರ್ಯವಿಲ್ಲದಾತಂ ಗೋಸ್ಕರ ನಮಃ = ನಮಸ್ಕಾರವು. ವಿಶ್ವಪ್ರಕೃತಯೇ = ಸಮಸ್ತ ಲೋಕಕ್ಕೆ ಮಾಯೆಯಹಂಥಾ ದೇವಿಗೋಸ್ಕರ ನಮಃ = ನಮಸ್ಕಾರವು. ||೫೬||

ಓಂಕಾರಮೂರ್ತಯೇ = ಪ್ರಣವಸ್ವರೂಪವಹಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು. ತದಂತಃ = ಆ ಪ್ರಣವದೊಳಗೆ ಸಂಸ್ಥಿತಾಯ = ಇರುತ್ತಿದ್ದಂಥಾ ತುಭ್ಯಂ = ನಿನಗೋಸ್ಕರ ನಮಃ = ನಮಸ್ಕಾರವು. ವ್ಯೋಮ ಸಂಸ್ಥಾಯ = ಆಕಾಶದಲ್ಲಿ ಇರುತ್ತಿದ್ದಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು. ವ್ಯೋಮಶಕ್ತ್ಯೈ = ಆಕಾಶಸ್ವರೂಪವನುಳ್ಳ ಶಕ್ತಿಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. ||೫೭||

[1] ಯೋಗಾರ್ದ್ಧಯೇ (ಕ ಖ ಗ ಚ) ಯೋಗಾರ್ತಯೇ (ಘ) ವ್ಯಾಖ್ಯಾನುಸಾರ ಮೂಲ ಪಾಠವನ್ನು ಇಡಲಾಗಿದೆ.

ಇತಿ 'ಸೋಮಾಷ್ಟಕೇನೇ'ಶಂ [1]ಪ್ರಣಮ್ಯ[1] ಸ ಪಿತಾಮಹಃ
ಪಪಾತ ದಂಡವದ್ಭೂಮೌ ಗೃಣನ್ ವೈ ಶತರುದ್ರಿಯಮ್ ||೫೮||

ಅಥ ದೇವೋ ಮಹಾದೇವಃ ಪ್ರಣತಾರ್ತಿಹರೋ ಹರಃ
ಪ್ರೋವಾಚೋತ್ಥಾಪ್ಯ ಹಸ್ತಾಭ್ಯಾಂ ಪ್ರೀತೋಽಸ್ಮಿ ತವ ಸಾಂಪ್ರತಮ್

ದತ್ವಾಽಸ್ಮೈ ಪರಮಂ ಯೋಗಮೈಶ್ವರ್ಯಮತುಲಂ ಮಹತ್ ।
ಪ್ರೋವಾಚಾಗ್ರೇ [2]ಸ್ಥಿತಂ[2] ರುದ್ರಂ ನೀಲಲೋಹಿತಮೀಶ್ವರಮ್ ||೬೦||

ಏಷ ಬ್ರಹ್ಮಾ ತು ಜಗತಾಂ ಸಂಪೂಜ್ಯಃ ಪ್ರಥಮಸ್ಸುತಃ
ಸರ್ವದಾ ರಕ್ಷಣೀಯೋಽಯಂ ಭವತಾಽಪಿ ದಯಾಲುನಾ ||೬೧||

---

ಇತಿ = ಈ ಪ್ರಕಾರವಲ್ಲಿ ಸೋಮಾಷ್ಟಕೇನ = [3]ಉಮಾಸಹಿತವಹಂಥಾ ಅಷ್ಟಕದಿಂದ[3] ಈಶಂ = [4]ಪರಮೇಶ್ವರನನು[4] ಪ್ರಣಮ್ಯ = ನಮಸ್ಕರಿಸಿ ಸ ಪಿತಾಮಹಃ = ಆ ಬ್ರಹ್ಮನು ಶತರುದ್ರಿಯಂ = ಶ್ರೀರುದ್ರವನು ಗೃಣನ್ ವೈ = ಸ್ತೋತ್ರವ ಮಾಡುತ್ತವೂ ಭೂಮೌ = ಭೂಮಿಯಲ್ಲಿ ದಂಡವತ್ = ದಡಿಯೋಪಾದಿಯಲ್ಲಿ ಪಪಾತ = ಬಿದ್ದನು. ||೫೮||

ಅಥ = ಅನಂತರದಲ್ಲಿ ಪ್ರಣತಾರ್ತಿಹರಃ = ನಮಸ್ಕರಿಸಿದವರ ಪೀಡೆಯನು ತೊಲಗಿಸುತ್ತಿದ್ದಂಥಾ ಹರಃ = ಭವವನಪಹರಿಸುವಂಥಾ ದೇವಃ = ಪ್ರಕಾಶಸ್ವರೂಪನಹಂಥಾ ಮಹಾದೇವಃ = ಪರಮೇಶ್ವರನು ಹಸ್ತಾಭ್ಯಾಂ = ಹಸ್ತವೆರಡರಿಂದ ಉತ್ಥಾಪ್ಯ = ನೆಗಹಿ ತವ = ನಿನಗೆ ಸಾಂಪ್ರತಂ = ಈಗ ಪ್ರೀತೋಽಸ್ಮಿ = ಸಂತುಷ್ಟನಾದೆನು ಎಂದು ಪ್ರೋವಾಚ = ನುಡಿದನು. ||೫೯||

ಅಸ್ಮೈ = ಈ ಬ್ರಹ್ಮಂಗೋಸ್ಕರ ಪರಮಂ = ಉತ್ಕೃಷ್ಟವಹಂಥಾ ಯೋಗಂ = ಯೋಗವನು ಅತುಲಂ = ಸಮಾನವಲ್ಲದೇ ಇದ್ದಂಥಾ ಮಹತ್ = ಅಧಿಕವಹಂಥಾ ಐಶ್ವರ್ಯಂ = ಐಶ್ವರ್ಯವನು ದತ್ವಾ = ಕೊಟ್ಟು ಅಗ್ರೇ = ಇದಿರಿನಲ್ಲಿ ಸ್ಥಿತಂ = ಇರುತ್ತಿದ್ದಂಥಾ ರುದ್ರಂ = ದುಃಖವನು ಕೆಡಿಸುತ್ತಿದ್ದಂಥಾ ಈಶ್ವರಂ = ಐಶ್ವರ್ಯವನುಳ್ಳಂಥಾ ನೀಲಲೋಹಿತಂ = ಕಾಲಭೈರವನನು ಕುರಿತು ಪ್ರೋವಾಚ = ನುಡಿದನು. ||೬೦||

ಏಷಃ = ಈ ಬ್ರಹ್ಮಾ ತು = ಬ್ರಹ್ಮನು ಜಗತಾಂ = ಲೋಕಂಗಳಿಗೆ ಸಂಪೂಜ್ಯಃ = ಪೂಜ್ಯನು ಪ್ರಥಮಃ ಸುತಃ = ಎನ್ನ ಮೊದಲ ಪುತ್ರನು- ದಯಾಲುನಾ = ಕೃಪಾಳುವಹಂಥಾ ಭವತಾಪಿ = ನಿನ್ನಿಂದವೂ ಸರ್ವದಾ = ಎಲ್ಲಾಗವೂ ಅಯಂ = ಈ ಬ್ರಹ್ಮನು ರಕ್ಷಣೀಯಃ = ರಕ್ಷಿಸಲು ಯೋಗ್ಯನು. ||೬೧||

---

[1] ಸಂಸ್ತುತ್ಯ (ಘ,) (ಕ) ಮೂಲ ಮಾತ್ರ. [2] ಸ್ಮಿತಂ (ಕ) ಮೂಲ ಮಾತ್ರ
[3] ಸೋಮಾಷ್ಟಕದಿಂದ (ಖ ಚ) [4] ಈಸ್ವರನನು (ಕ)

ಅಯಂ ಪುರಾಣಪುರುಷೋ ನ ಹಂತವ್ಯಸ್ತ್ವಯಾऽನಘ
ಸ್ವಯೋಗೈಶ್ವರ್ಯಮಾಹಾತ್ಮ್ಯಾನ್ಮಾಮೇವ ಶರಣಂ ಗತಃ ॥೬೨॥

ಅಯಂ ಚ ಯಜ್ಞೋ[1]ಭಗವಾನ್ ಸಗರ್ವೋ ಭವತಾऽನಘ
ಶಾಸಿತವ್ಯೋ ವಿರಿಂಚಸ್ಯ ಧಾರಣೀಯಂ [2]ಶಿರಸ್ತ್ವಯಾ ॥೬೩॥

ಇತ್ಯೇತದುಕ್ತ್ವಾ ವಚನಂ ಭಗವಾನ್ ಪರಮೇಶ್ವರಃ
ಸ್ಥಾನಂ ಸ್ವಾಭಾವಿಕಂ ದಿವ್ಯಂ ಯಯೌ ತತ್ಪರಮಂ ಪದಮ್ ॥೬೪॥

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ-
ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಶ್ರೀಮಲ್ಲಿಕಾರ್ಜುನಾ-
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ನಾಟಭಾಷಾವಿವರಣೇ
ಶಿವಾಧಿಕ್ಯಕಥನೇ 'ಬ್ರಹ್ಮಶಿರಚ್ಛೇದನಂ'
ನಾಮ ತ್ರಯೋದಶೋऽಧ್ಯಾಯಃ

---

ಭೋ ಅನಘ = ಎಲೈ ನಿರ್ದೋಷಿಯಹಂಥಾತನೇ ! ಅಯಂ = ಈ ಪುರಾಣ— ಪುರುಷಃ = ಪುರಾಣಪುರುಷನಹಂಥಾ ಬ್ರಹ್ಮನು ಸ್ವಯೋಗೈಶ್ವರ್ಯಮಾಹಾತ್ಮ್ಯಾತ್ = ತನ್ನ ಯೋಗೈಶ್ವರ್ಯದ ಸಾಮರ್ಥ್ಯದ ಡೆಸೆಯಿಂದ ಮಾಮೇವ = ಎನ್ನನೇ ಶರಣಂ = ಮರೆಯೊಗುಹವನು ಗತಃ = ಎಯ್ದಿದನು. ತ್ವಯಾ = ನಿನ್ನಿಂದ ನ ಹಂತವ್ಯಃ = ಕೊಲಲು ಯೋಗ್ಯನಲ್ಲ. ॥೬೨॥

ಭಗವಾನ್ = ಸಾಮರ್ಥ್ಯವನುಳ್ಳಂಥಾ ಅಯಂ ಯಜ್ಞಶ್ಚ = ಈ ಯಜ್ಞನು ಸಗರ್ವಃ = ಗರ್ವದಿಂದ ಸಹಿತವಹಂಥಾತನು. ಭೋ ಅನಘ = ಎಲೈ ನಿರ್ದೋಷಿ ಯಹಂಥಾತನೇ ! ಭವತಾ = ನಿನ್ನಿಂದ ಶಾಸಿತವ್ಯಃ = ಶಿಕ್ಷಿಸಲು ಯೋಗ್ಯನು. ವಿರಿಂಚಸ್ಯ = ಬ್ರಹ್ಮನ ಶಿರಃ = ಶಿರಸ್ಸು ತ್ವಯಾ = ನಿನ್ನಿಂದ ಧಾರಣೀಯಂ = ಧರಿಸಲು ಯೋಗ್ಯವು. ॥೬೩॥

ಇತಿ = ಈ ಪ್ರಕಾರದಲ್ಲಿ ಏತತ್ ವಚನಂ = ಈ ವಾಕ್ಯವನು ಉಕ್ತ್ವಾ = ನುಡಿದು ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಹಂಥಾ ಪರಮೇಶ್ವರಃ = ಪರಮೇಶ್ವರನು ಸ್ವಾಭಾವಿಕಂ = ತನ್ನ ಸಂಬಂಧವಹಂಥಾ ಪರಮಂ = ಉತ್ಕೃಷ್ಟ ವಹಂಥಾ ಪದಂ = ಕುರುಹಸುಳ್ಳಂಥಾ ದಿವ್ಯಂ = ಪ್ರಕಾಶವಹಂಥಾ ತತ್ = ಆ ಸ್ಥಾನಂ = ಸ್ಥಾನವನು ಯಯೌ = ಎಯ್ದಿದನು. ॥೬೪॥

---

[1] ಭಗವನ್ (ಘ) [2] ಶಿರಸ್ತ್ವದಂ (ಘ)

# ಚತುರ್ದಶೋಽಧ್ಯಾಯಃ

## ( ಭಿಕ್ಷಾಟನಲೀಲಾ )

ಬ್ರಹ್ಮಾಂಡಪುರಾಣೇ ಸೂತ ಉವಾಚ—

ತತಃ ಸ ಭಗವಾನೀಶಃ ಕಪರ್ದೀ ನೀಲಲೋಹಿತಃ
[1]ಗ್ರಾಹಯಾಮಾಸ[1] ವದನಂ ಬ್ರಹ್ಮಣಃ ಕಾಲಭೈರವಃ ॥೧॥

ಸ್ವತಂತ್ರಃ ಪರಿಪೂರ್ಣಶ್ಚ ನಿರವಗ್ರಹವಿಗ್ರಹಃ
ಭೂತಪ್ರಮಥರುದ್ರಾಣಾಂ ಕೋಟಿಭಿಃ ಪರಿವಾರಿತಃ ॥೨॥

ಬ್ರಹ್ಮಾಂಡಪುರಾಣೇ ಸೂತ ಉವಾಚ — ಬ್ರಹ್ಮಾಂಡಪುರಾಣದಲ್ಲಿ ಸೂತ ಮಹಾಋಷಿ [2]ನುಡಿದನು.[2]

ತತಃ = ಅನಂತರದಲ್ಲಿ ಭಗವಾನ್ = ಷಡ್ಗುಣೈಶ್ವರ್ಯವನುಳ್ಳಂಥಾ ಈಶಃ = ಒಡೆಯನಹಂಥಾ ಕಪರ್ದೀ = ಜಟಾಜೂಟವನುಳ್ಳಂಥಾ ನೀಲಲೋಹಿತಃ = ಕೊರಳ ಕಪ್ಪು ಜಡೆಯ ಕೆಂಪುವರ್ಣವನುಳ್ಳಂಥಾ ಸಃ ಕಾಲಭೈರವಃ = ಆ ಕಾಲ ಭೈರವನು ಬ್ರಹ್ಮಣಃ = ಬ್ರಹ್ಮನ ವದನಂ = ಮುಖವನು ಗ್ರಾಹಯಾಮಾಸ = ಧರಿಸಿದನು. ನೀಲಲೋಹಿತ ಶಬ್ದಕ್ಕೆ ನಿರ್ವಚನವು — ಕಂಠೇ ನೀಲಃ ಕೇಶೇಷು ಲೋಹಿತೋ ಯಸ್ಯ ಸಃ ನೀಲಲೋಹಿತಃ ಈ ನಿರ್ವಚನ ಲಿಂಗಾಭಟ್ಟೀಯಲ್ಲಿ[3] ಹೇಳಲು ಪಟ್ಟಿತ್ತು.

ಸ್ವತಂತ್ರಃ = ಸ್ವತಂತ್ರನಹಂಥಾ ಪರಿಪೂರ್ಣಶ್ಚ = ಪರಿಪೂರ್ಣನಹಂಥಾ ಕಾಲ ಭೈರವನು[4] ನಿರವಗ್ರಹವಿಗ್ರಹಃ[4] = [5]ತಟ್ಟೆಯುವ[5]ಮಾಡದೇ ಬ್ರಹ್ಮಕಪಾಲವ ಧರಿಸಿ

[1] ಜಗ್ರಾಹ ತಸ್ಯ (ಘ) ಪಾಠಾಂತರ [2] ಹೇಳುತ್ತಿದ್ದಾನು (ಖ)

[3] (O.R.I. ನಲ್ಲಿನ S. 586ನೇ ನಂಬರಿನ ಆಂಧ್ರಲಿಪಿಯ ತಾಳಪತ್ರದ ಲಿಂಗಾಭಟ್ಟೀಯಲ್ಲಿ ''ನೀಲಶ್ಚಾಸೌ ಲೋಹಿತಶ್ಚ ನೀಲಲೋಹಿತಃ । ನೀಲಃ ಕಂಠೇ ಕೇಶೇಷು ಲೋಹಿತೋ ವಾ' ಎಂದು ನಿರ್ವಚನ ಉಕ್ತವಾಗಿದೆ].

[4] [ಅನಿಂದ್ಯವಾದ ಅರ್ಥಾತ್ ಪಾವನವಾದ ಅಥವಾ ಅವಿಭಕ್ತವಾದ ಶರೀರವುಳ್ಳವನಾಗಿ]

[5] ತಟ್ಟೆಯವ (ಖ) (?) [ತಂಟೆ ?]

ದೇವಾನಾಂ ದಾನವಾನಾಂ ಚ ತಥಾಽನ್ಯೇಷಾಂ ಚ ಮಾದ್ಯತಾಮ್
ರಕ್ತಭಿಕ್ಷಾಚ್ಛಲೇನೈವ ಗರ್ವಕಂಡೂಂ ಹರಾಮ್ಯಹಮ್ ||೩||

ಇತಿ ನಿಶ್ಚಿತ್ಯ ವಿಶ್ವಾತ್ಮಾ ಚಚಾರ ಭುವನತ್ರಯಮ್
ಆಸ್ಥಾಯ ವಿಕೃತಂ ವೇಷಂ ದೀಪ್ಯಮಾನಂ ಸ್ವತೇಜಸಾ
ಶ್ರೀಮತ್ಪವಿತ್ರಂ ರುಚಿರಂ ಲೋಚನತ್ರಯಸಂಯುತಮ್ ||೪||

ಕಾಲಾಗ್ನಿಕೋಟಿಸಂಕಾ[1]ಶ[1]ಪ್ರಜ್ವಲತ್ಕೇಶಸಂಹ[2]ತಿಃ[2]
ದಂಷ್ಟ್ರಾಕರಾಳವದ[3]ನೋ[3] ಮಹಾಜಲದನಿಸ್ಸ್ವ[4]ನಃ[4] ||೫||

---

ದಾತನಾಗಿ ಭೂತಪ್ರಮಥರುದ್ರಾಣಾಂ= ಭೂತಗಣ ಪ್ರಮಥಗಣ ರುದ್ರಗಣಂಗಳ ಕೋಟಿಭಿಃ=ಕೋಟಿ ಸಂಖ್ಯೆಗಳಿಂದ ಪರಿವಾರಿತಃ=ಮುಸುಕಲುಪಟ್ಟಾತನಾದನು. ವಿಗ್ರಹಶಬ್ದಕ್ಕೆ ನಿರ್ವಚನವು = ವಿಶೇಷೇಣ ಗೃಹ್ಣಾತೀತಿ ವಿಗ್ರಹಃ. ಗ್ರಹ = ಉಪಾದಾನೇ ಎಂಬ ಧಾತು ಪ್ರಯೋಗವು. ||೨||

ರಕ್ತಭಿಕ್ಷಾಚ್ಛಲೇನೈವ=ರಕ್ತಭಿಕ್ಷದ ನೆವದಿಂದವೇ ದೇವಾನಾಂ=ದೇವರ್ಕಳ ದಾನವಾನಾಂ ಚ= ರಾಕ್ಷಸರುಗಳ ತಥಾ = ಹಾಂಗೆ ಅನ್ಯೇಷಾಂ=ಮತ್ತೆ ಕೆಲಂಬರುಗಳ ಮಾದ್ಯತಾಂ =ಮದದ ಸಂಬಂಧವಹಾಥಾ ಗರ್ವಕಂಡೂಂ ಚ = ಗರ್ವದ ತಿಮಿರವನು ಅಹಂ=ನಾನು ಹರಾಮಿ=ತಗ್ಗಿಸುವೆನು. ||೩||

ಇತಿ=ಹೀಗೆಂದು ನಿಶ್ಚಿತ್ಯ=ನಿಶ್ಚೈಸಿ ವಿಶ್ವಾತ್ಮಾ= ವಿಶ್ವರೂಪನಹಂಥಾ ಕಾಲಭೈರವನು ಸ್ವತೇಜಸಾ = ತನ್ನ ತೇಜಸ್ಸಿನಿಂದ ದೀಪ್ಯಮಾನಂ = ಪ್ರಕಾಶಿಸುತ್ತಿದ್ದಂಥಾ ವಿಕೃತು = ಭಯಂಕರವಹಂಥಾ ಶ್ರೀಮತ್ = ಒಪ್ಪುತ್ತಿದ್ದಂಥಾ ಪವಿತ್ರಂ—ಪಾವನವಹಂಥಾ ರುಚಿರಂ=ಚೆಲುವಿಕೆಯನುಳ್ಳಂಥಾ ಲೋಚನತ್ರಯಸಂಯುತಂ = ನಯನ ಮೂರರಿಂದ ಕೂಡಲುಪಟ್ಟಂಥಾ ವೇಷಂ = ರೂಪನು ಆಸ್ಥಾಯ = ಮಾಡಿಕೊಂಡು ಭುವನತ್ರಯಂ = ಲೋಕಮೂರನು ಚಚಾರ= ಚರಿಸಿದನು. ||೪||

ಕಾಲಾಗ್ನಿಕೋಟಿಸಂಕಾಶಪ್ರಜ್ವಲತ್ಕೇಶಸಂಹತಿಃ = ಪ್ರಳಯಕಾಲದ ಅಗ್ನಿಕೋಟಿಗಳಿಗೆ ಸಮಾನವಾಗಿ ಹೊಳೆವುತ್ತಿಪ್ಪ ಜಟಾಮಕುಟವನುಳ್ಳಂಥಾ ದಂಷ್ಟ್ರಾ-ಕರಾಳವದನಃ = ದಾಡೆಗಳಿಂದ ಭಯಂಕರವಹ ಮುಖವನುಳ್ಳಂಥಾ ಮಹಾಜಲದನಿಸ್ಸ್ವನಃ=ಬಹೆಳವಹಮೇಘ ಧ್ವನಿಯನುಳ್ಳಂಥಾ ||೫||

---

[1] ಶಂ (ಘ) [2] ತಿಂ (ಘ) [3] ನಂ (ಘ) [4] ನಂ (ಘ)

ಮಹಾಡಮರುಕಧ್ವಾನ ದೀರ್ಣವಿಶ್ವಾಂಡಂ ಪಿಂಡ[1]ಕಃ।
ತ್ರಿಶೂಲಖಡ್ಗಪರಶುಪ್ರಮುಖಾಯುಧಕೋಟಿಭಿಃ
ಅಲಂಕೃತಮಹಾಬಾಹುಪರಿಘವ್ಯೂಹಶೋಭ[1]ನಃ[2] ||೬||

ತಂ ದೃಷ್ಟ್ವಾ ಕಾಲವದನಂ ಶಂಕರಂ ಕಾಲಭೈರವಮ್
ರೂಪಲಾವಣ್ಯಸಂಪ[3]ನ್ನಂ ನಾರೀಕುಲಮಗಾದನು ||೭||

ಗಾಯಂತಿ ವಿವಿಧಂ ಗಾನಂ ನೃತ್ಯಂತಿ ಪುರತಃ ಪ್ರಭೋಃ
ಸಸ್ಮಿತಂ ಪ್ರೇಕ್ಷ್ಯ ವದನಂ [4]ಚಕ್ರುರ್ಭ್ರೂಭಂಗಮೇವ ಚ ||೮||

ಸ ದೇವದಾನವಾದೀನಾಂ ದೇಶಾನಭ್ಯೇತ್ಯ ಶೂಲಭೃತ್
ಜಗಾಮ ವಿಷ್ಣುಭವನಂ ಯತ್ರಾಸ್ತೇ ಮಧುಸೂದನಃ ||೯||

---

ಮಹಾಡಮರುಕಧ್ವಾನದೀರ್ಣವಿಶ್ವಾಂಡಪಿಂಡಕಃ = ಮಹಾಡಮರುಗಧ್ವನಿಯಿಂದ ಒಡೆಯಲ್ಪಟ್ಟ ಸಮಸ್ತಬ್ರಹ್ಮಾಂಡಮಂಡಲವನುಳ್ಳಂಥಾ ತ್ರಿಶೂಲ ಖಡ್ಗ ಪರಶು ಪ್ರಮುಖಾಯುಧಕೋಟಿಭಿಃ = ತ್ರಿಶೂಲ ಖಡ್ಗ ಪರಶು ಮುಂತಾದ ಆಯುಧಂಗಳ ಕೋಟಿಗಳಿಂದ ಅಲಂಕೃತಮಹಾಬಾಹುಪರಿಘವ್ಯೂಹಶೋಭನಃ = ಅಲಂಕರಿಸಲ್ಪಟ್ಟ ದೊಡ್ಡಿಹ ಭುಜಂಗಳೆಂಬ ಲಾಳವಿಂಡಿಗೆಗಳ ಮೊತ್ತದಿಂದ ಒಪ್ಪುತ್ತಿದ್ದಂಥಾತನಾದನು.

ಕಾಲವದನಂ = ಮನೋಹರವಹ ಮುಖವನುಳ್ಳಂಥಾ ಶಂಕರಂ = ಸುಖವನು ಮಾಡುತ್ತಿದ್ದಂಥಾ ರೂಪಲಾವಣ್ಯಸಂಪನ್ನಂ = ರೂಪುಲಾವಣ್ಯದಿಂದ ಸಂಪನ್ನವಹುಥಾ ತಂ ಕಾಲಭೈರವಂ = ಆ ಕಾಲಭೈರವನನು ದೃಷ್ಟ್ವಾ = ಕಂಡು ನಾರೀಕುಲಂ = ಸ್ತ್ರೀಯರ ಸಮೂಹವು ಅನು = ಬಳಿವಿಡಿದು ಅಗಾತ್ = ಎಯ್ದಿತ್ತು. ||೭||

ಪ್ರಭೋಃ = ಪರಮೇಶ್ವರನ ಪುರತಃ = ಮುಂದೆ ವಿವಿಧಂ = ನಾನಾಪ್ರಕಾರವಹಂಥಾ ಗಾನಂ = ಗೀತವನು ಗಾಯಂತಿ = ಹಾಡುತ್ತಿದ್ದರು. ನೃತ್ಯಂತಿ = ನೃತ್ಯವನಾಡುತ್ತಿದ್ದರು. ಸಸ್ಮಿತಂ = ಮುಗುಳುನಗೆಯಿಂದ ಸಹಿತವಹಂಥಾ ವದನಂ = ಮುಖವನು ಪ್ರೇಕ್ಷ್ಯ = ನೋಡಿ ಭ್ರೂಭಂಗಮೇವ ಚ = ಹುಬ್ಬಿನ ವಿಲಾಸವನ್ನು ಚಕ್ರುಃ = ಮಾಡಿದರು. ||೮||

ತ್ರಿಶೂಲಭೃತ್ = ತ್ರಿಶೂಲವ ಧರಿಸಿದಂಥಾ ಸಃ = ಆ ಕಾಲಭೈರವನು ದೇವದಾನವಾದೀನಾಂ = ದೇವರ್ಕಳು ರಾಕ್ಷಸರು ಮೊದಲಾದವರುಗಳ ದೇಶಾನ್ =

---

[1] ಕಂ (ಘ) [2] ೫-೬ನೇ ಶ್ಲೋಕಗಳು (ಘ)ದಲ್ಲಿ ದ್ವಿತೀಯಾಂತವಾಗಿವೆ
[3] ನ್ನಿನಾ (ಘ) [4] ಸಕೃತ್ ಭ್ರೂಭಂಗಮೇವ (ಘ)

ಸಂಪ್ರಾಪ್ಯ ಭವನಂ ದಿವ್ಯಂ ಶಂಕರೋ ಲೋಕಶಂಕರಃ
ಸಹೈವ ಭೂತಪ್ರವರ್ಯೈಃ ಪ್ರವೇಷ್ಟುಮುಪಚಕ್ರಮೇ ||೧೦||

ಅನಿಜ್ಞಾಯ ಪರಂ ಭಾವಂ ದಿವ್ಯಂ ತತ್ಪಾರಮೇಶ್ವರಮ್
ನ್ಯವಾರಯತ್ತ್ರಿಶೂಲಾಂಕಂ ದ್ವಾರಪಾಲೋ ಮಹಾಬಲಃ ||೧೧||

ಶಂಖಚಕ್ರಗದಾಪಾಣಿಃ ಪೀತವಾಸಾ ಮಹಾಭುಜಃ
ವಿಷ್ವಕ್ಸೇನ ಇತಿ ಖ್ಯಾತೋ ವಿಷ್ಣೋರಂಶಸಮುದ್ಭವಃ ||೧೨||

ಅಥ ದೇವೋ ಮಹಾದೇವಸ್ತ್ರಿಪುರಾರಿಸ್ತ್ರಿಶೂಲಭೃತ್
ಶೂಲೇನೋರಸಿ ನಿರ್ಭಿದ್ಯ ಪಾತಯಾಮಾಸ ತಂ [2]ಭುವಿ ||೧೩||

---

ದೇಶಂಗಳನು ಅಭ್ಯೇತ್ಯ = ಎಯ್ದಿ, ಯತ್ರ = ಆವುದಾನೊಂದು ವೈಕುಂಠದಲ್ಲಿ ಮಧುಸೂದನಃ = ಪುರುಷೋತ್ತಮನು ಆಸ್ತೇ = ಇರುತ್ತಿಹನು, ತತ್ರ = ಅಲ್ಲಿ ವಿಷ್ಣು ಭವನಂ = ಮಹಾವಿಷ್ಣುವಿನ ಅರಮನೆಯನು ಜಗಾಮ = ಎಯ್ದಿದನು. ||೯||

ಲೋಕಶಂಕರಃ = ಲೋಕಕ್ಕೆ ಸುಖವನು ಮಾಡುತ್ತಿದ್ದಂಥಾ ಶಂಕರಃ = ಪರಮೇಶ್ವರನು ದಿವ್ಯಂ = ಮನೋಹರವಹಂಥಾ ಭವನಂ = ಅರಮನೆಯನು ಸಂಪ್ರಾಪ್ಯ = ಎಯ್ದಿ ಭೂತ.ಪ್ರವರ್ಯೈಃ ಸಹೈವ = ಭೂತಗಣಶ್ರೇಷ್ಠರುಗಳಿಂದ ಸಹಿತನಾಗಿ ಪ್ರವೇಷ್ಟುಂ = ಪ್ರವೇಶಿಸಲು ಉಪಚಕ್ರಮೇ = ಉಪಕ್ರಮಿಸಿದನು.

ಪಾರಮೇಶ್ವರಂ — ಪರಮೇಶ್ವರನ ಸಂಬಂಧವಹಂಥಾ ದಿವ್ಯಂ = ಒಪ್ಪುತ್ತಿದ್ದಂಥಾ ಪರಂ = ಉನ್ನತವಹಂಥಾ ತತ್ = ಆ ಭಾವಂ = ಸ್ವಭಾವವನು ಅವಿಜ್ಞಾಯ = ಅರಿಯದೇ ಮಹಾಬಲಃ = ಅತ್ಯಂತ ಸತ್ತ್ವವನುಳ್ಳಂಥಾ ದ್ವಾರಪಾಲಃ = ಬಾಗಿಲ ಕಾಯುವವನು ತ್ರಿಶೂಲಾಂಕಂ = ತ್ರಿಶೂಲದ ಕುರುಹನುಳ್ಳಂಥಾ ಕಾಲಭೈರವನನು ನ್ಯವಾರಯತ್ = ತಡೆದನು. ||೧೧||

ಶಂಖಚಕ್ರಗದಾಪಾಣಿಃ = ಶಂಖಚಕ್ರಗದಾಹಸ್ತವನುಳ್ಳಂಥಾ ಪೀತವಾಸಾಃ = ಪೀತಾಂಬರವನುಳ್ಳಂಥಾ ಮಹಾಭುಜಃ = ದೊಡ್ಡಿಹ ಭುಜಂಗಳನುಳ್ಳಂಥಾ ವಿಷ್ವಕ್ಸೇನ ಇತಿ = ವಿಷ್ವಕ್ಸೇನನೆಂದು ಖ್ಯಾತಃ = [1]ಪ್ರಸಿದ್ಧನಾದ[1] ಬಾಗಿಲಕಾಯುವಾತನು ವಿಷ್ಣೋಃ = ವಿಷ್ಣುವಿನ ಅಂಶಸಮುದ್ಭವಃ = ಅಂಶದಿಂದ ಹುಟ್ಟಿದಾತನು. ||೧೨||

ಅಥ = ಅನಂತರದಲ್ಲಿ ದೇವಃ = ಪ್ರಕಾಶಿಸುತ್ತಿದ್ದಂಥಾ ತ್ರಿಪುರಾರಿಃ = ತ್ರಿಪುರವೈರಿಯಹಂಥಾ ತ್ರಿಶೂಲಭೃತ್ = ತ್ರಿಶೂಲವ ಧರಿಸಿದಂಥಾ ಮಹಾದೇವಃ

---

[1] ಪ್ರಖ್ಯಾತನಹಂಥಾ (ಖ) [2] ವಿಭುಃ (ಖ.ಗ) ಮೂಲಮಾತ್ರ

ಸ ಶೂಲನಿಹತೋಽತ್ಯರ್ಥಂ ತ್ಯಕ್ತ್ವಾ ಸ್ವಂ ಪರಮಂ ಬಲಮ್
ತತ್ಯಾಜ ಜೀವಿತಂ [1]ದೃಷ್ಟ್ವಾ ಮೃತ್ಯುಂ ವ್ಯಾಧಿಹತೋ ಯಥಾ[1] ||೧೪

ನಿಪಾತ್ಯ ವಿಷ್ಣುಪುರುಷಂ ಸಾರ್ಧಂ ಪ್ರಮಥಪುಂಗವೈಃ
ವಿವೇಶ ಶೂಲೇನಾದಾಯ ತತ್ಕಳೇವರಮೀಶ್ವರಃ ||೧೫||

[2]ವೀಕ್ಷ್ಯ ತಂ ಜಗತೋ ಹೇತು[2]ಮೀಶ್ವರಂ ಭಗವಾನ್ ಹರಿಃ
[3]ಸಿರಾಂ ಲಲಾಟಾನ್ನಿರ್ಭಿದ್ಯ [3]ರಕ್ತಧಾರಾಮಪಾತಯತ್ ||೧೬||

---

=ಪರಮೇಶ್ವರನು ಶೂಲೇನ=ತ್ರಿಶೂಲದಿಂದ ಉರಸಿ=ಎದೆಯಲ್ಲಿ ನಿರ್ಭಿದ್ಯ =ಇರಿದು ತಂ=ಆ ವಿಷ್ವಕ್ಸೇನಂ=ವಿಷ್ವಕ್ಸೇನನನು ಭುವಿ = ಭೂಮಿಯಲ್ಲಿ ಪಾತಯಾಮಾಸ=ಕೆಡಹಿದನು. ||೧೩||

ಶೂಲನಿಹತಃ = ಶೂಲದಿಂದ ಘಾಯವಡೆಯಲುಪಟ್ಟಂಥಾ ಸಃ = ಆ ವಿಷ್ವಕ್ಸೇನನು ಸ್ವಂ=ತನ್ನ ಸಂಬಂಧವಹಂಥಾ ಪರಮಂ=ಅಧಿಕವಹಂಥಾ ಬಲಂ =ಸತ್ತ್ವವನು ಅತ್ಯರ್ಥಂ=ಅತ್ಯಂತವಾಗಿ ತ್ಯಕ್ತ್ವಾ=ಬಿಟ್ಟು ಜೀವಿತಂ= ಪ್ರಾಣವನು ತತ್ಯಾಜ=ಬಿಟ್ಟನು. ಮೃತ್ಯುಂ = ಮೃತ್ಯುವನು ದೃಷ್ಟ್ವಾ= ಕಂಡು ವ್ಯಾಧಿಹತೋ ಯಥಾ=ವ್ಯಾಧಿಪೀಡಿತನೆಹಗೋ ಅಹೆಗೆ. ||೧೪||

ಈಶ್ವರಃ=ಪರಮೇಶ್ವರನು ವಿಷ್ಣುಪುರುಷಂ=ವಿಷ್ವಕ್ಸೇನನನು ನಿಪಾತ್ಯ= ಕೆಡಹಿ ತತ್ಕಳೇವರಂ=ಆತನ ಹೆಣನನು ಶೂಲೇನ=ತ್ರಿಶೂಲದಿಂದ ಆದಾಯ= ನೆಗಹಿ ಪ್ರಮಥಪುಂಗವೈಃ ಸಾರ್ಧಂ =ಪ್ರಮಥಶ್ರೇಷ್ಠರುಗಳೊಡನೆ ವಿವೇಶ = ಒಳಹೊಕ್ಕನು. ||೧೫||

ಭಗವಾನ್=ಸಾಮರ್ಥ್ಯವನುಳ್ಳಂಥಾ ಹರಿಃ=ಮಹಾವಿಷ್ಣು ಜಗತಃ= ಲೋಕಕ್ಕೆ ಹೇತುಂ=ಕಾರಣನಹಂಥಾ ತಂ=ಆ ಈಶ್ವರಂ=ಪರಮೇಶ್ವರನನು ವೀಕ್ಷ್ಯ= ಕಂಡು ಲಲಾಟಾತ್ = ಹಣೆಯ ದೆಸೆಯಿಂದ ಸಿರಾಂ = ಸಿರೆಯನು ನಿರ್ಭಿದ್ಯ = ಬಿಡಿಸಿ ರಕ್ತಧಾರಾಂ = ರಕ್ತಧಾರೆಯನು ಅಪಾತಯತ್ = ಕೆಡಹಿದನು. ||೧೬||

---

[1] ಮತ್ತ್ರೋ ಯಥಾ ವ್ಯಾಧಿಹತೋ ನರಃ (ಘ) ಪಾಠಾಂತರ. ಮೂಲ ನೋಲಿರುವಂತೆಯೇ
[2] ಸಂಪ್ರವೀಕ್ಷ್ಯ ಜಗದ್ಧೇತು (ಘ).
[3] ಚಕ್ರೇಣೋತ್ಪಾಟ್ಯ ನಿಟಲಂ (ಘ)

[1]ಗೃಹಾಣ[1]ಭಗವನ್ ಭಿಕ್ಷಾಂ ಮದೀಯಾಮಮಿತದ್ಯುತೇ
ನ ವಿದ್ಯತೇ[2]ಚಾಪ್ಯುಚಿತಾ[2] ತವ ತ್ರಿಪುರಮರ್ದನ ||೧೭||

[3]ಇತಿ[3] ಪ್ರವರ್ತಿತಾ ಧಾರಾ ರುಧಿರಸ್ಯ ನಿರಂತರಮ್
ದಿವ್ಯ ವರ್ಷಸಹಸ್ರಂ ತು ಕಪಾಲೇ ಭೈರವಸ್ಯ ಸಾ ||೧೮||

[ಸೂತ ಉವಾಚ] —
ತಯಾ ಪತಂತ್ಯಾ ವಿಪ್ರೇಂದ್ರಾಃ ಧಾರಯಾ ಪರಮೇಷ್ಠಿನಃ
ಕಪಾಲಸ್ಯ ವಿಶಾಲಸ್ಯ ನಾರ್ಧಮಪ್ಯಭಿಪೂರಿತಮ್ ||೧೯||

ರಕ್ತಸ್ಯ ವಿರಹಾತ್ ವಿಷ್ಣುಃ ಪಪಾತ ಭುವಿ ಮೋಹಿತಃ

---

ಅಮಿತದ್ಯುತೇ = ಹವಣಿಸಲು ಬಾರದೇ ಇದ್ದ ಕಾಂತಿಯನುಳ್ಳಂಥಾ ಭಗವನ್ = ಎಲೈ ಷಡುಣೈಶ್ವರ್ಯಸಂಪನ್ನನಹಂಥಾ ದೇವನೇ ! ಮದೀಯಾಂ = ಎನ್ನ ಸಂಬಂಧವಹಂಥಾ ಭಿಕ್ಷಾಂ = ಭಿಕ್ಷೆಯನು ಗೃಹಾಣ = ಗ್ರಹಿಸು. ಭೋ ತ್ರಿಪುರಮರ್ದನ ! = ಎಲೆ ತ್ರಿಪುರಸಂಹಾರಿಯಹಂಥಾ ಶಿವನೇ! ತವಾಪಿ = ನಿನಗೆಯು ಉಚಿತಾ ಚ = ಯೋಗ್ಯವಹುಥಾದ್ದು ನ ವಿದ್ಯತೇ = ಇಲ್ಲ. ||೧೭||

ಇತಿ = ಈ ಪ್ರಕಾರದಲ್ಲಿ ರುಧಿರಸ್ಯ = ರಕ್ತದ ಸಾ = ಆ ಧಾರಾ = ಧಾರೆ ನಿರಂತರಂ = ಆವಾಗವು ದಿವ್ಯವರ್ಷಸಹಸ್ರಂ ತು = ದಿವ್ಯ ಸಹಸ್ರವರುಷವು ಭೈರವಸ್ಯ = ಕಾಲಭೈರವನ ಕಪಾಲೇ = ಹಸ್ತದ ಕಪಾಲದಲ್ಲಿ ಪ್ರವರ್ತಿತಾ = ವರ್ತಿಸಲು ಪಟ್ಟಿತ್ತು. ||೧೮||

ಸೂತ ಉವಾಚ—ಸೂತಮುನಿ ನುಡಿವುತ್ತಿದ್ದಾನು.

ಭೋ ವಿಪ್ರೇಂದ್ರಾಃ = ಎಲೈ ಬ್ರಾಹ್ಮಣೋತ್ತಮರುಗಳಿರಾ ! ಪತಂತ್ಯಾ = ಬೀಳುತ್ತಿದ್ದಂಥಾ ತಯಾ ಧಾರಯಾ = ಆ ರಕ್ತದ ಧಾರೆಯಿಂದ ಪರಮೇಷ್ಠಿನಃ = ಪರಮೇಶ್ವರನ ವಿಶಾಲಸ್ಯ = ವಿಶಾಲವಹಂಥಾ ಕಪಾಲಸ್ಯ = ಕಪಾಲದ ಅರ್ಧಮಪಿ = ಅರ್ಧವೂ ಅಭಿಪೂರಿತಂ ನ = ತುಂಬಲುಪಟ್ಟುದಿಲ್ಲ. ||೧೯||

ರಕ್ತಸ್ಯ = ರಕ್ತದ ವಿರಹಾತ್ = ಅಗಲಿಕೆಯ ದೆಸೆಯಿಂದ ವಿಷ್ಣುಃ = ಮಹಾವಿಷ್ಣು ಮೋಹಿತಃ = ಮೂರ್ಛಿತನಾಗಿ ಭುವಿ = ಭೂಮಿಯಲ್ಲಿ ಪಪಾತ = ಬಿದ್ದನು. ತತಃ = ಅನಂತರದಲ್ಲಿ ಕೃಪಾನಿಧಿಃ = ಕರುಣಕ್ಕೆ ಸ್ಥಾನವಹಂಥಾ

---

[1] ಗೃಹಾಣ (ಘ) [2] ಚಾಪ್ಯುಚಿತಂ (ಘ) [3] ಇತ್ಥಂ (ಘ)

ತತಃ ಕೃಪಾನಿಧಿರ್ದೇವಃ ಕಟಾಕ್ಷೇಣಾಮೃತೇನ ತು ||
ಭಕ್ತಮುಜ್ಜೀವಯಾಮಾಸ ಹರಿಂ ಸರ್ವೇಶ್ವರಶ್ಶಿವಃ ||೨೦||

ಅಥಾಬ್ರವೀತ್ಕಾಲರುದ್ರಂ ಹರಿರ್ನಾರಾಯಣಃ [1]ಪ್ರಭುಃ[1]
ಸಂಸ್ತುತ್ಯ ವೈದಿಕೈರ್ಮಂತ್ರೈಃ ಬಹುಮಾನಪುರಸ್ಸರಮ್ ||೨೧||

ಕಿಮರ್ಥಮೇತದ್ವದನಂ ಬ್ರಹ್ಮಣೋ ಭವತಾ ಧೃತಮ್
ಪ್ರೋವಾಚ ವೃತ್ತಮಖಿಲಂ ದೇವದೇವೋ ಮಹೇಶ್ವರಃ ||೨೨||

ವಿಸ್ಮೃತಂ ತೇನ ತತ್ಕಾಲೇ ಪರಮೇಶ್ವರಮಾಯಯಾ
ಏವಂ ತಮನುಗೃಹ್ಯಾಥ ಭಗವಾನ್ ಕಾಲಭೈರವಃ ||೨೩||

---

ದೇವಃ = ಪ್ರಕಾಶಿಸುತ್ತಿದ್ದಂಥಾ ಸರ್ವೇಶ್ವರಃ = ಸಮಸ್ತಲೋಕಕ್ಕೆ ಒಡೆಯನಹಂಥಾ ಶಿವಃ = ಶಿವನು ಅಮೃತೇನ = ಅಮೃತಮಯವಹಂಥಾ ಕಟಾಕ್ಷೇಣ = ಕಟಾಕ್ಷದಿಂದವು ಭಕ್ತಂ = ಭಕ್ತನಹಂಥಾ ಹರಿಂ = ಪುರುಷೋತ್ತಮನನು ಉಜ್ಜೀವಯಾಮಾಸ = [2]ಪ್ರಾಣಿಸಿದನು[2] [ಬದುಕಿಸಿದನು.] ||೨೦||

ಅಥ = ಅನಂತರದಲ್ಲಿ ಪ್ರಭುಃ = ಸಮರ್ಥನಹಂಥಾ ನಾರಾಯಣಃ = ಜಲಶಯುನನಹಂಥಾ ಹರಿಃ = ಮಹಾವಿಷ್ಣುವು ವೈದಿಕೈಃ ಮಂತ್ರೈಃ = ವೇದೋಕ್ತವಹಂಥಾ ಮಂತ್ರಂಗಳಿಂದ ಸಂಸ್ತುತ್ಯ = ಸ್ತೋತ್ರವ ಮಾಡಿ ಬಹುಮಾನಪುರಸ್ಸರಂ = ಬಹಳ ಸತ್ಕಾರ ಮುಂತಾಗಿ ಕಾಲರುದ್ರಂ = ಕಾಲಭೈರವನನು ಕುರಿತು ಅಬ್ರವೀತ್ = ನುಡಿದನು. ||೨೧||

ಕಿಮರ್ಥಂ = ಏನು ಕಾರಣ ಬ್ರಹ್ಮಣಃ = ಬ್ರಹ್ಮನ ಏತದ್ವದನಂ = ಈ ಮುಖವು ಭವತಾ = ನಿನ್ನಿಂದ ಧೃತಂ = ಧರಿಸಲುಪಟ್ಟಿತ್ತು. ದೇವದೇವಃ = ದೇವಶ್ರೇಷ್ಠನಹಂಥಾ ಮಹೇಶ್ವರಃ = ಶಿವನು ಅಖಿಲಂ ವೃತ್ತಂ = ಸಮಸ್ತ ವೃತ್ತಾಂತವನು ಪ್ರೋವಾಚ = ನುಡಿದನು. ||೨೨||

ಪರಮೇಶ್ವರಮಾಯಯಾ — ಪರಮೇಶ್ವರನ ಮಾಯೆಯಿಂದ ತತ್ಕಾಲೇ = ಆ ಕಾಲದಲ್ಲಿ ತೇನ = ಆ ಬ್ರಾಹ್ಮಣನಿಂದ ವಿಸ್ಮೃತಂ = ಮರೆಯಲ್ಪಟ್ಟಿತ್ತು ಎಂದು ಏವಂ = ಈ ಪ್ರಕಾರದಲ್ಲಿ ನುಡಿದು ತಂ = ಆ ಮಹಾವಿಷ್ಣುವನು ಅನುಗೃಹ್ಯ = ಪತಿಕರಿಸಿ ಅಥ = ಅನಂತರದಲ್ಲಿ ಭಗವಾನ್ = ಷಡ್ಗುಣೈಶ್ವರ್ಯವನುಳ್ಳಂಥಾ

---

[1] ಸ್ವಯಮ್ (ಘ) [2] ಸಪ್ರಾಣಿಸಿದನು (ಖ)

ಮಹೇಶ್ವರಾಂಶಸಂಭೂತೋ ನಿರ್ಜಗಾಮ ಕಪಾಲವಾನ್
ಭಸ್ಮಸಂದಿಗ್ಧಸರ್ವಾಂಗೋ ಲೋಕಾನಾಂ ಹಿತಕಾಮ್ಯಯಾ ॥೨೪॥

ಕೈಲಾಸಶಿಖರಾಕಾರಂ ದೇವರಾಜನಿಕೇತನಮ್
ವರ್ಧಮಾನಪುರದ್ವಾರಂ ಯಯೌ ಭಿಕ್ಷಾರ್ಥಮೀಶ್ವರಃ ॥೨೫॥

ದೇವರಾಜೋಽಪಿ ವಿಮಲೇ [1]ಮಂಡಪೇ[1] ರತ್ನಮಂಡಿತೇ
ಶಚ್ಯಾ ಸಹ ಸಮಾಸೀನಃ ಕಲ್ಪವೃಕ್ಷಸಮೀಪತಃ ॥೨೬॥

ಅಪ್ಸರೋ ಗಣಿಕಾಶ್ಚೈವ ತತ್ರ ನೃತ್ಯಂತಿ ಕೋವಿದಾಃ
ತತ್ರ ದೇವಗಣಾಃ ಶಕ್ರಂ ಮುನಯಶ್ಚಾಪ್ಯುಪಾಸತೇ ॥೨೭॥

---

ಮಹೇಶ್ವರಾಂತಸಂಭೂತಃ = ಶಿವನ ಅಂಶದಿಂದ ಹುಟ್ಟಿದಂಥಾ ಕಪಾಲವಾನ್ = ಬ್ರಹ್ಮಕಪಾಲವನ್ನುಳ್ಳಂಥಾ ಭಸ್ಮಸಂದಿಗ್ಧಸರ್ವಾಂಗಃ = ವಿಭೂತಿಯಿಂದ ಉದ್ಧೂಳಿಸಲ್ಪಟ್ಟ ಸರ್ವಾಂಗವನ್ನುಳ್ಳಂಥಾ ಕಾಲಭೈರವಃ = ಕಾಲಭೈರವನು ಲೋಕಾನಾಂ = ಲೋಕಂಗಳಿಗೆ ಹಿತಕಾಮ್ಯಯಾ = ಹಿತವನು ಬಯಸುವ ಬಯಕೆಯಿಂದ ನಿರ್ಜಗಾಮ = ಹೊರವಂಟನು. ॥೨೪॥

ಈಶ್ವರಃ = ಪರಮೇಶ್ವರನು ಭಿಕ್ಷಾರ್ಥಂ — ಭಿಕ್ಷೆಗೋಸ್ಕರ ಕೈಲಾಸಶಿಖರಾಕಾರಂ = ಕೈಲಾಸಪರ್ವತದ ಶಿಖರದೋಪಾದಿ ಆಕಾರವನುಳ್ಳಂಥಾ ದೇವರಾಜನಿಕೇತನಂ = ದೇವೇಂದ್ರಸ್ಥಾನವಹಂಥಾ ವರ್ಧಮಾನಪುರದ್ವಾರಂ = ಉನ್ನತವಹ ಪಟ್ಟಣದ ಬಾಗಿಲನು ಯಯೌ = ಎಯ್ದಿದನು. ॥೨೫॥

ದೇವರಾಜೋಽಪಿ = ದೇವೇಂದ್ರನು ಕಲ್ಪವೃಕ್ಷಸಮೀಪತಃ = ಕಲ್ಪವೃಕ್ಷದ ಸಮೀಪದಲ್ಲಿ ವಿಮಲೇ = ನಿರ್ಮಲವಹಂಥಾ ರತ್ನಮಂಡಿತೇ = ರತ್ನಂಗಳಿಂದ ಅಲಂಕರಿಸಲುಪಟ್ಟಂಥಾ ಮಂಡಪೇ = ಸಭಾಮಂಟಪದಲ್ಲಿ ಶಚ್ಯಾ ಸಹ = ಶಚೀದೇವಿಯೊಡನೆ ಸಮಾಸೀನಃ = ಕುಳ್ಳಿ[2]ದ್ದಿ[2]ದ್ದನು. ॥೨೬॥

ತತ್ರ = ಆ ಸಭಾಮಂಡಲದಲ್ಲಿ ಕೋವಿದಾಃ = ಪ್ರೌಢೆಯರಹಂಥಾ ಅಪ್ಸರೋಗಣಿಕಾಶ್ಚೈವ = ಅಪ್ಸರಗಣಿಕೆಯರು ನೃತ್ಯಂತಿ = ನೃತ್ಯವನಾಡುತ್ತಿದ್ದರು. ತತ್ರ = ಅಲ್ಲಿ ದೇವಗಣಾಃ = ದೇವಗಣಂಗಳು ಮುನಯಶ್ಚ = ಋಷಿಗಳೂ ಶಕ್ರಮಪಿ = ಇಂದ್ರನನೂ ಉಪಾಸತೇ = ಓಲೈಸುತ್ತಿದ್ದರು. ॥೨೭॥

---

1 ಮಂಡಲೇ (ಕ) ಸಭಾಮಂಟಪದಲ್ಲಿ (ಕ) ವ್ಯಾಖ್ಯಾ

2 ದಿ (ಖಚ)

ವರ್ತಮಾನೇ ತದಾ ತಸ್ಮಿನ್ ದ್ವಾರಪಾಲಾಃ ಸಸಂಭ್ರ[1]ಮಾಃ
ಗತ್ವಾ ನತ್ವಾ ತದಾ ಶಕ್ರಮಿದಂ ವಚನಮಬ್ರುವನ್ ||೨೮||

ಕಶ್ಚಿತ್ಕಪಾಲಮಾದಾಯ ಚಂದ್ರಮಂಡಲಸನ್ನಿಭಮ್
ಆಯಾತಿ [2]ಭಗವಾನ್ನಾಥ ಭಸ್ಮಭೂಷಿತವಿಗ್ರಹಃ ||೨೯||

ತ್ರಿಣೇತ್ರಃ ಸೌಮ್ಯವದನೋ ಜಟಾಮಂಡಲಭೂಷಿತಃ
ನೀಲಕಂಠಶ್ಚತುರ್ಬಾಹುರ್ಹಿಮವಾನಿವ ಚಾಪರಃ ||೩೦||

ಆತ್ಮತುಲ್ಯಗಣೋಪೇತಃ ಚಂದ್ರಲೇಖಾವತಂಸಕಃ
ವಯಂ ತಂ ತು ನ ಜಾನೀಮೋ ದೇವರಾಜ! ಶಚೀಪತೇ ||೩೧||

---

ತದಾ=ಆಗ ತಸ್ಮಿನ್=ಆ ದೇವೇಂದ್ರನು ವರ್ತಮಾನೇ ಸತಿ=ವರ್ತಿಸು-ತ್ತಿರಲು ದ್ವಾರಪಾಲಾಃ=ಬಾಗಿಲವರುಗಳು ಸಸಂಭ್ರಮಾಃ = ಸಂಭ್ರಮದಿಂದ ಸಹಿತರಾಗಿ ಗತ್ವಾ=ಹೋಗಿ ನತ್ವಾ=ನಮಸ್ಕರಿಸಿ ತದಾ=ಆಗ ಶಕ್ರಂ= ಇಂದ್ರನನು ಕುರಿತು ಇದಂ ವಚನಂ=ಈ ವಾಕ್ಯವನು ಅಬ್ರುವನ್=ನುಡಿದರು.

ಭೋ ನಾಥ = ಎಲೈ ಒಡೆಯನೇ! ಚಂದ್ರಮಂಡಲಸನ್ನಿಭಂ = ಚಂದ್ರ ಮಂಡಲಕ್ಕೆ ಸಮಾನವಹಂಥಾ ಕಪಾಲಂ = ಕಪಾಲವನು ಆದಾಯ = ತೆಗೆದು ಕೊಂಡು ಭಸ್ಮಭೂಷಿತವಿಗ್ರಹಃ = ವಿಭೂತಿಯಿಂದ ಅಲಂಕರಿಸಲ್ಪಟ್ಟ ಶರೀರ-ವನುಳ್ಳಂಥಾ ಭಗವಾನ್ = ಸಮರ್ಥನಹಂಥಾ ಕಶ್ಚಿತ್ = ಒಬ್ಬಾನೊಬ್ಬನು ಆಯಾತಿ=ಬಂದಿದ್ದಾನು. ||೨೯||

ತ್ರಿಣೇತ್ರಃ=ಮೂರು ಕಣ್ಣನುಳ್ಳಂಥಾ ಸೌಮ್ಯವದನಃ = ಒಪ್ಪುತ್ತಂವಿದ್ದ (*ಮೂರು?) ಮುಖವನುಳ್ಳಂಥಾ ಜಟಾಮಂಡಲಭೂಷಿತಃ = ಜಟಾಮಂಡಲ ಭೂಷಿತನಹಂಥಾ ನೀಲಕಂಠಃ = ಕರೆಕೊರಳನುಳ್ಳಂಥಾ ಚತುರ್ಬಾಹುಶ್ಚ = ಚತುರ್ಭುಜನಹಂಥಾ ದೇವನು ಅಪರಃ = ಮತ್ತೊಂದು ಹಿಮವಾನಿವ = ಹಿಮವತ್ಪರ್ವತವಕ್ಕೈ ಎಂಬ ಹಾಂಗಿದ್ದಾನು. ||೩೦||

ಆತ್ಮತುಲ್ಯಗಣೋಪೇತಃ= ತನಗೆ ಸಮಾನವಹ ಗಣಂಗಳೊಡನೆ ಕೂಡಲು-ಪಟ್ಟಂಥಾ ಆತನಾಗಿ, ಚಂದ್ರಲೇಖಾವತಂಸಕಃ = ಚಂದ್ರನ ಲೇಖೆಯೇ ಅಲಂಕಾರ

---

[1] ಮಂ (ಘ) [2] ಭಗವನ್ನತ್ರ (ಘ) [ * 'ಮೂಜು' ಎಂಬುದು (ಖ) ಪಾಠ. ಕಾಲ ಭೈರವನಿಗೆ ಮೂರು ಮುಖಗಳುಂಟೇ ? ಎಂಬುದು ವಿಮರ್ಶನೀಯ.]

ಅತೀವ ದರ್ಪಸಂಯುಕ್ತಂ ಪುರುಷಂ ತಂ ಮಹಾಭುಜಮ್
ದ್ವಾರಪಾಲೈಸ್ತಥೋಕ್ತಸ್ತು ಸಹಸ್ರಾಕ್ಷಃ [1]ಸಸಂಭ್ರಮಃ[1] ||೩೨||

[2]ಸಮಂ ಸದಸ್ಯೈಸ್ಸಹಸಾ[2]ನಿರ್ಜಗಾಮ ಪುರಾತ್ತತಃ
ಅಪ್ಸರೋಭಿಃ ಪರಿವೃತಃ ಶಚ್ಯಾ ಸಹ ಪುರಂದರಃ ||
ಶಿರಸ್ಯಂಜಲಿಮಾಧಾಯ ಜೀವಸ್ಯ ವಚನಂ ಸ್ಮರನ್ ||೩೩||

ಅಥಾಯಾಂತಂ ಮಹಾದೇವಂ ತ್ರಿಣೇತ್ರಂ ಸರ್ಪಕುಂಡಲಮ್
ಭೂಮೌ ಪಪಾತ ತಂ ದೃಷ್ಟ್ವಾ ಸಂಭ್ರಾಂತೇಂದ್ರಿಯಮಾನಸಃ ||೩೪||

---

ವಾಗಿ ಉಳ್ಳಾತನಾಗಿದ್ದಾನು. ಶಚೀಪತೇ = ಶಚೀಪತಿಯಹಂಥಾ ಭೋ ದೇವರಾಜ = ಎಲೈ ಇಂದ್ರನೇ! ತಂ ತು = ಆತನನು ವಯಂ = ನಾವು ನ ಜಾನೀಮಃ = ಅರಿಯೆವು. ||೩೧||

ಅತೀವದರ್ಪಸಂಯುಕ್ತಂ = ಅತ್ಯಂತ ಅವಟಿಂದ ಕೂಡಿದಂಥಾ ಮಹಾಭುಜಂ = ಮಹಾಭುಜಂಗಳನುಳ್ಳಂಥಾ ತಂ ಪುರುಷಂ = ಆ ಮಹಾಪುರುಷನನು ಕುರಿತು ದ್ವಾರಪಾಲೈಃ = ಬಾಗಿಲವರುಗಳಿಂದ ತಥಾ = ಹಾಂಗೆ ಉಕ್ತಃ = ನುಡಿಯಲ್ಪಟ್ಟಂಥಾ ಸಹಸ್ರಾಕ್ಷಃ = ಇಂದ್ರನು ಸಸಂಭ್ರಮಃ = ಸಂಭ್ರಮದಿಂದ ಸಹಿತನಾದನು. ||೩೨||

ತತಃ = ಅನಂತರದಲ್ಲಿ ಪುರಂದರಃ = ಇಂದ್ರನು ಶಚ್ಯಾ ಸಹ = ಶಚೀದೇವಿಯಿಂದ ಸಹಿತವಾಗಿ ಅಪ್ಸರೋಭಿಃ = ಅಪ್ಸರಸ್ತ್ರೀಯರುಗಳಿಂದ ಪರಿವೃತಃ = ಮುಸುಕಲ್ಪಟ್ಟಂಥಾ ಆತನಾಗಿ ಸದಸ್ಯೈಃ ಸಮಂ = ಸಭೆಯ ಜನರುಗಳಿಂದ ಸಹಿತವಾಗಿ ಜೀವಸ್ಯ = ಬೃಹಸ್ಪತಿಯ ವಚನಂ = ವಾಕ್ಯವನು ಸ್ಮರನ್ = ನೆನವುತ್ತವು ಶಿರಸಿ = ಶಿರಸ್ಸಿನಲ್ಲಿ (ಮಸ್ತಕದಲ್ಲಿ) ಅಂಜಲಿಂ = ಕೈಮುಗಿಹವನು ಆಧಾಯ = ಮಾಡಿಕೊಂಡು ಸಹಸಾ = ಆ ಕ್ಷಣದಲ್ಲಿ ಪುರಾತ್ = ಪಟ್ಟಣದ ದೆಸೆಯಿಂದ ನಿರ್ಜಗಾಮ — ಹೊರಪಂಟನು. ||೩೩||

ಅಥ = ಅನಂತರದಲ್ಲಿ ಆಯಾಂತಂ = ಬಂದಂಥಾ ತ್ರಿಣೇತ್ರಂ = ತ್ರಿಣೇತ್ರನಹಂಥಾ ಸರ್ಪಕುಂಡಲಂ = ನಾಗಕುಂಡಲನಹಂಥಾ ತಂ ಮಹಾದೇವಂ = ಆ ಪರಮೇಶ್ವರನನು ದೃಷ್ಟ್ವಾ = ಕಂಡು ಸಂಭ್ರಾಂತೇಂದ್ರಿಯಮಾನಸಃ — ಭ್ರಮಿಸಲು ಪಟ್ಟಇಂದ್ರಿಯಂಗಳು ಮನಸ್ಸನುಳ್ಳಾತನಾಗಿ ಭೂಮೌ — ಭೂಮಿಯಲ್ಲಿ ಪಪಾತ = ಬಿದ್ದನು. ||೩೪||

---

[1] ಸಸಂಭ್ರಮಂ (ಘ) [2] ಸಮಂ ಸುರಗಣೈಃ ಸಭ್ಯೈಃ (ಘ)

[1]ವೇದಾಶ್ಚ[1] ಮುನಯಸ್ಸರ್ವೇ [2]ದೇವಾ[2] ನಾರ್ಯಸ್ತಥೈವ ಚ
ನಿಪೇತುಃ [3]ಪಣಿಪತ್ಯೈನಂ[3] ದೇವರಾಜಸ್ಯ ಪೃಷ್ಠತಃ ||೩೫||

ಉತ್ಥಾಯ ಶಕ್ರಃ ಸುಭಗಾಂ ಪ್ರಿಯಾಮಾಹ ಶಚೀಂ ಪ್ರತಿ
ಪ್ರಿಯೇ ಪಶ್ಯ ವಿಶಾಲಾಕ್ಷಿ ಧನ್ಯಾ ತ್ವಂ ಸುಭಗೇಽನಘೇ ||೩೬||

ಧನ್ಯೋಽಹಂ ದೇವಿ ಸುಶ್ರೋಣಿ ಯತ್ಪಶ್ಯಾಮಿ ಜಗತ್ಪತಿಮ್
ಅಯಂ ಧಾತಾ ವಿಧಾತಾ ಚ ಲೋಕಾನಾಂ ಪ್ರಭುರವ್ಯಯಃ ||೩೭||

ಅನಾದಿಃ ಸರ್ವಗಃ ಶಾಂತಃ ಪರಃ ಷಡ್ವಿಂಶಕಃ ಸ್ಮೃತಃ ||೩೮||

---

ವೇದಾಶ್ಚ = ವೇದಂಗಳು ಮುನಯಃ = ಋಷಿಗಳು ಸರ್ವೇ ದೇವಾಃ = ಸಮಸ್ತ ದೇವರ್ಕಳು ತಥೈವ ಚ = ಹಾಂಗೆ ನಾರ್ಯಃ ದೇವಸ್ತ್ರೀಯರುಗಳು ದೇವರಾಜಸ್ಯ = ದೇವೇಂದ್ರನ ಪೃಷ್ಠತಃ = ಹಿಂದುಗಡೆಯಲ್ಲಿ ಏನಂ — ಈ ಪರಮೇಶ್ವರನನು ಕುರಿತು ಪ್ರಣಿಪತ್ಯ = ನಮಸ್ಕರಿಸಿ ನಿಪೇತುಃ = ಬಿದ್ದರು. ||೩೫||

ಶಕ್ರಃ — ಇಂದ್ರನು ಉತ್ಥಾಯ = ಎದ್ದು ಸುಭಗಾಂ = ಚೆಲುವೆಯಹಂಥಾ ಪ್ರಿಯಾಂ = ಪ್ರಿಯಳಂಥಾ = ಶಚೀಂ = ಶಚೀದೇವಿಯನು ಪ್ರತಿ = ಕುರಿತು ಆಹ = ನುಡಿದನು. ಸುಭಗೇ = ಸೌಂದರ್ಯವನುಳ್ಳಂಥಾ ಅನಘೇ — ನಿರ್ದೋಷಿಯಹಂಥಾ ವಿಶಾಲಾಕ್ಷಿ ವಿಶಾಲಲೋಚನೆಯಹಂಥಾ ಭೋಃಪ್ರಿಯೇ = ಎಲೈ ಪ್ರಿಯಳೇ! ಪಶ್ಯ = ನೋಡು, ತ್ವಂ = ನೀನು ಧನ್ಯಾ = ಕೃತಾರ್ಥೆ[4]ಯಹಂಥಾಯಕನು.[4] ||೩೬||

ಸುಶ್ರೋಣಿ = ಒಪ್ಪುತ್ತಂವಿದ್ದ ನಿತಂಬಗಳನುಳ್ಳಂಥಾ ಭೋ ದೇವಿ! = ಎಲೈ ಶಚೀದೇವಿ: ಯತ್ = ಆವುದಾನೊಂದು ಕಾರಣವಾಗಿ ಜಗತ್ಪತಿಂ = ಲೋಕಕ್ಕೆ ಒಡೆಯನಹಂಥಾ ದೇವನನು ಪಶ್ಯಾಮಿ — ಕಾಣುತ್ತಿದ್ದೆನು. ಅಹಂ = ನಾನು ಧನ್ಯಃ = ಕೃತಾರ್ಥನು. ಅಯಂ = ಈತನು ಲೋಕಾನಾಂ = ಲೋಕಂಗಳಿಗೆ ವಿಧಾತಾ = ಒಡೆಯನು. ಧಾತಾ ಚ — ಸೃಷ್ಟಿಸುವಾತನು. ಪ್ರಭುಃ — ಸಮರ್ಥನು. ಅವ್ಯಯಃ — ನಿತ್ಯನು. ||೩೭||

ಅನಾದಿಃ — ಮೊದಲಿಲ್ಲದಾತನು ಸರ್ವಗಃ — ಸರ್ವಗತನು ಶಾಂತಃ — ಶಾಂತನು ಪರಃ = ಉತ್ಕೃಷ್ಟನು ಷಡ್ವಿಂಶಕಃ — ಇಪ್ಪತ್ತಾರನೆಯ ತತ್ತ್ವಸ್ವರೂಪನೆಂದು ಸ್ಮೃತಃ — ಹೇಳಲುಪಟ್ಟನು. ||೩೮||

---

[1] ದೇವಾಶ್ಚ (ಗಘ) [2] ವೇದಾ (ಘ) [3] ಪ್ರಣಪತ್ಯೇವಂ (ಘ) [4] (ಖ) ಪಾಠ.

ಯಂ ವಿನಿದ್ರಾ ಜಿತಶ್ವಾಸಾಃ ಶಾಂತಾ ಧ್ಯಾನಪರಾಯಣಾಃ
ಧಿಯಾ ಪಶ್ಯಂತಿ ಹೃದಯೇ ಸೋಽಯಮದ್ಯ ಸಮೀಕ್ಷ್ಯತಾಮ್ ॥೭೯॥

ಅಹೋ ವಿಚಿತ್ರಂ ದೇವಸ್ಯ ಚೇಷ್ಟಿತಂ ಪರಮೇಷ್ಠಿನಃ
ದೇಹೀವ ದೃಶ್ಯತೇ ದೇವೋ ನೀರೂಪಃ ಪರಮೇಶ್ವರಃ ॥೮೦॥

ಯಸ್ಯ ಪ್ರಸಾದಾದ್ಭಗವಾನ್ ಬ್ರಹ್ಮಾ ವಿಷ್ಣುಶ್ಚ ಶಾಶ್ವತಃ
ಕರೋತಿ ಲೋಕಸಂಧಾನಂ ಸೋಽಯಮಾಯಾತಿ ಶೋಭನೇ ॥೮೧॥

ಯಂ ದೃಷ್ಟ್ವಾ ನ ಪುನರ್ಜನ್ಮ ಲಭತೇ ಮಾನವೋ ಭುವಿ
ಸೋಽಯಮಾಯಾತಿ ಭಗವಾನ್ ಶಂಕರಃ ಶಶಿಭೂಷಣಃ ॥೮೨॥

---

ಯಂ—ಆವನಾನೊಬ್ಬ ಪರಮೇಶ್ವರನನು ವಿನಿದ್ರಾಃ—ನಿದ್ರೆಯ ತೋರದಂಥಾ ಜಿತಶ್ವಾಸಾಃ — ಗೆಲಲುಪಟ್ಟ ಶ್ವಾಸವನುಳ್ಳಂಥಾ ಶಾಂತಾಃ — ಶಾಂತರಹಂಥಾ ಧ್ಯಾನಪರಾಯಣಾಃ—ಧ್ಯಾನದಲ್ಲಿ ತತ್ಪರರುಗಳು ಹೃದಯೇ—ಹೃದಯದಲ್ಲಿ ಧಿಯಾ —ಬುದ್ಧಿಯಿಂದ ಪಶ್ಯಂತಿ—ಕಾಣುತ್ತಿಹರು. ಸೋಽಯಂ—ಆ ಈ ದೇವನು ಅದ್ಯ —ಈಗ ಸಮೀಕ್ಷ್ಯತಾಂ—ನೋಡಲುಪಡಲಿ. ॥೭೯॥

ಪರಮೇಷ್ಠಿನಃ — ಪರಮಪದದಲ್ಲಿ ಇರುತ್ತಿದ್ದಂಥಾ ದೇವಸ್ಯ — ದೇವನ ಚೇಷ್ಟಿತಂ—ವ್ಯಾಪಾರವು ವಿಚಿತ್ರಂ—ವಿಚಿತ್ರವಹಂಥಾದು. ಅಹೋ—ಆಶ್ಚರ್ಯ. ನೀರೂಪಃ—ರೂಪಿಲ್ಲದೇ ಇದ್ದಂಥಾ ದೇವಃ — ಪ್ರಕಾಶನಹಂಥಾ ಪರಮೇಶ್ವರಃ— ಪರಮೇಶ್ವರನು ದೇಹೀವ — ದೇಹವನುಳ್ಳಾತನಕ್ಕೈ ಎಂಬ ಹಾಂಗೆ ದೃಶ್ಯತೇ — ಕಾಣಲುಪಡುತ್ತಿದ್ದಾನು. ॥೮೦॥

ಹೇ ಶೋಭನೇ;—ಎಲೆ ಒಪ್ಪುತ್ತಿದ್ದಂಥಾ ಶಚೀದೇವಿ! ಯಸ್ಯ—ಆವನಾನೊಬ್ಬ ಪರಮೇಶ್ವರನ ಪ್ರಸಾದಾತ್ — ಪ್ರಸನ್ನತಿಕೆಯ ದೆಸೆಯಿಂದ ಭಗವಾನ್ — ಭಗವಾನ್ನುವಹಂಥಾ ಬ್ರಹ್ಮಾ— ಬ್ರಹ್ಮನು ಶಾಶ್ವತಃ — ನಿತ್ಯನಹಂಥಾ ಆತನಾಗಿ ಲೋಕಸಂಧಾನಂ—ಲೋಕದ ಸೃಷ್ಟಿಯನು ಕರೋತಿ— ಮಾಡುತ್ತಿಹನು. ವಿಷ್ಣುಶ್ಚ —ಹರಿಯೂ ಕರೋತಿ—ಪಾಲನೆಯ ಮಾಡುತ್ತಿಹನು ಸೋಽಯಂ—ಆ ಈ ದೇವನು ಆಯಾತಿ—ಬಂದಿದ್ದಾನು. ॥೮೧॥

ಯಂ — ಆವನಾನೊಬ್ಬ ದೇವನನು ದೃಷ್ಟ್ವಾ— ಕಂಡು ಮಾನವಃ — ಮನುಷ್ಯನು ಭುವಿ—ಭೂಮಿಯಲ್ಲಿ ಪುನರ್ಜನ್ಮ—ಪುನರ್ಜನ್ಮವನು ನ ಲಭತೇ— ಪಡುವುತ್ತಿರನು. ಭಗವಾನ್—ಷಡ್ಗುಣೈಶ್ವರ್ಯಸಂಪನ್ನನಹಂಥಾ ಶಂಕರಃ—ಸುಖ

ದೇವತ್ವಾದಶುಭಂ ದೇವಿ ಲೋಕೇ ಕಿಂಚಿನ್ನ ವಿದ್ಯತೇ
ದೃಷ್ಟ್ವಾಽಪಿ ಸರ್ವದೇವೇಶಂ ಗಚ್ಛಾವೋಽನು ವಯಂ ಪರಮ್ ||೪೩

ಪಶ್ಯ ಚಂದ್ರಾಭವದನಂ ತ್ರಿಣೇತ್ರಂ ಭೂತಿಭೂಷಣಮ್
ಚತುರ್ಬಾಹುಮುದಾರಾಗಂ[1]ಜಟಾಮುಕುಟ[1]ಧಾರಿಣಮ್ ||೪೪||

ಸರ್ವಪಾಪಹರಂ ಸೂಕ್ಷ್ಮಂ ಪ್ರಕೃತೇಃ ಪರತಃ ಸ್ಥಿತಮ್
ಕಾರಣಂ ಪುರುಷಸ್ಯಾಪಿ ಪಶ್ಯ ಶೀತಾಂಶುಭೂಷಣಮ್ ||೪೫||

ಏವಮುಕ್ತ್ವಾ ಸಹಸ್ರಾಕ್ಷಃ ಪ್ರಹೃಷ್ಟೇಂದ್ರಿಯಮಾನಸಃ
ಪ್ರಣಿಪತ್ಯ ಮಹಾದೇವಮಿದಮಾಹ ವೃಷಧ್ವಜಮ್ ||೪೬||

---

ವನು ಮಾಡುತ್ತಿದ್ದಂಥಾ ಶಶಿಭೂಷಣಃ—ಚಂದ್ರಭೂಷಣನಹಂಥಾ ಸೋಽಯಂ—ಆ ಈ ಪರಮೇಶ್ವರನು ಆಯಾತಿ—ಬಂದಿದ್ದಾನು. ||೪೨||

ಭೋ ದೇವಿ !—ಎಲೇ ಶಚೀದೇವಿ ದೇವತ್ವಾತ್—ದೇವನಹತನದ ದೆಸೆಯಿಂದ ಲೋಕೇ—ಲೋಕದಲ್ಲಿ ಕಿಂಚಿತ್—ಒಂದಿಷ್ಟು ಅಶುಭಂ—ಅಶುಭವು ನ ವಿದ್ಯತೇ—ಇಲ್ಲ. ಸರ್ವದೇವೇಶಂ—ಸಮಸ್ತ ದೇವರ್ಕಳಿಗೊಡೆಯನಹಂಥಾ ಪರಂ—ಉನ್ನತನಹಂಥಾ ದೇವನನು ದೃಷ್ಟ್ವಾ—ಕಂಡು ವಯಂ—ನಾವು ಅನು — ಬಳಿವಿಡಿದು ಗಚ್ಛಾವಃ—ಎಯ್ದುವೆವು. ||೪೩||

ಚಂದ್ರಾಭವದನಂ—ಚಂದ್ರಂಗೆ ಸಮಾನವಹ ಮುಖವನುಳ್ಳಂಥಾ ತ್ರಿಣೇತ್ರಂ—ಮೂರು ನಯನಗಳನುಳ್ಳಂಥಾ ಭೂತಿಭೂಷಣಂ — ವಿಭೂತಿಭೂಷಣನಹಂಥಾ ಚತುರ್ಬಾಹುಂ — ಚತುರ್ಭುಜಂಗಳನುಳ್ಳಂಥಾ ಉದಾರಾಂಗಂ — ಒಪ್ಪುತ್ತಿದ್ದ ಶರೀರವನುಳ್ಳಂಥಾ ಜಟಾಮುಕುಟಧಾರಿಣಂ—ಜಟಾಮುಕುಟವ ಧರಿಸಿದಂಥಾ ಶಿವನನು ಪಶ್ಯ—ನೋಡು. ||೪೪||

ಸರ್ವಪಾಪಹರಂ — ಸಮಸ್ತ ಪಾಪಂಗಳ ಕೆಡಿಸುತ್ತಿದ್ದಂಥಾ ಸೂಕ್ಷ್ಮಂ—ಸೂಕ್ಷ್ಮನಹಂಥಾ ಪ್ರಕೃತೇಃ—ಪ್ರಕೃತಿಯ ದೆಸೆಯಿಂದ ಪರತಃ—ಮೇಲೆ ಸ್ಥಿತಂ—ಇರುತ್ತಿದ್ದಂಥಾ ಪುರುಷಸ್ಯಾಪಿ— ಪುರುಷಂಗೆಯೂ (ಯೂ) ಕಾರಣಂ — ಉತ್ಪತ್ತಿ ಕಾರಣನಹಂಥಾ ಶೀತಾಂಶುಭೂಷಣಂ—ಚಂದ್ರಭೂಷಣನಹಂಥಾ ಪರಮೇಶ್ವರನನು ಪಶ್ಯ—ನೋಡು. ಪ್ರಕೃತಿ ಎಂದಡೆ ಮಾಯೆಯ ಪೆಸರು. ಪುರುಷನೆಂದಡೆ ಆತ್ಮನು.

ಏವಂ—ಈ ಪ್ರಕಾರದಲ್ಲಿ ಉಕ್ತ್ವಾ—ನುಡಿದು ಸಹಸ್ರಾಕ್ಷಃ — ಇಂದ್ರನು

---

[1]ಜಟಾಮುಕುಟ (ಘ)

ಕಿಮಿದಂ ದೇವದೇವೇಶ ಸರ್ವಜ್ಞೇನ ತ್ವಯಾ ವಿಭೋ
ಕೃತಂ ಸರ್ವಜಗದ್ಧಾತ್ರಾ ಸರ್ವಪಾಪಹರಾವ್ಯಯ ||೪೭||

ಏವಮುಕ್ತೋ ಮಹಾದೇವಃ ಸ್ಮಯಮಾನೋ ವೃಷಧ್ವಜಃ
ನೋವಾಚ ಕಿಂಚಿದ್ವಿಪ್ರೇಂದ್ರಾ ಭಗವಾನ್ ಭಗನೇತ್ರಹಾ ||೪೮||

ತತೋ ಭೃಂಗಿರಿಟಿಃ ಪ್ರಾಹ ಶತಕ್ರತುಮರಿಂದಮಮ್
ದೇಹಿ ಭಿಕ್ಷಾಂ ಭಗವತೋ ದೇವಸ್ಯಾಸ್ಯ ಶಚೀಪತೇ ||೪೯||

ಏವಮುಕ್ತಸ್ಸಹಸ್ರಾಕ್ಷಃ ಪ್ರಣಿಪತ್ಯ ಪಿನಾಕಿನಮ್
ಯಥಾಶಕ್ತಿ ದದೌ ಭಿಕ್ಷಾಂ ಶಚ್ಯಾ ಸಹ ಪುರಂದರಃ ||೫೦||

ಪ್ರಹೃಷ್ಟೇಂದ್ರಿಯಮಾನಸಃ — ಸಂತೋಷಿಸಲ್ಪಟ್ಟ ಇಂದ್ರಿಯಂಗಳು ಮನಸ್ಸನುಳ್ಳಾತನಾಗಿ ಪ್ರಣಿಪತ್ಯ — ನಮಸ್ಕರಿಸಿ ವೃಷಧ್ವಜಂ — ವೃಷಭಧ್ವಜನಹಂಥಾ ಮಹಾದೇವಂ—ಪರಮೇಶ್ವರನನು ಕುರಿತು ಇದಂ—ಈ ವಾಕ್ಯವನು ಆಹ—ಬಿನ್ನಹಂ ಮಾಡಿದನು. ||೪೬||

ದೇವದೇವೇಶ — ದೇವಶ್ರೇಷ್ಠರುಗಳಿಗೊಡೆಯನಹಂಥಾ ಸರ್ವಪಾಪಹರ— ಸಮಸ್ತ ಪಾಪಂಗಳ ಕೆಡಿಸುತ್ತಿದ್ದಂಥಾ ಅವ್ಯಯಂ—ಕೇಡಿಲ್ಲದೇ ಇದ್ದಂಥಾ ವಿಭೋ —ಎಲೈ ಒಡೆಯನೇ ಸರ್ವಜ್ಞೇನ — ಸರ್ವಜ್ಞನಹಂಥಾ ಸರ್ವಜಗದ್ಧಾತ್ರಾ — ಸಮಸ್ತ ಲೋಕವನು ಸೃಷ್ಟಿಸುತ್ತಿದ್ದಂಥಾ ತ್ವಯಾ—ನಿನ್ನಿಂದ ಇದಂ ಕಿಂ—ಇದೇನು ಕೃತಂ—ಮಾಡಲ್ಪಟ್ಟಿತ್ತು. ||೪೭||

ಏವಂ—ಈ ಪ್ರಕಾರದಲ್ಲಿ ಉಕ್ತಃ— ನುಡಿಯಲ್ಪಟ್ಟಂಥಾ ಭಗವಾನ್ — ಷಡ್ಗುಣೈಶ್ವರ್ಯವನುಳ್ಳಂಥಾ ಭಗನೇತ್ರಹಾ—ಭಗಾದಿತ್ಯನ ನಯನವ ಮೀಂಟಿದಂಥಾ ವೃಷಧ್ವಜಃ— ವೃಷಭಧ್ವಜನಹಂಥಾ ಮಹಾದೇವಃ—ಪರಮೇಶ್ವರನು ಸ್ಮಯಮಾನಃ —ನಗುತ್ತಿದ್ದಾತನಾಗಿ ಭೋ ವಿಪ್ರೇಂದ್ರಾಃ — ಎಲೆ ಬ್ರಾಹ್ಮಣೋತ್ತಮರುಗಳಿರಾ ಕಿಂಚಿತ್—ಒಂದಿಷ್ಟು ನೋವಾಚ —ನುಡಿದುದಿಲ್ಲ. ||೪೮||

ತತಃ—ಅಷ್ಟರಮೇಲೆ ಭೃಂಗಿರಿಟಿಃ—ಭೃಂಗೀಶ್ವರನು ಅರಿಂದಮಂ — ಶತ್ರುಗಳನ್ನು ಕೊಲ್ಲುತ್ತಿದ್ದಂಥಾ ಶತಕ್ರತುಂ—ಇಂದ್ರನನು ಕುರಿತು ಪ್ರಾಹ—ನುಡಿದನು. ಭೋಃ ಶಚೀಪತೇ—ಎಲೆ ಶಚೀವಲ್ಲಭನೇ ; ಭಗವತಃ—ಭಗವಾನ್ನುವಹಂಥಾ ಅಸ್ಯ ದೇವಸ್ಯ—ಈ ಪರಮೇಶ್ವರಂಗೆ ಭಿಕ್ಷಾಂ—ಭಿಕ್ಷೆಯನು ದೇಹಿ—ಕೊಡು. ||೪೯||

ಏವಂ—ಭೃಂಗೀಶ್ವರನಿಂದ ಈ ಪ್ರಕಾರದಲ್ಲಿ ಉಕ್ತಃ— ನುಡಿಯಲ್ಪಟ್ಟಂಥಾ ಸಹಸ್ರಾಕ್ಷಃ—ಸಾವಿರಕಣ್ಣನುಳ್ಳಂಥಾ ಪುರಂದರಃ—ಇದ್ರಂನು ಶಚ್ಯಾಸಹ — ಶಚೀ

ಸುರಾಂಗನಾ ಭವಂ ದೃಷ್ಟ್ವಾ ಕಾಮಬಾಣಪ್ರಪೀಡಿತಾಃ
ಹಸಂತಿಸ್ಮ ತದಾ ಶಂಭುಮತೀವಮಧುರಾಕೃತಿಮ್ ||೫೧||

ಕಾಶ್ಚಿತ್ಕಪಾಲಿನಂ ದೃಷ್ಟ್ವಾ ಪದ್ಮಪತ್ರನಿಭೇಕ್ಷಣಾಃ
ಸ್ರಸ್ತವಸ್ತ್ರಾ ಬಭೂವುಸ್ತಾ ದೇವರಾಜಸ್ಯ ಸನ್ನಿಧೌ ||೫೨||

ವಿವಶಾ ಸ್ರಸ್ತಚಿಕುರಾಃ ಸ್ರಸ್ತಕಾಂಚೀಗುಣಾ ಜಗುಃ
ಈಷತ್ಸ್ವೇದಾಂಬುಖಚಿತಲಲಾಟಫಲಕೋಜ್ಜ್ವಲಾಃ ||೫೩||

ಆಕರ್ಣಪೂರ್ಣನಯನಾ ರತ್ನನೂಪುರ ಭೂಷಣಾಃ
ಕಾಶ್ಚಿದ್‌ದೃಷ್ಟ್ವಾ ಜಗನ್ನಾಥಂ ಮದನಾಂತಕರಂ ಹರಮ್ ||೫೪||

---

ದೇವಿಯಿಂದ ಸಹಿತವಾಗಿ ಪಿನಾಕಿನಂ—ಪರಮೇಶ್ವರನನು ಪ್ರಣಿಪತ್ಯ— ನಮಸ್ಕರಿಸಿ ಯಥಾಶಕ್ತಿ — ತನ್ನ ಶಕ್ತಿಯುಂಟಾದ ಹಾಗೆ ಭಿಕ್ಷಾಂ — ಭಿಕ್ಷೆಯನು ದದೌ— ಕೊಟ್ಟನು. ||೫೦||

ಸುರಾಂಗನಾಃ—ದೇವಸ್ತ್ರೀಯರುಗಳು ತದಾ—ಆಗ ಅತೀವ ಮಧುರಾಕೃತಿಂ —ಅತ್ಯಂತ ಮನೋಹರವಹ ರೂಪನುಳ್ಳಂಥಾ ಶಂಭುಂ— ಸುಖವನು ಮಾಡುತ್ತಿದ್ದಂಥಾ ಭವಂ—ಶಿವನನು ದೃಷ್ಟ್ವಾ — ಕಂಡು ಕಾಮಬಾಣಪ್ರಪೀಡಿತಾಃ— ಕಾಮನ ಬಾಣಗಳಿಂದ ಘಾಸಿಯಾದವರುಗಳಾಗಿ ಹಸಂತಿ ಸ್ಮ—ನಗುತ್ತಿದ್ದರು. ||೫೧||

ಪದ್ಮಪತ್ರನಿಭೇಕ್ಷಣಾಃ — ತಾವರೆಯ ಎಸಳಿಗೆ ಸಮಾನವಹ ನಯನಂಗಳನುಳ್ಳಂಥಾ ತಾಃ ಕಾಶ್ಚಿತ್ — ಆ ಕೆಲಬರು ದೇವಸ್ತ್ರೀಯರುಗಳು ಕಪಾಲಿನಂ — ಕಪಾಲವ ಧರಿಸಿದಂಥಾ ಶಿವನನು ದೃಷ್ಟ್ವಾ—ಕಂಡು ದೇವರಾಜಸ್ಯ—ದೇವೇಂದ್ರನ ಸನ್ನಿಧೌ = ಸಮೀಪದಲ್ಲಿ ಸ್ರಸ್ತವಸ್ತ್ರಾಃ = ಸಡಲಿದ ವಸ್ತ್ರಂಗಳನುಳ್ಳಂಥಾವರುಗಳು ಬಭೂವುಃ = ಆದರು. ||೫೨||

ವಿವಶಾಃ = ಪರವಶರಾದಂಥಾ ಸ್ರಸ್ತಚಿಕುರಾಃ = ಕೆದರಿದ ಕುರುಳುಗೂದಲುಗಳನುಳ್ಳಂಥಾ ಸ್ರಸ್ತಕಾಂಚೀಗುಣಾಃ = ಸಡಲಿದ ಕಾಂಚೀದಾಮವನುಳ್ಳಂಥಾ ಈಷತ್ ಸ್ವೇದಾಂಬುಖಚಿತಲಲಾಟಫಲಕೋಜ್ಜ್ವಲಾಃ = ಒಂದಿಷ್ಟು ಬೆವರಿನುದಕದಿಂದ ಸಂಬಂಧಿಸಲುಪಟ್ಟ ಲಲಾಟವೆಂಬ ಹಲಗೆಯಿಂದ ಒಪ್ಪುತ್ತಿದ್ದಂಥಾವರುಗಳಾಗಿ ಜಗುಃ = ಹಾಡಿದರು. ||೫೩||

ಆಕರ್ಣಪೂರ್ಣನಯನಾಃ = ಕಿವಿಪರ್ಯಂತ ತುಂಬಲುಪಟ್ಟ ನಯನಂಗಳನುಳ್ಳಂಥಾ ರತ್ನನೂಪುರಭೂಷಣಾಃ = ರತ್ನಮಯವಹ ಅಂದುಗೆಗಳ ಭೂಷಣ

ಭ್ರೂವಿಲಾಸಂ ತದಾ ಚಕ್ರುಃ ಜಗುಃ ಕಾಶ್ಚಿತ್ಸಹಸ್ರಶಃ
ಕಾಶ್ಚಿತ್ಪಶ್ಯಂತ್ಯನಿಮಿ[1]ಷನ್[1] ಕಾಶ್ಚಿದ್ಧಾವಂತಿ ತಂ ಪ್ರತಿ ||೫೫||

ಕಾಶ್ಚಿದ್ವಿವಸ್ತ್ರಾ ಧಾವಂತಿ ದೇವಪಾರ್ಶ್ವಂ ವರಾಂಗನಾಃ
ಆಲಿಂಗನಂ ತದಾ ಕಾಶ್ಚಿತ್ ಕುರ್ವಂತಿ ಮನಸಾ ದ್ವಿಜಾಃ ||೫೬||

[2]ಕಾಶ್ಚಿತ್ತಿಷ್ಠೇತಿ[2] ತಿಷ್ಠೇತಿ ವದಂತಿ ವಿವಿಧಸ್ವರಾಃ
ಕಿಂ ತತ್ರೇತಿ ತದಾ ಕಾಶ್ಚಿಚ್ಛೇರತೇ ಸುರವಲ್ಲಭಾಃ ||೫೭||

ಅನಂಗಬಾಣವಿದ್ಧಾಂಗಾ ನ ಜಾನಂತಿ ಶಚೀಪತೀಮ್

---

ವನುಳ್ಳಂಥಾ ಕಾಶ್ಚಿತ್ = ಕೆಲಬರು ಸ್ತ್ರೀಯರುಗಳು ಜಗನ್ನಾಥಂ = ಲೋಕಗಳಿಗೆ ಒಡೆಯನಹಂಥಾ ಮದನಾಂತಕರಂ = ಕಾಮನ ನಾಶವ ಮಾಡಿದಂಥಾ ಹರಂ = ಶಿವನನು ದೃಷ್ಟ್ವಾ = ಕಂಡು ತದಾ = ಆಗ ಭ್ರೂವಿಲಾಸಂ = ಹುಬ್ಬಿನ ವಿಲಾಸವನು ಚಕ್ರುಃ = ಮಾಡಿದರು. ಸಹಸ್ರಶಃ = ಸಾವಿರಸಂಖ್ಯೆಯನುಳ್ಳಂಥಾ ಕಾಶ್ಚಿತ್ = ಕೆಲಬರು ಜಗುಃ = ಹಾಡಿದರು. ಕಾಶ್ಚಿತ್ = ಕೆಲಬರು ಅನಿಮಿಷನ್ = ಎವೆಯಿಕ್ಕದೆ ಪಶ್ಯಂತಿ = ನೋಡುತ್ತಿದ್ದರು. ಕಾಶ್ಚಿತ್ = ಕೆಲಬರು ತಂ ಪ್ರತಿ = ಆ ಪರಮೇಶ್ವರನನು ಕುರಿತು ಧಾವಂತಿ = ಎಯ್ದುತ್ತಿದ್ದರು. ||೫೫||

ಭೋದ್ವಿಜಾಃ = ಎಲೆ ಬ್ರಾಹ್ಮಣರುಗಳಿರಾ ಕಾಶ್ಚಿತ್ = ಕೆಲಬರು ವರಾಂಗನಾಃ = ಒಪ್ಪುತ್ತಂವಿದ್ದ ಸ್ತ್ರೀಯರುಗಳೂ ವಿವಸ್ತ್ರಾಃ = ಹೋಗಲುಪಟ್ಟ ವಸ್ತ್ರವನುಳ್ಳವರುಗಳಾಗಿ ದೇವಪಾರ್ಶ್ವಂ = ಶಿವನ ಸಮೀಪವನು ಧಾವಂತಿ = ಎಯ್ದುತ್ತಿಡ್ದರು. ಕಾಶ್ಚಿತ್ = ಕೆಲಬರು ಸ್ತ್ರೀಯರು ತದಾ = ಆಗ ಮನಸಾ = ಮನಸ್ಸಿನಿಂದ ಆಲಿಂಗನಂ = ಆಲಿಂಗನವನು ಕುರ್ವಂತಿ = ಹೂಡುತ್ತಿದ್ದರು. ||೫೬||

ಕಾಶ್ಚಿತ್ = ಕೆಲಬರು ಸ್ತ್ರೀಯರು ತಿಷ್ಠೇತಿ ತಿಷ್ಠೇತಿ = ನಿಲ್ಲು ನಿಲ್ಲೂ ಎಂದು ಹೀಂಗೆ ವಿವಿಧಸ್ವರಾಃ = ನಾನಾಪ್ರಕಾರವಹ ಧ್ವನಿಗಳನು ವದಂತಿ = ನುಡಿವು-ತ್ತಿದ್ದಾರು. ಕಾಶ್ಚಿತ್ = ಕೆಲಬರು ಸುರವಲ್ಲಭಾಃ = ದೇವಸ್ತ್ರೀಯರುಗಳು ತತ್ರ = ಅಲ್ಲಿ ಕಿಮಿತಿ = ಏನು ಇದ್ದೂ[3]ದು[3] ಎಂದು ತದಾ = ಆಗ ಶೇರತೆ = ಮಲಗಿದರು. ||೫೭

ಅನಂಗಬಾಣವಿದ್ಧಾಂಗಾಃ = ಕಾಮನ ಬಾಣಂಗಳಿಂದ ಘಾಯವಡೆಯಲು ಪಟ್ಟ ಶರೀರವನುಳ್ಳಂಥವರುಗಳಾಗಿ ಶಚೀಪತಿಂ = ಇಂದ್ರನನು ನ ಜಾನಂತಿ =

---

[1] ಷಂ(ಘ) ಈ ಪಾಠವೇ ಯುಕ್ತವಾಗಿದೆ. [2] ಕಾಶ್ಚಿದ್‌ಬ್ರುವಂತಿ (ಘ) [3] ತ್ತೈ (ಖ)

ಅಂಗನಾಮಂಡಲಂ ತತ್ರ ಸಂಭ್ರಾಂತಮಭವತ್ತದಾ
[1]ಮಾಯಯಾ ದೇವದೇವಸ್ಯ ಮಹಾದೇವಸ್ಯ ಶೂಲಿನಃ[1] ||೫೮||

ಸ್ಮಯಮಾನೋ ಹರಶ್ಚಾಪಿ ಭಿಕ್ಷಾಮಾದಾಯ ಸತ್ಕೃತಾಮ್
ಜಗಾಮ ತಸ್ಮಾದ್ದೇವೇಶೋ ಧರ್ಮಸ್ಯ ಭವನಂ ಪ್ರತಿ ||೫೯||

ದೇವರಾಜೋಽಪಿ ದೇವೇನ [2]ಸಹಾಗಚ್ಛದಮಿತ್ರಹಾ[2]
ಅಪ್ಸರೋಗಣಸಂಘಾಶ್ಚ ಪ್ರಯಾಣೇ ಪರಮೇಷ್ಠಿನಃ
ನೃತ್ಯಂತಿ ಪುರತೋಽತ್ಯರ್ಥಂ ನಿಯೋಗಾದ್ವಜ್ರಿಣಃ ಪ್ರಭೋಃ ||೬೦||

ಚಕ್ರಮಾರ್ಗೇಣ ನೃತ್ಯಂತಿ ಪೀನಶ್ರೋಣಿಪಯೋಧರಾಃ
ಕಾಶ್ಚಿದ್ಗಾಯಂತಿ ನನೃತುಃ ಕಾಶ್ಚಿದ್ದೇವವರಾಂಗನಾಃ ||೬೧||

---

ಅರಿಯದಾದರು. ತತ್ರ = ಅಲ್ಲಿ ಅಂಗನಾಮಂಡಲಂ = ಸ್ತ್ರೀಸಮೂಹವು ತದಾ = ಆಗ ದೇವದೇವಸ್ಯ = ದೇವಶ್ರೇಷ್ಠನಹಂಥಾ ಶೂಲಿನಃ = ತ್ರಿಶೂಲವ ಧರಿಸಿದಂಥಾ ಮಹಾದೇವಸ್ಯ = ಪರಮೇಶ್ವರನ ಮಾಯಯಾ = ಮಾಯೆಯಿಂದ ಸಂಭ್ರಾಂತಂ = ಭ್ರಮಿಸಲುಪಟ್ಟಂಥಾದು ಅಭವತ್ = ಆಯಿತ್ತು. ||೫೮||

ದೇವೇಶಃ = ದೇವರ್ಕಳಿಗೊಡೆಯನಹಂಥಾ ಹರಶ್ಚ = ಪರಮೇಶ್ವರನು ಸ್ಮಯಮಾನೋಽಪಿ = ನಗುತ್ತಿದ್ದಾತನಾಗಿ ಸತ್ಕೃತಾಂ = ಸತ್ಕರಿಸಲುಪಟ್ಟಂಥಾ ಭಿಕ್ಷಾಂ= ಭಿಕ್ಷೆಯನು ಆದಾಯ = ತೆಗೆದುಕೊಂಡು ತಸ್ಮಾತ್ = ಆ ಇಂದ್ರನ ಸ್ಥಾನದ ದೆಸೆಯಿಂದ ಧರ್ಮಸ್ಯ= ಯಮನ ಭವನಂ ಪ್ರತಿ= ಗೃಹವನು ಕುರಿತು ಜಗಾಮ = ಎಯ್ದಿದನು. ||೫೯||

ಅಮಿತ್ರಹಾ = ಶತ್ರುಗಳ ಕೊಲ್ಲುತಿದ್ದಂಥಾ ದೇವರಾಜೋಽಪಿ = ದೇವೇಂದ್ರನು ದೇವೇನ ಸಹ = ಶಿವನೊಡನೆ ಅಗಚ್ಛತ್ = ಎಯ್ದಿದನು. ಪರಮೇಷ್ಠಿನಃ = ಪರಮೇಶ್ವರನ ಪ್ರಯಾಣೇ = ಪಯಣದಲ್ಲಿ ಅಪ್ಸರೋಗಣಸಂಘಾಶ್ಚ = ಅಪ್ಸರ ಗಣಿಕೆಯರ ಸಮೂಹಂಗಳು ವಜ್ರಿಣಃ = ಇಂದ್ರನ ನಿಯೋಗಾತ್ = ಅಜ್ಞೆಯ ದೆಸೆಯಿಂದ ಪ್ರಭೋಃ = ಪರಮೇಶ್ವರನ ಪುರತಃ = ಮುಂದೆ ಅತ್ಯರ್ಥಂ = ಅತ್ಯಂತವಾಗಿ ನೃತ್ಯಂತಿ = ನೃತ್ಯವನಾಡುತ್ತಿದ್ದರು. ||೬೦||

ಪೀನಶ್ರೋಣಿಪಯೋಧರಾಃ = ದೊಡ್ಡಿತ್ತಹ ನಿತಂಬಸ್ತನಂಗಳನುಳ್ಳಂಥಾ

---

[1] (ಘ) ದಲ್ಲಿ ಮಾತ್ರ ಇಲ್ಲ. [2] ಸಹಾಗಚ್ಛತ ವೃತ್ರಹಾ (ಘ)

ವಿಧೂಮೋ ನಾಮ ಗಣಪಃ ಶ್ವೇತಚ್ಛತ್ರಂ ಸುಶೋಭನಮ್
ಶತಯೋಜನವಿಸ್ತೀರ್ಣಂ ರತ್ನವೈಡೂರ್ಯಮಂಡಿತಮ್ ॥
ರುಕ್ಮದಂಡಂ ಸಮಾದಾಯ [1]ಸಿಷೇವೇ[1] ಪರಮೇಶ್ವರಮ್ ॥೬೨॥

ಚಾಮರವ್ಯಜನೇ ಚೋಭೇ ಚಂದ್ರಮಂಡಲಸನ್ನಿಭೇ
ಶ್ವೇತಕೇತುಭಗಘ್ನೌ ಚ ಗೃಹೀತ್ವಾಽಗ್ರೇ ಹಿ ಜಗ್ಮತುಃ ॥೬೩॥

ಮುನಯೋ ದೇವಸಂಘಾಶ್ಚ ಭೂತಸಂಘಾಸ್ತಥೈವ ಚ
ಪರಿವಾರ್ಯ ಮಹಾದೇವಂ ಜಗ್ಮುಃ ಪ್ರಾಂಜಲಯಃಸ್ತ[2]ಥಾ[2] ॥೬೪॥

---

ಕಾಶ್ಚಿತ್ = ಕೆಲಬರು ಸ್ತ್ರೀಯರುಗಳು ಚಕ್ರಮಾರ್ಗೇಣ = ಚಕ್ರಾಕಾರದ ತಿರಿಪಿನ ಮಾರ್ಗದಿಂದ ನೃತ್ಯಂತಿ = ನೃತ್ಯವನಾಡುತ್ತಿದ್ದರು. ಕಾಶ್ಚಿತ್ = ಕೆಲಬರು ಸ್ತ್ರೀಯರು ಗಾಯಂತಿ = ಹಾಡುತ್ತಿದ್ದರು. ಕಾಶ್ಚಿದ್ದೇವವರಾಂಗನಾಃ = ಕೆಲಬರು ದೇವಸ್ತ್ರೀಯರುಗಳು ನನೃತುಃ = ಕುಣಿದಾಡಿದರು. ॥೬೧॥

ವಿಧೂಮೋ ನಾಮ = ವಿಧೂಮನೆಂಬ ಹೆಸರನುಳ್ಳಂಥಾ ಗಣಪಃ = ಗಣೇಶ್ವರನು ಸುಶೋಭನಂ = ಅತ್ಯಂತ ಮನೋಹರವಹಂಥಾ ರತ್ನವೈಡೂರ್ಯಮಂಡಿತಂ = ರತ್ನ ವೈಡೂರ್ಯಂಗಳಿಂದ ಅಲಂಕರಿಸಲ್ಪಟ್ಟಂಥಾ ರುಕ್ಮದಂಡಂ = ಸುವರ್ಣದ ಕಾವನುಳ್ಳಂಥಾ ಶತಯೋಜನವಿಸ್ತೀರ್ಣಂ = ನೂರುಗಾವುದ ವಿಸ್ತಾರವಹಂಥಾ ಶ್ವೇತಚ್ಛತ್ರಂ = ಬಿಳಿಯ ಸತ್ತಿಗೆಯನು ಸಮಾದಾಯ = ಪಿಡಿದುಕೊಂಡು ಪರಮೇಶ್ವರಂ = ಪರಮೇಶ್ವರನನು ಸಿಷೇವೇ = ಓಲೈಸಿದನು. ॥೬೨॥

ಶ್ವೇತಕೇತುಭಗಘ್ನೌ ಚ = ಶ್ವೇತಕೇತು ಭಗಘ್ನರೆಂಬ ಇಬ್ಬರು ಗಣೇಶ್ವರರು ಚಂದ್ರಮಂಡಲಸನ್ನಿಭೇ = ಚಂದ್ರಮಂಡಲಕ್ಕೆ ಸಮಾನವಾಗುತ್ತಿದ್ದಂಥಾ ಉಭೇ = ಎರಡು ಚಾಮರವ್ಯಜನೇ ಚ = ಚಾಮರ ಆಲವಟ್ಟಲುಗಳನೂ ಗೃಹೀತ್ವಾ = ಹಿಡಿದು ಅಗ್ರೇ = ಮುಂದುಗಡೆಯಲ್ಲಿ ಜಗ್ಮತುರ್ಹಿ = ಎಯ್ದಿದರಲಾ ॥೬೩॥

ಮುನಯಃ = ಋಷಿಗಳು ದೇವಸಂಘಾಶ್ಚ = ದೇವರ್ಕಳ ಸಮೂಹಂಗಳು ತಥೈವ = ಹಾಂಗೆ ಭೂತಸಂಘಾಶ್ಚ = ಭೂತಂಗಳ ಸಮೂಹಂಗಳು ಪ್ರಾಂಜಲಯಃ = ಕೈಮುಗಿದುಕೊಳಲುಪಟ್ಟವರುಗಳಾಗಿ ಮಹಾದೇವಂ = ಶಿವನನು ಪರಿವಾರ್ಯ = ಮುಸುಕಿ ತಥಾ = ಹಾಂಗೆ ಜಗ್ಮುಃ = ಎಯ್ದಿದರು. ॥೬೪॥

---

[1] ನಿವೇಶ್ಯ (ಘ) [2] ದಾ (ಘ)

ಶ್ರುತ್ವಾ ಗಾನಂ ಚ ಭಗವಾನ್ [1]ನೃತ್ಯಂ ಚ[1] ಸುರಯೋಷಿತಾಮ್
ದೃಷ್ಟ್ವಾ ಭೂತಪತಿಶ್ಶಂಭುಃ ಯಯೌ ಯಮನಿಕೇತನಮ್ ||೬೫||

ಯಮರಾಜಪುರಂ ದೇವೋ ವಿಶ್ವೇಶಃ ಸಮುಪಾಯಯೌ
ಸೇವ್ಯಮಾನಃ ಸುರಗಣೈಃ ಮುನಿಭಿರ್ವೇದಪಾರಗೈಃ ||೬೬||

ಹೇಮಪ್ರಾಕಾರಸಂಯುಕ್ತಂ ದೀರ್ಘಿಕಾಭಿರಲಂಕೃತಮ್
ಗೋಪುರೈಶ್ಶಿಖರಾಕಾರೈಃ ಧವಳೈರ್ಭೂಷಿತಂ ಶುಭಮ್ ||೬೭||

ಪ್ರಾಸಾದೈರ್ವಿವಿಧಾಕಾರೈರ್ಹಿಮವಚ್ಛಿಖರೋಪಮೈಃ
ಶರದಭ್ರಘನಪ್ರಖ್ಯೈಃ ಸರ್ವತಃ ಸಮಲಂಕೃತಮ್ ||೬೮||

---

ಭೂತಪತಿಃ = ಭೂತನಾಥನಹಂಥಾ ಭಗವಾನ್ = ಷಡ್ಗುಣೈಶ್ವರ್ಯ-ವನುಳ್ಳಂಥಾ ಶಂಭುಃ = ಪರಮೇಶ್ವರನು ಸುರಯೋಷಿತಾಂ = ದೇವಸ್ತ್ರೀಯರುಗಳ ಗಾನಂ ಚ = ಗಾನವನು ಶ್ರುತ್ವಾ = ಕೇಳಿ, ನೃತ್ಯಂ ಚ = ನೃತ್ಯವನು ದೃಷ್ಟ್ವಾ = ನೋಡಿ ಯಮನಿಕೇತನಂ = ಯಮನ ಸ್ಥಾನವನು ಯಯೌ = ಎಯ್ದಿದನು.

ವಿಶ್ವೇಶಃ = ವಿಶ್ವಕ್ಕೆ ಒಡೆಯನಹಂಥಾ ದೇವಃ = ಪರಮೇಶ್ವರನು ಸುರಗಣೈಃ = ದೇವಗಣಗಳಿಂದ ವೇದಪಾರಗೈಃ = ವೇದಂಗಳ ಕಡೆಯನೆಯ್ದಿದಂಥಾ ಮುನಿಭಿಃ = ಋಷಿಗಳಿಂದ ಸೇವ್ಯಮಾನಃ = ಓಲೈಸಿಕೊಳಲುಪಟ್ಟಾತನಾಗಿ ಯಮರಾಜ-ಪುರಂ = ಯಮನ ಪಟ್ಟಣವನು ಸಮುಪಾಯಯೌ = ಎಯ್ದಿದನು. ||೬೬||

ಹೇಮಪ್ರಾಕಾರಸಂಯುಕ್ತಂ = ಸುವರ್ಣದ ಕೋಟೆಗಳಿಂದ ಕೂಡಲುಪಟ್ಟಂಥಾ ದೀರ್ಘಿಕಾಭಿಃ = ಕೊಳಂಗಳಿಂದ ಅಲಂಕೃತಂ = ಅಲಂಕರಿಸಲುಪಟ್ಟಂಥಾ ಶಿಖರಾಕಾರೈಃ = ಪರ್ವತದ ಶಿಖರದೋಪಾದಿ ಆಕಾರವನುಳ್ಳಂಥಾ ಧವಳೈಃ = ಶುಭ್ರವಹಂಥಾ ಗೋಪುರೈಃ = ಹೆಬ್ಬಾಗಿಲುಗಳಿಂದ ಭೂಷಿತಂ = ಅಲಂಕರಿಸಲು-ಪಟ್ಟಂಥಾ ಶುಭಂ = ಒಪ್ಪುತ್ತಿದ್ದಂಥಾ, ||೬೭||

ಹಿಮವಚ್ಛಿಖರೋಪಮೈಃ = ಹಿಮವತ್ಪರ್ವತದ ಶಿಖರಂಗಳಿಗೆ ಸಮಾನವಾಗುತ್ತಿದ್ದಂಥಾ ಶರದಭ್ರಘನಪ್ರಖ್ಯೈಃ = ಶರತ್ಕಾಲದ ಮೇಘಗಳೋಪಾದಿ ಬಹಳಹ ಕಾಂತಿಯನುಳ್ಳಂಥಾ ವಿವಿಧಾಕಾರೈಃ = ನಾನಾಪ್ರಕಾರವಹ ಆಕಾರಂಗಳನುಳ್ಳಂಥಾ ಪ್ರಾಸಾದೈಃ = ಉಪ್ಪರಿಗೆಗಳಿಂದ ಸರ್ವತಃ = ಎಲ್ಲಾ ಕಡೆಯಲ್ಲಿ ಸಮಲಂಕೃತಂ =

---

[1] ನೃತ್ತಂ (ಕ) ಮಾತ್ರ

ಯಮೋಽಪಿ ಭಾರ್ಯಯಾ ಸಾರ್ಧಂ ಶ್ರುತ್ವಾ ದೇವೇಶಮಾಗತಮ್
ಸ್ವಗೃಹಾನ್ನಿರ್ಜಗಾಮಾಶು ಪುಷ್ಪಸಂಭಾರಸಂಭೃತಃ ||೭೯||

ಗತ್ವಾ ದೃಷ್ಟ್ವಾ ಮಹಾದೇವಂ ಸೂರ್ಯಪುತ್ರೋ ಮಹಾಮತಿಃ
ಪ್ರಣಿಪತ್ಯ ಪ್ರಹೃಷ್ಟಾತ್ಮಾ ವಚನಂ ಚೇದಮಬ್ರವೀತ್ ||೭೦||

ಅದ್ಯ ಜಾತೋಽಸ್ಮ್ಯಹಂ ದೇವ ಅದ್ಯ ಮೇ ಸಫಲಂ ತಪಃ
ಧರ್ಮರಾಜೋ ಭವಾಮ್ಯದ್ಯ ತವ ಪಾದಾಬ್ಜದರ್ಶನಾತ್ ||೭೧||

ತ್ವಂ ಕರ್ತಾ ಸರ್ವಲೋಕಾನಾಂ ಹರ್ತಾ ಭರ್ತಾ ತ್ವಮೇವ ಚ
ತ್ವಂ ಗತಿಃ ಸರ್ವಭೂತಾನಾಂ ಅಸ್ಮಾಕಂ ಚ ವಿಶೇಷತಃ ||೭೨||

ಅಲಂಕರಿಸಲ್ಪಟ್ಟಂಥಾ ಯಮರಾಜಪುರಂ = ಯಮರಾಜನ ಪಟ್ಟಣವನ್ನು ಸಮುಪಾಯಯೌ = ಎಯ್ದಿದನು. ||೬೮||

ಆಗತಂ = ಬಂದಂಥಾ ದೇವೇಶಂ = ದೇವರ್ಕಳಿಗೊಡೆಯನಹಂಥಾ ಶಿವನನು ಶ್ರುತ್ವಾ = ಕೇಳಿ ಯಮೋಽಪಿ = ಯಮನೂ ಭಾರ್ಯಯಾ ಸಾರ್ಧಂ = ಸ್ತ್ರೀಯಿಂದ ಸಹಿತನಾಗಿ ಪುಷ್ಪಸಂಭಾರಸಂಭೃತಃ = ಪುಷ್ಪ[1]ಸಮೂಹಂಗಳನೊದ[1]ಗಿಸಲು ಪಟ್ಟಾತನಾಗುತವು ಸ್ವಗೃಹಾತ್ = ತನ್ನ ಅರಮನೆಯ ದೆಸೆಯಿಂದ ಆಶು = ಬೇಗ ನಿರ್ಜಗಾಮ = ಹೊರವಂಟನು. ||೬೯||

ಮಹಾಮತಿಃ = ಬಹಳವಹ ಮತಿಯನುಳ್ಳಂಥಾ ಸೂರ್ಯಪುತ್ರಃ = ಸೂರ್ಯನ ಮಗನಹಂಥಾ ಯಮನು ಗತ್ವಾ = ಹೋಗಿ ಮಹಾದೇವಂ = ಪರಮೇಶ್ವರನನು ದೃಷ್ಟ್ವಾ = ಕಂಡು ಪ್ರಣಿಪತ್ಯ = ನಮಸ್ಕರಿಸಿ ಪ್ರಹೃಷ್ಟಾತ್ಮಾ = ಸಂತೋಷಿಸಲುಪಟ್ಟ ಚಿತ್ತವನುಳ್ಳಾತನಾಗಿ ಇದಂ ವಚನಂ = ಈ ವಾಕ್ಯವನು ಅಬ್ರವೀತ್ = ನುಡಿದನು. ||೭೦||

ಭೋ ದೇವ = ಎಲೈ ದೇವನೇ ಅದ್ಯ = ಇಂದು ಅಹಂ = ನಾನು ಜಾತಃ = ಹುಟ್ಟಿದಾತನು ಅಸ್ಮಿ = ಆಗುತ್ತಿದ್ದೇನು. ಅದ್ಯ = ಇಂದು ಮೇ = ಎನ್ನ ತಪಃ = ತಪಸ್ಸು ಸಫಲಂ = ಸಫಲವು. ಅದ್ಯ = ಇಂದು ತವ = ನಿನ್ನ ಪಾದಾಬ್ಜದರ್ಶನಾತ್ = ಪಾದಕಮಲದರ್ಶನವಾದ ದೆಸೆಯಿಂದ ಧರ್ಮರಾಜಃ = ಧರ್ಮರಾಜನು ಭವಾಮಿ = ಆಗುತ್ತಿದ್ದೇನು. ||೭೧||

ತ್ವಂ = ನೀನು ಸರ್ವಲೋಕಾನಾಂ = ಸಮಸ್ತಲೋಕಂಗಳ ಕರ್ತಾ =

[1] ಲುಪ್ತ (ಕ)

ವಿರಿಂಚೋಽಪಿ ನ ಜಾನಾತಿ ತ್ವಾಮಜಂ ಸರ್ವಸಾಕ್ಷಿಣಮ್
ಕಿಮಹಂ ದೇವ ದೇವೇಶ ಸರ್ವಜ್ಞ ತ್ರಿಪುರಾಂತಕ ॥೭೩॥

ತವ ಪ್ರಸಾದಾದ್ಬ್ರಹ್ಮಾಪಿ ಜಗತ್ಸೃಷ್ಟಿಂ ಕರೋತಿ [1]ಹಿ[1]
ತವಾದೇಶಾದಿದಂ ಸರ್ವಂ ವರ್ತತೇ ಸಚರಾಚರಮ್ ॥೭೪॥

ಉಕ್ತ್ವೈವಂ ಚಂದ್ರಮೌಲಿಂ ತು ದದೌ ಭಿಕ್ಷಾಂ [2]ಸ್ವಶಕ್ತಿತಃ[2]
ಸತ್ಕೃತಾಂ [3]ಯಮರಾಡತ್ರ[3] ಭಾರ್ಯಯಾ ಸಹ ಸತ್ತಮಾಃ ॥೭೫॥

---

ಮಾಡುವಾತನು. ತ್ವಮೇವ ಚ = ನೀನೇ ಭರ್ತಾ = ಪಾಲಿಸುವಾತನು, ಹರ್ತಾ = ಸಂಹರಿಸುವಾತನು. ತ್ವಂ = ನೀನು ಸರ್ವಭೂತಾನಾಂ = ಸಮಸ್ತ ಪ್ರಾಣಿಗಳಿಗೆ ಗತಿಃ = ಗತಿಯಹಂಥಾತನು. ಅಸ್ಮಾಕಂ ಚ = ನಮಗೆಯೂ ವಿಶೇಷತಃ = ವಿಶೇಷವಾಗಿ ಗತಿಃ = ಗತಿಯಹಂಥಾತನು. ॥೭೨॥

ಸರ್ವಜ್ಞ = ಸರ್ವಜ್ಞನಹಂಥಾ ತ್ರಿಪುರಾಂತಕ = ತ್ರಿಪುರವ[4] ಸಂಹರಿಸಿದಂಥಾ[4] ದೇವೇಶ = ದೇವರ್ಕಳಿಗೊಡೆಯನಹಂಥಾ ಭೋ ದೇವ = ಎಲೆ ದೇವನೇ ಸರ್ವಸಾಕ್ಷಿಣಂ = ಸಮಸ್ತಕ್ಕೆ ಸಾಕ್ಷೀಭೂತನಹಂಥಾ ಅಜಂ = ಜನ್ಮವಿಲ್ಲದೇ ಇದ್ದಂಥಾ ತ್ವಾಂ = ನಿನ್ನನು ವಿರಿಂಚೋಽಪಿ = ಬ್ರಹ್ಮನು ನ ಜಾನಾತಿ = ಅರಿಯನು. ಅಹಂ = ನಾನು ಕಿಂ = ಏನ ಬಲ್ಲೆನು. ॥೭೩॥

ತವ = ನಿನ್ನ ಪ್ರಸಾದಾತ್ = ಪ್ರಸನ್ನತೆಯ ದೆಸೆಯಿಂದ ಬ್ರಹ್ಮಾಪಿ = ಬ್ರಹ್ಮನು ಜಗತ್ಸೃಷ್ಟಿಂ = ಲೋಕಂಗಳ ನಿರ್ಮಿಸುಹವನು ಕರೋತಿ ಹಿ = ಮಾಡುತ್ತಿಹನಲಾ. ತವ = ನಿನ್ನ ಆದೇಶಾತ್ = ಆಜ್ಞೆಯ ದೆಸೆಯಿಂದ ಸಚರಾಚರಂ = ಚರಾಚರವಹಂಥಾ ಇದಂ ಸರ್ವಂ = ಈ ಸಮಸ್ತ ಜಗತ್ತು ವರ್ತತೇ = ವರ್ತಿಸುತ್ತಿಹುದು. ॥೭೪॥

ಯಮರಾಟ್ = ಯಮನು ಏವಂ = ಈ ಪ್ರಕಾರದಲ್ಲಿ ಉಕ್ತ್ವಾ = ನುಡಿದು ಸತ್ತಮಾಃ = ಎಲೆ ಒಪ್ಪುತ್ತಂವಿದ್ದ ಋಷಿಗಳಿರಾ! ಭಾರ್ಯಯಾ ಸಹ = ಸ್ತ್ರೀಯಿಂದ ಸಹಿತನಾಗಿ ಸ್ವಶಕ್ತಿತಃ = ತನ್ನ ಶಕ್ತಿಯಿಂದ ಅತ್ರ = ಇಲ್ಲಿ ಚಂದ್ರಮೌಳಿಂ = ಚಂದ್ರಚೂಡಾಮಣಿಯಹ ಶಿವನನು ಕುರಿತು ಸತ್ಕೃತಾಂ = ಮನೋಹರವಾಗಿ ಮಾಡಲುಪಟ್ಟಂಥಾ ಭಿಕ್ಷಾಂ = ಭಿಕ್ಷೆಯನು ದದೌ = ಕೊಟ್ಟನು. ॥೭೫॥

---

[1] ಚ (ಘ) [2] ಸ್ವಭಕ್ತಿತಃ (ಘ)
[3] ಯಮರಾಟ್ ತತ್ರ (ಘ) [4] ಸಂಹಾರಿಯಹಂಥಾ (ಕ)

ತತಃ ಪಿನಾಕೀ ಭಗವಾನ್ ಯಯೌ ಮೃತ್ಯುನಿಕೇತನಮ್
ದೇವೇಂದ್ರಭವನಾಕಾರಂ ರತ್ನವೈಡೂರ್ಯಮಂಡಿತಮ್ ||೭೬||

ಸ ದ್ವಾರಂ ಸಮತಿಕ್ರಮ್ಯ ಪ್ರಯಯೌ ಚಂದ್ರಶೇಖರಃ
ಉಲುಂಬಲಾ ತತೋ ಹೃಷ್ಟಾ ಪ್ರಣಿಪತ್ಯ ಮಹೇಶ್ವರಮ್ ||೭೭||

ಪೃಷ್ಠತೋ ಯಾತಿ ದೇವಸ್ಯ ವಿಲಸನ್ಮುಖಪಂಕಜಾಃ
ಚಿಕ್ಷಿಪುಃ ಪುಷ್ಪಜಾಲಾನಿ [1]ಭವನಾಂಕಣ[1]ಸಂಸ್ಥಿತಾಃ || ||೭೮||

ವರಾಂಗನಾಃ ಕರೈರ್ಹೃಷ್ಟಾಶ್ಚಂದ್ರ[2]ಭೂಷಣ[2]ಮೂರ್ಧನಿ
ನನೃತುಸ್ತತ್ರ ತತ್ರೈವ ಸಂಭ್ರಾಂತಾ ವರಯೋಷಿತಃ ||೭೯||

---

ತತಃ = ಅನಂತರದಲ್ಲಿ ಭಗವಾನ್ = ಭಗವಾನ್ನುವಹಂಥಾ ಪಿನಾಕೀ = ಪರಮೇಶ್ವರನು ರತ್ನವೈಡೂರ್ಯಮಂಡಿತಂ = ರತ್ನವೈಡೂರ್ಯಂಗಳಿಂದ ಅಲಂಕರಿಸಲ್ಪಟ್ಟಂಥಾ ದೇವೇಂದ್ರಭವನಾಕಾರಂ = ದೇವೇಂದ್ರನ ಅರಮನೆಯ ಆಕಾರವನುಳ್ಳಂಥಾ ಮೃತ್ಯುನಿಕೇತನಂ = ಮೃತ್ಯುವಿನ ಸ್ಥಾನವನು ಯಯೌ = ಎಯ್ದಿದನು. ||೭೬||

ಚಂದ್ರಶೇಖರಃ = ಚಂದ್ರಚೂಡಾಮಣಿಯುಹಂಥಾ ಸಃ = ಆ ಪರಮೇಶ್ವರನು ದ್ವಾರಂ = ಬಾಗಿಲನು ಸಮತ್ರಿಕಮ್ಯ = ಮೀರಿ ಪ್ರಯಯೌ = ಎಯ್ದಿದನು. ತತಃ = ಅಷ್ಟರಮೇಲೆ ಉಲುಂಬಲಾ = ಉಲುಂಬಲೆ ಹೃಷ್ಟಾ = ಸಂತೋಷಿಸಿ (ದಾಯಕನಾಗಿ) ದವಳಾಗಿ, ಮಹೇಶ್ವರಂ = ಶಿವನನು ಪ್ರಣಿಪತ್ಯ = ನಮಸ್ಕರಿಸಿ, ||೭೭||

ದೇವಸ್ಯ = ದೇವನ ಪೃಷ್ಠತಃ = ಹಿಂದುಗಡೆಯಿಂದ ಯಾತಿ = ಎಯ್ದುತ್ತಿದ್ದಳು. ವಿಲಸನ್ಮುಖಪಂಕಜಾಃ = ವಿಕಸಿತವಾದ ಮುಖಕಮಲವನುಳ್ಳ ಸ್ತ್ರೀಯರುಗಳು ಭವನಾಂಕಣಸಂಸ್ಥಿತಾಃ = ಮನೆಯ ಅಂಕಣದಲ್ಲಿ ಇದ್ದವರುಗಳಾಗಿ ಪುಷ್ಪಜಾಲಾನಿ = ಪುಷ್ಪ ಸಮೂಹಂಗಳನು ಚಿಕ್ಷಿಪುಃ = ಸೂಸಿದರು. ||೭೮||

ವರಾಂಗನಾಃ = ಮನೋಹರವಹ ಸ್ತ್ರೀಯರುಗಳು ಹೃಷ್ಟಾಃ = ಸಂತೋಷಿಸಿದವರುಗಳಾಗಿ ಚಂದ್ರಭೂಷಣಮೂರ್ಧನಿ = ಚಂದ್ರಭೂಷಣನ ಶಿರಸ್ಸಿನಲ್ಲಿ ಪುಷ್ಪಜಾಲಾನಿ = ಪುಷ್ಪಸಮೂಹಂಗಳನು ಕರೈಃ = ಹಸ್ತಂಗಳಿಂದ ಚಿಕ್ಷಿಪುಃ = ಸುರಿದರು.

---

1 ಭವನಾಂಗಣ (ಕ) 2 ಶೇಖರ (ಘ)

[1]ಜಗುಶ್ಚ[1] ದಿವ್ಯಗಾನೇನ ಯಮರಾಜಸ್ಯ ಶಾಸನಾತ್
ಯಮೋ ವಿವೇಶ ಭವನಂ ಸಾರ್ಧಂ ವೈ ವಿಶ್ವಕರ್ಮಣಾ ||೮೦||

ವಿಶ್ವಕರ್ಮಾ [2]ಚಕಾರಾಶು[2] ಭವನಾನಿ ಸಹಸ್ರಶಃ
ಹೈಮಾನಿ ರತ್ನಜುಷ್ಟಾನಿ ದೀರ್ಘಿಕಾ[3]ಸಂವೃತಾನಿ [3]ಚ ||೮೧||

ತತೋ ವಿವೇಶ ತದ್ಧಾಮ ಭಗವಾನಂತಕಾಂತಕಃ
ತತೋ ದೇವೀ ವಿಶಾಲಾಕ್ಷೀ ಪುರತಃ ಪುರಶಾಸಿತುಃ ||೮೨||

ಸಂಸ್ಥಿತಾ ಚಿಂತಯಾಮಾಸ ಕಿಂ ಕರೋಮೀತಿ ಸಾದರಮ್
ಕಿಂ ದದಾಮಿ ಮಹೇಶಸ್ಯ ಕೃತಕೃತ್ಯಸ್ಯ ಶೂಲಿನಃ ||೮೩||

---

ವರಯೋಷಿತಃ = ಸೌಂದರ್ಯವನುಳ್ಳಂಥಾ ಸ್ತ್ರೀಯರುಗಳು ಸಂಭ್ರಾಂತಾಃ = ತಿರುಗುತ್ತಿದ್ದವರುಗಳಾಗಿ (ತಿರುಗುತ್ತಂವಿದ್ದವರುಗಳಾಗಿ) ತತ್ರ ತತ್ರೈವ = ಅಲ್ಲಿ ಅಲ್ಲಿಯೇ ನನೃತುಃ = ನೃತ್ಯವನಾಡಿದರು. ||೭೯||

ಯಮರಾಜಸ್ಯ = ಯಮರಾಜನ ಶಾಸನಾತ್ = ಆಜ್ಞೆಯ ದೆಸೆಯಿಂದ ದಿವ್ಯಗಾನೇನ ಚ = ದೇವಗಾನದಿಂದವು ಜಗುಃ = ಹಾಡಿದರು. ಯಮಃ = ಯಮನು ವಿಶ್ವಕರ್ಮಣಾ ಸಾರ್ಧಂ ವೈ = ವಿಶ್ವಕರ್ಮನಿಂದ ಸಹಿತವಾಗಿ ಭವನಂ = ಮೃತ್ಯುವಿನ ಗೃಹವನು ವಿವೇಶ = ಪ್ರವೇಶಿಸಿದನು. ||೮೦||

ವಿಶ್ವಕರ್ಮಾ = ವಿಶ್ವಕರ್ಮನು ದೀರ್ಘಿಕಾಸಂವೃತಾನಿ = ಕೊಳಂಗಳಿಂದ ಮುಸುಕಲುಪಟ್ಟಂಥಾ ರತ್ನಜುಷ್ಟಾನಿ = ರತ್ನಂಗಳಿಂದ ಕೇವಣಿಸಲುಪಟ್ಟಂಥಾ ಹೈಮಾನಿ = ಸುವರ್ಣಮಯವಹಂಥಾ ಸಹಸ್ರಶಃ = ಸಹಸ್ರಸಂಖ್ಯೆಯನುಳ್ಳಂಥಾ ಭವನಾನಿ ಚ = ಗೃಹಂಗಳನು ಆಶು = ಬೇಗ ಚಕಾರ = ಮಾಡಿದನು. ||೮೧||

ತತಃ = ಅನಂತರದಲ್ಲಿ ಭಗವಾನ್ = ಭಗವಾನ್ನುವಹಂಥಾ ಅಂತಕಾಂತಕಃ = ಅಂತಕನಿಗೆ ಅಂತಕನಹಂಥಾ ಶಿವನು ತದ್ಧಾಮ = ಆ ಮೃತ್ಯುವಿನ ಅರಮನೆಯನು ವಿವೇಶ = ಪ್ರವೇಶಿಸಿದನು. ತತಃ = ಅಷ್ಟರ ಮೇಲೆ ವಿಶಾಲಾಕ್ಷೀ = ವಿಶಾಲಾಕ್ಷಿಯಹಂಥಾ ದೇವೀ = ಮೃತ್ಯುದೇವತೆ ಪುರಶಾಸಿತುಃ = ತ್ರಿಪುರಸಂಹಾರಿಯಹಂಥಾ ಶಿವನ ಪುರತಃ = ಮುಂದೆ, ||೮೨||

ಸಂಸ್ಥಿತಾ = ಇದ್ದಾ[4]ತಳಾಗಿ[4] ಕೃತಕೃತ್ಯಸ್ಯ = ಕೃತಕೃತ್ಯನಹಂಥಾ ಶೂಲಿನಃ

---

[1] ಜಗುಶ್ಶ್ಚ (ಘ) [2] ಚಕಾರಾಸೌ (ಘ) [3] ಸಂಯುತಾನಿ (ಘ) ಸಂಭೃತಾನಿ (ಗ)
[4] ತನಾಗಿ (ಖ)

ಅಸ್ಯ ಸರ್ವಾತ್ಮಭೂತಸ್ಯ ಜಗತ್ಕರ್ತುಃ ಪಿನಾಕಿನಃ
ಸಂಚಿಂತ್ಯ [1]ಸಾ ತು ಸಂಭ್ರಾಂತಾ[1] ಪ್ರಣಿಪತ್ಯ ಪುನಃ ಪುನಃ ॥೮೪॥

ನನರ್ತ ವಾಮಂ ಸಾ ಸಾಧ್ವೀ ಪ್ರಸಾರ್ಯ ಕರಪಂಕಜಮ್
[2]ನೃತ್ತ[2]ಪ್ರಿಯಸ್ತತೋ ದೇವೋ [3]ನೃತ್ತಂ[3] ದೃಷ್ಟ್ವಾ ಸುಶೋಭನಮ್

[4]ಪರಿಷ್ವಜ್ಯ ಚ[4] ತಾಂ ಕನ್ಯಾಂ ಸಾಧುಸಾಧ್ವಿ[5]ತ್ಯಥಾಬ್ರವೀತ್[5]
ಪುನಃ ಪ್ರಣಮ್ಯ ದೇವೇಶಂ ಕನ್ಯಾ ಕಮಲಲೋಚನಾ ॥೮೬॥

---

= ತ್ರಿಶೂಲವ ಧರಿಸಿದಂಥಾ ಮಹೇಶಸ್ಯ = ಶಿವಂಗೆ ಕಿಂ ದದಾಮಿ ? = ಏನ ಕೊಡುವೆನು ? ಕಿಂ ಕರೋಮಿ ? = ಏನ ಮಾಡುವೆನು ? ಇತಿ = ಹೀಂಗೆಂದು ಸಾದರಂ = ಆದರಣೆಯಿಂದ ಸಹಿತವಾಗಿ ಚಿಂತಯಾಮಾಸ = ಚಿಂತಿಸಿದಳು. ॥೮೩॥

ಸರ್ವಾತ್ಮಭೂತಸ್ಯ = ವಿಶ್ವಾತ್ಮಕನಾದಂಥಾ ಜಗತ್ಕರ್ತುಃ = ಲೋಕಕ್ಕೆ ಕರ್ತನಹಂಥಾ ಅಸ್ಯ ಪಿನಾಕಿನಃ = ಈ ಈಶ್ವರಂಗೆ ಸಾ ತು = ಆ ಉಲುಂಬಲೆ ಪುನಃಪುನಃ = ಮರಳಿ ಮರಳಿ ಪ್ರಣಿಪತ್ಯ = ನಮಸ್ಕರಿಸಿ ಸಂಚಿಂತ್ಯ = ಏನ ಮಾಡುವೆನೆಂದು ಚಿಂತಿಸಿ ಸಂಭ್ರಾಂತಾ = ಭ್ರಮೆಗೊಂಡಳು. ॥೮೪॥

ಸಾಧ್ವೀ = ಪತಿವ್ರತೆಯಹಂಥಾ ಸಾ = ಆ ನೃತ್ಯದೇವತೆ ವಾಮಂ = ಮನೋಹರವಹಂಥಾ ಕರಪಂಕಜಂ = ಕರಕಮಲವನು ಪ್ರಸಾರ್ಯ = ಪಸರಿಸಿ ನನರ್ತ = ನೃತ್ಯವನಾಡಿದಳು. ತತಃ = ಆಸ್ಥರವೇಲೆ ನೃತ್ತಪ್ರಿಯಃ = ನೃತ್ಯ ಪ್ರಿಯನಹಂಥಾ ದೇವಃ = ಶಿವನು ಸುಶೋಭನಂ = ಒಪ್ಪುತ್ತಂವಿದ್ದಂಥಾ ನೃತ್ತಂ = ನೃತ್ಯವನು ದೃಷ್ಟ್ವಾ = ಕಂಡು, ॥೮೫॥

ತಾಂ ಕನ್ಯಾಂ ಚ = ಆ ಕನ್ನಿಕೆಯನು ಪರಿಷ್ವಜ್ಯ = ತಕ್ಕೈಸಿ ಸಾಧುಸಾಧ್ವಿತಿ = ಲೇಸು ಲೇಸೆಂದು ಈ ಪ್ರಕಾರದಲ್ಲಿ ಅಬ್ರವೀತ್ = ನುಡಿದನು. ಅಥ = ಅನಂತರದಲ್ಲಿ ಕಮಲಲೋಚನಾ ಕನ್ಯಾ = ತಾವರೆಯೋಪಾದಿಯ ನಯನಂಗಳನುಳ್ಳಂಥಾ ನೃತ್ಯದೇವತೆ ದೇವೇಶಂ = ದೇವತೆಗಳಿಗೊಡೆಯನಹಂಥಾ ಶಿವನನು ಪುನಃ = ಮರಳಿ ಪ್ರಣಮ್ಯ = ನಮಸ್ಕರಿಸಿ, ॥೮೬॥

---

[1] ಸಾಧುಸಂಭ್ರಾಂತಾ (ಘ) [2] ನೃತ್ಯ (ಘ) [3] ನೃತ್ಯಂ (ಘ)
[4] ಪರಿಷ್ವಜ್ಯಾಥ (ಘ) [5] ತಿ ಚಾಬ್ರವೀತ್ (ಘ)

ಶಿರಸ್ಯಂಜಲಿಮಾಧಾಯ ಭಗವಂತಮುವಾಚ ಸಾ
ಕಿಮಿದಂ ದೇವ ದೇವೇಶ ತ್ರಿಯಕ್ಷ ವೃಷಭಧ್ವಜ ||೮೭||

ಅಕಾರಣಂ ಮಹಾದೇವ ಚೇಷ್ಟಿತಂ ಮನ್ಮಥಾರ್ದನ
ಕಿಮರ್ಥಂ ಭಗವನ್ನೀಶ ಭಿಕ್ಷಾಂ ಚರಸಿ ಶಂಕರ! ||೮೮||

ಸಂಶಯೋ ಮೇ ಜಗನ್ನಾಥ ಮಹಾನತ್ರ ಮಹೇಶ್ವರ
ಏವಮುಕ್ತಸ್ತಯಾ ಶರ್ವ ಇದಂ ವಚನಮಬ್ರವೀತ್ ||೮೯||

ಬ್ರಹ್ಮಣಸ್ತು ಶಿರಶ್ಛಿನ್ನಂ ಮಯಾಂಗುಷ್ಠನಖಾಗ್ರತಃ
ಚರಾಮ್ಯೇತದ್ವ್ರತಂ ಪುತ್ರಿ ಲೋಕಾನಾಂ ಹಿತಕಾಮ್ಯಯಾ ||೯೦||

---

ಶಿರಸಿ = ಮಸ್ತಕದಲ್ಲಿ ಅಂಜಲಿಂ = ಕೈಮುಗಿಹವನು ಆಧಾಯ = ಮಾಡಿಕೊಂಡು ಸಾ = ಆ ಉಲುಂಬಲೆ ಭಗವಂತಂ = ಪರಮೇಶ್ವರನನು ಉವಾಚ = ಬಿನ್ನಹಂ ಮಾಡಿದಳು. ತ್ರಿಯಕ್ಷ = ತ್ರಿಲೋಚನನಹಂಥಾ ವೃಷಭಧ್ವಜ = ವೃಷಭಧ್ವಜನನುಳ್ಳಂಥಾ ದೇವೇಶ = ದೇವರ್ಕಳಿಗೊಡೆಯನಹಂಥಾ ಭೋ ದೇವ! = ಎಲೆ ದೇವನೇ! ಇದಂ ಕಿಂ = ಇದೇನು ಮಾಡಲುಪಟ್ಟಿತ್ತು ? ||೮೭||

ಮನ್ಮಥಾರ್ದನ = ಕಾಮನ ಮರ್ದಿಸಿದಂಥಾ ಭಗವನ್ = ಷಡ್ಗುಣೈಶ್ವರ್ಯವನುಳ್ಳಂಥಾ ಈಶ = ಐಶ್ವರ್ಯವನುಳ್ಳಂಥಾ ಶಂಕರ = ಸುಖವನು ಮಾಡುತ್ತಿದ್ದಂಥಾ ಭೋ ಮಹಾದೇವ = ಎಲೈ ಶಿವನೇ, ಕಿಮರ್ಥಂ = ಏನುಕಾರಣ ಭಿಕ್ಷಾಂ = ಭಿಕ್ಷೆಯನು ಚರಸಿ = ಚರಿಸುತ್ತಿದ್ದೆ. ಚೇಷ್ಟಿತಂ = ವ್ಯಾಪಾರವು ಅಕಾರಣಂ = ಕಾರಣವಿಲ್ಲದಂಥಾದ್ದಾಯಿತ್ತು. ||೮೮||

ಜಗನ್ನಾಥ = ಲೋಕಕ್ಕೆ ಒಡೆಯನಹಂಥಾ ಮಹೇಶ್ವರ = ಎಲೈ ಶಿವನೇ ಅತ್ರ = ಇಲ್ಲಿ ಮೇ = ಎನಗೆ ಮಹಾನ್ = ದೊಡ್ಡಿತ್ತಹಂಥಾ ಸಂಶಯಃ = ಸಂದೇಹವಾಯಿತ್ತು. ಏವಂ = ಈ ಪ್ರಕಾರದಲ್ಲಿ ತಯಾ = ಆ ನೃತ್ಯುವಿನಿಂದ ಉಕ್ತಃ = ನುಡಿಯಲುಪಟ್ಟಂಥಾ ಶರ್ವಃ = ಪರಮೇಶ್ವರನು ಇದಂ ವಚನಂ = ಈ ವಾಕ್ಯವನು ಅಬ್ರವೀತ್ = ನುಡಿದನು. ||೮೯||

ಭೋಃ ಪುತ್ರಿ = ಎಲೆ ಮಗಳೇ! ಬ್ರಹ್ಮಣಃ = ಬ್ರಹ್ಮನ ಶಿರಸ್ತು = ಶಿರವು ಮಯಾ = ಎನ್ನಿಂದ ಅಂಗುಷ್ಠನಖಾಗ್ರತಃ = ಹೆಬ್ಬೆರಳ ಉಗುರ ತುದಿಯ ದೆಸೆಯಿಂದ ಛಿನ್ನಂ = ಚಿವುಟಲುಪಟ್ಟಿತ್ತು. ಲೋಕಾನಾಂ = ಲೋಕಂಗಳಿಗೆ ಹಿತಕಾಮ್ಯಯಾ = ಹಿತವ ಬಯಸುವುದರಿಂದ ಏತದ್ವ್ರತಂ = ಈ ಭಿಕ್ಷಾಟನವ್ರತವನು ಚರಾಮಿ = ಚರಿಸುತ್ತಿದ್ದೇನು. ||೯೦||

ಏವಮುಕ್ತ್ವಾ ಮಹೇಶೇನ ಕನ್ಯಾ ಕಮಲಲೋಚನಾ
ಸ್ಮಯಮಾನಾಽಬ್ರವೀದ್ದೇವಂ ಪುನರೇವ ಮಹೇಶ್ವರಮ್ ॥೯೧॥

ಯಥೇಚ್ಛಸಿ ತಥಾ ಕ್ರೀಡನ್ ಜಗನ್ನಾಥ ಮಹೇಶ್ವರ
ಮಾಯಯಾ ಮಾಂ ಮಹಾದೇವ ಹ್ಯಾಚ್ಛಾದಯಿತುಮರ್ಹಸಿ ॥೯೨॥

ನಿಯೋಗಾತ್ತವ ದೇವೇಶ [1]ಬ್ರಹ್ಮಣಶ್ಚ[1] ದಿನೇ ದಿನೇ
ಹರಾಮ್ಯಹಮನೇಕಾಂಶ್ಚ ಮಮ ಪಾಪಂ ನ ವಿದ್ಯತೇ ॥೯೩॥

ತಥೈವ ತವ ಪಾಪಂ ವೈ ನಾಸ್ತ್ಯೇವ ಪರಮೇಶ್ವರ
ದೇವದೇವ ಮಹಾದೇವ ಮಾಯಾವಿತ್ವಮಹೋ ತವ ॥೯೪॥

---

ಏವಂ = ಈ ಪ್ರಕಾರದಲ್ಲಿ ಮಹೇಶೇನ = ಶಿವನಿಂದ ಉಕ್ತ್ವಾ = ನುಡಿಯಲು ಪಟ್ಟಂಥಾ ಕಮಲಲೋಚನಾ = ಕಮಲಲೋಚನೆಯಹಂಥಾ ಕನ್ಯಾ = ಮೃತ್ಯುದೇವತೆ ಸ್ಮಯಮಾನಾ = ನಗುತ್ತಿದ್ದಾ(ಯಕನಾಗಿ)ತಳಾಗಿ ಮಹೇಶ್ವರಂ = ಮಹದೈಶ್ವರ್ಯವನುಳ್ಳಂಥಾ ದೇವಂ = ಪರಮೇಶ್ವರನನು ಕುರಿತು ಪುನರೇವ = ಮರಳಿ ಅಬ್ರವೀತ್ = ನುಡಿದಳು. ॥೯೧॥

ಮಹೇಶ್ವರ = ಮಹದೈಶ್ವರ್ಯವನುಳ್ಳಂಥಾ ಜಗನ್ನಾಥ = ಲೋಕಂಗಳಿಗೆ ಒಡೆಯನಹಂಥಾ ಮಹಾದೇವ = ಎಲೆ ಪರಮೇಶ್ವರನೇ ಯಥಾ = ಹೇಂಗೆ ಕ್ರೀಡನ್ = ಆಡುತ್ತವು ಇಚ್ಛಸಿ = ಇಚ್ಛೈಸುತ್ತಿದ್ದೆ ತಥಾ = ಹಾಂಗೆ ಮಾಯಯಾ = ಮಾಯೆಯಿಂದ ಮಾಂ = ಎನ್ನನು ಆಚ್ಛಾದಯಿತುಂ = ಮುಸುಕಲು ಅರ್ಹಸಿ ಹಿ = ಯೋಗ್ಯನಾಗುತ್ತಿಹೆ. ॥೯೨॥

ಭೋ ದೇವೇಶ = ಎಲೆ ದೇವರ್ಕಳಿಗೊಡೆಯನಹಂಥಾ ಶಿವನೇ! ತವ = ನಿನ್ನ ನಿಯೋಗಾತ್ = ಆಜ್ಞೆಯ ದೆಸೆಯಿಂದ ಬ್ರಹ್ಮಣಃ = ಬ್ರಹ್ಮನ ದಿನೇ ದಿನೇ ಚ = ದಿನ ದಿನದಲ್ಲಿಯೂ ಅನೇಕಾಂಶ್ಚ = ಲೆಕ್ಕವಿಲ್ಲದವರುಗಳನು ಅಹಂ = ನಾನು ಹರಾಮಿ = ಸಂಹರಿಸುತ್ತಿಹೆನು. ಮಮ = ಎನಗೆ ಪಾಪಂ = ಪಾಪವು ನ ವಿದ್ಯತೇ = ಇಲ್ಲವು. ॥೯೩॥

ಭೋ ಪರಮೇಶ್ವರ = ಎಲೆ ಪರಮೇಶ್ವರನೇ ತಥೈವ = ಹಾಂಗೆ ತವ = ನಿನಗೆ ಪಾಪಂ ವೈ = ಪಾಪವು ನಾಸ್ತ್ಯೇವ = ಇಲ್ಲವು. ದೇವದೇವ = ದೇವರ್ಕಳಿಗೆ

---

[1] ಬ್ರಾಹ್ಮಣಾಂಶ್ಚ (ಘ)

ತ್ಯಜ ಮಾಯಾಮಿಮಾಂ ದೇವ[1] ದುಸ್ತ್ಯಕ್ತಾ[1]ಮಕೃತಾತ್ಮಭಿಃ
ಜಂತವೋ ಜಗತಿ ಹ್ಯಸ್ಮಿನ್ಮಾಯಯಾ ತವ ಮೋಹಿತಾಃ ||೧೫||

ಯಥಾವದೇತಜ್ಜಾನಾಮಿ ಚೇಷ್ಟಿತಂ ಗಿರಿಜಾಪತೇ
ಸಂಹಾರಕಾಲೇ ಸಂಪ್ರಾಪ್ತೇ ಸರ್ವಾನ್ಮುನಿಗಣಾನಪಿ ||೧೬||

ಬ್ರಾಹ್ಮಣಾನ್ ಸಕಲಾನನ್ಯಾನ್ ಹನಿಷ್ಯಸಿ ಜಗನ್ಮಯ
ಬ್ರಹ್ಮಹತ್ಯಾಕೃತಂ ಕಿಂಚಿತ್ ಕ್ವಚಿನ್ನಾಸ್ತಿ ತವಾನಘ ||೧೭||

ತ್ವಯಾ ದಗ್ಧಾ ಜಗದ್ವ್ಯಾಪಿನ್ನಸಂಖ್ಯಾತಾಃ ಪಿತಾಮಹಾಃ
ತತ್ರ ತತ್ರ ಜಗನ್ನಾಥ ಕಿಂಚಿತ್ತೇ ನಾಸ್ತಿ ಪಾತಕಮ್ ||೧೮||

---

ದೇವನಹಂಥಾ ಭೋ ಮಹಾದೇವ=ಎಲೆ ಶಿವನೇ ! ತವ=ನಿನ್ನ ಮಾಯಾವಿತ್ವಂ =ಕಪಟವಹತನವು ಅಹೋ=ಆಶ್ಚರ್ಯವು. ||೧೪||

ಭೋ ದೇವ=ಎಲೆ ದೇವನೆ ಅಕೃತಾತ್ಮಭಿಃ=ಪಾಪಿಗಳಿಂದ ದುಸ್ತ್ಯಕ್ತಾಂ =ಬಿಡಲು ಬಾರದೇ ಇದ್ದಂಥಾ ಇಮಾಂ= ಈ ಮಾಯಾಂ = ಮಾಯೆಯನು ತ್ಯಜ=ಬಿಡು. ಅಸ್ಮಿನ್=ಈ ಜಗತಿ=ಲೋಕದಲ್ಲಿ ಜಂತವಃ=ಪ್ರಾಣಿಗಳು ತವ=ನಿನ್ನ ಮಾಯಯಾ=ಮಾಯೆಯಿಂದ ಮೋಹಿತಾ ಹಿ = ಮೋಹಿಸಲು ಪಟ್ಟವರುಗಳಲಾ. ||೧೫||

ಭೋ ಗಿರಿಜಾಪತೇ= ಎಲೇ ಪಾರ್ವತೀವಲ್ಲಭನೇ ! ಏತಚ್ಚೇಷ್ಟಿತಂ = ಈ ವ್ಯಾಪಾರವನು ಯಥಾವತ್=ತಾತ್ಪರ್ಯವಾಗಿ ಜಾನಾಮಿ=ಬಲ್ಲೆನು. ಸಂಹಾರ ಕಾಲೇ=ಸಂಹಾರಕಾಲವು ಸಂಪ್ರಾಪ್ತೇ ಸತಿ = ಎಯ್ದುತ್ತಿರಲು ಸರ್ವಾನ್ = ಸಮಸ್ತರುಗಳನು ಮುನಿಗಣಾನಪಿ = ಋಷಿಗಣಂಗಳನು ಬ್ರಾಹ್ಮಣಾನ್ = ಬ್ರಾಹ್ಮಣರುಗಳನು ಸಕಲಾನ್=ಸಮಸ್ತರಹಂಥಾ ಅನ್ಯಾನ್=ಮತ್ತೆ ಕೆಲಬರು ಗಳನು ಹನಿಷ್ಯಸಿ = ಕೊಲ್ಲುತ್ತಿಹೆ. ಜಗನ್ಮಯ = ಜಗದ್ರೂಪನಹಂಥಾ ಭೋ ಅನಘ= ಎಲೆ ನಿರ್ದೋಷಿಯಹಂಥಾತನೆ ಬ್ರಹ್ಮಹತ್ಯಾಕೃತಂ = ಬ್ರಹ್ಮಹತ್ಯದಿಂದ ಮಾಡಲುಪಟ್ಟಂಥಾ ಕಿಂಚಿತ್=ಒಂದಿಷ್ಟು ಪಾಪಂ=ಪಾಪವು ತವ = ನಿನಗೆ ಕ್ವಚಿತ್=ಎಲ್ಲಿಯೂ ನಾಸ್ತಿ=ಇಲ್ಲ. ||೧೬-೧೭||

ಜಗದ್ವ್ಯಾಪಿನ್=ಲೋಕವನು ವ್ಯಾಪಿಸಿಕೊಂಡಿದ್ದಂಥಾ ಭೋ ಜಗನ್ನಾಥ =ಎಲೆ ಲೋಕಕ್ಕೆ ಒಡೆಯನಹಂಥಾ ದೇವನೇ ! ತ್ವಯಾ=ನಿನ್ನಿಂದ ಅಸಂಖ್ಯಾತಾಃ

---

1 ದುಸ್ತ್ಯಾಜ್ಯಾ (ಘ)

ಕೃತ್ವಾ²ಽಪಿ² ಸುಮಹತ್ಪಾಪಂ ತ್ವಾಂ ಯಃ ಸ್ಮರತಿ ನಿತ್ಯಶಃ
ಆಧಾರಂ ಜಗತಾಮೀಶಂ ತಸ್ಯ ಪಾಪಂ ನ ವಿದ್ಯತೇ ||೯೯||

ನಾದಿತ್ಯಸನ್ನಿಧೌ ಯದ್ವತ್ತಮಸ್ತಿಷ್ಠತಿ ಕಿಂಚನ
ತದ್ವತ್ತ್ವದ್ಭಾವಯುಕ್ತಸ್ಯ ಪಾಪರಾಶಿರ್ನ ವಿದ್ಯತೇ ||೧೦೦||

ಯಶ್ಚಿಂತಯತ್ಯಪುಣ್ಯಾತ್ಮಾ ತವ ಪಾದಾಬ್ಜಮವ್ಯಯಮ್
ಬ್ರಹ್ಮಹತ್ಯಾಕೃತಂ ಚಾಪಿ ಪಾಪಂ ಜಹ್ಯಾನ್ನ ಸಂಶಯಃ ||೧೦೧||

ತವ ಪಾದಾಬ್ಜಸಂಯುಕ್ತಂ ಮನೋ ಯಸ್ಯ ಜಗತ್ಪತೇ
ಹಿಮವತ್ಪ್ರತಿಮಂ ಚಾಪಿ ಪಾಪಂ ತಸ್ಯ ವಿನಶ್ಯತಿ ||೧೦೨||

---

=ಲೆಕ್ಕವಿಲ್ಲದೇ ಇದ್ದಂಥಾ ಪಿತಾಮಹಾಃ = ಸಮಸ್ತ ಬ್ರಹ್ಮರುಗಳು ದಗ್ಧಾಃ= ದಗ್ಧವಾಗಲುಪಟ್ಟರು. ತತ್ರ ತತ್ರ=ಅಲ್ಲಿ ಅಲ್ಲಿ ತೇ=ನಿನಗೆ ಕಿಂಚಿತ್ಪಾತಕಂ= ಒಂದಿಷ್ಟು ಪಾಪವು ನಾಸ್ತಿ=ಇಲ್ಲ. ||೯೮||

ಯಃ=ಆವನಾನೊಬ್ಬನು ಸುಮಹತ್=ಅತಿ ಬಹಳವಹಂಥಾ ಪಾಪಂ= ಪಾಪವನು ಕೃತ್ವಾಽಪಿ = ಮಾಡಿಯೂ (ಮಾಡಿವೂ) ನಿತ್ಯಶಃ = ಆವಾಗವು ಜಗತಾಂ=ಲೋಕಂಗಳಿಗೆ ಆಧಾರಂ=ಆಧಾರವಹಂಥಾ ಈಶಂ—ಒಡೆಯನಹಂಥಾ ತ್ವಾಂ=ನಿನ್ನನು ಸ್ಮರತಿ=ಸ್ಮರಿಸುತಿಹನು ತಸ್ಯ=ಆತಂಗೆ ಪಾಪಂ=ಪಾಪವು ನ ವಿದ್ಯತೇ—ಇಲ್ಲ. ||೯೯||

ಆದಿತ್ಯಸನ್ನಿಧೌ=ಸೂರ್ಯನ ಸಮೀಪದಲ್ಲಿ ತಮಃ=ಕತ್ತಲೆ ಕಿಂಚನ= ಒಂದಿಷ್ಟು ಯದ್ವತ್=ಹೇಂಗೆ ನ ತಿಷ್ಠತಿ=ಇರುತ್ತಿರದು ತದ್ವತ್ = ಹಾಂಗೆ ತ್ವದ್ಭಾವಯುಕ್ತಸ್ಯ=ನಿನ್ನ ಧ್ಯಾನದಲ್ಲಿ ಕೂಡಿದಾತಂಗೆ ಪಾಪರಾಶಿಃ=ಪಾಪದ ರಾಶಿ ನ ವಿದ್ಯತೇ=ಇಲ್ಲ. ||೧೦೦||

ಯಃ=ಆವನಾನೊಬ್ಬನು ಅಪುಣ್ಯಾತ್ಮಾ= ಪಾಪವ ಮಾಡಿದಾತನು ತವ =ನಿನ್ನ ಅವ್ಯಯಂ=ನಿತ್ಯವಹಂಥಾ ಪಾದಾಬ್ಜಂ=ಪಾದಕಮಲವನು ಚಿಂತಯತಿ =ನೆನವುತ್ತಿಹನು ಬ್ರಹ್ಮಹತ್ಯಾಕೃತಂ = ಬ್ರಹ್ಮಹತ್ಯದಿಂದ ಮಾಡಲುಪಟ್ಟಂಥಾ ಪಾಪಂ ಚಾಪಿ=ಪಾಪವನು ಜಹ್ಯಾತ್=ಬಿಡುವನು. ಓಹಾಕ್=ತ್ಯಾಗೇ ಇತಿ ಧಾತುಃ ನ ಸಂಶಯಃ=ಸಂದೇಹವಿಲ್ಲ. ||೧೦೧||

ಭೋ ಜಗತ್ಪತೇ = ಎಲೆ ಜಗತ್ಪತಿಯಹಂಥಾ ದೇವನೇ ಯಸ್ಯ = ಆವನಾ

---

² ಚ (ಖ)

ತಥಾಽಪಿ ತವ ಪಾಪೋಽಸ್ತಿ ಸಾಂಪ್ರತಂ [1]ಕಚ್ಚಿದವ್ಯಯ ![1]
ಪರಮಾತ್ಮಾ ಪರಂಧಾಮ [2]ಅಕ್ಷರಂ[2] ಪರಮಂ ಭವಾನ್ ||೧೦೩||

ಧೃತಂ ತ್ವಯೇಚ್ಛಯಾ ದೇವ ರೂಪಮೇತತ್ಸುಶೋಭನಮ್
ಅಹೋ ಧನ್ಯಾಽಸ್ಮಿ ದೇವೇಶ ಯನ್ನ ಪಶ್ಯಂತಿ ಯೋಗಿನಃ ||೧೦೪||

ಪಶ್ಯಾಮಿ ತಂ ಜಗನ್ಮೂಲಂ ಪ್ರತ್ಯಕ್ಷಂ ಪರಮೇಶ್ವರಮ್
ಅನೇಕಯುಗಸಾಹಸ್ರಂ ಧ್ಯಾತ್ವಾ ಶುದ್ಧೇನ ಚೇತಸಾ ||೧೦೫||

---

ನೊಬ್ಬನ ಮನಃ = ಮನಸ್ಸು ತವ = ನಿನ್ನ ಪಾದಾಬ್ಜಸಂಯುಕ್ತಂ = ಪಾದಕಮಲ ದೊಡನೆ ಕೂಡಲುಪಟ್ಟುದಹುದು, ಹಿಮವತ್ಪ್ರತಿಮಂ = ಹಿಮವತ್ಪರ್ವತಕ್ಕೆ ಸಮಾನ ವಹೆಂಥಾ ತಸ್ಯ ಪಾಪಂ ಚಾಪಿ = ಆತನ ಪಾಪವು ವಿನಶ್ಯತಿ = ಕೆಡುತ್ತಿಹುದು. ನಶ ಅದರ್ಶನೇ ಇತಿ ಧಾತುಃ ||೧೦೨||

ತಥಾಽಪಿ = ಹಾಂಗಾಯಿತ್ತಾದರೂ ತವ = ನಿನಗೆ ಸಾಂಪ್ರತಂ = ಈಗ ಪಾಪಃ = ಪಾಪವು ಅಸ್ತಿ ಕಚ್ಚಿತ್ = ಉಂಟೇ ? ಭೋ ಅವ್ಯಯ = ಎಲೇ ಕೇಡಿಲ್ಲ ದಾತನೇ ! ಭವಾನ್ = ನೀನು ಪರಮಾತ್ಮಾ = ಪರಮಾತ್ಮನು. ಪರಂಧಾಮ = ಉತ್ಕೃಷ್ಟವಹ ತೇಜಸ್ಸು. ಅಕ್ಷರಂ = ಕೇಡಿಲ್ಲದೇ ಇದ್ದಂಥಾ ಪರಮಂ = ಪರಮ ತತ್ತ್ವವು. ||೧೦೩||

ಭೋ ದೇವ = ಎಲೇ ದೇವನೇ ! ಇಚ್ಛಯಾ — ಇಚ್ಛೆಯಿಂದ ಸುಶೋಭನಂ = ಅತ್ಯಂತ ಒಪ್ಪುತ್ತಿದ್ದಂಥಾ ಏತದ್ರೂಪಂ = ಈ ರೂಪು ತ್ವಯಾ = ನಿನ್ನಿಂದ ಧೃತಂ = ಧರಿಸಲುಪಟ್ಟಿತ್ತು. ಯತ್ = ಆವುದಾನೊಂದು ನಿನ್ನ ರೂಪನು ಯೋಗಿನಃ = ಯೋಗಿಗಳು ನ ಪಶ್ಯಂತಿ = ಕಾಣರು, ದೇವೇಶ = ದೇವತೆಗಳಿಗೊಡೆಯನಹೆಂಥಾ ಶಿವನೇ ! ಧನ್ಯಾಽಸ್ಮಿ = ಧನ್ಯಳಾದೆನು. ಅಹೋ = ಆಶ್ಚರ್ಯ. ||೧೦೪||

ಅನೇಕಯುಗಸಾಹಸ್ರಂ = ಅನೇಕಯುಗಸಹಸ್ರವು ಶುದ್ಧೇನ = ಶುದ್ಧವಹಂಥಾ ಚೇತಸಾ = ಚಿತ್ತದಿಂದ ಧ್ಯಾತ್ವಾ = ಧ್ಯಾನಿಸಿ ಜಗನ್ಮೂಲಂ = ಲೋಕಕ್ಕೆ ಮೊದಲ ಹಂಥಾ ಪ್ರತ್ಯಕ್ಷಂ = ಪ್ರತ್ಯಕ್ಷವಹಂಥಾ ತಂ ಪರಮೇಶ್ವರಂ = ಆ ಪರಮೇಶ್ವರನನು ಪಶ್ಯಾಮಿ = ಕಂಡೆನು. ||೧೦೫||

---

[1] ಕಚ್ಚಿದವ್ಯಯ (ಗ) ಕಿಂ ಮಹೇಶ್ವರ (ಘ)

[2] ಹ್ಯಕ್ಷರಂ (ಘ)

ಅಸ್ಪಷ್ಟಂ ಯಂ ಪ್ರಪಶ್ಯಂತಿ ತಂ ವೈ ಪಶ್ಯಾಮಿ ಶಂಕರಮ್
ಧನ್ಯಾಽಸ್ಮ್ಯನುಗೃಹೀತಾಽಸ್ಮಿ ಕೃತಾರ್ಥಾಽಸ್ಮೀತ್ಯನೇಕಶಃ ||೧೦೬||

ಉಲುಂಬಲಾ ಸಾ ಸಂಭ್ರಾಂತಾ ಪ್ರಣಿಪತ್ಯ ಪುನಃ ಪುನಃ
[1]ಚಂದ್ರಬಿಂಬಮುಖಾ[1] ಹೃಷ್ಟಾ ನನರ್ತ ಚ ಪುನಃ ಪುನಃ ||೧೦೭||

ದೇವಾಶ್ಚ ಸರ್ವೇ ನನೃತುಃ ಮುನಯಶ್ಚ ತಥಾಽಸ್ತುವನ್
ಜಗುಶ್ಚ ಕಿನ್ನರಾಃ ಸಿದ್ಧಾಃ ನನೃತುಶ್ಚಾಪ್ಸರೋಗಣಾಃ ||೧೦೮||

[2]ಮಹೋತ್ಸವ[2]ಮಭೂತ್ತತ್ರ ಮೃತ್ಯುಸದ್ಮನಿ ಶೋಭನೇ
ಅತೀವ ಸುಖದಂ ಪುಣ್ಯಂ ಗಿರಿಜಾಪತಿಸನ್ನಿಧೌ ||೧೦೯||

---

ಅಸ್ಪಷ್ಟಂ = ಕಾಣಬಾರದೇ ಇದ್ದಂಥಾ ಯಂ = ಆವನಾನೊಬ್ಬ ದೇವನನು, (ಯೋಗಿನಃ = ಯೋಗಿಗಳು) ಪ್ರಪಶ್ಯಂತಿ = ಕಾಣುತ್ತಿಹರು, ತಂ ಶಂಕರಂ ವೈ = ಆ ಶಂಕರನನು ಪಶ್ಯಾಮಿ = ಕಂಡೆನು. ಧನ್ಯಾಽಸ್ಮಿ = ಧನ್ಯಳಾದೆನು. ಅನುಗೃಹೀತಾಽಸ್ಮಿ = ಪರಿಕರಿಸಲುಪಟ್ಟಾತಳಾದೆನು. ಅನೇಕಶಃ = ಹಲವು ಬಾರಿ ಇತಿ = ಈ ಪ್ರಕಾರದಲ್ಲಿ ಕೃತಾರ್ಥಾಽಸ್ಮಿ = ಕೃತಾರ್ಥೆಯಾದೆನು. ||೧೦೬||

ಚಂದ್ರಬಿಂಬಮುಖಾ = ಚಂದ್ರಮುಂಡಲದೋಪಾದಿ ಮುಖವನುಳ್ಳಂಥಾ ಸಾ ಉಲುಂಬಲಾ — ಆ ಉಲುಂಬಲೆ ಪುನಃ ಪುನಃ = ಅಡಿಗಡಿಗೆ ಪ್ರಣಿಪತ್ಯ = ನಮಸ್ಕರಿಸಿ ಸಂಭ್ರಾಂತಾ = ಭ್ರಾಮಕವಾದಳು. ಹೃಷ್ಟಾ = ಸಂತೋಷಿಸಲ್ಪಟ್ಟಾಯಕಳಾಗಿ ಪುನಃ ಪುನಶ್ಚ = ಮರಳಿ ಮರಳಿಯೂ ನನರ್ತ = ನೃತ್ಯವಾಡಿದಳು. ||೧೦೭||

ಸರ್ವೇ ದೇವಾಶ್ಚ = ಸಮಸ್ತ ದೇವರ್ಕಳು ನನೃತುಃ = ನೃತ್ಯವನಾಡಿದರು. ಮುನಯಶ್ಚ = ಋಷಿಗಳು ತಥಾ = ಹಾಂಗೆ ಅಸ್ತುವನ್ = ಸ್ತೋತ್ರವ ಮಾಡಿದರು ಕಿನ್ನರಾಃ = ಕಿನ್ನರರುಗಳು ಸಿದ್ಧಾಃ = ಸಿದ್ಧರುಗಳು ಜಗುಃ = ಹಾಡಿದರು. ಅಪ್ಸರೋಗಣಾಶ್ಚ = ಅಪ್ಸರ ಸ್ತ್ರೀ ಸಮೂಹಂಗಳು ನನೃತುಃ = ನೃತ್ಯವನಾಡಿದರು. ||೧೦೮||

ಶೋಭನೇ = ಒಪ್ಪುತ್ತಿದ್ದಂಥಾ ತತ್ರ ಮೃತ್ಯುಸದ್ಮನಿ = ಆ ಮೃತ್ಯುವಿನ ಗೃಹದಲ್ಲಿ ಗಿರಿಜಾಪತಿಸನ್ನಿಧೌ = ಪಾರ್ವತೀಪತಿಯ ಸಮೀಪದಲ್ಲಿ ಅತೀವಸುಖದಂ = ಅತ್ಯಂತ ಸುಖವನು ಕೊಡುತ್ತಿದ್ದಂಥಾ ಪುಣ್ಯವಹೆಂಥಾ ಮಹೋತ್ಸವಂ — ಅತ್ಯಂತ ಉತ್ಸಾಹವು ಅಭೂತ್ — ಆಯಿತ್ತು. ||೧೦೯||

---

1 ಚಂದ್ರಬಿಂಬಾಗನಾ (ಘ) 2 ಮಹೋತ್ಸಾಹ (ಘ)

ದೇವಾಶ್ಚ ಮುನಯಶ್ಚೈವ ಸಾಧು ಸಾಧ್ವಿತ್ಯಥಾಽಬ್ರುವನ್
ಅಹೋ ತದಂತರೇ ದೇವೋ ನಿರ್ಜಗಾಮ ಸ್ಮರಾಂತಕಃ ||೧೧೦||

ಸೇವ್ಯಮಾನಸ್ಸುರಗಣೈಃ ಮುನಿಭಿರ್ವೇದಪಾರಗೈಃ
ತತಃ ಪಿನಾಕೀ ಭಗವಾನ್ ವರುಣಸ್ಯ ಪುರಂ ಪ್ರತಿ ||೧೧೧||

ಜಗಾಮಾಪ್ಸರಸಾಂ ಸಂಘೈಃ ಕಿನ್ನರೈಸ್ಸಂವೃತಸ್ಸುರೈಃ
ತತಃ ಶ್ರುತ್ವಾ ಜಲೇಶೋಽಪಿ ಭಾರ್ಯಾಭಿಸ್ಸಂವೃತಶ್ಶುಚಿಃ ||೧೧೨||

ಸ್ವಗೃಹಾನ್ನಿರ್ಜಗಾಮಾಶು ಸಂಭೃತ್ಯ [1]ಸುಮನಾಂಸಿ[1] ಸಃ
ಬಭೂವ ಪ್ರೀತಿಸಂಪೂರ್ಣೋ ನಿಧಿಂ[2]ಲಬ್ಧ್ವೇವ[2] ನಿರ್ಧನಃ ||೧೧೩||

---

ಅಥ—ಅನಂತರದಲ್ಲಿ ದೇವಾಶ್ಚ—ದೇವತೆಗಳು ಮುನಯಶ್ಚೈವ—ಋಷಿಗಳು ಸಾಧು ಸಾಧು—ಲೇಸು ಲೇಸೆಂದು ಇತಿ—ಈ ಪ್ರಕಾರದಲ್ಲಿ ಅಬ್ರುವನ್—ನುಡಿದರು. ಅಹೋ—ಆಶ್ಚರ್ಯವು. ತದಂತರೇ — ಆದರ ತರುವಾಯಲ್ಲಿ ಸ್ಮರಾಂತಕಃ — ಕಾಮಾಂತಕನಹಂಥಾ ದೇವಃ—ಪರಮೇಶ್ವರನು ನಿರ್ಜಗಾಮ—ಹೊರವಂಟನು. ೧೧೦

ತತಃ—ಅನಂತರದಲ್ಲಿ ಸುರಗಣೈಃ—ದೇವರ್ಕಳ ಸಮೂಹಂಗಳಿಂದ ವೇದಪಾರಗೈಃ —ವೇದಂಗಳ ಕಡೆಯನೆಯ್ದಿದಂಥಾ ಮುನಿಭಿಃ—ಋಷಿಗಳಿಂದ ಸೇವ್ಯಮಾನಃ— ಓಲೈಸಿಕೊಳಲುಪಟ್ಟಂಥಾ ಭಗವಾನ್—ಷಡ್ಗುಣೈಶ್ವರ್ಯಸಂಪನ್ನನಹಂಥಾ ಪಿನಾಕೀ ಪರಮೇಶ್ವರನು ವರುಣಸ್ಯ — ವರುಣನ ಪುರಂ ಪ್ರತಿ — ಪಟ್ಟಣವನು ಕುರಿತು,

ಅಪ್ಸರಸಾಂ—ಅಪ್ಸರರುಗಳ ಸಂಘೈಃ — ಸಮೂಹಂಗಳಿಂದ ಕಿನ್ನರೈಃ — ಕಿನ್ನರರುಗಳಿಂದ ಸುರೈಃ—ದೇವರ್ಕಳಿಂದ ಸಂವೃತಃ—ಮುಸುಕಲುಪಟ್ಟಾತನಾಗಿ ಜಗಾಮ—ಎಯ್ದಿದನು. ತತಃ — ಅಷ್ಟರಮೇಲೆ ಭಾರ್ಯಾಭಿಃ — ಸ್ತ್ರೀಯರುಗಳಿಂದ ಸಂವೃತಃ—ಮುಸುಕಲು ಪಟ್ಟಂಥಾ ಶುಚಿಃ—ಶುಚಿಯಹಂಥಾ ಜಲೇಶೋಽಪಿ —ವರುಣನು ಶ್ರುತ್ವಾ—ಕೇಳಿ, ||೧೧೨||

ಸಃ—ಆ ವರುಣನು ಸುಮನಾಂಸಿ—ಪುಷ್ಪಂಗಳನು ಸಂಭೃತ್ಯ—ಒದಗಿಸಿಕೊಂಡು ಸ್ವಗೃಹಾತ್—ತನ್ನ ಅರಮನೆಯ ದೆಸೆಯಿಂದ ಆಶು—ಬೇಗ ನಿರ್ಜಗಾಮ —ಹೊರವಂಟನು. ಪ್ರೀತಿಸಂಪೂರ್ಣಃ—ಸಂತೋಷದಿಂದ ಪರಿಪೂರ್ಣವನುಳ್ಳಾತನು ಬಭೂವ—ಆದನು. ಕಥಮಿವ — ಅದು ಹೇಂಗೆಯಾ ಎಂದಡೆ ನಿರ್ಧನಃ— ನಿರ್ಧನಿಕನು ನಿಧಿಂ—ನಿಕ್ಷೇಪವನು ಲಬ್ಧ್ವೇವ—ಪಡದು ಎಹಗಹಗೆ. ||೧೧೩||

---

[1] ಕುಸುಮಾನಿ (ಘ) [2] ಲಬ್ಧ್ವಾಥ (ಘ)

ನಾರೀಭಿಸ್ಸಹ ಪುಣ್ಯಾತ್ಮಾ ದದರ್ಶ ಪರಮೇಶ್ವರಮ್ ||೧೧೪||

ತ್ವಮಾದಿಸ್ತ್ವಮನಾದಿಸ್ತ್ವಂ ತ್ವಂ ಪ್ರಭುಃ ಸರ್ವತೋಮುಖಃ
ಅಜೇಶ ವಿಷ್ಣ್ವೀಶ ವಿಭೋ ಸಹಸ್ರಾಂಶೋ ಜಗನ್ಮಯ ||೧೧೫||

ಆದ್ಯಂತಶೂನ್ಯ ಸರ್ವೇಶ ಸರ್ವಾಧಾರ ನಮೋಽಸ್ತು ತೇ ||೧೧೬||

ಯಸ್ತ್ವಾಂ ವೇದಯತೇ ನಿತ್ಯಂ ಧ್ರುವಮಕ್ಷರಮವ್ಯಯಮ್
ಪ್ರಭುಂ ಪುರಾಣಂ ಪುರುಷಂ ಹಿತ್ವಾ ಬುದ್ಧಿಂ ಸ ತಿಷ್ಠತಿ ||೧೧೭||

ತ್ವಾಂ ಜ್ಞಾತ್ವಾ ಪಂಚಭೂತಾಖ್ಯಂ ಮಹದ್ಭೂತಮಯೋನಿಜಮ್
ಅಕಾರಣಮಜಂ ಶುದ್ಧಂ ಸ ತಿಷ್ಠತಿ ನಿರೀಶ್ವರಃ ||೧೧೮||

---

ಪುಣ್ಯಾತ್ಮಾ—ಪುಣ್ಯಶರೀರಿಯಹಂಥಾ ವರುಣನು ನಾರೀಭಿಸ್ಸಹ—ಸ್ತ್ರೀಯರುಗಳಿಂದ ಸಹಿತನಾಗಿ ಪರಮೇಶ್ವರಂ—ಪರಮೇಶ್ವರನನು ದದರ್ಶ—ಕಂಡನು.

ಅಜೇಶ—ಬ್ರಹ್ಮಂಗೆ ಒಡೆಯನಹಂಥಾ ವಿಷ್ಣ್ವೀಶ — ವಿಷ್ಣುವಿಂಗೆ ಒಡೆಯನಹಂಥಾ ವಿಭೋ—ಪರಿಪೂರ್ಣನಹಂಥಾ ಸಹಸ್ರಾಂಶೋ! —ಅಸಂಖ್ಯಾತ ಕಿರಣಂಗಳನುಳ್ಳಂಥಾ ಜಗನ್ಮಯ—ಜಗದ್ರೂಪನಹಂಥಾ ಶಿವನೇ ! ತ್ವಂ — ನೀನು ಆದಿಃ —ಮೊದಲಹಂಥಾ ಆತನು. ತ್ವಂ — ನೀನು ಅನಾದಿಃ — ಮೊದಲಿಲ್ಲದಾತನು. ತ್ವಂ—ನೀನು ಪ್ರಭುಃ—ಒಡೆಯನು. ಸರ್ವತೋಮುಖಃ—ವಿಶ್ವತೋಮುಖನು ಸಹಸ್ರಶಬ್ದವು ಸಾವಿರದಲ್ಲಿಯೂ ಅಸಂಖ್ಯಾತದಲ್ಲಿಯೂ ವರ್ತಿಸೂದು. ||೧೧೫||

ಆದ್ಯಂತಶೂನ್ಯ — ಮೊದಲು ಕಡೆ ಇಲ್ಲದಂಥಾ ಸರ್ವೇಶ — ಸಮಸ್ತ ಲೋಕಕ್ಕೆ ಒಡೆಯನಹಂಥಾ ಸರ್ವಾಧಾರ — ಸಮಸ್ತಕ್ಕೆ ಆಧಾರವಹಂಥಾ ದೇವನೇ ತೇ—ನಿನಗೆ ನಮಃ—ನಮಸ್ಕಾರವು ಅಸ್ತು—ಆಗಲಿ. ||೧೧೬||

ಯಃ—ಆವನಾನೊಬ್ಬನು ನಿತ್ಯಂ—ನಿತ್ಯನಹಂಥಾ ಧ್ರುವಂ—ನಿಶ್ಚಯನಹಂಥಾ ಅಕ್ಷರಂ— ಕೇಡಿಲ್ಲದೇ ಇಪ್ಪಂಥಾ ಅವ್ಯಯಂ — ನಾಶವಿಲ್ಲದೇ ಇದ್ದಂಥಾ ಪ್ರಭುಂ—ಒಡೆಯನಹಂಥಾ ಪುರಾಣಂ ಪುರುಷಂ—ಪುರಾಣಪುರುಷನಹಂಥಾ ತ್ವಾಂ —ನಿನ್ನನ್ನು ವೇದಯತೇ—ಅರಿವುತ್ತಿಹನು, ಸಃ—ಆತನು ಬುದ್ಧಿಂ—ಬುದ್ಧಿಯ ಸಂಬಂಧವಹ ವಿಕಾರನನು ಹಿತ್ವಾ—ಬಿಟ್ಟು ತಿಷ್ಠತಿ—ಇರುತ್ತಿಹನು. ||೧೧೭||

ಪಂಚಭೂತಾಖ್ಯಂ — ಪಂಚಭೂತಂಗಳ ನಾಮಂಗಳಾಗಿ ಉಳ್ಳಂಥಾ ಮಹದ್ಭೂತಂ—ಉತ್ಕೃಷ್ಟಮೂರ್ತಿಯಹಂಥಾ ಅಯೋನಿಜಂ—ಯೋನಿಯಲ್ಲಿ ಹುಟ್ಟದೇ ಇದ್ದಂಥಾ ಅಜಂ—ಜನ್ಮವಿಲ್ಲದೇ ಇದ್ದಂಥಾ ಶುದ್ಧಂ — ಶುದ್ಧನಹಂಥಾ ತ್ವಾಂ

ನಮಸ್ತೇ ಭಗವನ್ ದೇವ ನಮಸ್ತೇ ಸರ್ವಭಾವನ
ಯೋಗೀಶ್ವರ ನಮಸ್ತುಭ್ಯಂ ನಮಸ್ತೇ ಪರತಃ ಪರ ||೧೧೯||

ಏವಂ ಸ್ತುತ್ವಾ ತು ವರುಣಶ್ಚಂದ್ರಲೇಖಾವತಂಸಕಮ್
ವಿಕೀರ್ಯ ಪುಷ್ಪಜಾಲಾನಿ ಪಾದಯೋರ್ವಿರರಾಮ ಸಃ ||೧೨೦||

*ತಸ್ಯ ಭಾರ್ಯಾ ಭವಂ ದೇವಮಭಿತುಷ್ಟಾವ ಸಾದರಾ
ಶಿರಸ್ಯಂಜಲಿಮಾಧಾಯ ಹೃಷ್ಟಾ ಶರ್ವಸ್ಯ ದರ್ಶನಾತ್ ||೧೨೧||

---

—ನಿನ್ನನು ಜ್ಞಾತ್ವಾ—ಅರಿದು, ಸಃ—ಆತನು ನಿರೀಶ್ವರಃ—ಒಡೆಯನಿಲ್ಲದಾತನಾಗಿ ತಿಷ್ಠತಿ—ಇರುತ್ತಿಹನು. ಶಿವನ ನಿಜವನರಿದಾತನು ಶಿವನೇ ಅಹನೆಂಬುದರ್ಥ.

ಭಗವನ್ — ಭಗವಾನ್ನುವಹಂಥಾ ದೇವ — ಎಲೆ ದೇವನೇ ! ತೇ — ನಿನಗೋಸ್ಕರ ನಮಃ—ನಮಸ್ಕಾರವು. ಸರ್ವಭಾವನ — ಸಮಸ್ತ ಭಾವನೆಯನುಳ್ಳಾತನೇ ! ತೇ—ನಿನಗೋಸ್ಕರ ನಮಃ—ನಮಸ್ಕಾರವು. ಯೋಗೀಶ್ವರ—ಯೋಗೀಶ್ವರನಹಂಥಾ ಪರಮೇಶ್ವರನೇ ! ತುಭ್ಯಂ — ನಿನಗೋಸ್ಕರ ನಮಃ—ನಮಸ್ಕಾರವು. ಪರತಃ—ಪ್ರಕೃತಿಯಿಂದ ಪರ—ಮೇಲಹಂಥಾ ಶಿವನೇ ! ತೇ —ನಿನಗೋಸ್ಕರ ನಮಃ—ನಮಸ್ಕಾರವು. ||೧೧೯||

ಸಃ ವರುಣಃ— ಆ ವರುಣನು ಏವಂ—ಈ ಪ್ರಕಾರದಲ್ಲಿ ಚಂದ್ರಲೇಖಾವತಂಸಕಂ— ಚಂದ್ರನ ರೇಖೆಯೇ ಭೂಷಣವಾಗಿ ಉಳ್ಳಂಥಾ ಶಿವನನು ಸ್ತುತ್ವಾ ತು —ಸ್ತೋತ್ರವ ಮಾಡಿ ಪುಷ್ಪಜಾಲಾನಿ—ಪುಷ್ಪಸಮೂಹಂಗಳನು ವಿಕೀರ್ಯ—ಕೆದರಿ ಪಾದಯೋಃ—ಪಾದಂಗಳಲ್ಲಿ ವಿರರಾಮ—ಬಿದ್ದನು. ವಿ ಎಂಬ ಉಪಸರ್ಗ. ರಮುಕ್ರೀಡಾಯಾಮ್ ಎಂಬ ಧಾತು. ಉಪಸರ್ಗದಿಂದ ಉಚಿತಾರ್ಥವ ನುಡಿವುದು.|| ೧೨೦||

ತಸ್ಯ — ಆ ವರುಣನ ಭಾರ್ಯಾ — ಸ್ತ್ರೀ ಶರ್ವಸ್ಯ — ಪರಮೇಶ್ವರನ ದರ್ಶನಾತ್—ದರ್ಶನದ ದೆಸೆಯಿಂದ ಹೃಷ್ಟಾ—[1]ಸಂತೋಷಿಸಿದಾ(ಯಕನಾಗಿ)ತಳಾಗಿ ಶಿರಸಿ—ಮಸ್ತಕದಲ್ಲಿ ಅಂಜಲಿಂ—ಕೈಮುಗಿಹೆಸನು ಆಧಾಯ— ಮಾಡಿಕೊಂಡು ಸಾದರಾ—ತಾತ್ಪರ್ಯದಿಂದ ಸಹಿತೆಯಾಗಿ ದೇವಂ— ದೇವನಹಂಥಾ ಭವಂ — ಶಿವನನು ಅಭಿತುಷ್ಟಾವ—ಸ್ತೋತ್ರವ ಮಾಡಿದಳು. ||೧೨೧||

---

* ಶಂಭೋಶ್ಚ ದರ್ಶನಾದೇವ ಹೃಷ್ಟಾ ಪರಮಹರ್ಷಿತಾ । ಶಿರಸ್ಯಂಜಲಿಮಾಧಾಯ ಸಾ ತುಷ್ಟಾವ ಭವಂ ತದಾ ॥ ಇತಿ (ಘ) ಮಾತೃಕೆಯಲ್ಲಿರುವ ಪಾಠ.

[1] ಸಂತೋಷಿಸಿದಾತಳಾಗಿ (ಕ) ಸಂತೋಷಿಸಿದಾಯಕನಾಗಿ (ಖ.ಚ)

26

ನಮೋ ಭವಾಯ ಭವ್ಯಾಯ ಸರ್ವಜ್ಞಾಯ ಮಹಾತ್ಮನೇ
ಹರಾಯ ಸೂಕ್ಷ್ಮರೂಪಾಯ ಉಮಾಯಾಃ ಪತಯೇ ನಮಃ ||೧೨೨||

ತ್ವದ್ದರ್ಶನಮಪುಣ್ಯಾನಾಂ ಸರ್ವಥಾ ನಾಸ್ತಿ ಶಂಕರ
ಇತಿ ಮೇ ನಿಶ್ಚಿತಾ ಬುದ್ಧಿಃ ಪರಮಾತ್ಮನ್ ವೃಷಧ್ವಜ ||೧೨೩||

ತಸ್ಮಾದ್ವಯಂ ನೀಲಕಂಠ ಪುಣ್ಯಾ ಏವ ನ ಸಂಶಯಃ ||೧೨೪||

ತವ ಪಾದಾಬ್ಜಯುಗಲೇ ಮಮ ಭಕ್ತಿಂ ಮಹೇಶ್ವರ
ದೇಹಿ [1]ಸರ್ವಜ್ಞ [1]ಸರ್ವಾತ್ಮನ್ ವಶೀಕೃತಜಗತ್ತ್ರಯ ||೧೨೫||

---

ಭವಾಯ — ಸೃಷ್ಟಿಯನ್ನು ಮಾಡುತ್ತಿದ್ದಂಥಾ ಭವ್ಯಾಯ — ಮಂಗಳ ಸ್ವರೂಪನಹಂಥಾ ಸರ್ವಜ್ಞಾಯ—ಸರ್ವಜ್ಞನಹಂಥಾ ಮಹಾತ್ಮನೇ—ಮಹಾತ್ಮನಹಂಥಾ ನಿನಗೋಸ್ಕರ ನಮಃ—ನಮಸ್ಕಾರವು. ಹರಾಯ—ಸಂಹರಿಸುತ್ತಿದ್ದಂಥಾ ಸೂಕ್ಷ್ಮರೂಪಾಯ—ಸೂಕ್ಷ್ಮಸ್ವರೂಪನಹಂಥಾ ಉಮಾಯಾಃ—ಪಾರ್ವತೀದೇವಿಯ ಪತಯೇ—ವಲ್ಲಭನಹಂಥಾ ನಿನಗೋಸ್ಕರ ನಮಃ—ನಮಸ್ಕಾರವು. ||೧೨೨||

ಶಂಕರ—ಸುಖವನ್ನು ಮಾಡುತ್ತಿದ್ದಂಥಾ ಪರಮಾತ್ಮನ್—ಪರಮಾತ್ಮನಹಂಥಾ ವೃಷಧ್ವಜ — ವೃಷಭಧ್ವಜನಹಂಥಾ ಶಿವನೇ ತ್ವದ್ದರ್ಶನಂ — ನಿನ್ನ ದರ್ಶನವು ಅಪುಣ್ಯಾನಾಂ—ಪುಣ್ಯವ ಮಾಡದೇ ಇದ್ದಂಥಾವರುಗಳಿಗೆ ಸರ್ವಥಾ—ಸರ್ವಪ್ರಯತ್ನದಿಂದವೂ ನಾಸ್ತಿ—ಇಲ್ಲ. ಇತಿ— ಹೀಂಗೆಂದು ಮೇ — ಎನ್ನ ಬುದ್ಧಿಃ — ಬುದ್ಧಿಯು ನಿಶ್ಚಿತಾ—ನಿಶ್ಚೈಸಲ್ಪಟ್ಟದು. ||೧೨೩||

ಭೋ ನೀಲಕಂಠ—ಎಲೇ ನೀಲಕಂಠನೇ ತಸ್ಮಾತ್—ಆದು ಕಾರಣ ವಯಂ —ನಾವು ಪುಣ್ಯಾ ಏವ—ಪುಣ್ಯಾತ್ಮರುಗಳೇ. ನ ಸಂಶಯಃ—ಸಂದೇಹವಿಲ್ಲ. ||೧೨೪||

ಸರ್ವಜ್ಞ — ಸರ್ವಜ್ಞನಹಂಥಾ ಸರ್ವಾತ್ಮನ್ — ಸರ್ವಾತ್ಮಕನಹಂಥಾ ವಶೀಕೃತಜಗತ್ತ್ರಯ—ವಶೀಕರಿಸಲ್ಪಟ್ಟ ಮೂಲೋಕಗಳನುಳ್ಳಂಥಾ ಮಹೇಶ್ವರ —ಮಹೇಶ್ವರನೇ ತವ— ನಿನ್ನ ಪಾದಾಬ್ಜಯುಗಲೇ — ಪಾದಕಮಲವೆರಡರಲ್ಲಿ ಮಮ—ಎನಗೆ ಭಕ್ತಿಂ—ಭಕ್ತಿಯನ್ನು ದೇಹಿ—ಕೊಡು. ||೧೨೫

---

[1] ಸರ್ವೇಶ (ಘ)

ಅನಾಥಾನಾಂ ಚ ಪಾಪಾನಾಂ ಸತತಂ ದುಃಖಭಾಗಿನಾಮ್
ತ್ವಮೇವ ಭಗವನ್ನೂನಂ ಗತಿರ್ನಾನ್ಯಾ ವಿಷಾಶನ ||೧೨೬||

ಅಥವಾ ಸಾ ಗಿರೇಃ ಪುತ್ರೀ ಜಗನ್ಮಾತಾ ವರಾಂಗನಾ
ತೀವ್ರತಾಪಾಭಿತಪ್ತಾನಾಂ ಗತಿರತ್ರ ನ ಸಂಶಯಃ ||೧೨೭||

[1]ರಕ್ಷಾಸ್ಮಾನ್ ವೃಷಯಾನೇಶ ಸರ್ವಭೂತನಮಸ್ಕೃತೆ
ಅಂತಕಾಂತಕ ಸರ್ವಜ್ಞ ಚಂದ್ರಾವಯವಭೂಷಣ ||೧೨೮||

ಇತಿ ಸ್ತುತ್ವಾ ದದೌ ಭಕ್ತ್ಯಾ ಭಿಕ್ಷಾಂ ಸಾ ಪತಿನಾ ಸಹ
ದತ್ವಾ ಪುನರ್ಜಗೌ ಸಾಧ್ವೀ ಪ್ರಹೃಷ್ಟವದನಾ ಭೃಶಮ್ ||೧೨೯||

---

ಭೋ ವಿಷಾಶನ — ಎಲೇ ವಿಷವೇ ಅಶನವಾಗಿ ಉಳ್ಳಂಥಾ ಭಗವನ್ — ಭಗವಾನ್ನುವಹಂಥಾ ಶಿವನೇ ತ್ವಮೇವ — ನೀನೇ ಅನಾಥಾನಾಂ — ಅನಾಥರುಗಳಿಗೆಯೂ ಪಾಪಾನಾಂ — ಪಾಪಿಗಳಿಗೆಯೂ ಸತತಂ — ಆವಾಗವೂ ದುಃಖಭಾಗಿನಾಂ—ದುಃಖಿಗಳಿಗೆಯೂ ನೂನಂ—ಅತ್ಯಂತ ಗತಿಃ — ಗತಿಯಹಂಥಾತನು. ನಾನ್ಯಾ—ಮತ್ತೊಂದು ಗತಿಯಿಲ್ಲ. ||೧೨೬||

ಅಥವಾ—ಅಲ್ಲದಿದ್ದ ಪಕ್ಷೇ ಜಗನ್ಮಾತಾ—ಜಗನ್ಮಾತೆಯಹಂಥಾ ವರಾಂಗನಾ —ಸೌಂದರವಹ ಸ್ತ್ರೀಯಹಂಥಾ ಗಿರೇಃ—ಹಿಮವತ್ಪರ್ವತನ ಪುತ್ರೀ—ಮಗಳಹಂಥಾ ಸಾ—ಆ ಪಾರ್ವತೀದೇವಿ ತೀವ್ರತಾಪಾಭಿತಪ್ತಾನಾಂ — ಅತ್ಯಂತ ಸಂಸಾರ ತಾಪದಿಂದ ಬೆಂದಂಥಾವರುಗಳಿಗೆ ಗತಿಃ = ಗತಿಯಹಂಥಾ (ಯುಕನು) ತಳು ಅತ್ರ = ಈ ಯರ್ಥದಲ್ಲಿ ನ ಸಂಶಯಃ—ಸಂದೇಹವಿಲ್ಲ. ||೧೨೭||

ವೃಷಯಾನ — ವೃಷಭವಾಹನನಹಂಥಾ ಈಶ — ಐಶ್ವರ್ಯವನುಳ್ಳಂಥಾ ಸರ್ವಭೂತನಮಸ್ಕೃತ — ಸಮಸ್ತ ಪ್ರಾಣಿಗಳಿಂದ ನಮಸ್ಕರಿಸಲುಪಟ್ಟಂಥಾ ಅಂತಕಾಂತಕ — ಅಂತಕಂಗೆ ಅಂತಕನಹಂಥಾ ಸರ್ವಜ್ಞ — ಸರ್ವಜ್ಞನಹಂಥಾ ಚಂದ್ರಾವಯವಭೂಷಣ—ಚಂದ್ರನ ಅವಯವವೇ ಭೂಷಣವಾಗಿ ಉಳ್ಳಂಥಾ ಶಿವನೇ ಅಸ್ಮಾನ್—ನಮ್ಮನು ರಕ್ಷ—ರಕ್ಷಿಸು. ||೧೨೮||

ಸಾಧ್ವೀ—ಪತಿವ್ರತೆಯಹಂಥಾ ಸಾ—ಆ ವರುಣಸ್ತ್ರೀ ಇತಿ—ಈ ಪ್ರಕಾರದಲ್ಲಿ ಸ್ತುತ್ವಾ—ಸ್ತೋತ್ರವ ಮಾಡಿ ಭಕ್ತ್ಯಾ—ಭಕ್ತಿಯಿಂದ ಪತಿನಾ ಸಹ —

---

1 ಇದು (ಘ) ಪಾಠಾಂತರ. ತಸ್ಮಾನ್ಮಾಮವ ಸರ್ವೇಶ (ಘ) ಮೂಲ ಪಾಠ.

26*

ಗಾನಾಮೃತಂ ತದಾ ದೇವೀ ವಕ್ತ್ರಚಂದ್ರೇಣ ಶೋಭನಾ
ಸಸರ್ಜ ಕಮಲಾಭಾಕ್ಷೀ ಜಗತಾಮಂತಕಾರಿಣಃ ||೧೩೦||

[1]ಗಾ[1]ನಾಮೃತಂ ತದಾ ಪೀತ್ವಾ ತಸ್ಯಾ ವದನನಿಃಸೃತಮ್
ಪ್ರಹೃಷ್ಟಾತ್ಮಾಭವಚ್ಛರ್ವೋ ವೃಷಯಾನಪ್ರಿಯೋ ಭವಃ ||೧೩೧||

ಸುಮಾಲಿನೀಂ ತತೋ ದೇವೀಂ ದಿದೇಶ ಕಮಲೇಕ್ಷಣಾಮ್
ಗಾನಂ ಕುರ್ವಿತಿ ದೇವೇಶೋ ದೇವ್ಯಾಃ ಪಾರ್ಶ್ವಾಭಿಗಾಮಿನೀಮ್||೧೩೨

---

ಗಂಡನೊಡನೆ ಭಿಕ್ಷಾಂ—ಭಿಕ್ಷೆಯನು ದದೌ—ಕೊಟ್ಟಳು. ದತ್ವಾ—ಕೊಟ್ಟು ಭೃಶಂ—ಅತ್ಯಂತ ಪ್ರಹೃಷ್ಟವದನಾ—ಅತ್ಯಂತ ಸಂತೋಷಿಸಲುಪಟ್ಟ ಮುಖವನುಳ್ಳಾ (ಯಕನಾಗಿ) ತಳಾಗಿ ಪುನಃ—ಮರಳಿ ಜಗೌ—ಹಾಡಿದಳು. ||೧೨೯||

ಕಮಲಾಭಾಕ್ಷೀ—ತಾವರೆಗೆ ಸಮಾನವಹ ನಯನಂಗಳನುಳ್ಳಂಥಾ ಶೋಭನಾ —ಒಪ್ಪುತ್ತಿದ್ದಂಥಾ ದೇವೀ—ವರುಣನ ಸ್ತ್ರೀ ವಕ್ತ್ರಚಂದ್ರೇಣ—ಮುಖಚಂದ್ರನಿಂದ ಗಾನಾಮೃತಂ—ಗಾನಾಮೃತವನು ತದಾ—ಆಗ ಜಗತಾಂ—ಲೋಕಂಗಳ ಅಂತಕಾರಿಣಃ—ನಾಶವನು ಮಾಡುತಿದ್ದಂಥಾ ಶಿವಂಗೆ ಸಸರ್ಜ—ಸೃಜಿಸಿದಳು.

ವೃಷಯಾನಪ್ರಿಯಃ—ವೃಷಭವಾಹನದಲ್ಲಿ ಪ್ರಿಯನಹಂಥಾ ಭವಃ—ಸೃಷ್ಟಿಯನು ಮಾಡುತ್ತಿದ್ದಂಥಾ ಶರ್ವಃ— ಪರಮೇಶ್ವರನು ತಸ್ಯಾಃ — ಆ ವರುಣನ ಸ್ತ್ರೀಯು ವದನನಿಃಸೃತಂ —ಮುಖದಿಂದ ಸುರಿವುತ್ತಿದ್ದಂಥಾ ಗಾನಾಮೃತಂ — ಸಂಗೀತಾಮೃತವನು ತದಾ—ಆಗ ಪೀತ್ವಾ—ಪಾನವ ಮಾಡಿ ಪ್ರಹೃಷ್ಟಾತ್ಮಾ ಸಂತೋಷಿಸಲುಪಟ್ಟ ಚಿತ್ತವನುಳ್ಳಾತನು ಅಭವತ್—ಆದನು. ಗಾನಾಮೃತವನು ಪಾನಮಾಡಿದನೆಂದರೆ ಕೇಳಿದನೆಂಬುದರ್ಥ. ||೧೩೧||

ತತಃ—ಅನಂತರ ಮೇಲೆ ದೇವೇಶಃ— ದೇವರ್ಕಳಿಗೆ ಒಡೆಯನಹಂಥಾ ಶಿವನು ದೇವ್ಯಾಃ—ಪಾರ್ವತೀದೇವಿಯ ಪಾರ್ಶ್ವಾಭಿಗಾಮಿನೀಂ—ಸಮೀಪದಲ್ಲಿ ಇರುತ್ತಿದ್ದಂಥಾ ಕಮಲೇಕ್ಷಣಾಮ್—ತಾವರೆಯೋಪಾದಿಯ ನಯನಂಗಳನುಳ್ಳಂಥಾ ಸುಮಾಲಿನೀಂ ದೇವೀಂ—ಸುಮಾಲಿನಿದೇವಿಯನು ಗಾನಂ—ಗಾನವನು ಕುರು—ಮಾಡು ಇತಿ —ಹೀಂಗೆಂದು ದಿದೇಶ—ಆಜ್ಞಾಪಿಸಿದನು. ||೧೩೨||

---

1 ಜ್ಞಾ ? (ಗ)

ಸುಮಾಲಿನೀ ತತೋ ದೇವೀ ಗಿರಿಜಾನುಚರಾ ಸತೀ
ಕುಬೇರಪುತ್ರೀ ಸಂಹೃಷ್ಟಾ ಜಗೌ ದೇವಸ್ಯ ಪಾರ್ಶ್ವತಃ ||೧೩೩||

ಶ್ರುತ್ವಾ ಗೀತಂ ತದಾ ದೇವೀ ವ್ರೀಡಿತಾ ವರುಣಪ್ರಿಯಾ
ಅಭವದ್ದೇವದೇವಸ್ಯ ಸನ್ನಿಧೌ ಪದ್ಮಲೋಚನಾ ||೧೩೪||

ತಾಂ ವ್ರೀಡಿತಾಂ ಭವೋ ಜ್ಞಾತ್ವಾ ಪ್ರಸಿದ್ಧಾಂ ಗಾನವಿದ್ಯಯಾ
ಲಜ್ಜಾಂ ತು ಮಾ ಕೃಥಾ ದೇವೀತ್ಯೇವಂ ಪ್ರಾಹ ಚ ಶಂಕರಃ ||೧೩೫||

ಪುನರ್ಜಗೌ ತಥಾ ಸಾಽಪಿ ಜಗೌ ಸಾಽಪಿ ಸುಮಾಲಿನೀ
ಗಾನಾಮೃತಮಜಃ ಪೀತ್ವಾ ಪ್ರಹೃಷ್ಟಾತ್ಮಾ ಬಭೂವ ಸಃ ||೧೩೬||

---

ತತಃ—ಅನಂತರವೇಲೆ ಕುಬೇರಪುತ್ರೀ — ಕುಬೇರನ ಕುಮಾರಿಯಹಂಥಾ ಗಿರಿಜಾನುಚರಾ—ಪಾರ್ವತೀದೇವಿಯ ವಿಳಾಸಿನಿಯಹಂಥಾ ಸತೀ— ಪತಿವ್ರತೆಯು—ಹಂಥಾ ಸುಮಾಲಿನೀದೇವೀ — ಸುಮಾಲಿನೀ ದೇವಿಯೆಂಬಾ (ಯುಕನು)ಕೆಯು ಸಂಹೃಷ್ಟಾ—ಸಂತೋಷಿಸಲುಪಟ್ಟಾ(ಯುಕನಾಗಿ)ತಳಾಗಿ ದೇವಸ್ಯ—ಪರಮೇಶ್ವರನ ಪಾರ್ಶ್ವತಃ—ಸಮೀಪದಲ್ಲಿ ಜಗೌ—ಹಾಡಿದಳು. ||೧೩೩||

ವರುಣಪ್ರಿಯಾ—ವರುಣನ ಸ್ತ್ರೀಯಳಹಂಥಾ ಪದ್ಮಲೋಚನಾ — ಕಮಲ ಲೋಚನೆಯಹಂಥಾ ದೇವೀ—ರಾಣಿವಾಸವು ಗೀತಂ—ಗಾನವನು ಶ್ರುತ್ವಾ—ಕೇಳಿ ತದಾ—ಆಗ ದೇವದೇವಸ್ಯ—ಪರಮೇಶ್ವರನ ಸನ್ನಿಧೌ — ಸಮೀಪದಲ್ಲಿ ವ್ರೀಡಿತಾ—(ನಾಚಿಪಾಯುಕನು) ನಾಚಿದಾತಳು ಅಭವತ್—ಆದಳು. ||೧೩೪||

ಶಂಕರಃ—ಸುಖವನು ಮಾಡುತ್ತಿದ್ದಂಥಾ ಭವಃ—ಪರಮೇಶ್ವರನು ಗಾನ—ವಿದ್ಯಯಾ—ಗಾನವಿದ್ಯೆಯಿಂದ ಪ್ರಸಿದ್ಧಾಂ — ಪ್ರಸಿದ್ಧೆಯಹಂಥಾ ತಾಂ — ಆ ವರುಣನ ಸ್ತ್ರೀಯನು ವ್ರೀಡಿತಾಂ—ನಾಚ್ಕೆ(ದಾಯುಕನನೆಂದು)ಕಳೆಂದು ಜ್ಞಾತ್ವಾ—ಅರಿದು ಭೋ ದೇವಿ— ಎಲೆ ವರುಣನ ಸ್ತ್ರೀಯೆ ಲಜ್ಜಾಂ ತು— ನಾಚಿಕೆಯನು ಮಾಕೃಥಾ—ಮಾಡದಿರು ಇತಿ—ಹೀಂಗೆಂದು ಏವಂ ಚ—ಈ ಪ್ರಕಾರದಲ್ಲಿ ಪ್ರಾಹ—ನುಡಿದನು. ||೧೩೫||

ಸಾಽಪಿ—ಆ ವರುಣನ ರಾಣಿವಾಸವೂ ತಥಾ — ಪರಮೇಶ್ವರ ನಿರೂಪವ ಕೊಟ್ಟ ಹಾಂಗೆ ಪುನಃ—ಮರಳಿ ಜಗೌ—ಹಾಡಿದಳು. ಸಾಽಪಿ ಸುಮಾಲಿನೀ—ಆ ಸುಮಾಲಿನೀದೇವಿಯೂ ಜಗೌ—ಹಾಡಿದಳು. ಅಜಃ—ಜನ್ಮವಿಲ್ಲದೇ ಇದ್ದಂಥಾ ಸಃ—ಆ ಶಿವನು ಗಾನಾಮೃತಂ—ಸಂಗೀತವೆಂಬ ಅಮೃತವನು ಪೀತ್ವಾ—ಪಾನವ

ದ್ವಾರಿ ತಿಷ್ಠನ್ ಸಮಾದಾಯ ಭಿಕ್ಷಾಂ ವೈ ನೀಲಲೋಹಿತಃ
ಜಗಾಮ ತಸ್ಮಾದ್ದೇವೇಶಃ ಕುಬೇರಭವನಂ ಪ್ರತಿ ||೧೩೭||

*ಸ ರಾಜರಾಜಸ್ಯ ಪುರಂ ವಿಶಾಲಂ
ಕೈಲಾಸಕೂಟಪ್ರತಿಮೈರ್ವಿಮಾನೈಃ ।
ಸಂಯುಕ್ತಮಗ್ನ್ಯರ್ಕಶಶಿಪ್ರಭಾಭೈ-
ರ್ಯಯೌ ವೃಷಾಂಕಸ್ಸಹ ದೇವಸಂಘೈಃ ||೧೩೮||

‡ಹ್ರದೈರ್ವಿಶಾಲೈರ್ವಿವಿಧೈಶ್ಚ ಜುಷ್ಟಂ
ಹರ್ಮ್ಯೈರ್ವಿಶಾಲೈರ್ವಿವಿಧೈಶ್ಚ ಜುಷ್ಟಮ್ ।
[1]ಪ್ರಾಸಾದಪೂಗೈರ್ಧವಳೈರ್ವಿಚಿತ್ರೈಃ
ಸುವರ್ಣಚಿತ್ರೈರ್ಮಣಿಮಂಟಪೈಶ್ಚ ||೧೩೯||

---

ಮಾಡಿ ಪ್ರಹೃಷ್ಟಾತ್ಮಾ—ಸಂತೋಷಿಸಲುಪಟ್ಟ ಚಿತ್ತವನುಳ್ಳಾತನು ಬಭೂವ—ಆದನು. ||೧೩೬||

ದೇವೇಶಃ—ದೇವರ್ಕಳಿಗೊಡೆಯನಹಂಥಾ ನೀಲಲೋಹಿತಃ—ಪರಮೇಶ್ವರನು ದ್ವಾರಿ — ಬಾಗಿಲಲ್ಲಿ ತಿಷ್ಠನ್ — ಇರುತ್ತವು ಭಿಕ್ಷಾಂ ವೈ — ಭಿಕ್ಷೆಯನು ಸಮಾದಾಯ — ಈಸಿಕೊಂಡು ತಸ್ಮಾತ್ — ಆ ಠಾವಿನ ದೆಸೆಯಿಂದ ಕುಬೇರ ಭವನಂ ಪ್ರತಿ—ಕುಬೇರನ ಅರಮನೆಯನು ಕುರಿತು ಜಗಾಮ—ಎಯ್ದಿದನು. ೧೩೭

ವೃಷಾಂಕಃ — ವೃಷಭನ ಕುರುಹನುಳ್ಳಂಥಾ ಸಃ — ಆ ಪರಮೇಶ್ವರನು ದೇವಸಂಘೈಸ್ಸಹ — ದೇವರ್ಕ(ಳುಗ)ಳ ಸಮೂಹಂಗಳಿಂದ ಸಹಿತವಾಗಿ ಕೈಲಾಸಕೂಟ ಪ್ರತಿಮೈಃ—ಕೈಲಾಸಪರ್ವತದ ಶಿಖರಂಗಳಿಗೆ ಸಮಾನವಾಗುತ್ತಿರ್ದಂಥಾ ಅಗ್ನ್ಯರ್ಕ-ಶಶಿಪ್ರಭಾಭೈಃ— ಅಗ್ನಿ) ಸೂರ್ಯ ಚಂದ್ರರುಗಳ ಕಾಂತಿಗೆ ಸಮಾನವಾಗುತ್ತಿದ್ದಂಥಾ ವಿಮಾನೈಃ—ಪುಷ್ಪಕಂಗಳಿಂದ ಸಂಯುಕ್ತಂ—ಕೂಡಲುಪಟ್ಟಂಥಾ ವಿಶಾಲಂ—ವಿಸ್ತಾರವಹಂಥಾ ರಾಜರಾಜಸ್ಯ—ಕುಬೇರನ ಪುರಂ— ಪಟ್ಟಣವನು ಯಯೌ — ಎಯ್ದಿದನು. ||೧೩೮||

ವಿವಿಧೈಃ — ನಾನಾ ಪ್ರಕಾರವಹಂಥಾ ವಿಶಾಲೈಃ — ವಿಸ್ತೀರ್ಣವಹಂಥಾ ಹ್ರದೈಶ್ಚ—ಕೊಳಂಗಳ ಮಡುಗಳಿಂದ(ಲು)ವು ಜುಷ್ಟಂ — ಮನೋಹರವಹಂಥಾ

---

* ಉಪೇಂದ್ರವಜ್ರ ವೃತ್ತಂ ॥ ‡ ಉಪಜಾತಿವೃತ್ತಂ

1 ಪ್ರಾಸಾದಪೂರ್ಣೈ (ಕ)

*ಯಯೌ ಕಪಾಲೀ ಭಗನೇತ್ರಹಂತಾ
ವಿಭೂಷಿತಃ ಪನ್ನಗಭೂಷಣೇನ ।
ದೇವೈಶ್ಚ ಸಾರ್ಧಂ ಗಣಪೈಶ್ಚ ವಂದ್ಯಃ
ಸಹಾಪ್ಸರೋಭಿರ್ಜಗತಾಂ ವಿಧಾತಾ ॥೧೪೦॥

*ಶ್ರುತ್ವಾ ಕುಬೇರಃ ಪರವೀರಹಂತಾ
[1]ಪ್ರಹೃಷ್ಟಚಿತ್ತಃ [1]ಪರಮೇಶಭೃತ್ಯಃ[2] ।
ಬಭೂವ ರಕ್ಷೋಭಿರದೀನಸತ್ತ್ವಃ
ಸಸಂಭ್ರಮಂ ಸರ್ವಗತಸ್ಯ ಮಿತ್ರಮ್ ॥೧೪೧॥

---

ವಿಶಾಲೈಃ—ವಿಸ್ತರವಹಂಥಾ ವಿವಿಧೈಃ—ನಾನಾ ಪ್ರಕಾರವಹಂಥಾ ಹರ್ಮ್ಯೈಶ್ಚ—ಉಪ್ಪರಿಗೆಗಳಿಂದವೂ ವಿಚಿತ್ರೈಃ—ಆಶ್ಚರ್ಯವಹಂಥಾ ಧವಲೈಃ—ಬಿಳಿದಾಗಿದ್ದಂಥಾ ಪ್ರಾಸಾದಪೂಗೈಃ—ಅರಮನೆಯ ಬಹಳಂಗಳಿಂದವು. ಸುವರ್ಣಚಿತ್ರೈಃ—ಸುವರ್ಣಮಯವಹ ಚಿತ್ರಂಗಳನುಳ್ಳಂಥಾ ಮಣಿಮಂಟಪೈಶ್ಚ — ರತ್ನಮಂಟಪಂಗಳಿಂದವು ಜುಷ್ಟಂ—ಒಪ್ಪುತ್ತಿದ್ದಂಥಾ ಅಳಕಾಪುರಿಯನು,

ಜಗತಾಂ—ಲೋಕಂಗಳಿಗೆ ವಿಧಾತಾ — ಒಡೆಯನಹಂಥಾ ಕಪಾಲೀ — ಕಪಾಲವ ಧರಿಸಿದಂಥಾ ಭಗನೇತ್ರಹಂತಾ — ಭಗಾದಿತ್ಯನ ಕಣ್ಣ ಮೀಂಟಿದಂಥಾ ಪನ್ನಗಭೂಷಣೇನ — ಸರ್ಪಾಭರಣದಿಂದ ವಿಭೂಷಿತಃ — ಅಲಂಕರಿಸಲುಪಟ್ಟಂಥಾ ಪರಮೇಶ್ವರನು ದೇವೈಶ್ಚ—ದೇವರ್ಕಳಿಂದ ಸಾರ್ಧಂ—ಸಹಿತವಾಗಿ ಗಣಪೈಶ್ಚ—ಗಣೇಶ್ವರರುಗಳಿಂದವೂ ಅಪ್ಸರೋಭಿಸ್ಸಹ—ಅಪ್ಸರರುಗಳಿಂದ ಸಹಿತವಾಗಿ ವಂದ್ಯಃ—ನಮಸ್ಕರಿಸಿಕೊಳಲುಪಟ್ಟಾತನಾಗಿ ಯಯೌ—ಎಯ್ದಿದನು. ॥೧೪೦॥

ಪರವೀರಹಂತಾ — ವೈರಿಭಟರುಗಳ ಕೊಲುತಿದ್ದಂಥಾ ಪರಮೇಶಭೃತ್ಯಃ—ಪರಮೇಶ್ವರನ ಸೇವಕನಹಂಥಾ ಸರ್ವಗತಸ್ಯ—ಪರಿಪೂರ್ಣನಹಂಥಾ ಮಿತ್ರಂ — ಶಿವನ ಸಂಗಡಿಗನಹಂಥಾ ರಕ್ಷೋಭಿಃ—ರಾಕ್ಷಸರುಗಳೊಡನೆ ಅದೀನಸತ್ತ್ವಃ — ದೈನ್ಯವಿಲ್ಲದ ಸತ್ತ್ವವನುಳ್ಳಂಥಾ ಕುಬೇರಃ — ಕುಬೇರನು ಶ್ರುತ್ವಾ — ಕೇಳಿ ಪ್ರಹೃಷ್ಟಚಿತ್ತಃ— ಅತಿ ಸಂತೋಷಿಸಲುಪಟ್ಟ ಚಿತ್ತವನುಳ್ಳಾತನಾಗಿ ಸಸಂಭ್ರಮಂ — ಸಂಭ್ರಮದಿಂದ ಸಹಿತವಹಗೋಅಹಗೆ ( ಸಹಿತವಹೆಗಹುದಹಗೆ ) ಬಭೂವ —ಆದನು. ॥೧೪೧॥

---

* ಉಪಜಾತಿವೃತ್ತಂ

1 ಪ್ರಹೃಷ್ಟಸತ್ತ್ವಃ (ಗ.ಖ) ಮೂಲ ಮಾತ್ರ. 2 ಭಕ್ತಃ (ಘ)

*ಅಲಂಚಕಾರಾಶು ಪುರಂ ವಿಚಿತ್ರಂ
ಧ್ವಜೈಶ್ಚ ರತ್ನೈರ್ವಿವಿಧೈಶ್ಚ ಚಿತ್ರೈಃ ।
ಹೈಮೈಃ ಸತೋಯೈಶ್ಚ ತಥೈವ ಕುಂಭೈಃ
ಕಲ್ಪಪ್ರಸೂನೈಶ್ಚ ತದಂಶುಕೈಶ್ಚ ॥೧೪೨॥

*ಅಶ್ವತ್ಥಪತ್ರೈಶ್ಚ ತಥೈವ [1]ಹೈಮೈಃ[1]
ಸ್ಥೂಲೈಶ್ಚ ಧೂಪೈರ್ವಿವಿಧೈರ್ವಿಧೂಮೈಃ ।
ಅಲಂಚಕಾರ ದ್ರವಿಣಾಧಿಪಸ್ತ-
ತ್ಪುರಂ ಲಸತ್ಕಾಂಚನರತ್ನಜುಷ್ಟಮ್ ॥೧೪೩॥

*ವಿವೇಶ ದೇವೋಽಪಿ ಪುರಂ ತದಾನೀಂ
ದೇವೇಂದ್ರಮುಖ್ಯೈಃ ಸುರಸಿದ್ಧಸಂಘೈಃ
ಸಾರ್ಧಂ ಕುಬೇರಸ್ಯ ಯಥಾ ಗಿರೀಂದ್ರಂ
ಕೈಲಾಸಮದ್ರೀಂದ್ರಸುತಾಪತಿಸ್ತಮ್ ॥೧೪೪॥

ರತ್ನೈಃ—ರತ್ನಮಯವಹಂಥಾ ಧ್ವಜೈಶ್ಚ—ಧ್ವಜಂಗಳಿಂದಲೂ ವಿವಿಧೈಃ—ನಾನಾಪ್ರಕಾರವಹಂಥಾ ಚಿತ್ರೈಶ್ಚ — ಚಿತ್ರಂಗಳಿಂದಲು ತಥೈವ — ಹಾಂಗೆ ಸತೋಯೈಃ—ಉದಕಂಗಳಿಂದ ಸಹಿತವಹಂಥಾ ಹೈಮೈಃ-ಸುವರ್ಣಮಯವಹಂಥಾ ಕುಂಭೈಶ್ಚ—ಕಳಸಂಗಳಿಂದವೂ ತಥಾ—ಹಾಂಗೆ ಕಲ್ಪಪ್ರಸೂನೈಶ್ಚ — ಕಲ್ಪವೃಕ್ಷದ ಹೂಗಳಿಂದಲು ತದಂಶುಕೈಶ್ಚ — ಆ ಕಲ್ಪವೃಕ್ಷದ ವಸ್ತ್ರಂಗಳಿಂದಲು ಪುರಂ — ಪಟ್ಟಣವನು ಆಶು — ಬೇಗ ವಿಚಿತ್ರಂ — ಆಶ್ಚರ್ಯವಾಗಿ ಅಲಂಚಕಾರ = ಅಲಂಕರಿಸಿದನು. ॥೧೪೨॥

ದ್ರವಿಣಾಧಿಪಃ—ಧನಪತಿಯಹಂಥಾ ಕುಬೇರನು ಲಸತ್ಕಾಂಚನರತ್ನಜುಷ್ಟಂ —ಒಪ್ಪುತ್ತಂ ಇರ್ದ ಸುವರ್ಣರತ್ನಂಗಳಿಂದ ಶೋಭಿಸಿದಂಥಾ ತತ್ಪುರಂ—ಆ ಅಳಕಾ-ಪುರಿಯನು ತಥೈವ — ಆ ಪ್ರಕಾರದಲೇ ಹೈಮೈಃ — ಸುವರ್ಣಮಯವಹಂಥಾ ಸ್ಥೂಲೈಃ — ದೊಡ್ಡಿತ್ತಹಂಥಾ ಅಶ್ವತ್ಥಪತ್ರೈಶ್ಚ — ಅರಳಿಯ ಎಲೆಗಳಿಂದಲೂ ವಿಧೂಮೈಃ — ಹೊಗೆ ಇಲ್ಲದೇ ಇದ್ದಂಥಾ ವಿವಿಧೈಃ — ಹಲವು ಪ್ರಕಾರವಹಂಥಾ ಧೂಪೈಶ್ಚ = ಧೂಪಂಗಳಿಂದವೂ ಅಲಂಚಕಾರ = ಅಲಂಕಾರವ ಮಾಡಿದನು. ॥೧೪೩॥

ಅದ್ರೀಂದ್ರಸುತಾಪತಿಃ = ಗಿರಿರಾಜನ ಕುಮಾರಿಯಹ ಪಾರ್ವತೀಪತಿಯಹಂಥಾ ದೇವೋಽಪಿ = ಪರಮೇಶ್ವರನು ತದಾನೀಂ = ಆಗ ದೇವೇಂದ್ರಮುಖ್ಯೈಃ =

* ಉಪಜಾತಿವೃತ್ತಂ 1 ಹೇಮೈಃ (ಘ) 2 ಶೋಭಿಸಿ (ಖ)

ನಿರ್ಗತ್ಯ ಗೇಹಾದ್ಧನದಃ ಪ್ರಣಿಪತ್ಯ ಮಹೇಶ್ವರಮ್
ಸಸ್ವಜೇ ಭಗವಾನೀಶಂ ಬಾಹುಭ್ಯಾಮಾರ್ತಿಹಾರಿಣಮ್ ||೧೪೫||

ತತಃ ಪತ್ನೀ ಕುಬೇರಸ್ಯ ದೃಷ್ಟ್ವಾ ನತ್ವಾ ಮಹೇಶ್ವರಮ್
ಅತೀವ ಹೃಷ್ಟಚಿತ್ತಾಽಭೂತ್ಕಿಂಚಿಲ್ಲಜ್ಜಾವೃತಾನನಾ ||೧೪೬||

ಅಂಗನಾಶ್ಚ [1]ತಥಾ[1] ನತ್ವಾ ಮುಹುರ್ದೇವೇಶಮಾಗತಮ್
ಜಗುಶ್ಚ ನನೃತುಶ್ಚೈವ ಸಂಭ್ರಾಂತಾ ಭವದರ್ಶನಾತ್ ||೦೪೭||

---

ದೇವೇಂದ್ರ ಮೊದಲಾದಂಥಾ ಸುರಸಿದ್ಧಸಂಘೈಃ = ದೇವರ್ಕಳ ಸಿದ್ಧರ ಸಮೂಹಂ-ಗಳಿಂದ ಸಾರ್ಧಂ = ಸಹಿತವಾಗಿ ಕುಬೇರಸ್ಯ = ಕುಬೇರನ ಪುರಂ = ಪಟ್ಟಣವನು ವಿವೇಶ = ಹೊಕ್ಕನು. ತದ್ಯಥಾ = ಅದು ಹೇಂಗೆಂದರೆ ಗಿರೀಂದ್ರಂ = ಪರ್ವತಂ ಗಳಿಗೊಡೆಯನಹಂಥಾ ತಂ ಕೈಲಾಸಂ ಯಥಾ = ಆ ಕೈಲಾಸವನೆಹಗಹಗೆ. ||೧೪೪||

ಭಗವಾನ್ = ಐಶ್ವರ್ಯವನುಳ್ಳಂಥಾ ಧನದಃ = ಕುಬೇರನು ಗೇಹಾತ್ = ಅರಮನೆಯ ದೆಸೆಯಿಂದ ನಿರ್ಗತ್ಯ = ಹೊರವಂಟು (ಹೊರಬಂದು) ಆರ್ತಿಹಾರಿಣಂ = ಕ್ಲೇಶವನು ಕೆಡಿಸುತ್ತಿದ್ದಂಥಾ ಈಶಂ = ಒಡೆಯನಹಂಥಾ ಮಹೇಶ್ವರಂ = ಪರಮೇಶ್ವರನನು ಪ್ರಣಿಪತ್ಯ = ನಮಸ್ಕರಿಸಿ ಬಾಹುಭ್ಯಾಂ = ತೋಳುಗಳಿಂದ ಸಸ್ವಜೇ = ತಕ್ಕೈಸಿಕೊಂಡನು. ಷ್ವಜ-ಪರಿಷ್ವಂಗೇ ಇತಿ ಧಾತುಃ. ||೧೪೫||

ತತಃ = ಅಷ್ಟರ ಮೇಲೆ ಕುಬೇರಸ್ಯ = ಕುಬೇರನ ಪತ್ನೀ = ಹೆಂಡತಿಯು (ರಾಣಿವಾಸವು) ಮಹೇಶ್ವರಂ = ಪರಮೇಶ್ವರನನು ದೃಷ್ಟ್ವಾ = ಕಂಡು ನತ್ವಾ = ನಮಸ್ಕರಿಸಿ ಕಿಂಚಿಲ್ಲಜ್ಜಾವೃತಾನನಾ = ಒಂದಿಷ್ಟು ನಾಚಿಕೆಯಿಂದ ಮುಸುಕಲು ಪಟ್ಟ ಮುಖವನುಳ್ಳಾತಳಾಗಿ ಅತೀವ ಹೃಷ್ಟಚಿತ್ತಾ = ಅತ್ಯಂತ ಸಂತೋಷಿಸಲುಪಟ್ಟ ಚಿತ್ತವನುಳ್ಳಾ (ಮನನು)ತಳು ಅಭೂತ್ = ಆದಳು. ||೧೪೬||

ಆಗತಂ = ಬಂದಂಥಾ ದೇವೇಶಂ = ಪರಮೇಶ್ವರನನು ಕುರಿತು ಅಂಗನಾಶ್ಚ = ಸ್ತ್ರೀಯರುಗಳು ತಥಾ = ಆ ಮರಿಯಾದೆಯುಲಿ ನತ್ವಾ = ನಮಸ್ಕರಿಸಿ ಭವದರ್ಶನಾತ್ = ಪರಮೇಶ್ವರನ ದರ್ಶನದ ದೆಸೆಯಿಂದ ಸಂಭ್ರಾಂತಾಃ = ಸಂಭ್ರಮವನುಳ್ಳವರುಗಳಾಗಿ ಮುಹುಃ = ಅಡಿಗಡಿಗೆ ಜಗುಶ್ಚ = ಹಾಡಿದರು. ನನೃತುಶ್ಚೈವ = ನೃತ್ಯವನಾಡಿದರು. ||೧೪೭||

---

[1] ತದಾ (ಘ)

[1]ನರನಾರೀ[1]ಸಮಾಕೀರ್ಣಂ ರಾಜಮಾರ್ಗಮಭೂತ್ತದಾ
ಸಸೃಜುಃ ಪುಷ್ಪವರ್ಷಾಣಿ ರಾಜಮಾರ್ಗೇ ವರಾಂಗನಾಃ ||೧೪೮||

ಭ್ರಮರಾವಲಿಯುಕ್ತಾನಿ ಪ್ರಾಸಾದೋಪರಿ ಸಂಸ್ಥಿತಾಃ
ಅಕ್ಷತಾಂಶ್ಚ ತಥಾ ಕಾಶ್ಚಿದಂಬುಮಿಶ್ರಾಂಶ್ಚ ಚಿಕ್ಷಿಪುಃ ||೧೪೯||

* ಸೂತ ಉವಾಚ

ಹರಮೂರ್ಧ್ನಿ ತಥಾ ವಿಪ್ರಾಃ [2]ಗಂಗಾಚಂದ್ರಾಂಕಿತೇ[2] ಶಿವೇ
ನಿರ್ಯೂಹಸ್ಥಾಸ್ತದಾ ಕಾಶ್ಚಿನ್ನನೃತುಃ ಪದ್ಮಲೋಚನಾಃ ||೧೫೦||

---

ತದಾ = ಆಗ ರಾಜಮಾರ್ಗಂ = ರಾಜಬೀದಿ ನರನಾರೀಸಮಾಕೀರ್ಣಂ = ಪುರುಷರು ಸ್ತ್ರೀಯರುಗಳಿಂದ ಮುಸುಕಲುಪಟ್ಟಂಥಾದ್ದು ಅಭೂತ್ = ಆಯಿತ್ತು. ವರಾಂಗನಾಃ = ಸೌಂದರ್ಯವನುಳ್ಳಂಥಾ ಸ್ತ್ರೀಯರುಗಳು ರಾಜಮಾರ್ಗೇ = ರಾಜ ಬೀದಿಯಲ್ಲಿ ಭ್ರಮರಾವಲಿಯುಕ್ತಾನಿ = ತುಂಬಿಗಳ ಸಮೂಹದಿಂದ ಕೂಡಲುಪಟ್ಟಂಥಾ ಪುಷ್ಪವರ್ಷಾಣಿ = ಹೂಮಳೆಗಳನು ಸಸೃಜುಃ = ಸುರಿದರು. ಪ್ರಾಸಾದೋಪರಿ = ಉಪ್ಪರಿಗೆಯ ಮೇಲೆ ಸಂಸ್ಥಿತಾಃ = ಇದ್ದಂಥಾ ಕಾಶ್ಚಿತ್ = ಕೆಲಬರು ಸ್ತ್ರೀಯರು ತಥಾ = ಹಾಂಗೆ ಅಂಬುಮಿಶ್ರಾಣಿ = ಉದಕಮಿಶ್ರವಹಂಥಾ ಅಕ್ಷತಾಂಶ್ಚ = ಅಕ್ಷತೆ ಗಳನು ಚಿಕ್ಷಿಪುಃ = ತಳಿದರು (ಸುರಿದರು). ||೧೪೮–೧೪೯||

ಸೂತ ಉವಾಚ = ಸೂತ್ರ ಮುನೀಶ್ವರನ ವಾಕ್ಯವು

ಭೋ ವಿಪ್ರಾಃ ! = ಎಲೈ ನೈಮಿಷಾರಣ್ಯವಾಸಿಗಳಹ ಋಷಿಗಳಿರಾ ! ತಥಾ = ಹಾಂಗೆ ನಿರ್ಯೂಹಸ್ಥಾಃ = ನೆಲೆ ನೆಲೆಗಳಲ್ಲಿದ್ದಂಥಾ ಕಾಶ್ಚಿತ್ = ಕೆಲವರು ಪದ್ಮ-ಲೋಚನಾಃ = ಕಮಲಲೋಚನೆಯರಹಂಥಾ ಸ್ತ್ರೀಯರುಗಳು ಗಂಗಾಚಂದ್ರಾಂಕಿತೇ = ಗಂಗೆ ಚಂದ್ರರಿಂದಂಕಿಸಲುಪಟ್ಟಂಥಾ ಶಿವೇ = ಒಪ್ಪುತ್ತಿದ್ದಂಥಾ ಹರಮೂರ್ಧ್ನಿ = ಪರಮೇಶ್ವರನ ಶಿರಸ್ಸಿನಲ್ಲಿ ತದಾ = ಆಗ ಅಂಬುಮಿಶ್ರಾಣಿ = ಉದಕಮಿಶ್ರವಹಂಥಾ ಅಕ್ಷತಾಂಶ್ಚ = ಸೇಸೆಗಳನು ಚಿಕ್ಷಿಪುಃ = ತಳಿದರು. ಅಂಬುಮಿಶ್ರಿತಗಳಾದ ಅಕ್ಷತೆ ಗಳನ್ನು ತಳಿದರು. ನನೃತುಃ = ನೃತ್ಯವನಾಡಿದರು. ||೧೫೦||

---

1 ಸುರನಾರೀ (ಘ)

* ಇಲ್ಲಿ ಮೂರು ಶ್ಲೋಕಗಳಿದ್ದು ಕುಳಕವೆನಿಸುವುದಿಲ್ಲ. ಕಲಾಪಕವೇ (?)

2 ಚಂದ್ರಗಂಗಾಂಕಿತೇ (ಘ) ಮೂಲಪಾಠ ಗಂಗಾಚಂದ್ರಾಂಕಿತೇ (ಘ) ಪಾಠಾಂತರ.

*ಕಾಶ್ಚಿದ್ವೀಣಾಂ ವಾದಯಂತಿ ಕಾಶ್ಚಿತ್ತೂರ್ಯಾಣಿ ಕೋಪನಾಃ
ತತ್ರ ಕಾಚಿತ್ ಭವಂ ದೃಷ್ಟ್ವಾ [1]ಸಂಭ್ರಾಂತಾ[1] ವಿವಶಾ ಸತೀ ||೧೫೧||

*ಅತಿಷ್ಠತ ಗತಪ್ರಾಣಾ ನಿಶ್ಚಲಾ ಕಮಲಾನನಾ
[2]ತಸ್ಯಾ ಭಾವಂ ಭವೋ ಜ್ಞಾತ್ವಾ[2] ಪ್ರಸನ್ನೋಽಭವದವ್ಯಯಃ ||೧೫೨||

ತತಸ್ತಸ್ಮಿನ್ಗತೇ ಸಾಧ್ವೀ ತ್ಯಕ್ತ್ವಾ ದೇಹಂ ವರಾಂಗನಾ
ವಿವೇಶ ಶರ್ವಂ ಸರ್ವಜ್ಞಂ ಸರ್ವಕಾರಣಕಾರಣಮ್ ||೧೫೩||

ಸ್ವಶಕ್ತಿಂ ದರ್ಶಯಂತೀಷು ನಾರೀಷು ಪರಮೇಶ್ವರಃ
ವಿವೇಶ ಪರಮಂ ಗೇಹಂ ಕುಬೇರಸ್ಯ ಶಶಿಪ್ರಭಮ್ ||೧೫೪||

---

ಕಾಶ್ಚಿತ್ = ಕೆಲಬರು ಸ್ತ್ರೀಯರುಗಳು ವೀಣಾಂ = ವೀಣೆಯನು ವಾದಯಂತಿ = ನುಡಿಸುತ್ತಿದ್ದರು. ಕಾಶ್ಚಿತ್ ಕೋಪನಾಃ = ಕೆಲಬರು ಸ್ತ್ರೀಯರುಗಳು ತೂರ್ಯಾಣಿ = ವಾದ್ಯಂಗಳನು ವಾದಯಂತಿ = ಬಾರಿಸುತ್ತಿದ್ದರು. ತತ್ರ = ಅಲ್ಲಿ ಕಾಚಿತ್ = ಒಬ್ಬಾಳೊಬ್ಬಳು ಭವಂ = ಶಿವನನು ದೃಷ್ಟ್ವಾ = ಕಂಡು ಸಂಭ್ರಾಂತಾ —ಭ್ರಮಿಸಿದಳ್ (ಯಾಕನಾಗಿ) ತಳ್ಕಾಗಿ ವಿವಶಾ ಸತೀ = ಪರವಶೆಯಾದಳು. ||೧೫೧||

ಕಮಲಾನನಾ = ಕಮಲಮುಖಿಯುಹಂಥಾ (ಯಾಕನು)ತಳು ನಿಶ್ಚಲಾ = ನಿಶ್ಚೇಷ್ಟೆಯುಹಂಥಾಯಾಕಳಾಗಿ ಗತಪ್ರಾಣಾ— ಹೋಗಲುಪಟ್ಟ ಪ್ರಾಣವನುಳ್ಳಾಯುಕಳಾಗುತ್ತವೂ ಅತಿಷ್ಠತ = ಇದ್ದಳು. ಅವ್ಯಯಃ—ಕೇಡಿಲ್ಲದೇ ಇದ್ದಂಥಾ ಭವಃ— ಪರಮೇಶ್ವರನು ತಸ್ಯಾಃ = ಆಯಾಕಳ ಭಾವಂ = ಅಭಿಪ್ರಾಯವನು ಜ್ಞಾತ್ವಾ = ಅರಿದು ಪ್ರಸನ್ನಃ = ಪ್ರಸನ್ನನು ಅಭವತ್ = ಆದನು. ||೧೫೨||

ತತಃ— ಅಪ್ಪುರಮೇಲೆ ತಸ್ಮಿನ್ = ಆ ಪರಮೇಶ್ವರನು ಗತೇ ಸತಿ = ಬಿಜಯಂಗೆಯ್ಯುತ್ತಿರಲು ಸಾಧ್ವೀ = ಒಪ್ಪುತ್ತಿದ್ದಂಥಾ ವರಾಂಗನಾ = ಮುಖ್ಯಳಹಂಥಾ ವನಿತೆ. ದೇಹಂ — ಶರೀರವನು ತ್ಯಕ್ತ್ವಾ — ಬಿಟ್ಟು ಸರ್ವಕಾರಣಕಾರಣಂ = ಸಮಸ್ತ ಕಾರಣಕ್ಕೆ ಕಾರಣವಹಂಥಾ ಸರ್ವಜ್ಞಂ = ಸರ್ವಜ್ಞನಹಂಥಾ ಶರ್ವಂ—ಪರಮೇಶ್ವರನನು ವಿವೇಶ—ಪ್ರವೇಶಿಸಿದ(ಳಲಾ.)ಳು. ||೧೫೩||

ನಾರೀಷು ಸ್ತ್ರೀಯರುಗಳು, ಸ್ವಶಕ್ತಿಂ = ತಮ್ಮ ವಿಲಾಸದ ಸಾಮರ್ಥ್ಯವನು

---

* ಈ ಎರಡು ಶ್ಲೋಕಗಳು ಕುಳಕ

[1] ಸಂಭ್ರಾಂತಾ (ಘ) (ಕ) ದಲ್ಲಿ ಮಾತ್ರವಿದೆ ಈ ವಾಕ್ಯ.

[2] ಜ್ಞಾತ್ವಾ ತಸ್ಯಾಃ ಪರಂ ಭಾವಂ (ಘ)

ಸೇದಿವಾನಾಸನೇ ದಿವ್ಯೇ ಕುಬೇರಪ್ರಿಯಯಾಽಽವೃತೇ[1]
ಚಂದ್ರಮೌಳಿಂ ತದಾಽಽಸೀನಂ ಪರಿವಾರ್ಯ ಸುರೋತ್ತಮಾಃ ||೧೫೫||

ಅತೀವ ಹೃಷ್ಟಮನಸಃ ಸಂಸೇದುರ್ಧರಣೀತಲೇ
[2]ರಾಜರಾಜಸ್ತದಾ ಚೈನಂ[2] ಪೂಜಯಾಮಾಸ ಹೃಷ್ಟಧೀಃ ||೧೫೬||

ತದಾ ಕುಬೇರಮಹಿಷೀ ಹೇಮಕುಂಭೇನ ಸಾದರಾ
ಹೇಮಪದ್ಮಾವೃತಾಸ್ಯೇನ [3]ಆದಾಯೋದಕಮಾದರಾತ್[3] ||೧೫೭||

ಅಗಚ್ಛದ್ದೇವದೇವಸ್ಯ ಸಮೀಪಂ ವರವರ್ಣಿನೀ
ಕುಬೇರಃ ಕುಂಭಮಾದಾಯ ರತ್ನವೈಡೂರ್ಯಮಂಡಿತಮ್ ||೧೫೮||

---

ದರ್ಶಯಂತೀಷು ಸತೀಷು = ತೋರಿಸುತ್ತಿರಲು ಪರಮೇಶ್ವರಃ = ಜಗದೀಶ್ವರನು ಪರಮಂ — ಉನ್ನತವಹಂಥಾ ಶಶಿಪ್ರಭಂ = ಚಂದ್ರನೋಪಾದಿಯ ಕಾಂತಿಯನುಳ್ಳಂಥಾ ಕುಬೇರಸ್ಯ = ಕುಬೇರನ ಗೇಹಂ = ಅರಮನೆಯನು ವಿವೇಶ = ಪ್ರವೇಶಿಸಿದನು

ಕುಬೇರಪ್ರಿಯಯಾ — ಕುಬೇರನ ಸ್ತ್ರೀಯಿಂದ ಆವೃತೇ — ಇಕ್ಕಲುಪಟ್ಟಂಥಾ ದಿವ್ಯೇ ಆಸನೇ = ದಿವ್ಯ ಸಿಂಹಾಸನದಲ್ಲಿ ಸೇದಿವಾನ್ = ಕುಳ್ಳಿರ್ದನು. ತದಾ = ಆಗ ಆಸೀನಂ = ಕುಳ್ಳಿರ್ದಂಥಾ ಚಂದ್ರಮೌಳಿಂ = ಚಂದ್ರಚೂಡಾಮಣಿಯನು ಸುರೋತ್ತಮಾಃ = ಸುರಶ್ರೇಷ್ಠರುಗಳು ಪರಿವಾರ್ಯ = ಓಲೈಸಿ ಅತೀವಹೃಷ್ಟಮನಸಃ = ಅತ್ಯಂತ ಸಂತೋಷಿಸಲುಪಟ್ಟ ಚಿತ್ತವನುಳ್ಳವರುಗಳಾಗಿ ಧರಣೀತಲೇ = ಭೂಮಿಯಲ್ಲಿ ಸಂಸೇದುಃ = ಕುಳ್ಳಿರ್ದರು. ರಾಜರಾಜಃ = ಕುಬೇರನು ಹೃಷ್ಟಧೀಃ = ಪರಿಣಾಮಿಸಲುಪಟ್ಟ ಬುದ್ಧಿಯನುಳ್ಳಾತನಾಗಿ ತದಾ ಚ = ಆಗವೂ ಏವಂ = ಈ ಪ್ರಕಾರದಲ್ಲಿ ಪೂಜಯಾಮಾಸ = ಪೂಜಿಸಿದನು. ||೧೫೬||

ತದಾ = ಆಗ ಸಾದರಾ = ಆದರಣೆಯಿಂದ ಸಹಿತೆಯಹಂಥಾ ಕುಬೇರಮಹಿಷೀ = ಕುಬೇರನ ರಾಣಿವಾಸವು ಹೇಮಪದ್ಮಾವೃತಾಸ್ಯೇನ = ಸುವರ್ಣದಿಂದ ರಚಿಸಲ್ಪಟ್ಟ ಪದ್ಮದಿಂದ ಮುಸುಕಿದ ಮುಖವನುಳ್ಳಂಥಾ ಹೇಮಕುಂಭೇನ = ಸುವರ್ಣಕಲಶದಿಂದ ಆದರಾತ್ = ತಾತ್ಪರ್ಯದಿಂದ ಉದಕಂ = ಅಗ್ಘವಣಿಯನು ಆದಾಯ = ತುಂಬಿಕೊಂಡು, ||೧೫೭||

ವರವರ್ಣಿನೀ = ಅತ್ಯಂತ ಕೊಂಡಾಡಿಸಿಕೊಳಲುಪಟ್ಟ ಕುಬೇರನ ಸ್ತ್ರೀ ದೇವ-

---

[1] ಽರ್ಚಿತೇ (ಘ) [2] ರಾಜರಾಜಸ್ತಥಾ ಚೈವ (ಘ) ರಾಜರಾಜಸ್ತಥಾಚೈನಂ (ಗ)
[3] ಸಾಽಽದಾಯೋದಕಮಾದರಾತ್ (ಘ)

ಅತ್ಯಂತಭಕ್ತಿಮಾನ್ ದೇವೇ ತಜ್ಜಲೇನ ಮಹಾಮನಾಃ
ಪಾದೌ ಪ್ರಕ್ಷಾಲ್ಯ ದೇವಸ್ಯ ಪತಿತಂ ತೋಯಮಾದರಾತ್ ||೧೫೯||

ಪಾಣಿಭ್ಯಾಂ ಪರಿಸಂಗೃಹ್ಯ ವಿಸಸರ್ಜ ಸ್ವಮೂರ್ಧನಿ
ದೇವಾನಾಂ ಚಾಪಿ ಸರ್ವೇಷಾಂ ಮೂರ್ಧ್ನಿ ಚಾಪಿ ಸಸರ್ಜ ಸಃ ||೧೬೦||

ನಿಕ್ಷಿಪತ್ಯಂಬು ಭಾರ್ಯಾಯಾಃ ಚಿಕುರೇ ಭರ್ತರಿ ಪ್ರಿಯೇ
ತತಃ ಪದ್ಮವಿಶಾಲಾಕ್ಷೀ ಕುಪಿತಾ ಧನದಂ ಪ್ರತಿ ||೧೬೧||

ಋದ್ಧಿಃ ಪ್ರಗೃಹ್ಯ ಪಾದೌ ತು ಕರಾಭ್ಯಾಂ ಪುರುಶಾಸಿತುಃ
ಪ್ರಕ್ಷಾಲ್ಯ ಚ ಪುನರ್ವಾರಿ ವಿಸಸರ್ಜ ಸ್ವಮೂರ್ಧನಿ ||೧೬೨||

---

ದೇವಸ್ಯ = ಪರಮೇಶ್ವರನ ಸಮೀಪಂ = ಸಮೀಪವನು ಅಗಚ್ಛತ್ = ಎಯ್ದಿದಳು. ಕುಬೇರಃ = ಕುಬೇರನು ರತ್ನವೈಡೂರ್ಯಮಂಡಿತಂ = ರತ್ನ ವೈಡೂರ್ಯದಿಂದ ಕೆತ್ತಿಸಲುಪಟ್ಟಂಥಾ ಕುಂಭಂ = ಸುವರ್ಣದ ಕಲಶವನು ಆದಾಯ = ತೆಗೆದು ಕೊಂಡು, ||೧೫೮||

ಮಹಾಮನಾಃ = ವಿಶಾಲಬುದ್ಧಿಯನುಳ್ಳಂಥಾ ಕುಬೇರನು ದೇವೇ = ಶಿವನಲ್ಲಿ ಅತ್ಯಂತ ಭಕ್ತಿಮಾನ್ = ಅತಿಭಕ್ತಿಯನುಳ್ಳಾತನಾಗಿ ತಜ್ಜಲೇನ = ಆ ಜಲದಿಂದ ದೇವಸ್ಯ = ಪರಮೇಶ್ವರನ ಪಾದೌ = ಶ್ರೀಚರಣಂಗಳನು ಆದರಾತ್ — ಭಕ್ತಿಯ ದೆಸೆಯಿಂದ ಪ್ರಕ್ಷಾಳ್ಯ = ತೊಳೆದು ಪತಿತಂ = ಬಿದ್ದಂಥಾ ತೋಯಂ = ಪಾದ-ಜಲವನು, ||೧೫೯||

ಪಾಣಿಭ್ಯಾಂ = ಹಸ್ತಂಗಳಿಂದ ಪರಿಸಂಗೃಹ್ಯ = ತೆಗೆದುಕೊಂಡು ಸ್ವಮೂರ್ಧನಿ = ತನ್ನ ಶಿರಸ್ಸಿನಲ್ಲಿ ವಿಸಸರ್ಜ = ತಳಿದುಕೊಂಡನು' ಸಃ = ಆ ಕುಬೇರನು ಸರ್ವೇಷಾಂ ದೇವಾನಾಂ ಚಾಪಿ = ಸಮಸ್ತದೇವರ್ಕಳ ಮೂರ್ಧ್ನಿ ಚಾಪಿ = ಶಿರಸ್ಸಿನಲ್ಲಿಯೂ ಸಸರ್ಜ = ತಳಿದನು. ||೧೬೦||

ಅಂಬು = ಪಾದಾಂಬುವನು ಭಾರ್ಯಾಯಾಃ — ಸ್ತ್ರೀಯ ಚಿಕುರೇ = ಕುರುಳುಗೂದಲಲ್ಲಿ ಪ್ರಿಯೇ = ಪ್ರಿಯನಹಂಥಾ ಭರ್ತರಿ = ಗಂಡನಹಂಥಾ ಕುಬೇರನು ನಿಕ್ಷಿಪತಿ ಸತಿ = ತಳಿವುತ್ತಂ ಇರಲು ತತಃ = ಅಷ್ಟರ ಮೇಲೆ ಪದ್ಮ-ವಿಶಾಲಾಕ್ಷೀ = ತಾವರೆಯೋಪಾದಿ ವಿಶಾಲವಹ ನಯನಂಗಳನುಳ್ಳಂಥಾ ರಾಣಿವಾಸವು ಧನದಂ ಪ್ರತಿ = ಕುಬೇರನನು ಕುರಿತು ಕುಪಿತಾ = ಕೋಪಿಸಿದಳು. ||೧೬೧||

ಋದ್ಧಿಃ = ಐಶ್ವರ್ಯವನುಳ್ಳಂಥಾ ಕುಬೇರನ ಸ್ತ್ರೀ ಪುರಶಾಸಿತುಃ = ತ್ರಿಪುರವ

ಧನದಸ್ಯಾಪಿ ಚಿಕ್ಷೇಪ ಭಕ್ತ್ಯಾ ಪರಮಯಾ ಯುತಾ
ಪರಸ್ಪರಮಥೋಚುಃಶ್ಚ[1] ದೇವಾ ದೃಷ್ಟ್ವಾ ತಯಾ ಕೃತಮ್ ||೧೬೩||

ಅಹೋ ಭಕ್ತಪ್ರಿಯತ್ವಂ ಹಿ ದೇವಸ್ಯಾಸ್ಯೇತಿ ವಿಸ್ಮಿತಾಃ
ಅರ್ಘ್ಯಾದಿಕಂ ಪುನಸ್ತಸ್ಮೈ ಯಥಾಶಕ್ತಿ ಧನಾಧಿಪಃ ||
ದದೌ ಪರಮಹೃಷ್ಟಾತ್ಮಾ ಶಂಕರಾಯ ಮಹಾತ್ಮನೇ ||೧೬೪||

ಋದ್ಧಿಸ್ತು ಮಾಲಾಂ [3][ಸಂಗ್ರಥ್ಯ][3] ಧವಲಾಂ ಗಂಧಸಂಯುತಾಮ್
ಕಲ್ಪಪುಷ್ಪಚಿತಾಂ ದಿವ್ಯಾಂ ಕರಾಭ್ಯಾಂ ಪರಿಗೃಹ್ಯ ಸಾ ||
ಭವೋತ್ತಮಾಂಗೇ ವಿಮಲಾಮಾಬಬಂಧ ವರಾಂಗನಾ ||೧೬೫||

---

ಶಿಕ್ಷಿಸಿದಂಥಾ ಪರಮೇಶ್ವರನ ಪಾದೌ ತು = ಚರಣಂಗಳನು ಕರಾಭ್ಯಾಂ = ಹಸ್ತಂಗಳಿಂದ ಪ್ರಗೃಹ್ಯ = ಹಿಡಿದುಕೊಂಡು ಪುನಃ = ಮರಳಿ ಪ್ರಕ್ಷಾಲ್ಯ ಚ = ಪ್ರಕ್ಷಾಲಿಸಿಯೂ ವಾರಿ = ಪಾದೋದಕವನು ಸ್ವಮೂರ್ಧನಿ = ತನ್ನ ಶಿರಸ್ಸಿನಲ್ಲಿ ವಿಸಸರ್ಜ = ತಳಿದುಕೊಂಡಳು. ||೧೬೨||

ಪರಮಯಾ = ಉನ್ನತವಹಂಥಾ ಭಕ್ತ್ಯಾ = ಭಕ್ತಿಯಿಂದ ಯುತಾ = ಕೂಡಿದಾ(ಯುಕನಾಗಿ)ತಳಾಗಿ ಧನದಸ್ಯಾಪಿ = ಕುಬೇರಂಗೆಯೂ ಚಿಕ್ಷೇಪ = ತಳಿದಳು. ಅಥ = ಅನಂತರದಲ್ಲಿ ದೇವಾಃ = ದೇವರ್ಕಳು ತಯಾ = ಆಯುಕನಿಂದ (ಅವಳಿಂದ) ಕೃತಂ = ಮಾಡಲ್ಪಟ್ಟಂಥಾದನು ದೃಷ್ಟ್ವಾ = ಕಂಡು ಪರಸ್ಪರಂ ಚ = [2]ಒಬ್ಬರೊಬ್ಬರನು ಕುರಿತು ಊಚುಃ = ನುಡಿದರು. ||೧೬೩||

ಅಸ್ಯ ದೇವಸ್ಯ = ಈ ಪರಮೇಶ್ವರಂಗೆ ಭಕ್ತಪ್ರಿಯತ್ವಂ ಹಿ = ಭಕ್ತರುಗಳಲ್ಲಿ ಪ್ರಿಯವಹತನನೆಲಾ ಅಹೋ = ಅಶ್ಚರ್ಯವು, ಇತಿ = ಹೀಂಗೆಂದು ವಿಸ್ಮಿತಾಃ = ಬೆರಗಾದರು. ಧನಾಧಿಪಃ = ಕುಬೇರನು ಯಥಾಶಕ್ತಿ = ತನ್ನ ಸಾಮರ್ಥ್ಯವುಳ್ಳ ಹಾಂಗೆ ಪುನಃ = ಮರಳಿ ತಸ್ಮೈ = ಆ ಪರಮೇಶ್ವರಂಗೋಸ್ಕರ ಅರ್ಘ್ಯಾದಿಕಂ ಅರ್ಘ್ಯ ಮೊದಲಾದಂಥಾ ಸತ್ಕಾರಸನು ಪರಮಹೃಷ್ಟಾತ್ಮಾ = ಅತ್ಯಂತ ಸಂತೋಷಿಸಲುಪಟ್ಟ ಚಿತ್ತವನುಳ್ಳಾತನಾಗಿ ಮಹಾತ್ಮನೇ = ಮಹಾತ್ಮನಹಂಥಾ ಶಂಕರಾಯ = ಶಿವಂಗೋಸ್ಕರ ದದೌ = ಕೊಟ್ಟನು. ||೧೬೪||

ವರಾಂಗನಾ = ಉತ್ತಮ ಸ್ತ್ರೀಯುಹಂಥಾ ಸಾ ಋದ್ಧಿಸ್ತು = ಆ ಋದ್ಧಿಯೆಂಬ ಹೆಸರನುಳ್ಳಂಥಾ ಕುಬೇರನ ಸ್ತ್ರೀ ಗಂಧಸಂಯುತಾಂ = ಪರಿಮಳದೊಡನೆ ಕೂಡಿ-

---

[1] ಸ್ತೇ (ಘ) [2] ಒಬ್ಬೊ (ಖ)

[3] ಸಂಗೃಶ್ಯ = ಮಾಡಿ (ಎಲ್ಲಾ ಪ್ರತಿಗಳಲ್ಲಿಯೂ ಇದೆ) [ಸಂಗ್ರಥ್ಯ-ಮಾಡಿ, ಶಚಿಸಿ]

ತತಶ್ಚಂದ್ರಮುಖೀ ದೇವೀ ದೃಷ್ಟ್ವಾ ದೇವಸ್ಯ ಶೂಲಿನಃ
ಉತ್ತಮಾಂಗಂ ವರಾರೋಹಾ ಕಲ್ಯಾಣಮಿತಿ ಚಾಬ್ರವೀತ್ ||೧೬೬||

ಪುನಶ್ಚಾಹ ಮಹಾದೇವಂ ನಮ್ರಯುಕ್ತಂ ವಚಸ್ತದಾ
ನ ಶಕ್ನೋಮಿ [1]ತಥಾ[1] ದೇವ ಕರ್ತುಂ ಚಂದ್ರವಿಭೂಷಣ ||೧೬೭||

ತವ ಪ್ರಿಯಾ ಯಥಾ ದೇವಿ ಕರೋತಿ ಕಮಲೇಕ್ಷಣಾ
ಯಥಾಶಕ್ತಿ ಕರೋಮ್ಯದ್ಯ ತುಷ್ಟೋ ಭವ ಮಹೇಶ್ವರ ||೧೬೮||

ಏವಮುಕ್ತಸ್ತಯಾ ಶರ್ವ ಇದಂ ವಚನಮಬ್ರವೀತ್
ಯದ್ಯತ್ಕೃತಂ ತ್ವಯಾ ದೇವಿ ತತ್ತದೇವ ಹಿತಂ ಮಮ ||೧೬೯||

---

ದಂಥಾ ಕಲ್ಪಪುಷ್ಪಚಿತಾಂ = ಕಲ್ಪವೃಕ್ಷದ ಹೂಗಳಿಂದ ಪೋಣಿಸಲುಪಟ್ಟಂಥಾ ಧವಲಾಂ = ಬಿಳಿದಹಂಥಾ ವಿಮಲಾಂ = ನಿರ್ಮಲವಹಂಥಾ ದಿವ್ಯಾಂ = ಮಾಲಾಂ = ದಿವ್ಯಮಾಲೆಯನು [ಸಂಗ್ರಥ್ಯ] = ಮಾಡಿ ಕರಾಭ್ಯಾಂ = ಹಸ್ತಂಗಳಿಂದ ಪರಿಗೃಹ್ಯ = ತೆಗೆದುಕೊಂಡು ಭರ್ಗೋತ್ತಮಾಂಗೇ — ಶಿವನ ಮಸ್ತಕದಲ್ಲಿ ಆಬಬಂಧ = ಸುತ್ತಿದಳು. ||೧೬೫||

ತತಃ = ಅಷ್ಟರಮೇಲೆ ಚಂದ್ರಮುಖೀ = ಚಂದ್ರವದನೆಯುಹಂಥಾ ವರಾರೋಹಾ — ರಾಣಿವಾಸವಹಂಥಾ ದೇವೀ = ಕುಬೇರನ ಸ್ತ್ರೀ ದೇವಸ್ಯ = ದೇವನಹಂಥಾ ಶೂಲಿನಃ = ಪರಮೇಶ್ವರನ ಉತ್ತಮಾಂಗಂ = ಜಟಾಮಕುಟವನು ದೃಷ್ಟ್ವಾ = ಕಂಡು ಕಲ್ಯಾಣಮಿತಿ ಚ = ಮಂಗಳವಾಯಿತ್ತು ಎಂದೀಪ್ರಕಾರದಲ್ಲಿ ಅಬ್ರವೀತ್ = ನುಡಿದಳು. ||೧೬೬||

ಮಹಾದೇವಂ = ಶಿವನನು ಕುರಿತು ಪುನಶ್ಚ = ಮರಳಿ ನಮ್ರಯುಕ್ತಂ = ನಮಸ್ಕಾರದೊಡನೆ ಕೂಡಿದಂಥಾ ವಚಃ = ವಾಕ್ಯವನು ತದಾ = ಆಗ ಆಹ = ನುಡಿದಳು. ಭೋ ಚಂದ್ರವಿಭೂಷಣ = ಎಲೆ ಚಂದ್ರವಿಭೂಷಣನಹಂಥಾ ದೇವ = ಶಿವನೇ ! ತವ = ನಿನಗೆ ಪ್ರಿಯಾ = ಪ್ರಿಯಳಹಂಥಾ ಪಾರ್ವತೀದೇವಿಯು ಯಥಾ = ಹೇಂಗೆ ಕರೋತಿ = ಅರ್ಚನೆಯ ಮಾಡುತ್ತಿಹಳು, ತಥಾ = ಹಾಂಗೆ ಕರ್ತುಂ = ಅರ್ಚನೆಯ ಮಾಡಲು ನ ಶಕ್ನೋಮಿ — ಸಮರ್ಥೆಯಾಗುತ್ತಿರೆನು. ಭೋ ಮಹೇಶ್ವರ — ಎಲೆ ಮಹೇಶ್ವರನೇ ! ಅದ್ಯ — ಇಂದು ಯಥಾಶಕ್ತಿಯಾಗಿ ಕರೋಮಿ — ಅರ್ಚನೆಯ ಮಾಡುವೆನು. ತುಷ್ಟಃ — ಸಂತುಷ್ಟನು ಭವ — ಆಗು.||

ಏವಂ — ಈ ಪ್ರಕಾರದಲ್ಲಿ ತಯಾ — ಆ ಕುಬೇರನ ಸ್ತ್ರೀಯಿಂದ ಉಕ್ತಃ —

---

[1] ಸ್ತುತಿಂ (ಘ)

ಅತೀವ ಭವತಿ ಪ್ರೇಮ ತ್ವಯಿ ಚಂದ್ರನಿಭಾನನೇ
ಏವಮುಕ್ತಾ ಮಹೇಶೇನ ಧನಾಧ್ಯಕ್ಷಪ್ರಿಯಾ ಸತೀ ||೧೭೦||

ಅತೀವ ಹೃಷ್ಟಾ ವಿಪ್ರೇಂದ್ರಾ ನನರ್ತ ಚ ವರಾನನಾ
ಅಬ್ರವೀತ್ ಲೋಕನಾಥಂ ತಂ ಸತ್ಯಮುಕ್ತಂ ತ್ವಯೇತಿ ಸಾ ||೧೭೧||

ಬ್ರಹ್ಮಾಪಿ ಭಗವನ್ನೀಶ ತ್ವಾಂ ಪೂಜಯಿತುಮಕ್ಷಮಃ
ವಿಷ್ಣುಶ್ಚ ಭಗವನ್ನೀಶ [1]ವಲ್ಲಭಾಽಪಿ[1] ತಥಾ ವಿಭೋ ! ||೧೭೨||

---

ಉಕ್ತಃ— ನುಡಿಯಲುಪಟ್ಟಂಥಾ ಶರ್ವಃ — ಪರಮೇಶ್ವರನು ಇದಂ ವಚನಂ — ಈ ವಾಕ್ಯವನು ಅಬ್ರವೀತ್ — ನುಡಿದನು. ಭೋದೇವಿ—ಎಲೈ ಋದ್ಧಿದೇವಿ ! ತ್ವಯಾ—ನಿನ್ನಿಂದ ಯತ್ ಯತ್—ಅವುದಾವುದು ಕೃತಂ—ಮಾಡಲುಪಟ್ಟಿತ್ತು ತತ್ತದೇವ—ಅದು ಅದು ಮಮ—ಎನಗೆ ಹಿತಂ—ಹಿತವು. ||೧೬೯||

ಭೋ ಚಂದ್ರನಿಭಾನನೇ !—ಎಲೆ ಚಂದ್ರಂಗೆ ಸಮಾನವಹಂಥಾ ಮುಖವನುಳ್ಳ(ಯಕನೇ)ಕೆಯೇ ತ್ವಯಿ—ನಿನ್ನಲ್ಲಿ ಅತೀವ—ಅತ್ಯಂತವಹಂಥಾ ಪ್ರೇಮ ಸ್ನೇಹವು ಭವತಿ — ಆಗುತ್ತಿಹುದು. ಏವಂ = ಈ ಪ್ರಕಾರದಲ್ಲಿ ಮಹೇಶೇನ— ಶಿವನಿಂದ ಉಕ್ತಾ — ನುಡಿಯಲುಪಟ್ಟಂಥಾ ಧನಾಧ್ಯಕ್ಷಪ್ರಿಯಾ — ಕುಬೇರನ ಪ್ರಿಯಳಹಂಥಾ ಸತೀ—ಪ್ರತಿವ್ರತೆಯಹಂಥಾ ವರಾನನಾ—ಒಪ್ಪುತ್ತಂವಿದ್ದ ಮುಖ ವನುಳ್ಳ ಋದ್ಧಿದೇವಿ[ಯು] ಅತೀವ ಹೃಷ್ಟಾ—ಅತಿ ಸಂತೋಷಿಸಿದಾ(ಯಕನಾಗಿ) ತಳಾಗಿ. ಭೋವಿಪ್ರೇಂದ್ರಾಃ !—ಎಲೆ ಋಷಿಗಳಿರಾ ! ನನರ್ತ—ನೃತ್ಯವನಾಡಿದಳು. ಸಾ—ಆ ಋದ್ಧಿದೇವಿ, ಲೋಕನಾಥಂ—ಲೋಕಂಗಳಿಗೆ ಒಡೆಯನಹಂಥಾ ತಂ— ಆ ಪರಮೇಶ್ವರನನು ಕುರಿತು ತ್ವಯಾ — ನಿನ್ನಿಂದ ಸತ್ಯಂ — ಸತ್ಯವಾಕ್ಯವು ಉಕ್ತಂ—ನುಡಿಯಲುಪಟ್ಟಿತ್ತು. ಇತಿ—ಹೀಗೆಂದು ಅಬ್ರವೀತ್—ನುಡಿದಳು.

ಭಗರ್ವ—ಷಡ್ಗುಣೈಶ್ವರ್ಯಸಂಪನ್ನನಹಂಥಾ ಈಶ — ಎಲೆ ಪರಮೇಶ್ವರನೇ ಬ್ರಹ್ಮಾಽಪಿ — ಬ್ರಹ್ಮನಾಯಿತ್ತಾದರೂ ತ್ವಾಂ — ನಿನ್ನನು ಪೂಜಯಿತುಂ — ಪೂಜಿಸಲು ಅಕ್ಷಮಃ—ಸಮರ್ಥನಲ್ಲ. ವಿಷ್ಣುಶ್ಚ—ಪುರುಷೋತ್ತಮನು ಪೂಜಯಿತುಂ — ಪೂಜಿಸಲು ಅಕ್ಷಮಃ — ಸಮರ್ಥನಲ್ಲ. ಭಗವನ್ — ಭಗವಾನ್ನುವಹಂಥಾ ವಿಭೋ—ಒಡೆಯನಹಂಥಾ ಈಶ—ಎಲೈ ಶಿವನೆ ತಥಾ — ಹಾಂಗೆ ವಲ್ಲಭಾಽಪಿ—ಪ್ರಿಯಳಹಂಥಾ ಪಾರ್ವತಿದೇವಿಯೂ ನಿನ್ನ ಪೂಜಿಸಲು ಸಮರ್ಥೆಯಲ್ಲ.

---

1 ವಲ್ಲಭೋಽಪಿ (ಘ)

ತಥಾಽಪಿ ಮಂದಭಾಗ್ಯಾಯಾ ಮಮ ಪೂಜಾಂ ಮಹೇಶ್ವರ
ಪ್ರೇಮ್ಣಾ ಹರಸಿ ವಿಶ್ವೇಶ ಸರ್ವಜ್ಞ ಕರುಣಾನಿಧೇ ! ||೧೭೬||

ಇತ್ಯುಕ್ತ್ವಾ ವಿರರಾಮಾಥ ವಿಸ್ಮಯಾವಿಷ್ಟ[1]ಚೇತನಾ।
ಅಪೃಚ್ಛತ್ತಾಂ ಕುಬೇರಂ ಚ ನಿರ್ಜಗಾಮ ಜಗತ್ಪತಿಃ ||೧೭೪||

ಸೇವ್ಯಮಾನೋಽಪ್ಸರೋಭಿಶ್ಚ ಲೋಕಪಾಲೈಸ್ಸಮಾವೃತಃ
ರಕ್ತಭಿಕ್ಷಾಚ್ಛಲೇನೈವ ಮಾದ್ಯತಾಂ ಗರ್ವಮಾಹರನ್ ||
ವಿಸೃಜ್ಯ ಸರ್ವಾನಮರಾನ್ ಕ್ಷಣಾದಂತರಧೀಯತ ||೧೭೫||

ಸೂತ ಉವಾಚ—

---

ತಥಾಽಪಿ — ಹಾಂಗಾಯಿತ್ತಾದರೂ ಮಂದಭಾಗ್ಯಾಯಾಃ — ಅಲ್ಪಭಾಗ್ಯವನುಳ್ಳಂಥಾ ಮಮ—ಎನ್ನ ಪೂಜಾಂ—ಪೂಜೆಯನು ಸರ್ವಜ್ಞ—ಸರ್ವಜ್ಞನಹಂಥಾ ಕರುಣಾನಿಧೆ — ಕರುಣಕ್ಕೆ ಸ್ಥಾನವಹಂಥಾ ವಿಶ್ವೇಶ — ಸಮಸ್ತ ಲೋಕಂಗಳಿಗೆ ಒಡೆಯನಹಂಥಾ ಭೋಃ ಮಹೇಶ್ವರ—ಎಲೆ ಶಿವನೆ ಪ್ರೇಮ್ಣಾ—ಪ್ರೇಮದಿಂದ ಹರಸಿ —ಕೈಕೊಳುತ್ತಿದ್ದೆ. ಹೃಞ್—ಹರಣೆ ಎಂಬ ಧಾತು. ಉಚಿತಾರ್ಥವ ನುಡಿವುದು.

ಇತ್ಯುಕ್ತ್ವಾ—ಹೀಗೆಂದು ನುಡಿದು ವಿಸ್ಮಯಾವಿಷ್ಟಚೇತನಾ—ಆಶ್ಚರ್ಯದಿಂದ ಪ್ರವೇಶಿಸಲುಪಟ್ಟ ಚಿತ್ತವನುಳ್ಳಾ(ಯಕನಾಗಿ)ತಳಾಗಿ ವಿರರಾಮ—ಸುಮ್ಮನಿರ್ದಳು. ಅಥ—ಅನಂತರದಲ್ಲಿ ಜಗತ್ಪತಿಃ—ಲೋಕಂಗಳಿಗೆ ಒಡೆಯನಹಂಥಾ ಶಿವನು ತಾಂ—ಆಯಕನನು[ಆಕೆಯನು] ಕುಬೇರಂ ಚ — ಕುಬೇರನನೂ ಅಪೃಚ್ಛತ್ — ಬೆಸಗೊಂಡನು ಮತ್ತು ನಿರ್ಜಗಾಮ—ಹೊರವಂಟನು.

ಅಪ್ಸರೋಭಿಶ್ಚ — ಅಪ್ಸರರುಗಳಿಂದವು ಸೇವ್ಯಮಾನಃ — ಓಲೈಸಿಕೊಳುತ್ತಿದ್ದಂಥಾ ಲೋಕಪಾಲೈಃ—ಲೋಕಪಾಲಕರುಗಳಿಂದ ಸಮಾವೃತಃ—ಮುಸುಕಲುಪಟ್ಟಾತನಾಗಿ ರಕ್ತಭಿಕ್ಷಾಚ್ಛಲೇನೈವ=ರಕ್ತಭಿಕ್ಷೆಯ ನೆವದಿಂದವೇ ಮಾದ್ಯತಾಂ=ಮದವನುಳ್ಳವರುಗಳ ಗರ್ವಂ = ಗರ್ವವನು ಆಹರನ್ = ತಗ್ಗಿಸುತ್ತವು ಸರ್ವಾನಮರಾನ್ — ಸಮಸ್ತದೇವರ್ಕಳನು ವಿಸೃಜ್ಯ = ಕಳುಹಿ ಕ್ಷಣಾತ್ = ಕ್ಷಣಮಾತ್ರದ ದೆಸೆಯಿಂದವೇ ಅಂತರಧೀಯತ=ಅದೃಶ್ಯವಾದನು. ||೧೭೫||

ಸೂತ ಉವಾಚ—ಸೂತ ಋಷಿಯು ನುಡಿದನು-

---

[1] ಚೇತನಾ (ಛ)

[1] ಏತದ್ವಸ್ಸರ್ವಮಾಖ್ಯಾತಂ[1] ಭಿಕ್ಷಾಚರಣಮುತ್ತಮಮ್
ಏತತ್ಪಠನ್ ದ್ವಿಜಾ ಲೋಕೇ ಶೃಣುಯಾದ್ವಾಽಪಿ ಮಾನವಃ ||
[2] ಗಾಣಪತ್ಯ[2]ಮವಾಪ್ನೋತಿ ನರೋ ನಾಸ್ತ್ಯತ್ರ ಸಂಶಯಃ ||೧೬೬||

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ-
ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ-
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ
ಶಿವಾಧಿಕ್ಯಕಥನೇ 'ಭಿಕ್ಷಾಟನಲೀಲಾ ನಾಮ'
ಚತುರ್ದಶೋಽಧ್ಯಾಯಃ

---

ಭೋ ದ್ವಿಜಾಃ = ಎಲೆ ನೈಮಿಶಾರಣ್ಯವಾಸಿಗಳಹಂಥಾ ಬ್ರಹ್ಮಋಷಿಗಳಿರಾ ವಃ = ನಿಮಗೆ ಉತ್ತಮಂ = ಉತ್ತಮವಹಂಥಾ ಏತತ್ = ಈ, ಭಿಕ್ಷಾಚರಣಂ = ಭಿಕ್ಷಾಟನವೂ ಸರ್ವಂ = ಎಲ್ಲವೂ ಆಖ್ಯಾತಂ = ಹೇಳಲುಪಟ್ಟಿತ್ತು. ಲೋಕೇ = ಲೋಕದಲ್ಲಿ ಮಾನವಃ = ಮನುಷ್ಯನು ಏತತ್ = ಈ ಅಧ್ಯಾಯವನು ಪಠನ್ = ಪಠಿಸುವನೋ ವಾ = ಅಲ್ಲಾ ಶೃಣುಯಾದ್ವಾ = ಕೇಳುವನೋ ಸಃ ನರಃ = ಆ ಮನುಷ್ಯನು ಗಾಣಪತ್ಯಂ = ಗಣೇಶ್ವರತ್ವವನು ಅವಾಪ್ನೋತಿ = ಎಯ್ದುವನು. ಅತ್ರ = ಈ ಹೇಳಿದ ಅರ್ಥದಲ್ಲಿ ಸಂಶಯಃ = ಸಂದೇಹವು ನಾಸ್ತಿ = ಇಲ್ಲ. ||೧೬೬||

---

[1] ಏತತ್ಸರ್ವಂ ಸಮಾಖ್ಯಾತಂ (ಗ) ಮಾತ್ರ.
[2] ಗಾಣಾಪತ್ಯ (ಖ.ಗ)
[3] ಪಠಿಸುವಾತನು (ಕ) ಪಠಿಸುವನು (ಖ).

# ಪಂಚದಶೋಽಧ್ಯಾಯಃ
## ( ಪರಮೇಶ್ವರದತ್ತದಕ್ಷಶಾಪಕ್ರಮಃ )

ಶೈವೇ ವಾಯುವೀಯಸಂಹಿತಾಯಾಂ

ಋಷಯ ಊಚುಃ

ದೇವೀ ದಕ್ಷಸ್ಯ ದುಹಿತಾ ತ್ಯಕ್ತ್ವಾ ದಾಕ್ಷಾಯಣೀಂ ತನುಮ್
ಕಥಂ ಹಿಮವತಃ ಪುತ್ರೀ ಮೇನಾಯಾಮಭವತ್ಪುರಾ ||೧||

ಕಥಂ ಚ ನಿಂದಿತೋ ರುದ್ರೋ ದಕ್ಷೇಣ ಚ ದುರಾತ್ಮನಾ
ನಿಮಿತ್ತಮಪಿ ಕಿಂ ತತ್ರ ಯೇನ ಸ್ಯಾನ್ನಿಂದಿತೋ ಭವಃ ||೨||

---

ಶೈವೇ ವಾಯುವೀಯಸಂಹಿತಾಯಾಂ = ಶೈವಪುರಾಣದಲ್ಲಿ ವಾಯುವೀಯಸಂಹಿತೆಯಲ್ಲಿ ಹೇಳುತ್ತಿದ್ದುದು.

ಋಷಯ ಊಚುಃ = ನೈಮಿಶಾರಣ್ಯವಾಸಿಗಳಹಂಥಾ ಋಷಿಗಳು ಕೇ(ಹೇ)ಳುತ್ತಿದ್ದಾರು.

ಪುರಾ = ಪೂರ್ವದಲ್ಲಿ ದಕ್ಷಸ್ಯ = ದಕ್ಷನ ದುಹಿತಾ = ಕುಮಾರಿಯಹಂಥಾ ದೇವೀ = ಪರಮೇಶ್ವರನ ರಾಣಿವಾಸನಹಂಥಾ ಸತೀದೇವಿ ದಾಕ್ಷಾಯಣೀಂ = ದಕ್ಷನ ಸಂಬಂಧವಹಂಥಾ ತನುಂ = ಶರೀರವನು ತ್ಯಕ್ತ್ವಾ = ಬಿಟ್ಟು =ಮೇನಾಯಾಂ = ಮೇನಕಾದೇವಿಯಲ್ಲಿ ಹಿಮವತಃ = ಹಿಮವತ್ಪರ್ವತಂಗೆ ಕಥಂ = ಹೇಂಗೆ ಪುತ್ರೀ = ಮಗಳು ಅಭವತ್ = ಆದಳು. ||೧||

ರುದ್ರಃ = ಪರಮೇಶ್ವರನು ದುರಾತ್ಮನಾ = ದುರ್ಬುದ್ಧಿಯನುಳ್ಳಂಥಾ ದಕ್ಷೇಣ ಚ = ದಕ್ಷನಿಂದವೂ ಕಥಂ ಚ = ಹೇಂಗೆ ನಿಂದಿತಃ = ನಿಂದಿಸಿಕೊಳಲುಪಟ್ಟನು. ತತ್ರ = ಆ ನಿಂದಿಸುವಲ್ಲಿ ನಿಮಿತ್ತಮಪಿ = ಕಾರಣವು ಕಿಂ = ಆವುದು ? ಯೇನ = ಆವುದಾನೊಂದು ಕಾರಣದಿಂದ ಭವಃ = ಪರಮೇಶ್ವರನು ನಿಂದಿತಃ = ನಿಂದಿಸಿಕೊಳಲುಪಟ್ಟಾತನು ಸ್ಯಾತ್ = ಆದನು. ||೨||

[1]ಉತ್ಪನ್ನಶ್ಚ[1] ಕಥಂ ದಕ್ಷೋ ಹ್ಯಭಿಶಾಪಾದ್ಭವಸ್ಯ ತು
ಚಾಕ್ಷುಷಸ್ಯಾಂತರೇ ಪೂರ್ವಂ [2]ತನ್ನಃ[2] ಪ್ರಬ್ರೂಹಿ ಮಾರುತ ||೩||

ವಾಯುರುವಾಚ—

ಶೃಣ್ವಂತು ಕಥಯಿಷ್ಯಾಮಿ ದಕ್ಷಸ್ಯ ಲಘುಚೇತಸಃ
ವೃತ್ತಂ ಪಾಪಾತ್ಪ್ರಮಾದಾಚ್ಚ ವಿಶ್ವಾಮರವಿದೂಷಕಮ್[3] ||೪||

ಪುರಾ ಸುರಾಸುರಾಸ್ಸರ್ವೇ ಸಿದ್ಧಾಶ್ಚ ಪರಮರ್ಷಯಃ
ಕದಾಚಿದ್ದ್ರಷ್ಟುಮೀಶಾನಂ ಹಿಮವಚ್ಛಿಖರಂ ಯಯುಃ ||೫||

ತದಾ ದೇವಶ್ಚ ದೇವೀ ಚ ದಿವ್ಯಾಸನಗತಾವುಭೌ
ದರ್ಶನಂ ದದತುಸ್ತೇಷಾಂ ದೇವಾದೀನಾಂ ದ್ವಿಜೋತ್ತಮಾಃ ||೬||

ದಕ್ಷಃ = ದಕ್ಷನು ಪೂರ್ವಂ = ಪೂರ್ವದಲ್ಲಿ ಭವಸ್ಯ = ಪರಮೇಶ್ವರನ ಅಭಿಶಾಪಾತ್ = ಶಾಪದ ದೆಸೆಯಿಂದ ಚಾಕ್ಷುಷಸ್ಯ = ಚಾಕ್ಷುಷಮನುವಿನ ಅಂತರೇ = ತರುವಾಯದಲ್ಲಿ ಕಥಂ ಚ = ಹೇಂಗೆ ಉತ್ಪನ್ನಃ = ಹುಟ್ಟಿದನು. ಭೋಃ ಮಾರುತ ! = ಎಲೈ ವಾಯುವೇ ! ಹಿ = ಆವುದಾನೊಂದು ಕಾರಣವಾಗಿ ನಃ = ನಮಗೆ ತತ್ = ಆ ಕಥಾವೃತ್ತಾಂತವನು ತು = ವಿಶೇಷವಾಗಿ ಪ್ರಬ್ರೂಹಿ = ಹೇಳು. ||೩||

ವಾಯುರುವಾಚ—ವಾಯು ಹೇಳುತ್ತಿದ್ದಾನು.

ಲಘುಚೇತಸಃ—ಅಲ್ಪಮನಸ್ಸನುಳ್ಳಂಥಾ ದಕ್ಷಸ್ಯ — ದಕ್ಷನ ವೃತ್ತಂ — ವರ್ತನೆ, ಪಾಪಾತ್—ಪಾಪದ ದೆಸೆಯಿಂದವೂ ಪ್ರಮಾದಾಚ್ಚ — ಮರವೆಯ ದೆಸೆಯಿಂದವೂ ವಿಶ್ವಾಮರವಿದೂಷಕಂ — ಸಮಸ್ತ ದೇವರ್ಕಳಿಂದ ಜರಿಸಿಕೊಳಲು ಪಟ್ಟಂಥಾದು. ಶೃಣ್ವಂತು—ಕೇಳಲುಪಡಲಿ. ಕಥಯಿಷ್ಯಾಮಿ—ಹೇಳಿಹೆನು. ||೪||

ಪುರಾ — ಪೂರ್ವದಲ್ಲಿ ಸರ್ವೇ — ಸಮಸ್ತರಹಂಥಾ ಸುರಾಽಸುರಾಃ— ದೇವರ್ಕಳೂ ರಾಕ್ಷಸರುಗಳೂ ಸಿದ್ಧಾಶ್ಚ — ಸಿದ್ಧರುಗಳು ಪರಮರ್ಷಯಃ — ಶ್ರೇಷ್ಠರಹಂಥಾ ಋಷಿಗಳು ಕದಾಚಿತ್—ಒಂದಾನೊಂದು ವೇಳೆಯಲ್ಲಿ ಈಶಾನಂ —ಪರಮೇಶ್ವರನನು ದ್ರಷ್ಟುಂ—ದರ್ಶನ ಮಾಡಲೋಸ್ಕರ ಹಿಮವಚ್ಛಿಖರಂ — ಹಿಮವತ್ಪರ್ವತದ ಶಿಖರವನು ಯಯುಃ—ಎಯ್ದಿದರು. ||೫||

ತದಾ—ಆಗ ದೇವಶ್ಚ—ಪರಮೇಶ್ವರನೂ ದೇವೀ ಚ — ಸತೀದೇವಿಯೂ

[1] ಉತ್ಪನ್ನಃ ಸಃ (ಘ) [2] ಮನೋಃ (ಘ)
[3] ವಿದೂಷಣಂ (ಘ) ಪಾಠಾಂತರ. ವಿಭೂಷಣ (ಗ).

ತದಾನೀಮೇವ ದಕ್ಷೋಽಪಿ ಗತಸ್ತತ್ರ ಸಹಾಮರೈಃ
ಜಾಮಾ[1]ತರಂ[1] ಹರಂ ದ್ರಷ್ಟುಂ ದ್ರಷ್ಟುಂ ಚಾತ್ಮಸುತಾಂ ಸತೀಮ್ ||

ತದಾತ್ಮಗೌರವಾ[2]ದ್ದೇವದೇವ್ಯೋರ್ದಕ್ಷೇ[2] ಸಮಾಗತೇ
ದೇವಾದಿಭ್ಯೋ ವಿಶೇಷೇಣ ನ [3]ಕದಾಚಿದಭೂತ್ ಸ್ಮೃತಿಃ[3] ||೮||

ತಸ್ಯ ತಸ್ಯಾಃ ಪರಂ [4]ಭಾವಮಜಾನಾನಸ್ಯ[4] ಕೇವಲಮ್
ಪುತ್ರೀತ್ಯೇವಂ ವಿಮೂಢಸ್ಯ ತಸ್ಯಾಂ ವೈರಮಜಾಯತ ||೯||

---

ಉಭೌ—ಇಬ್ಬರು ದಿವ್ಯಾಸನಗತೌ—ಒಪ್ಪುತ್ತಂವಿದ್ದ ಸಿಂಹಾಸನದಲ್ಲಿ ಕುಳ್ಳಿರ್ದರು. ಭೋಃ ದ್ವಿಜೋತ್ತಮಾಃ = ಎಲೆ ಬ್ರಾಹ್ಮಣೋತ್ತಮರುಗಳಿರಾ ದೇವಾದೀನಾಂ= ದೇವರ್ಕಳೇ ಮೊದಲಾದಂಥಾ ತೇಷಾಂ—ಅವರುಗಳಿಗೆ ದರ್ಶನಂ— ದರ್ಶನವನು ದದತುಃ—ಕೊಟ್ಟರು. ದರುಶನವೆಂದರೆ ಕಾಣಿಸಿಕೊಂಡರೆಂದರ್ಥ. ||೬||

ತದಾನೀಮೇವ— ಆಗವೇ ದಕ್ಷೋಽಪಿ — ದಕ್ಷನೂ ಜಾಮಾ[2]ತರಂ[1] — ಅಳಿಯನಹಂಥಾ ಹರಂ=ಶಿವನನು ದ್ರಷ್ಟುಂ— ನೋಡಲು, ಆತ್ಮಸುತಾಂ— ತನ್ನ ಮಗಳಹಂಥಾ ಸತೀಂ ಚ—ಸತೀದೇವಿಯನೂ ದ್ರಷ್ಟುಂ=ನೋಡಲು ಅಮರೈಃ ಸಹ—ದೇವರ್ಕಳುಗಳೊಡನೆ ತತ್ರ=ಅಲ್ಲಿ ಗತಃ—ಎಯ್ದಿದನು. ||೭||

ತದಾ—ಆಗ ದಕ್ಷೇ=ದಕ್ಷನು ಸಮಾಗತೇ ಸತಿ—ಬರುತ್ತಿರಲು ದೇವದೇವ್ಯೋಃ —ಪರಮೇಶ್ವರ ಸತೀದೇವಿ ಇಬ್ಬರಿಗೆ ಆತ್ಮಗೌರವಾತ್ — ತಮ್ಮ ಗುರುತ್ವದ ದೆಸೆ ಯಿಂದ ದೇವಾದಿಭ್ಯಃ — ದೇವತೆಗಳು ಮೊದಲಾದಂಥಾವರುಗಳಿಗೋಸ್ಕರವು ವಿಶೇಷಣ—ವಿಶೇಷದಿಂದ ಸ್ಮೃತಿಃ— ನೆನಹು ಕದಾಚಿತ್ — ಒಮ್ಮೆಯಾದರೂ ನಾಭವತ್—ಆದದ್ದಿಲ್ಲ. ದಕ್ಷ ಮೊದಲಾಗಿ ಸಕಲದೇವರ್ಕಳನು ಲೆಕ್ಕಿಸಲಿಲ್ಲವೆಂಬುದರ್ಥ

ಕೇವಲಂ—ಬರಿಯ ಪುತ್ರೀತಿ — ಮಗಳೆಂದೀ ಪ್ರಕಾರದಲ್ಲಿ ತಸ್ಯಾಃ — ಆ ಪರಮೇಶ್ವರಿಯಹಂಥಾ ದೇವಿಯ ಪರಂ ಭಾವಂ — ಉತ್ಕೃಷ್ಟ (ಉನ್ನತ)ವಹಂಥಾ ಭಾವನನು ಅಜಾನಾನಸ್ಯ—ಅರಿಯದೇ ಇದ್ದಂಥಾ ವಿಮೂಢಸ್ಯ—ಅತಿಮೂರ್ಖ ನಹಂಥಾ ತಸ್ಯ = ಆ ದಕ್ಷಂಗೆ ಏವಂ — ಈ ಪ್ರಕಾರದಲ್ಲಿ ತಸ್ಯಾಂ — ಆ ಪರಮೇಶ್ವರಿಯಲ್ಲಿ ವೈರಂ—ವೈರವು ಅಜಾಯತ—ಹುಟ್ಟಿತ್ತು. ||೯||

---

[1] ತಾ (ಕ.ಗ.ಘ) [2] ದೇವದೇವ್ಯಾರ್ದಕ್ಷೆ (ಘ)

[3] ಕಾಚಿದಭವತ್ಸ್ಮೃತಿಃ (ಘ)

[4] ಭಾವಮಜ್ಞಾತುಶ್ಚಾಪಿ (ಘ)

ತತಸ್ತೇನೈವ ವೈರೇಣ ವಿಧಿನಾ ಚ ಪ್ರಚೋದಿತಃ
ನಾಜುಹಾವ ಭವಂ ದಕ್ಷೋ [1]ದೀಕ್ಷಿತಸ್ತಮಭಿದ್ವಿಷನ್[1] ॥೧೦॥

ಸರ್ವಾನನ್ಯಾಂಶ್ಚ ಜಾಮಾತೄನಾಹೂಯ ಸ ಯಥಾಕ್ರಮಮ್
ಶತಶಃ ಪುಷ್ಕಲಾಮರ್ಚಾಂ ಚಕಾರ ಚ ಪೃಥಕ್ಪೃಥಕ್ ॥೧೧॥

[2]ತದಾ ತಾನ್ ಸಮ್ಮತಾನ್[2] ಶ್ರುತ್ವಾ ನಾರದಸ್ಯ ಮುಖಾತ್ತದಾ
ಯಯೌ ರುದ್ರಾಯ ರುದ್ರಾಣೀ ವಿಜ್ಞಾಪ್ಯ ಭವನಂ ಪಿತುಃ ॥೧೨॥

ಅಥ ಸನ್ನಿಹಿತಂ ದಿವ್ಯಂ ವಿಮಾನಂ ವಿಶ್ವತೋಮುಖಮ್
ಲಕ್ಷಣಾಢ್ಯಂ ಸುಖಾರೋಹಮತಿಮಾತ್ರಮನೋಹರಮ್ ॥೧೩॥

---

ತತಃ—ಅಮೇಲೆ ತೇನ ವೈರೇಣೈವ—ಆ ವೈರದಿಂದವೇ ವಿಧಿನಾ ಚ—ದೈವದಿಂದವೂ ಪ್ರಚೋದಿತಃ—ಪ್ರೇರಿಸಲುಪಟ್ಟಂಥಾ ದಕ್ಷಃ—ದಕ್ಷನು ಅಭಿದ್ವಿಷನ್—ದ್ವೇಷಿಸುತ್ತವು ದೀಕ್ಷಿತಃ—ದೀಕ್ಷಿತನಾಗಿ ತಂ ಭವಂ—ಆ ಪರಮೇಶ್ವರನನು ನಾಜುಹಾವ—ಕರಸಿದುದಿಲ್ಲ. ॥೧೦॥

ಸಃ—ಆ ದಕ್ಷನು ಸರ್ವಾನ್—ದೇವ-ದಾನವ ಮೊದಲಾದ ಸಮಸ್ತರುಗಳನು ಅನ್ಯಾಂಶ್ಚ—ಮತ್ತೆ ಕೆಲಬರುಗಳಸು ಜಾಮಾತೄನ್—ಅಳಿಯಂದಿರುಗಳನು ಶತಶಃ—ಲೆಕ್ಕವಿಲ್ಲದಂಥಾವರುಗಳನು ಆಹೂಯ—ಕರಸಿ ಯಥಾಕ್ರಮಂ—ಕ್ರಮ ತಪ್ಪದೇ ಪೃಥಕ್ ಪೃಥಕ್—ಬೇರೆಬೇರೆ ಪುಷ್ಕಲಾಂ—ಬಹಳವಹಂಥಾ ಅರ್ಚಾಂ—ಸತ್ಕಾರವನು ಚಕಾರ—ಮಾಡಿದನು. ॥೧೧॥

ತದಾ—ಆಗ ಸಮ್ಮತಾನ್—ಸನ್ಮತರಾದಂಥಾ ತಾನ್—ಆ ದೇವರ್ಕಳು ಮೊದಲಾದವರುಗಳನು ನಾರದಸ್ಯ—ನಾರದನ ಮುಖಾತ್—ಮುಖದ ದೆಸೆಯಿಂದ ಶ್ರುತ್ವಾ—ಕೇಳಿ ರುದ್ರಾಣೀ—ಪರಮೇಶ್ವರಿ ರುದ್ರಾಯ—ಪರಮೇಶ್ವರಂಗೋಸ್ಕರ ವಿಜ್ಞಾಪ್ಯ—ಬಿನ್ನಹಂ ಮಾಡಿ ಪಿತುಃ—ತಂದೆಯ ಭವನಂ—ಗೃಹವನು ಕುರಿತು ತದಾ—ಆಗವೇ ಯಯೌ—ಎಯ್ದಿದಳು. ॥೧೨॥

ಅಥ—ಅನಂತರದಲ್ಲಿ ವಿಶ್ವತೋಮುಖಂ—ಎಲ್ಲಾ ಕಡೆಯಲ್ಲಿಯೂ ಮುಖವನುಳ್ಳಂಥಾ ಲಕ್ಷಣಾಢ್ಯಂ—ಲಕ್ಷಣದಿಂದ ಶ್ರೇಷ್ಠವಹಂಥಾ ಸುಖಾರೋಹಂ—ಸುಖದಿಂದ ಏರಲು ಪಟ್ಟಂಥಾ ಅತಿಮಾತ್ರಂ—ಅತ್ಯಂತವಾಗಿ ಮನೋಹರಂ—ಒಪ್ಪುತ್ತಿದ್ದಂಥಾ ದಿವ್ಯಂ—ಪ್ರಕಾಶಿಸುತ್ತಿದ್ದಂಥಾ ವಿಮಾನಂ—ಪುಷ್ಪಕವು ಸನ್ನಿಹಿತಂ—ಇರಲುಪಟ್ಟಿತ್ತು. ॥೧೩॥

---

[1] ದೀಕ್ಷಿತಸ್ತಮಪಿ ದ್ವಿಷನ್ (ಘ) [2] ತಥಾ ತಾನ್ ಸಂಗತಾನ್ (ಘ)

ತಪ್ತಜಾಂಬೂನದಪ್ರಖ್ಯಂ ಚಿತ್ರರತ್ನಪರಿಷ್ಕೃತಮ್
ಮುಕ್ತಾದಾಮವಿತಾನಾಢ್ಯಂ ಸ್ರಗ್ದಾಮಸಮಲಂಕೃತಮ್ ||೧೪||

ತಪ್ತಕಾಂಚನನಿರ್ವ್ಯೂಹಂ ರತ್ನಸ್ತಂಭಶತಾವೃತಮ್
ವಜ್ರಕಲ್ಪಿತಸೋಪಾನಂ ವಿದ್ರುಮ[1]ದ್ವಾರತೋರಣಮ್[1] ||೧೫||

ಪುಷ್ಪಪಟ್ಟಪರಿಸ್ತೀರ್ಣಂ ಚಿತ್ರರತ್ನಮಹಾಸನಮ್
ವಜ್ರಜಾಲಾಂಕಿತಚ್ಛಿದ್ರಮಚ್ಛಿದ್ರಮಣಿಕುಟ್ಟಿಮಮ್ ||೧೬||

ಮಣಿದಂಡಮನೋಜ್ಞೇನ ಮಹಾವೃಷಭ[2]ಲಕ್ಷ್ಮಣಾ[2]
ಅಲಂಕೃತಪುರೋಭಾಗಮಭ್ರಶುಭ್ರೇಣ ಕೇತುನಾ ||೧೭||

---

ತಪ್ತಜಾಂಬೂನದಪ್ರಖ್ಯಂ—ಕಾಸಿದ ಸುವರ್ಣದೋಪಾದಿ ಕಾಂತಿಯನುಳ್ಳಂಥಾ ಚಿತ್ರರತ್ನಪರಿಷ್ಕೃತಂ—ಆಶ್ಚರ್ಯವಹ ರತ್ನಂಗಳಿಂದ ಕೆತ್ತಿಸಲುಪಟ್ಟಂಥಾ ಮುಕ್ತಾ-ದಾಮವಿತಾನಾಢ್ಯಂ—ಮುತ್ತಿನ ಗೊಂಡೆಯ ಮೇಲುಕಟ್ಟುಗಳಿಂದ ಉತ್ಕೃಷ್ಟವಹಂಥಾ ಸ್ರಗ್ದಾಮಸಮಲಂಕೃತಂ—ಪುಷ್ಪಮಾಲೆಗಳ ಗೊಂಡೆಯಗಳಿಂದ ಲೇಸಾಗಿ ಅಲಂಕರಿಸಲು ಪಟ್ಟಂಥಾ, ||೧೪||

ತಪ್ತಕಾಂಚನನಿರ್ವ್ಯೂಹಂ — ಕಾಸಿದ ಸುವರ್ಣದೋಪಾದಿ ಕಾಂತಿಮಯವಹ ನೆಲೆ ನೆಲೆಗಳನುಳ್ಳಂಥಾ ರತ್ನಸ್ತಂಭಶತಾವೃತಂ — ರತ್ನದ ಕಂಭಂಗಳ ಅಸಂಖ್ಯಾತ ದಿಂದ ಮುಸುಕಲುಪಟ್ಟಂಥಾ ವಜ್ರಕಲ್ಪಿತಸೋಪಾನಂ—ವಜ್ರದಿಂದ ಮಾಡಲುಪಟ್ಟ ಸೋಪಾನವನುಳ್ಳಂಥಾ ವಿದ್ರುಮದ್ವಾರತೋರಣಂ—ಹವಳದ ಬಾಗಿಲು ತೋರಣಂ ಗಳನುಳ್ಳಂಥಾ, || ೧೫ ||

ಪುಷ್ಪಪಟ್ಟಪರಿಸ್ತೀರ್ಣಂ — ಪುಷ್ಪಂಗಳಿಂದ ಪಟ್ಟಾವಳಿಗಳಿಂದ ಹೊದಿಸಲು ಪಟ್ಟಂಥಾ ಚಿತ್ರರತ್ನಮಹಾಸನಂ—ಆಶ್ಚರ್ಯವಹ ರತ್ನಮಯವಹ ಸಿಂಹಾಸನವ-ನುಳ್ಳಂಥಾ ವಜ್ರಜಾಲಾಂಕಿತಚ್ಛಿದ್ರಂ — ವಜ್ರಸಮೂಹಂಗಳಿಂದ ಅಂಕಿಸಲುಪಟ್ಟ ಛಿದ್ರಂಗಳನುಳ್ಳಂಥಾ ಅಚ್ಛಿದ್ರಮಣಿಕುಟ್ಟಿಮಂ — ಛಿದ್ರವಿಲ್ಲದೇ ಇದ್ದ ರತ್ನಮಯ ವಹ ನೆಲೆಗಟ್ಟನುಳ್ಳಂಥಾ, ||೧೬||

ಮಣಿದಂಡಮನೋಜ್ಞೇನ—ರತ್ನಮಯವಹ ದಂಡದಿಂದ ಮನೋಹರವಹಂಥಾ ಮಹಾವೃಷಭಲಕ್ಷ್ಮಣಾ—ದೊಡ್ಡಿತ್ತಹ ವೃಷಭನ ಕುರುಹನುಳ್ಳಂಥಾ ಅಭ್ರಶುಭ್ರೇಣ

---

1 ಸ್ತಮ್ಭತೋರಣಂ (ಘ) 2 ಲಕ್ಷಣಾ (ಕ)

ರತ್ನಕಂಚುಕಗುಪ್ತಾಂಗೈಃ ಚಿತ್ರವೇತ್ರೈಕಪಾಣಿಭಿಃ
[1] ಅಧಿಷ್ಠಿತಮಹಾದ್ವಾರಮಪ್ರಧೃಷ್ಯೈರ್ಗಣೇಶ್ವರೈಃ[1] ||೧೮||

ಮೃದಂಗತಾಲಸಂಗೀತವೇಣುವೀಣಾವಿಶಾರದೈಃ
ವಿದಗ್ಧವೇಷಭಾವೈಶ್ಚ[2] ಬಹುಭಿಃ ಸ್ತ್ರೀಜನೈರ್ವೃತಮ್ ||೧೯||

ಅನೇಕಾದಿತ್ಯಸಂಕಾಶಮಾಕಾಶೈಕವಿಭೂಷಣಮ್
ಅಶ್ರಾಂತಪರಿಸಂದೃಶ್ಯಮಕ್ಷ್ಣಾಂ ಪ್ರಸರತಸ್ಕರಮ್ ||೨೦||

ತದೀದೃಶಂ ಮಹಾಶೋಭಂ ವಿಮಾನವರಮೂರ್ಜಿತಮ್
ಆರುರೋಹ ಮಹಾದೇವೀ ಸಹ ಪ್ರಿಯಸಖೀಜನೈಃ ||೨೧||

---

— ೯ರತ್ನಾಲದ ಮೇಘದೋಪಾದಿ ಬಿಳಿದಹಂಥಾ ಕೇತುನಾ — ಧ್ವಜದಿಂದ ಅಲಂಕೃತಪುರೋಭಾಗಂ—ಅಲಂಕರಿಸಲುಪಟ್ಟ ಮುಂದುಗಡೆಯನುಳ್ಳಂಥಾ, ||೧೭||

ರತ್ನಕಂಚುಕಗುಪ್ತಾಂಗೈಃ — ರತ್ನಮಯವಹ ಕುಪ್ಪಸಂಗಳಿಂದ ತೊಡಲುಪಟ್ಟ ಶರೀರಂಗಳನುಳ್ಳಂಥಾ ಚಿತ್ರವೇತ್ರೈಕಪಾಣಿಭಿಃ—ವಿಚಿತ್ರವಹ ಬೆತ್ತದ ಕಟ್ಟಿಗೆಯಲ್ಲಿ ಒಂದು ಹಸ್ತವನುಳ್ಳಂಥಾ ಅಪ್ರಧೃಷ್ಯೈಃ — ಎಯ್ದಲು ಬಾರದೇ ಇದ್ದಂಥಾ ಗಣೇಶ್ವರೈಃ—ಗಣೇಶ್ವರರುಗಳಿಂದ ಅಧಿಷ್ಠಿತಮಹಾದ್ವಾರಂ = ಇರಲುಪಟ್ಟ ದೊಡ್ಡ ಬಾಗಿಲುಗಳನುಳ್ಳಂಥಾ, ||೧೮||

ಮೃದಂಗತಾಲಸಂಗೀತವೇಣುವೀಣಾವಿಶಾರದೈಃ = ಮದ್ದಳೆ ತಾಳ ಸಂಗೀತ ಕೊಳಲು ವೀಣೆಗಳಲ್ಲಿ ವಿಚಕ್ಷಣೆಯರಹಂಥಾ ವಿದಗ್ಧವೇಷಭಾವೈಶ್ಚ = ಜಾಣುಮೆಯನುಳ್ಳ ಅಲಂಕಾರಗಳ ವ್ಯಾಪಾರವನುಳ್ಳಂಥಾ ಬಹುಭಿಃ = ಬಹಳವಹ ಸ್ತ್ರೀಜನೈಶ್ಚ —ಸ್ತ್ರೀಜನಂಗಳಿಂದವೂ ವೃತಂ—ಮುಸುಕಲುಪಟ್ಟಂಥಾ, ||೧೯||

ಅನೇಕಾದಿತ್ಯಸಂಕಾಶಂ—ಅನೇಕ ಸೂರ್ಯರ ಪ್ರಕಾಶವನುಳ್ಳಂಥಾ ಆಕಾಶೈಕವಿ-ಭೂಷಣಂ — ಆಕಾಶಕ್ಕೆ ಒಂದೇ ಅಲಂಕಾರವಹಂಥಾ ಅಶ್ರಾಂತಪರಿಸಂದೃಶ್ಯಂ — ಆವಾಗವೂ ನೋಡಲು ಯೋಗ್ಯವಹಂಥಾ ಅಕ್ಷ್ಣಾಂ — ದೃಷ್ಟಿಗಳ ಪ್ರಸರತಸ್ಕರಂ —ಪ್ರಸರವನು ಕಳು[ವು]ತ್ತಿದ್ದಂಥಾ (ಕಳುತ್ತಿದ್ದಂಥಾ). ||೨೦||

ಈದೃಶಂ—ಈ ಪ್ರಕಾರವಹಂಥಾ ಮಹಾಶೋಭಂ — ಅತ್ಯಂತ ಒಪ್ಪುತ್ತಂ-ವಿದ್ದಂಥಾ ಊರ್ಜಿತಂ — ಉನ್ನತವಹಂಥಾ ತತ್ — ಆ ವಿಮಾನವರಂ —

---

[1] ಧಿಷ್ಠಿತಮಹಾದ್ವಾರರಕ್ಷಕೈಶ್ಚ ಗಣೇಶ್ವರೈಃ (ಘ) [2] ಭಾಷೈಶ್ಚ (ಘ)

ಚಾಮರವ್ಯಜನೇ ತಸ್ಯಾಃ ವಜ್ರದಂಡೇ ಮನೋಹರೇ
ಗೃಹೀತ್ವಾ ರುದ್ರಕನ್ಯೇ ದ್ವೇ ವಿವೀಜತುರುಭೇ ಶುಭೇ ||೨೨||

ತದಾ ಚಾಮರಯೋರ್ಮಧ್ಯೇ ದೇವ್ಯಾಃ ವದನಮಾಬಭೌ
ಅನ್ಯೋನ್ಯಂ ಯುದ್ಧ್ಯತೋರ್ಮಧ್ಯೇ ಹಂಸಯೋರಿವ ಪಂಕಜಮ್ ||

ಛತ್ರಂ ಶಶಿನಿಭಂ ತಸ್ಯಾಶ್ಚೂಡೋಪರಿ ಸುಮಾಲಿನೀ
ವೃತ್ತಮುಕ್ತಾಪರಿಕ್ಷಿಪ್ತಂ ಬಭಾರ ಪ್ರೇಮನಿರ್ಭರಾ ||೨೪||

ತಚ್ಛತ್ರಮುಜ್ಜ್ವಲಂ ದೇವ್ಯಾಃ ರುರುಚೇ ವದನೋಪರಿ
ಉಪರ್ಯಮೃತಭಾಂಡಸ್ಯ ಮಂಡಲಂ ಶಶಿನೋ ಯಥಾ ||೨೫||

---

ಶ್ರೇಷ್ಠವಹಂಥಾ ಪುಷ್ಪಕವನು ಮಹಾದೇವೀ—ಸತೀದೇವಿ ಪ್ರಿಯಸಖೀಜನೈಸ್ಸಹ — ಪ್ರಿಯವಹ ವಿಳಾಸಿನಿಜನಂಗಳಿಂದ ಸಹಿತವಾಗಿ ಆರುರೋಹ — ಏರಿದಳು. ರುಹ—ಬೀಜಜನ್ಮನಿ ಪ್ರಾದುರ್ಭಾವೇ ಚ ಎಂಬ ಧಾತು. ಆಙ್ ಪೂರ್ವಕವು. ||೨೧||

ಶುಭೇ=ಒಪ್ಪುತ್ತಿಂವಿದ್ದಂಥಾ ದ್ವೇ ರುದ್ರಕನ್ಯೇ=ಇಬ್ಬರು ರುದ್ರ[1]ಕನ್ನಿಕೆ-ಯರು ವಜ್ರದಂಡೇ = ವಜ್ರಮಯವಹ ಕಾವನುಳ್ಳಂಥಾ ಉಭೇ = ಎರಡು ಚಾಮರವ್ಯಜನೇ = ಚಾಮರ-ಬೀಸಣಿಗೆಗಳನು ಗೃಹೀತ್ವಾ = ಹಿಡಿದುಕೊಂಡು ತಸ್ಯಾಃ=ಆ ಪರಮೇಶ್ವರಿಗೆ ವಿವೀಜತುಃ=ಬೀಸಿದರು. ||೨೨||

ತದಾ=ಆಗ ಚಾಮರಯೋಃ=ಚಾಮ(ಚ ವ)ರಂಗಳ ಮಧ್ಯೇ=ಮಧ್ಯದಲ್ಲಿ ದೇವ್ಯಾಃ = ಪರಮೇಶ್ವರಿಯ ವದನಂ = ಮುಖವು ಆಬಭೌ = ಒಪ್ಪಿತ್ತು. ಕಥಮಿವ=ಅದು ಹೇಂಗೆಯೂ ಎಂದಡೆ ಅನ್ಯೋನ್ಯಂಯುದ್ಧ್ಯತೋಃ=ಒಂದೊಂದ ರೊಡನೆ ಯುದ್ಧವ ಮಾಡುತ್ತಿದ್ದಂಥಾ ಹಂಸಯೋಃ=ಹಂಸಗಳ ಮಧ್ಯೇ=ಮಧ್ಯ ದಲ್ಲಿ ಪಂಕಜಮಿವ=ತಾವರೆ (ಯೆಹಗಹಗ್ಗೆ)ಯು ಹೇಗೋ ಹಾಗೆ. ||೨೩||

ಸುಮಾಲಿನೀ = ಕುಬೇರನ ಪುತ್ರಿಯಹಂಥಾ ಸುಮಾಲಿನೀದೇವಿ ಪ್ರೇಮ-ನಿರ್ಭರಾ=ಪ್ರೇಮದಿಂದ ತುಂಬಲ್ಪಟ್ಟಾ (ಯಕ)ತಳಾಗಿ ವೃತ್ತಮುಕ್ತಾಪರಿಕ್ಷಿಪ್ತಂ = ಬಟ್ಟಿತ್ತಾಗಿದ್ದ ಮುತ್ತುಗಳಿಂದ ತೆತ್ತಿಸಲ್ಪಟ್ಟಂಥಾ ಶಶಿನಿಭಂ = ಚಂದ್ರಂಗೆ ಸಮಾನವಹಂಥಾ ಛತ್ರಂ = ಸತ್ತಿಗೆಯನು ತಸ್ಯಾಃ = ಆ ಪರಮೇಶ್ವರಿಯ ಚೂಡೋಪರಿ=ಶಿರಸ್ಸಿನ ಮೇಲೆ ಬಭಾರ=ಹಿಡಿದಳು. ||೨೪||

ಉಜ್ಜ್ವಲಂ=ಪ್ರಕಾಶಿಸುತ್ತಿದ್ದಂಥಾ ತಚ್ಛತ್ರಂ=ಆ ಸತ್ತಿಗೆ ದೇವ್ಯಾಃ=

---

[1] ಕನ್ನೆ (ಖ)

ಅಥ ಚಾಗ್ರೇ ಸಮಾಸೀನಾ ಸುಸ್ಮಿತಾಸ್ಯಾ ಶುಭಾವತೀ
ಅಕ್ಷದ್ಯೂತವಿನೋದೇನ ರಮಯಾಮಾಸ [1]ಪಾರ್ವತೀ[1] ||೨೬||

[2] ಸುಯಶಾಃ[2] ಪಾದುಕೇ ದೇವ್ಯಾಃ ಶುಭೇ ರತ್ನಪರಿಷ್ಕೃತೇ
ಸ್ತನಯೋರಂತರೇ ಕೃತ್ವಾ ತದಾ ದೇವೀಮಸೇವತ ||೨೭||

[3] ಕನ್ಯಾ ಕಾಚನ[3] ಚಾರ್ವಂಗೀ ದೀಪ್ತಂ ಜಗ್ರಾಹ ದರ್ಪಣಮ್
ಅಪರಾ ತಾಲವೃಂತಂ ಚ ಪರಾ [4]ತಾಂಬೂಲಪಟ್ಟಿಕಾಮ್[4] ||೨೮||

---

ಪರಮೇಶ್ವರಿಯ ವದನೋಪರಿ=ಮುಖದ ಮೇಲುಗಡೆಯಲ್ಲಿ ರುರುಚೇ=ಒಪ್ಪಿತ್ತು. ತದ್ಯಥಾ=ಅದು ಹೇಂಗೆಯಾ ಎಂದಡೆ ಅಮೃತಭಾಂಡಸ್ಯ=ಅಮೃತಕ್ಕೆ ಕಳಶನಹಂಥಾ ಶಶಿನಃ=ಚಂದ್ರನ ಉಪರಿ=ಮೇಲೆ ಮಂಡಲಂ ಯಥಾ=(ಪರಿ) ಮಂಡಲವೆಹ ಗಹಗೆ. ||೨೫||

ಅಥ ಚ=ಅನಂತರದಲ್ಲಿಯೂ ಅಗ್ರೇ=ಮುಂದುಗಡೆಯಲ್ಲಿ ಸಮಾಸೀನಾ =ಕುಳ್ಳಿರ್ದಂಥಾ ಸುಸ್ಮಿತಾಸ್ಯಾ = ಒಪ್ಪುತ್ತಂವಿದ್ದ ನಗೆಮೊಗವನುಳ್ಳಂಥಾ ಶುಭಾವತೀ = ಮಂಗಳವಹಂಥಾ ಪಾರ್ವತೀ = ಪರಮೇಶ್ವರಿ ಅಕ್ಷದ್ಯೂತ-ವಿನೋದೇನ=ನೆತ್ತದ ಜೂಜಿನ ವಿನೋದದಿಂದ ರಮಯಾಮಾಸ=ಕ್ರೀಡಿಸಿದಳು.

ತದಾ=ಆಗ ಸುಯಶಾ = ನಂದಿಕೇಶ್ವರನ ಸ್ತ್ರೀಯಹಂಥಾ ಸುಯಶಾದೇವಿ ರತ್ನಪರಿಷ್ಕೃತೇ= ರತ್ನಂಗಳಿಂದ [5]ಕೆತ್ತಿ[5]ಸಲುಪಟ್ಟಂಥಾ ಶುಭೇ= ಒಪ್ಪುತ್ತಿದ್ದಂಥಾ ದೇವ್ಯಾಃ=ಪರಮೇಶ್ವರಿಯ ಪಾದುಕೇ=ಪಾ(ಹಾ)ವುಗೆಗಳನು ಸ್ತನಯೋಃ= ಕುಚಂಗಳ ಅಂತರೇ = ಮಧ್ಯದಲ್ಲಿ ಕೃತ್ವಾ = [6]ಅವಚಿಕೊಂಡು[6] ದೇವೀಂ= ಪರಮೇಶ್ವರಿಯನು ಅಸೇವತ=ಓಲೈಸಿದಳು. ||೨೭||

ಚಾರ್ವಂಗೀ = ಮನೋಹಗವಹ ಶರೀರವನುಳ್ಳಂಥಾ ಕಾಚನ ಕನ್ಯಾ = ಒಬ್ಬಾಳೊಬ್ಬ ಕನ್ನಿಕೆ ದೀಪ್ತಂ=ಪ್ರಕಾಶಿಸುತ್ತಿದ್ದಂಥಾ ದರ್ಪಣಂ=ಕನ್ನಡಿಯನು ಜಗ್ರಾಹ=ಪಿಡಿದಳು. ಅಪರಾ=ಮತ್ತೊಬ್ಬಳು ತಾಲವೃಂತಂ ಚ=ಬೀಸಣಿಗೆ-ಯನು, ಪರಾ=ಮತ್ತೊಬ್ಬಳು ತಾಂಬೂಲಪಟ್ಟಿಕಾಂ= ವೀಳೆಯದ [7]ಸಂ(ಪರಿ) ಬಳಿಗೆ[7]ಯನು ಜಗ್ರಾಹ=ಹಿಡಿದಳು. ||೨೮||

---

[1] ಪಾರ್ವತೀಮ್ (ಗ. ಘ) [2] ಸುಯಶಾ (ಕ) ಸುಯಶಾಃ (ಖ.ಗ.ಘ)
[3] ಅನ್ಯಾ ಕಾಂಚನ (ಘ) [4] ತಾಂಬೂಲಪೇಟಿಕಾಂ (ಘ)
[5] ತೆತ್ತಿ (ಖ) [6] ಅವುಕಿಕೊಂಡು (ಖ) [7] ಪರಿಬಳಿಗೆ (ಖ)

ಕಾಚಿತ್ ಕ್ರೀಡಾಶುಕಂ ಚಾರುಕರೇಽಕುರುತ [1]ಕಾಮಿನೀ[1]
[2]ಕಾಚಿಚ್ಚ[2] ಸುಮನೋಜ್ಞಾನಿ ಮಾಲ್ಯಾನಿ ಸುರಭೀಣಿ ಚ ॥೨೯॥

ಕಾಚಿದಾಭರಣಾಧಾರಂ ಬಭಾರ ಕಮಲೇಕ್ಷಣಾ
ಕಾಚಿಚ್ಚ ಪುನರಾಲೇಪಂ ಸಪ್ರಸೂನಂ ಸಭಾಜನಮ್ ॥೩೦॥

ಅನ್ಯಾಶ್ಚ ಸುದೃಶಸ್ತಾಸ್ತಾಃ ಯಥಾ[3]ಸ[3]ಮುಚಿತಕ್ರಿಯಾಃ
ಆವೃತ್ಯಾಂತರ್ಮಹಾದೇವೀಮಸೇವಂತ ಸಮಂತತಃ ॥೩೧॥

ಅತೀವ ಶುಶುಭೇ ತಾಸಾಂ ಮಂಡಲೇ ಪರಮೇಶ್ವರೀ
ತಾರಾಪರಿಷದೋ ಮಧ್ಯೇ ಚಂದ್ರಲೇಖೇವ ಶಾರದೀ ॥೩೨॥

---

ಕಾಚಿತ್ಕಾಮಿನೀ = ಒಬ್ಬ ಸ್ತ್ರೀ ಕ್ರೀಡಾಶುಕಂ = ಆಡಿಸುವ ಗಿಣಿಯನು ಚಾರುಕರೇ= ಒಪ್ಪುತ್ತಂವಿದ್ದ ಹಸ್ತದಲ್ಲಿ ಅಕುರುತ = ಮಾಡಿದಳು. ಧರಿಸಿದಳೆಂಬುದರ್ಥ. ಕಾಚಿಚ್ಚ=ಒಬ್ಬ ಸ್ತ್ರೀ, ಸುಮನೋಜ್ಞಾನಿ=ಅತಿ ಮನೋಹರವಹಂಥಾ ಸುರಭೀಣಿ=ಪರಿಮಳವನುಳ್ಳಂಥಾ ಮಾಲ್ಯಾನಿ ಚ=ಪುಷ್ಪಮಾಲೆಗಳನು ಜಗ್ರಾಹ=ಹಿಡಿದಳು. ಈ ಶ್ಲೋಕಂಗಳು ಕುಳಕಂಗಳು. ॥೨೯॥

ಕಮಲೇಕ್ಷಣಾ = ತಾವರೆಯೋಪಾದಿ ನಯನಂಗಳನುಳ್ಳಂಥಾ ಕಾಚಿತ್ = ಒಬ್ಬಳು ಆಭರಣಾಧಾರಂ=ಆಭರಣಂಗಳ ಸಂಪುಟವನು (ಭಂಗಾರದ ಕರಡಗೆಯನು) ಬಭಾರ=ಧರಿಸಿದಳು. ಕಾಚಿಚ್ಚ=ಮತ್ತೊಬ್ಬಳು (ಒಬ್ಬಾಳೊಬ್ಬಳು) ಸಪ್ರಸೂನಂ =ಪುಷ್ಪಂಗಳಿಂದ ಸಹಿತವಹಂಥಾ ಸಭಾಜನಂ = ಕರಡಗೆಯಿಂದ ಸಹಿತವಹಂಥಾ ಆಲೇಪಂ=ಅನುಲೇಪನವನು ಪುನಃ=ಮರಳಿ ಬಭಾರ=ಧರಿಸಿದಳು. ॥೩೦॥

ಸುದೃಶಃ= ಒಪ್ಪುತ್ತಂವಿದ್ದ ನಯನಂಗಳನುಳ್ಳಂಥಾ ತಾಸ್ತಾಃ — ಆ ಆ, ಯಥಾಸಮುಚಿತಕ್ರಿಯಾಃ=ಯಥೋಚಿತವಹ ವ್ಯಾಪಾರವನುಳ್ಳಂಥಾ ಅನ್ಯಾಶ್ಚ= ಉಳಿದ ಸ್ತ್ರೀಯರುಗಳು ಮಹಾದೇವೀಂ=ಪರಮೇಶ್ವರಿಯನು (ಮಹಾದೇವಿಯನು) ಸಮಂತತಃ= ಎಲ್ಲಾ ಕಡೆಯಲ್ಲಿಯೂ ಆವೃತ್ಯ = ಮುಸುಕಿ ಅಸೇವಂತ = ಓಲೈಸಿದರು. ॥೩೧॥

ತಾಸಾಂ = ಆ ರುದ್ರ ಕನ್ನಿಕೆಯರುಗಳ ಮಂಡಲೇ = ಸಮೂಹದಲ್ಲಿ ಪರಮೇಶ್ವರೀ=ಸತೀದೇವಿ ಅತೀವ = ಅತ್ಯಂತವಾಗಿ ಶುಶುಭೇ = ಒಪ್ಪಿದಳು.

---

[1] ಭಾಮಿನೀ (ಕ) ಮೂಲಮಾತ್ರ. [2] ಕಾಚಿತ್ತು (ಘ) [3] ಸ್ವ (ಘ)

ತತಶ್ಶಂಖಸಮುತ್ಥಸ್ಯ ನಾದಸ್ಯ ಸಮನಂತರಮ್
ಪ್ರಾಸ್ಥಾನಿಕೋ ಮಹಾನಾದಃ ಪಟಹಃ ಸಮತಾಡ್ಯತ ||೩೩||

ತತೋ ಮಧುರವಾದ್ಯಾನಿ ಸಹ ತಾಲೋದ್ಭವೈಃ ಸ್ವನೈಃ
ಅನಾಹತಾನಿ ಸನ್ನೇದುಃ [1]ಕಾಹಳಾನುಗತಾನಿ ಚ[1] ||೩೪||

ಸಾಯುಧಾನಾಂ ಗಣೇಶಾನಾಂ ಮಹೇಶಸಮತೇಜಸಾಮ್
ಸಹಸ್ರಾಣಿ ಶತಾನ್ಯಷ್ಟೌ ತದಾನೀಂ [2]ಪರಿತೋ[2] ಯಯುಃ ||೩೫||

ತೇಷಾಂ ಮಧ್ಯೇ ವೃಷಾರೂಢೋ ಗಜಾರೂಢೋ ಯಥಾ ಗುಹಃ
ಜಗಾಮ.ಗಣಪಃ ಶ್ರೀಮಾನ್ ಸೋಮವರ್ಣಃ ಸುರಾರ್ಚಿತಃ ||೩೬||

---

ಕಥಮಿವ = ಅದು ಹೇಂಗೆಯಾ ಎಂದಡೆ ತಾರಾಪರಿಷದಃ = ನಕ್ಷತ್ರಂಗಳ ಮೊತ್ತದ ಮಧ್ಯೇ = ಮಧ್ಯದಲ್ಲಿ ಶಾರದೀ = ಶರತ್ಕಾಲಸಂಬಂಧವಹಂಥಾ ಚಂದ್ರಲೇಖೇವ = ಬೆಳೆದಿಂಗಳೆ (ಚಂದ್ರನಲೇಖೆಯೆ) ಹಗಹಗೆ. ||೩೨||

ತತಃ = ಅನಂತರದಲ್ಲಿ ಶಂಖಸಮುತ್ಥಸ್ಯ = ಶಂಖದಿಂದ ಹುಟ್ಟಲುಪಟ್ಟಂಥಾ ನಾದಸ್ಯ = ಧ್ವನಿಯ ಸಮನಂತರಂ = ತರುವಾಯಲ್ಲಿ ಪ್ರಾಸ್ಥಾನಿಕಃ = ಪಯಣದ ಸಂಬಂಧವಹಂಥಾ ಮಹಾನಾದಃ = ಮಹಾಧ್ವನಿಯನುಳ್ಳಂಥಾ ಪಟಹಃ = ಭೇರಿ ಸಮತಾಡ್ಯತ = ಬಾರಿಸಲು (ಪಟ್ಟುತ್ತು)ಪಟ್ಟಿತ್ತು. ||೩೩||

ತತಃ = ಅಷ್ಟರಮೇಲೆ ತಾಲೋದ್ಭವೈಃ = ತಾಳಂಗಳಿಂದ ಹುಟ್ಟಲುಪಟ್ಟಂಥಾ ಸ್ವನೈಃ ಸಹ = ಧ್ವನಿಗಳಿಂದ ಸಹಿತವಾಗಿ ಕಾಹಳಾನುಗತಾನಿ = ಕಹಳೆಗಳನು ಬಳಿವಿಡಿದೆಯುದ್ದಿತ್ತಿದ್ದಂಥಾ ಅನಾಹತಾನಿ = ಕೆಡದೇ ಇದ್ದಂಥಾ ಮಧುರವಾದ್ಯಾನಿ = ಮನೋಹರವಹಂಥಾ ವಾದ್ಯಂಗಳು ಸನ್ನೇದುಃ = ಬಾರಿಸಲುಪಟ್ಟವು. ಸಂಪೂರ್ವಕ ವಹ ನದ–ಅವ್ಯಕ್ತೇ ಶಬ್ದೇ ಎಂಬ ಧಾತು. ಲಿಟ್ಪರಸ್ಮೈಪದ ಬಹುವಚನವು. ||೩೪||

ತದಾನೀಂ = ಆಗ ಸಾಯುಧಾನಾಂ = ಆಯುಧಂಗಳಿಂದ ಸಹಿತರಹಂಥಾ ಮಹೇಶಸಮತೇಜಸಾಂ = ಪರಮೇಶ್ವರಂಗೆ ಸಮಾನವಹ ಸಾಮರ್ಥ್ಯವನುಳ್ಳಂಥಾ ಗಣೇಶಾನಾಂ = ಗಣೇಶ್ವರರುಗಳ ಅಷ್ಟಾಶತಾನಿ ಸಹಸ್ರಾಣಿ = ಎಂಟು ಲಕ್ಷಂಗಳು ಪರಿತಃ = ಸುತ್ತಲು ಯಯುಃ = ಎಯ್ದಿದರು. ||೩೫||

ತೇಷಾಂ = ಆ ಗಣೇಶ್ವರರುಗಳ ಮಧ್ಯೇ = ಮಧ್ಯದಲ್ಲಿ ಶ್ರೀಮಾನ್ =

---

[1] ಕಾಹಲಾನಾಂ ಶತಾನಿ ಚ (ಘ). [2] ಪುರತೋ (ಕ) ಮೂಲ ಮಾತ್ರ

ದೇವದುಂದುಭಯೋ ನೇದುಃ ದಿವಿ ದಿವ್ಯಸುಖ[2]ಸ್ವನಾಃ[3]
ನನೃತುರ್ಮುನಯಸ್ಸರ್ವೇ ಮುಮುದುಃ ಸಿದ್ಧಯೋಗಿನಃ ||೩೭||

ಸಸೃಜುಃ ಪುಷ್ಪವೃಷ್ಟಿಂ ಚ ವಿಮಾನೋಪರಿ ವಾರಿದಾಃ
ತದಾ ದೇವಗಣೈಶ್ಚಾನ್ಯೈಃ ಪಥಿ ಸರ್ವತ್ರ ಸಂಗತಾ ||
ಕ್ಷಣಾದೇವ ಪಿತುರ್ಗೇಹಂ ಪ್ರವಿವೇಶ ಮಹೇಶ್ವರೀ ||೩೮||

ತಾಂ ದೃಷ್ಟ್ವಾ ಕುಪಿತೋ[3] ದಕ್ಷಃ ಸ್ವಾತ್ಮೋಪಕ್ಷಯಕಾರಣಾತ್[3]
ತಸ್ಯಾಃ ಯವೀಯಸೀಭ್ಯೋಽಪಿ ಚಕ್ರೇ ಪೂಜಾಮಸತ್ಕೃತಾಮ್||೩೯||

ಐಶ್ವರ್ಯವನುಳ್ಳಂಥಾ ಸೋಮವರ್ಣಃ = ಚಂದ್ರನೋಪಾದಿಯ ವರ್ಣವನುಳ್ಳಂಥಾ ಸುರಾರ್ಚಿತಃ = ದೇವರ್ಕಳಿಂದ ಅರ್ಚಿಸಿಕೊಳಲುಪಟ್ಟಂಥಾ ಗಣಪಃ = ಗಣಾಧಿಪತಿ ವೃಷಾರೂಢಃ = ವೃಷಭನ ಏರಿದಾತನಾಗಿ ಜಗಾಮ = ಎಯ್ದಿದನು. ತದ್ಯಥಾ = ಅದು ಹೇಂಗೆಯಾ ಎಂದೊಡೆ ಗಜಾರೂಢಃ = ಆನೆಯನು ಏರಿದಂಥಾ ಗುಹೋ ಯಥಾ = ಸ್ವಾಮಿ ಕಾರ್ತಿ(ಕನೆಹಗಹಗೆ) ಕೇಯನೆಹಗೋ ಅಹಗೆ. ||೩೬||

ದಿವಿ = ಆಕಾಶದಲ್ಲಿ ದೇವದುಂದುಭಯಃ = ದೇವದುಂದುಭಿಗಳು ದಿವ್ಯಸುಖಸ್ವನಾಃ = ಒಪ್ಪುತ್ತಂವಿದ್ದ ಸುಖವಹಂಥಾ ದನಿಯುಳ್ಳವುಗಳಾಗಿ ನೇದುಃ = ವೊಳಗಿದುವು. ಸರ್ವೇ ಮುನಯಃ = ಸಮಸ್ತ ಋಷಿಗಳು ನನೃತುಃ = ಕುಣಿದಾಡಿದರು. ಸಿದ್ಧಯೋಗಿನಃ = ಸಿದ್ಧರಹಂಥಾ ಯೋಗಿಗಳು ಮುಮುದುಃ = ಸಂತೋಷಿಸಿದರು. ||೩೭||

ತದಾ = ಆಗ ವಾರಿದಾಃ = ಮೇಘಂಗಳು ವಿಮಾನೋಪರಿ = ಪುಷ್ಪಕದ ಮೇಲೆ ಪುಷ್ಪವೃಷ್ಟಿಂ ಚ = ಹೂಮಳೆಯನು ಸಸೃಜುಃ = ಸುರಿದವು. ಪಥಿ = ಮಾರ್ಗದಲ್ಲಿ ಸರ್ವತ್ರ = ಎಲ್ಲಿಯೂ ದೇವಗಣೈಃ = ದೇವಗಣಂಗಳಿಂದ ಅನ್ಯೈಶ್ಚ = ಮತ್ತೆ ಕೆಲಂಬರುಗಳಿಂದವೂ ಸಂಗತಾ = ಕೂಡಿ ಓಲೈಸಿಕೊಳಲುಪಟ್ಟಂಥಾ ಮಹೇಶ್ವರೀ = ಮಹೇಶ್ವರಿ, ಕ್ಷಣಾದೇವ = ಕ್ಷಣಮಾತ್ರದ ದೆಸೆಯಿಂದವೇ ಪಿತುಃ = ತಂದೆಯ ಗೇಹಂ = ಗೃಹವನು ಪ್ರವಿವೇಶ = ಪ್ರವೇಶಿಸಿದಳು. ||೩೮||

ದಕ್ಷಃ = ದಕ್ಷನು ತಾಂ — ಆ ಪರಮೇಶ್ವರಿಯನು ದೃಷ್ಟ್ವಾ = ಕಂಡು ಸ್ವಾತ್ಮೋಪಕ್ಷಯಕಾರಣಾತ್ = ತನ್ನ ಶರೀರದ ಕೇಡಿನ ಕಾರಣದ ದೆಸೆಯಿಂದ

[2] ಸ್ವನಂ (ಖ.ಗ.ಘ) ಸುಖಸ್ವನಂ — ಒಪ್ಪುತ್ತಂವಿದ್ದ ಸುಖವಹಂಥಾ ದನಿಯನು ನೇದುಃ — ವೊಳಗಿದುವು (ಖ) [3] ದಕ್ಷಶ್ಚಾತ್ಮನಃ ಕ್ಷಯಕಾರಣಾತ್ (ಘ)

* ತದಾ[1] ಸಖೀಮುಖಾದೇವ[1] ಪಿತರಂ ಸದಸಿ ಸ್ಥಿತಮ್
ಅಂಬಿಕಾ ಯುಕ್ತಮವ್ಯಗ್ರ[2]ಮುವಾಚಾಕೃಪಣಂ ವಚಃ ||೪೦||

ದೇವ್ಯುವಾಚ—

ಬ್ರಹ್ಮಾದಯಃ ಪಿಶಾಚಾಂತಾಃ ಯಸ್ಯಾಜ್ಞಾವಶವರ್ತಿನಃ
ಸ ದೇವಸ್ಸಾಂಪ್ರತಂ ತಾತ ವಿಧಿನಾ ನಾರ್ಚಿತಃ ಕಿಲ ||೪೧||

[3] ತದಾಸೀನ್ಮಮ ಜಾಮಾತುಃ ಪುತ್ರ್ಯಾಃ ಪೂಜಾ ಕಿಮೀದೃಶೀ[3]
[4] ಅಸತ್ಕೃತಾಮವಜ್ಞಾಂ ಯತ್ಕೃತವಾನಸಿ ಗರ್ವಿತಾಮ್[4] ||೪೨||

ಕುಪಿತಃ = ಕೋಪಿಸಿದಾತನಾಗಿ ತಸ್ಯಾಃ = ಆ ಸತೀದೇವಿಗೆ ಅಸತ್ಕೃತಾಂ = ಅವಮನ್ನಣೆಯನು ಚಕ್ರೇ = ಮಾಡಿದನು. ಯಮೀಯಸೀಭ್ಯೋऽಪಿ = ದೇವಿಯ ಒಡನೆ ಹುಟ್ಟಿದಂಥಾ ತಂಗಿಯರು ಅಕ್ಕಂದಿರು ಮುಂತಾದವರಿಗೋಸ್ಕರವು ಪೂಜಾಂ = ಸತ್ಕಾರವನು. ಚಕ್ರೇ = ಮಾಡಿದನು. ||೩೯||

ತದಾ = ಆಗ ಅಂಬಿಕಾ = ಪರಮೇಶ್ವರಿ ಸದಸಿ = ಸಭೆಯಲ್ಲಿ ಸ್ಥಿತಂ = ಇದ್ದಂಥಾ ಪಿತರಂ = ತಂದೆಯಹಂಥಾ ದಕ್ಷನನು ಕುರಿತು ಸಖೀಮುಖಾದೇವ = ಸಂಗಡಗಿತ್ತಿಯ ಮುಖದ ದೆಸೆಯಿಂದಲೇ ಯುಕ್ತಂ = ಯುಕ್ತವಹಂಥಾ ಅಕೃಪಣಂ = ದೈನ್ಯವಿಲ್ಲದೇ ಇದ್ದಂಥಾ ವಚಃ = ವಾಕ್ಯವನು ಅವ್ಯಗ್ರಂ = ತರಹರವಾಗಿ ಉವಾಚ = ನುಡಿದಳು. ||೪೦||

ದೇವ್ಯುವಾಚ = ಸತೀದೇವಿ[5]ಯು ನುಡಿದಳು[5]—

ಭೋ ತಾತ — ಎಲೆ ತಂದೆ! ಬ್ರಹ್ಮಾದಯಃ — ಬ್ರಹ್ಮ ಮೊದಲಾದಂಥಾ ದೇವರ್ಕಳು ಪಿಶಾಚಾಂತಾಃ—ಪಿಶಾಚಿಗಳು ಕಡೆಯಾದಂಥಾ ಪ್ರಾಣಿಗಳು ಯಸ್ಯ —ಆವನಾನೊಬ್ಬ ಪರಮೇಶ್ವರನ ಆಜ್ಞಾವಶವರ್ತಿನಃ — ಆಜ್ಞೆಯ ಆಧೀನದಲ್ಲಿ ವರ್ತಿಸುತ್ತಿಹರು, ಸ ದೇವಃ—ಆ ಪರಮೇಶ್ವರನು ಸಾಂಪ್ರತಂ—ಈಗ ವಿಧಿನಾ — ಯಜ್ಞವಿಧಾನದಿಂದ ನಾರ್ಚಿತಃ — ಅರ್ಚಿಸಿಕೊಳಲುಪಟ್ಟುದಿಲ್ಲ. ಕಿಲ — ಆಶ್ಚರ್ಯವು. ||೪೧||

ತದಾ—ಆಗ ಪುತ್ರ್ಯಾಃ—ಮಗಳಹಂಥಾ ಮಮ — ಎನಗೆ, ಜಾಮಾತುಃ

---

[1] ಶಶಿಮುಖೀದೇವೀ (ಘ) * ಈ ಸ್ಥಳದಲ್ಲಿ 'ದೇವ್ಯುವಾಚ' ಎಂಬ (ಗ)ದಲ್ಲಿದೆ.
[2] ಮುವಾಚ(ಘ) [3] ತದಾಸ್ತಾಂ ಮಮಜ್ಯಾಯಸ್ಯಾಃ ಪುತ್ರ್ಯಾಃ ಪೂಜಾಂ ಕಿಮೀದೃಶೀಮ್ (ಘ) [4] ಅಸತ್ಕೃತಾಮವಜ್ಞಾಯ ಕೃತವಾನಸಿ ಗರ್ಹಿತಾಮ್ (ಘ).
[5] ಯ ವಾಕ್ಯವು (ಖ). ಇಲ್ಲ (ಗ). (ಗ)ದಲ್ಲಿ ಹಿಂದಿನ ಶ್ಲೋಕದವೊದಲು ಬಂದಿದೆ.

ಏವಮುಕ್ತೋಽಬ್ರವೀದೇನಾಂ ದಕ್ಷಃ ಕ್ರೋಧಾದಮರ್ಷಿತಃ
ತ್ವತ್ತಶ್ಚೇಷ್ಟಾ ವಿಶಿಷ್ಟಾಶ್ಚ ಪೂಜ್ಯಾಃ ಬಾಲಾಃ ಸುತಾಃ ಮಮ ||೪೩||

[1]ತಾಸಾಂ ಯೇ ಚೈವ ಭರ್ತಾರಸ್ತೇ ಮೇ ಬಹುಮತಾ ಮತಾಃ[1]
ಗುಣೈಶ್ಚಾಪ್ಯಧಿಕಾಸ್ಸರ್ವೇ ಭರ್ತುಸ್ತೇ ತ್ರ್ಯಂಬಕಾದಪಿ ||೪೪||

ಸ್ತಬ್ಧಾತ್ಮಾ ತಾಮಸಃ [2]ಶರ್ವಃ ತವಿಮಂ ತ್ವಮುಪಾಶ್ರಿತಾ[2]
ತೇನ ತ್ವಾಮವಮನ್ಯೇಽಹಂ ಪ್ರತಿಕೂಲೋ ಹಿ ಮೇ ಭವಃ ||೪೫||

—ಅಳಿಯನಹಂಥಾ ಶಿವಂಗೆ, ಈದೃಶೀ—ಈ ಪ್ರಕಾರವಹಂಥಾ ಪೂಜಾ—ಪೂಜೆ ಕಿಂ—ಏನುಕಾರಣ ಆಸೀತ್—ಆಯಿತ್ತು. ಯತ್—ಆವುದಾನೊಂದು ಕಾರಣವಾಗಿ ಅಸತ್ಕೃತಾಂ—ಸತ್ಕಾರವಿಲ್ಲದೇ ಇದ್ದಂಥಾ ಗರ್ವಿತಾಂ—ಗರ್ವದ ಸಂಬಂಧವಹೆಂಥಾ ಅವಜ್ಞಾಂ—ಅವಮನ್ನಣೆಯನು ಕೃತವಾನ್—ಮಾಡಿದಾತನು ಅಸಿ—ಆಗುತ್ತಿದ್ದಿ. ||೪೨||

ಏವಂ — ದೇವಿಯಿಂದ ಈ ಪ್ರಕಾರದಲ್ಲಿ ಉಕ್ತಃ — ನುಡಿಯಲುಪಟ್ಟಂಥಾ ದಕ್ಷಃ—ದಕ್ಷನು ಕ್ರೋಧಾತ್—ಕೋಪದ ದೆಸೆಯಿಂದ ಅಮರ್ಷಿತಃ—ಮುಂದುಗಾಣದಾತನಾಗಿ ಏನಾಂ—ಈ ಸತೀದೇವಿಯನು ಕುರಿತು ಅಬ್ರವೀತ್—ನುಡಿದನು. ಬಾಲಾಃ — ಬಾಲೆಯರಹಂಥಾ ಮಮ — ಎನ್ನ ಸುತಾಃ — ಹೆಣ್ಣುಮಕ್ಕಳು [3]ತ್ವತ್ತಶ್ಚ — ನಿನ್ನಿಂದವೂ [ನಿನಗಿಂತಲೂ ಇಷ್ಟಾಃ — ಪ್ರಿಯರು.][3] ವಿಶಿಷ್ಟಾಶ್ಚ—ಶ್ರೇಷ್ಠೆಯರುಗಳು. ಪೂಜ್ಯಾಃ—ಪೂಜ್ಯರುಗಳು. ||೪೩||

ತಾಸಾಂ—ಆ ಹೆಣ್ಣು[4]ಮಕ್ಕಳ[4] ಭರ್ತಾರಶ್ಚೈವ—ಗಂಡರುಗಳು ಯೇ—ಆರು ಕೆಲಬರುಂಟು ತೇ — ಅವರುಗಳು ಮೇ—ಎನಗೆ ಬಹುಮತಾಃ—ಬಹಳ ಮನ್ನಣೆಯನುಳ್ಳಂಥಾ[ವರಾಗಿ] ಮತಾಃ — ಇಷ್ಟರುಗಳು. ಸರ್ವೇಽಪಿ — ಎಲ್ಲಾ ಅಳಿಯಂದಿರು ಗುಣೈಶ್ಚ—ಗುಣಂಗಳಿಂದವೂ ತೇ—ನಿನ್ನ ಭರ್ತುಃ—ಗಂಡನಹಂಥಾ ತ್ರ್ಯಂಬಕಾದಪಿ — ಪರಮೇಶ್ವರನ ದೆಸೆಯಿಂದವೂ ಅಧಿಕಾಃ — ಅಧಿಕವಾಗಿ ಶ್ರೇಷ್ಠರುಗಳು. ||೪೪||

ಶರ್ವಃ — ಪರಮೇಶ್ವರನು ಸ್ತಬ್ಧಾತ್ಮಾ — ಜಡಬುದ್ಧಿಯನುಳ್ಳಾತನು.

---

[1] ತಾಸಾಂ ತು ಯೇ ಚ ಭರ್ತಾರಸ್ತೇ ಮೇ ಬಹುಮತಾ ಮುದಾ (ಘ)

[2] ಶರ್ವಸ್ತ್ವಮಿಮಂ ಸಮುಪಾಶ್ರಿತಾ (ಘ)

[3] [ವ್ಯಾಖ್ಯಾನದಲ್ಲಿ 'ತ್ವತ್ತಃ—ನಿನ್ನಿಂದವೂ ಚೇಷ್ಟಾಃ—ಕ್ರಿಯೆಗಳನುಳ್ಳವರುಗಳು' ಎಂದು ತಪ್ಪಾಗಿ ಬರೆಯಲ್ಪಟ್ಟಿದೆ. 'ತ್ವತ್ತಶ್ಚ + ಇಷ್ಟಾಃ' ಎಂದು ಪದ ವಿಭಜಿಸಿಕೊಂಡಿದ್ದರೆ ಸರಿಯಾದ ಅರ್ಥ ಬರುತ್ತಿತ್ತು. 'ತ್ವತ್ತಃ + ಚೇಷ್ಟಾಃ' ಎಂದಿಟ್ಟುಕೊಂಡಿದ್ದರಿಂದ ಈ ತಪ್ಪು ಆಗಿದೆ.]

[4] ಮಕ್ಕಳುಗಳ (ಖ)

ತಥೋಕ್ತಾ ಪಿತಂರಂ ದಕ್ಷಂ ಕ್ರುದ್ಧಾ ದೇವೀದಮಬ್ರವೀತ್
ಶೃಣ್ವತಾಮೇವ ಸರ್ವೇಷಾಂ [1]ಯೇ ಚಾತ್ರ ಸದಸಿ ಸ್ಥಿತಾಃ[1] ||೪೬||

ದೇವ್ಯುವಾಚ—

ಅಕಸ್ಮಾನ್ಮಮ ಭರ್ತಾರಮಜಾತಾಶೇಷದೂಷಣಮ್
ವಾಚಾ ದೂಷಯಸೇ ದಕ್ಷ ಸಾಕ್ಷಾಲ್ಲೋಕಮಹೇಶ್ವರಮ್ ||೪೭||

[2]ವಿದ್ಯಾಚೋರೋ[2] ಗುರುದ್ರೋಹೀ ವೇದೇಶ್ವರವಿದೂಷಕಃ
[3]ತ ಏವ[3] ಬಹುಪಾಪಾತ್ಮಾನಃ ಸದ್ಯೋ ದಂಡ್ಯಾ ಇತಿ ಶ್ರುತಿಃ ||೪೮||

---

ತಾಮಸಃ — ತಾಮಸನು. ಇಮಂ — ಈ ತಂ—ಆ ಶಿವನನು ತ್ವಂ — ನೀನು ಉಪಾಶ್ರಿತಾ—ಆಶ್ರೈಸಿದಾಯಕನು.[ಆಶ್ರಯಿಸಿದಾತಳು.] ತೇನ—ಆದುಕಾರಣದಿಂದ ತ್ವಾಂ—ನಿನ್ನನು ಅಹಂ—ನಾನು ಅನಮನ್ಯೇ — ಅವಮನ್ನಣೆಯ ಮಾಡಿದೆನು. ಭವಃ—ಶಿವನು ಮೇ—ಎನಗೆ ಪ್ರತಿಕೂಲೋ ಹಿ—ಶತ್ರುವಲಾ. ||೪೫||

ತಥಾ — ಹಾಂಗೆ ದಕ್ಷನಿಂದ ಉಕ್ತಾ—ನುಡಿಯಲುಪಟ್ಟಂಥಾ ದೇವೀ— ಪರಮೇಶ್ವರಿ ಕ್ರುದ್ಧಾ—ಕೋಪಿಸಿದಾ(ಯಕನಾಗಿ)ತಳಾಗಿ ಪಿತರಂ—ತಂದೆಯಹಂಥಾ ದಕ್ಷಂ—ದಕ್ಷನನು ಕುರಿತು ಅತ್ರ ಸದಸಿ—ಈ ಸಭೆಯಲ್ಲಿ ಸ್ಥಿತಾಃ—ಇದ್ದಂಥಾ ವರುಗಳು ಯೇ ಚ — ಆರು ಕೆಲಂಬರುಂಟು, ಶೃಣ್ವತಾಂ — ಕೇಳುತ್ತಿದ್ದಂಥಾ ಸರ್ವೇಷಾಮೇವ — ಸಮಸ್ತರಿಗೆ ಇದಂ — ಈ ವಾಕ್ಯವನು ಅಬ್ರವೀತ್ — ನುಡಿದಳು. ||೪೬||

ದೇವ್ಯುವಾಚ = ದೇವಿಯು ನುಡಿದಳು.

ಭೋ ದಕ್ಷ = ಎಲೇ ದಕ್ಷನೇ! ಅಜಾತಾಶೇಷದೂಷಣಂ = ಹುಟ್ಟಲು ಪಡೆಯದೇಯಿದ್ದ ಸಮಸ್ತ ನಿಂದೆಯನುಳ್ಳಂಥಾ ಸಾಕ್ಷಾತ್ = ಪ್ರತ್ಯಕ್ಷನಾಗಿ ಲೋಕ- ಮಹೇಶ್ವರಂ = ಲೋಕಕ್ಕೆ ಒಡೆಯನಹಂಥಾ ಮಮ = ಎನ್ನ ಭರ್ತಾರಂ = ಗಂಡನಹಂಥಾ ಶಿವನನು ಅಕಸ್ಮಾತ್ = ಕಾರಣವಿಲ್ಲದೇ ಇಹದರ ದೆಸೆಯಿಂದ ವಾಚಾ = ವಾಕ್ಯದಿಂದ ದೂಷಯಸೇ = ದೂಷಿಸುತ್ತಿದ್ದೆ. ||೪೭||

ವಿದ್ಯಾಚೋರಃ = ಗುರುಮುಖವಿಲ್ಲದೇ ಇದ್ದು ವಿದ್ಯವ ಕದ್ದು ಕಲಿವಾತನು, ಗುರುದ್ರೋಹೀ = ಗುರುವಿಂಗೆ ದ್ರೋಹವ ಮಾಡಿದಾತನು, ವೇದೇಶ್ವರವಿದೂಷಕಃ

---

1 ಯೇ ಯಜ್ಞಸದಸಿ ಸ್ಥಿತಾಃ (ಘ) 2 ವಿದ್ಯಾ ಚೌರೋ (ಘ) 3 ತ ಏತೇ (ಘ)

ತಸ್ಮಾದತ್ಯುತ್ಕಟಸ್ಯಾಸ್ಯ ಪಾಪಸ್ಯ [1]ಸದೃಶೋ[1] ಭೃಶಮ್
ಸಹಸಾ ದಾರುಣೋ ದಂಡಃ ತವ ದೇವಾದ್ಭವಿಷ್ಯತಿ ||೪೯||

ತ್ವಯಾ ನ ಪೂಜಿತೋ ಯಸ್ಮಾದ್ದೇವದೇವಸ್ತ್ರಿಯಂಬಕಃ
ತಸ್ಮಾತ್ತವ ಕುಲಂ [2]ದಕ್ಷ[2] ನಷ್ಟಮಿತ್ಯವಧಾರಯ ||೫೦||

ಇತ್ಯುಕ್ತ್ವಾ ಪಿತರಂ [4]ದೃಷ್ಟ್ವಾ[4] ಸತೀ ಸಂತ್ಯಜ್ಯ ಸ್ವಾವ್ಯಯಾ
ತದೀಯಾಂ ಚ ತನುಂ [5]ತ್ಯಕ್ತ್ವಾ[5] ಹಿಮವಂತಂ ಯಯೌ ಗಿರಿಮ್ ||

---

= ವೇದವನ್ನೂ ಈಶ್ವರನನ್ನೂ ದೂಷಿಸಿದಾತನು, ಬಹುಪಾಪ್ಮಾನಃ = ಬಹಳವಹ ಪಾಪವನ್ನುಳ್ಳಂಥಾ ತ ಏವ = ಅವರುಗಳೇ ಸದ್ಯಃ = ಆ ಕ್ಷಣದಲ್ಲಿ ದಂಡ್ಯಾಃ = ಶಿಕ್ಷಿಸಿಕೊಂಬರು. ಇತಿ = ಹೀಂಗೆಂದು ಶ್ರುತಿಃ = ವೇದವು ಹೇಳಿತ್ತು, ||೪೮||

ತಸ್ಮಾತ್ = ಅದು ಕಾರಣವಾಗಿ ಅತ್ಯುತ್ಕಟಸ್ಯ = ಅತಿಹೆಚ್ಚಿದಂಥಾ ಅಸ್ಯ ಪಾಪಸ್ಯ = ಈ ಪಾಪಕ್ಕೆ ಸದೃಶಃ = ಸಮಾನವಹಂಥಾ ದಾರುಣಃ = ಭಯಂಕರವಹಂಥಾ ದಂಡಃ = ಶಿಕ್ಷೆ ಸಹಸಾ = ಬೇಗ ತವ = ನಿನಗೆ ದೇವಾತ್ = ಪರಮೇಶ್ವರನ ದೆಸೆಯಿಂದ ಭೃಶಂ = ಅತ್ಯಂತವಾಗಿ ಭವಿಷ್ಯತಿ = ಆದೂದು. ||೪೯||

ದೇವದೇವಃ = ದೇವದೇವನಹಂಥಾ ತ್ರಿಯಂಬಕಃ = ತ್ರಿಲೋಚನನಹಂಥಾ ಪರಮೇಶ್ವರನು ಯಸ್ಮಾತ್ = ಆವುದಾನೊಂದು ಕಾರಣದ ದೆಸೆಯಿಂದ ತ್ವಯಾ = ನಿನ್ನಿಂದ ನ ಪೂಜಿತಃ = ಪೂಜಿಸಿಕೊಳಲುಪಟ್ಟುದಿಲ್ಲ, ತಸ್ಮಾತ್ = ಅದು ಕಾರಣವಾಗಿ ಭೋಃ ದಕ್ಷ = ಎಲೆ ದಕ್ಷನೇ ! ತವ = ನಿನ್ನ ಕುಲಂ = ಕುಲವು ನಷ್ಟಮಿತಿ = [3]ನಷ್ಟವಾದೀತೆಂದು[3] ಈ ಪ್ರಕಾರದಲ್ಲಿ ಅವಧಾರಯ = ನಿಶ್ಚಯಿಸು. ||೫೦||

ಅವ್ಯಯಾ = ಕೇಡಿಲ್ಲದೇ ಇದ್ದಂಥಾ ಸಾ ಸತೀ = ಆ ಸತೀದೇವಿ ಪಿತರಂ = ತಂದೆಯನು ದೃಷ್ಟ್ವಾ = ಕಂಡು ಇತಿ = ಹೀಗೆಂದು ಉಕ್ತ್ವಾ = ನುಡಿದು, ಸಂತ್ಯಜ್ಯ = ಬಿಟ್ಟು, ತದೀಯಾಂ = ಆ ದಕ್ಷಸಂಬಂಧವಹಂಥಾ ತನುಂ ಚ = ಶರೀರವನು ತ್ಯಕ್ತ್ವಾ = ಬಿಟ್ಟು ಹಿಮವಂತಂ ಗಿರಿಂ = ಹಿಮವತ್ಪರ್ವತವನು ಕುರಿತು ಯಯೌ = ಎಯ್ದಿದಳು. ||೫೧||

---

[1] ಸದೃಶಂ (ಕ.ಖ.) ಸದೃಶೀ (ಗ) ಸದೃಶೋ (ಘ)
[2] ದುಷ್ಟ (ಘ) [3] ನಷ್ಟವಾದೂದೆಂದು (ಖ)
[4] ರುಷ್ಟ್ವಾ (ಘ) [5] ಹಿತ್ವಾ (ಘ)

ಸ ಪರ್ವತವರಃ ಶ್ರೀಮಾನ್ ಲಬ್ಧಪುಣ್ಯಫಲೋದಯಃ
ತದರ್ಥಮೇವ ಕೃತವಾನ್ ಸುಚಿರಂ ದುಶ್ಚರಂ ತಪಃ ||೫೨||

ತಸ್ಮಾತ್ತಮನುಗೃಹ್ಣಾತಿ ಭೂಧರೇಶ್ವರಮೀಶ್ವರೀ[1]
ಸ್ವೇಚ್ಛಯಾ ಪಿತರಂ ಚಕ್ರೇ ಸ್ವಾತ್ಮನೋ ಯೋಗಮಾಯಯಾ ||

ಯದಾ ಗತಾ ಸತೀ ದಕ್ಷಂ ವಿನಿಂದ್ಯ ಭಯವಿಹ್ವಲಾಃ
ತದಾ ತಿರೋಹಿತಾ ಮಂತ್ರಾಃ ವಿಹತಶ್ಚ ತತೋಽಧ್ವರಃ ||೫೪||

ತದುಪಶ್ರುತ್ಯ ಗಮನಂ ದೇವ್ಯಾಸ್ತ್ರಿಪುರಮರ್ದನಃ
ದಕ್ಷಾಯ ಚ ಋಷಿಭ್ಯಶ್ಚ ಚುಕೋಪ ಚ ಶಶಾಪ ತಾನ್ ||೫೫||

---

ಪರ್ವತವರಃ = ಪರ್ವತಂಗಳಿಗೆ ಶ್ರೇಷ್ಠನಹಂಥಾ ಶ್ರೀಮಾನ್ = ಐಶ್ವರ್ಯವನುಳ್ಳಂಥಾ ಲಬ್ಧಪುಣ್ಯಫಲೋದಯಃ = ಹಡೆಯಲುಪಟ್ಟ ಪುಣ್ಯದ ಫಲದ ಉತ್ಪತ್ತಿಯನುಳ್ಳಂಥಾ ಸಃ = ಆ ಹಿಮವತ್ಪರ್ವತನು ತದರ್ಥಮೇವ = ಆ ಪರಮೇಶ್ವರಿ ಮಗಳಾಗಬೇಕೆಂಬ ನಿಮಿತ್ತವಾಗಿ ಸುಚಿರಂ = ಹಲವು (ಹಿರಿದು) ಕಾಲ ದುಶ್ಚರಂ = ಮಾಡಬಾರದೇ ಇದ್ದಂಥಾ ತಪಃ = ತಪಸ್ಸನು ಕೃತವಾನ್ = ಮಾಡಿದನು. ||೫೨||

ತಸ್ಮಾತ್ = ಅನು ಕಾರಣವಾಗಿ ಈಶ್ವರೀ = ಪರಮೇಶ್ವರಿ ಭೂಧರೇಶ್ವರಂ = ಪರ್ವತಂಗಳಿಗೆ ಒಡೆಯನಹಂಥಾ ತಂ = ಆ ಹಿಮವತ್ಪರ್ವತನನು ಅನುಗೃಹ್ಣಾತಿ ಅನುಗ್ರಹಿಸಿದಳು. ಸ್ವಾತ್ಮನಃ = ತನ್ನ ಯೋಗಮಾಯಯಾ = ಯೋಗದ ಮಾಯೆಯಿಂದ ಸ್ವೇಚ್ಛಯಾ = [2]ತನ್ನಿಚ್ಛೆಯಿಂದ[2] ಪಿತರಂ = ತಂದೆಯನ್ನಾಗಿ ಚಕ್ರೇ = ಮಾಡಿಪಳು. ||೫೩||

ಯದಾ = ಆವಾಗ ಸತೀ = ಸತೀದೇವಿ ದಕ್ಷಂ = ದೂಷಕನಹಂಥಾ ದಕ್ಷನನು ವಿನಿಂದ್ಯ = ತಿರಸ್ಕರಿಸಿ ಗತಾ = ಹೋದಳು, ತದಾ = ಆಗ ಮಂತ್ರಾಃ = ಯಜ್ಞಾರ್ಥವಹ ಮಂತ್ರಂಗಳು ಭಯವಿಹ್ವಲಾಃ = ಭೀತಿಯಿಂದ ಮುಂದುಗೆಟ್ಟಂಥಾವಾಗಿ ತಿರೋಹಿತಾಃ = ಅಡಗಿದವು. ತತಃ = ಆ ಮಂತ್ರಂಗಳು ಅಡಗಿದ ಅನಂತರದಲ್ಲಿ ಅಧ್ವರಃ = ಯಜ್ಞವು ವಿಹತಶ್ಚ = ಕೆಟ್ಟುಹೋಯಿತು. ||೫೪||

ತ್ರಿಪುರಮರ್ದನಃ = ತ್ರಿಪುರವ ಮರ್ದಿಸಿದಂಥಾ ಪರಮೇಶ್ವರನು ದೇವ್ಯಾಃ = ಸತೀದೇವಿಯ ತದ್ಗಮನಂ = ಆ ಶರೀರತ್ಯಾಗದ ಗಮನವನು ಉಪಶ್ರುತ್ಯ = ಕೇಳಿ

---

[1] ಮೀಶ್ವರಾ (ಖ) [2] ತನ್ನ ಸ್ವೇಚ್ಛೆಯಿಂದ (ಖ)

ಯಸ್ಮಾದವಮತಾ ದಕ್ಷ [1]ಮತ್ಕೃತೇಽನಾಗಸಾ ಸತೀ।
ಪೂಜಿತಾಶ್ಚೇತರಾಸ್ಸರ್ವಾಃ ಸ್ವಸುತಾ ಭರ್ತೃಭಿಸ್ಸಹ ||೫೬||

ವೈವಸ್ವತೇಽಂತರೇ ತಸ್ಮಾತ್ತವ ಜಾಮಾತರಸ್ತ್ವಮೀ
ಉತ್ಪತ್ಸ್ಯಂತೇ ಸಮಂ ಸರ್ವೇ ಬ್ರಹ್ಮಯಜ್ಞೇ[4]ಹ್ಯ[4]ಯೋನಿಜಾಃ ||೫೭||

ಭವಿತಾ ಮಾರಿಷೋ ರಾಜಾ ಚಾಕ್ಷುಷಸ್ಯ ಸಮನ್ವಯೇ
ಪ್ರಾಚೀನಬರ್ಹಿಷಃ ಪೌತ್ರಃ ಪುತ್ರಶ್ಚಾಪಿ ಪ್ರಚೇತಸಃ ||೫೮||

---

ದಕ್ಷಾಯ ಚ = ದಕ್ಷಂಗೋಸ್ಕರವೂ ಋಷಿಭ್ಯಶ್ಚ = ಋಷಿಗಳಿಗೋಸ್ಕರವೂ ಚುಕೋಪ = ಕೋಪಿಸಿದನು. ತಾಂಶ್ಚ = ಅವರುಗಳನು ಶಶಾಪ = ಶಪಿಸಿದನು. ||೫೫||

ಭೋ ದಕ್ಷ = ಎಲೆ ಮುಂದುಗಾಣದ ದಕ್ಷನೆ ! ಯಸ್ಮಾತ್ = ಆವುದಾನೊಂದು ಕಾರಣವಾಗಿ [1] [ಮತ್ಕೃತೇ = ನನಗಾಗಿ (ನನ್ನ ನಿಮಿತ್ತದಿಂದಾಗಿ) ಅನಾಗಸಾ = ನಿರಪರಾಧಿನಿಯಾದ ಅರ್ಥಾತ್ ಪರಿಶುದ್ಧಳಾದ ನಿನ್ನ ಮಗಳಾದ] ಸತೀ = ಸತೀದೇವಿ [ಅವಮತಾ = ಅಗೌರವಿಸಲ್ಪಟ್ಟಳು,][1] ಇತರಾಃ = ಉಳಿದಂಥಾ ಸರ್ವಾಃ = ಸಮಸ್ತರಹಂಥಾ ಸ್ವಸುತಾಃ = ನಿನ್ನ (ಉಳಿದ) ಹೆಣ್ಣುಮಕ್ಕಳುಗಳು ಭರ್ತೃಭಿಸ್ಸಹ = [2]ಗಂಡರು[2]ಗಳೊಡನೆ ಪೂಜಿತಾಸ್ಟ = ಸತ್ಕಾರ[3]ಮಾಡಲ್ಪಟ್ಟರು[3],

ತಸ್ಮಾತ್ = ಅದು ಕಾರಣವಾಗಿ ವೈವಸ್ವತೇಽಂತರೇ = ವೈವಸ್ವತಮನ್ವಂತರದಲ್ಲಿ ತವ = ನಿನ್ನ ಅಮೀ ಸರ್ವೇ ಜಾಮಾತರಃ = ಈ ಸಮಸ್ತ ಅಳಿಯಂದಿರುಗಳು ಬ್ರಹ್ಮಯಜ್ಞೇ = ಬ್ರಹ್ಮನ ಯಜ್ಞದಲ್ಲಿ ಅಯೋನಿಜಾಃ = ಅಯೋನಿಜರುಗಳಾಗಿ ಸಮಂ = ಒಡನೆ ಉತ್ಪತ್ಸ್ಯಂತೇ ಹಿ — ಹುಟ್ಟಿಯರಲಾ [ಹುಟ್ಟುವರಲ್ತೆ-] ||೫೭|| (ಅಂದಿನ ಕಾಲಕ್ಕೆ ಆವ ಅರಸು ಹುಟ್ಟಿಹನೆಂದಡೆ ಹೇಳುತ್ತಿದ್ದಾನು (ಖ) :—

ಚಾಕ್ಷುಷಸ್ಯ = ಚಾಕ್ಷುಷಮನುವಿನ ಸಮನ್ವಯೇ = ವಂಶದಲ್ಲಿ ಮಾರಿಷಃ = ಮಾರಿಷನೆಂಬಂಥಾ ರಾಜಾ = ಅರಸು ಭವಿತಾ = ಆದಾನು. ಪ್ರಾಚೀನಬರ್ಹಿಷಃ

---

[1] 'ಮತ್ಕೃತೇ = ಎನಗೆ ಮಾಡಿದಂಥಾ ಅವಮತಾ = ಅಮನ್ನಣೆಯಿಂದ ಸತೀ = ಸತೀ-ದೇವಿ ಗತಾ = ಹೋದಳು' ಎಂದು 'ಮತ್ಕೃತೇನ ಗತಾ' ಎಂಬ ಪಾಠವಿಟ್ಟುಕೊಂಡು (ಕ.ಖ) ಪ್ರತಿಗಳು ವ್ಯಾಖ್ಯಾನ ಮಾಡಿವೆ. ಆದರೂ (ಕ) ಪ್ರತಿಯು ಮೂಲಪಾಠ ಮಾತ್ರ 'ಮತ್ಕೃತೇನಾಗಸಾ ಸತೀ' ಎಂದೇ ಇದೆ. (ಗ)ದಲ್ಲಿ 'ಮತ್ಕೃತೇನ ಗತಾ ಸತೀ' ಎಂದಿದೆ. (ಘ) ದಲ್ಲಿ ಮಾತ್ರ 'ಮತ್ಕೃತೇಽನಾಗಸಾ ಸತೀ' ಎಂಬ ಪಾಠವಿದೆ. ವ್ಯಾಖ್ಯಾನದಲ್ಲಿ 'ಅನಾಗಸಾ' ಪದ ಬಿಟ್ಟಿದ್ದರೂ ಮೂಲ ಪಾಠದಲ್ಲಿದೆ. ಉಚಿತ ಪಾಠವನ್ನು [ ] ಕಂಸ ಮಧ್ಯೆ ಕೊಡಲಾಗಿದೆ. ಅವಗ್ರಹಚಿಹ್ನೆಯಿಂದ ಗೊಂದಲವಾಗಿದೆ.

[2] ಗಂಡಂದಿರು (ಖ) [3] ವ ಮಾಡಿಸಿಕೊಳಲುಪಟ್ಟರು (ಖ) [4] ಷ್ವ (ಘ)

ಅಹಂ ತತ್ರಾಪಿ ತೇ ವಿಘ್ನಮಾಚರಿಷ್ಯಾಮಿ ದುರ್ಮತೇ
ಧರ್ಮಾರ್ಥಕಾಮಯುಕ್ತೇಷು ಕರ್ಮಸ್ವಪಿ ಪುನಃ ಪುನಃ ||೫೯||

ತೇನೈವಂ ವ್ಯಾಹೃತೋ ದಕ್ಷೋ ರುದ್ರೇಣಾಮಿತತೇಜಸಾ
ಸ್ವಾಯಂಭುವೀಂ ತನುಂ ತ್ಯಕ್ತ್ವಾ ಪಪಾತ ಭುವಿ ದುಃಖಿತಃ ||೬೦||

ತತಃ ಪ್ರಾಚೇತಸೋ ದಕ್ಷೋ ಜಜ್ಞೇ ವೈ ಚಾಕ್ಷುಷೇಽಂತರೇ
ಪ್ರಾಚೀನಬರ್ಹಿಷಃ ಪೌತ್ರಃ ಪುತ್ರಶ್ಚೈವ ಪ್ರಚೇತಸಃ ||೬೧||

ಭೃಗ್ವಾದಯೋಽಪಿ [1]ಜಾತಾ ವೈ[1] ಮನೋರ್ವೈವಸ್ವತಸ್ಯ ತು
[2] ಅಂತರೇ[2]ಬ್ರಹ್ಮಣೋ ಯಜ್ಞೇ ವಾರುಣೀಂ ಬಿಭ್ರತಸ್ತನುಮ್ ||೬೨||

= ಪ್ರಾಚೀನಬರ್ಹಿಯ ಪೌತ್ರಃ = ಮೊಮ್ಮಗನಾಗಿ ಪ್ರಚೇತಸಃ = ವರುಣಂಗೆ ಪುತ್ರಶ್ಚ = ಮಗನೂ ಅಪಿ = ಅಹೆ. ||೫೮||

ಭೋ ದುರ್ಮತೇ ! = [3]ಎಲೆ ದುಷ್ಟಬುದ್ಧಿಯುಳ್ಳ[3] ದಕ್ಷನೇ ! ತತ್ರಾಪಿ = ಆ ಜನ್ಮದಲ್ಲಿಯೂ ಪುನಃ ಪುನಃ = ಮರಳಿ ಮರಳಿ ತೇ = ನಿನ್ನ ಕರ್ಮಸು = ಕರ್ಮಂಗಳು ಧರ್ಮಾರ್ಥಕಾಮಯುಕ್ತೇಷು ಸತ್ಸು = ಧರ್ಮಾರ್ಥಕಾಮಂಗಳಿಂದ ಕೂಡಿದಂಥಾವಾಗುತ್ತಂವಿರಲು ಅಹಮಪಿ = ನಾನು ವಿಘ್ನಂ = ವಿಘ್ನವನು ಆಚರಿಷ್ಯಾಮಿ = ಮಾಡೇನು. ||೫೯||

ಅಮಿತತೇಜಸಾ = ಹ (ಅ)ವಣಿಸಲು ಬಾರದೇ ಇದ್ದ ತೇಜಸ್ಸನುಳ್ಳಂಥಾ ತೇನ ರುದ್ರೇಣ = ಆ ಪರಮೇಶ್ವರನಿಂದ ಏವಂ = ಈ ಪ್ರಕಾರದಲ್ಲಿ ವ್ಯಾಹೃತಃ = ಹೇಳಲು ಪಟ್ಟಂಥಾ ದಕ್ಷಃ = ಮೂರ್ಖನಹಂಥಾ ದಕ್ಷನು ದುಃಖಿತಃ = ಕ್ಲೇಶಿತನಾಗಿ ಸ್ವಾಯಂಭುವೀಂ = ಬ್ರಹ್ಮನ ಸಂಬಂಧವಹಂಥಾ ತನುಂ = ಶರೀರವನು ತ್ಯಕ್ತ್ವಾ = ಬಿಟ್ಟು ಭುವಿ = ಭೂಮಿಯಲ್ಲಿ ಪಪಾತ = ಬಿದ್ದನು. ||೬೦||

ತತಃ = ಅಸ್ವರಮೇಲೆ ದಕ್ಷೋ ವೈ = ದಕ್ಷನು ಚಾಕ್ಷುಷೇಽಂತರೇ = ಚಾಕ್ಷುಷಮನುವಿನ ಅಂತರದಲ್ಲಿ ಪ್ರಾಚೀನಬರ್ಹಿಷಃ = ಪ್ರಾಚೀನಬರ್ಹಿಯ ಪೌತ್ರಃ = ಮೊಮ್ಮಗನಾಗಿ ಪ್ರಚೇತಸಃ = ವರುಣನ ಪುತ್ರಶ್ಚೈವ = ಪುತ್ರನಾಗಿಯೇ ಪ್ರಾಚೇತಸದಕ್ಷಃ = ಪ್ರಚೇತಸದಕ್ಷನೆಂಬ ನಾಮವನುಳ್ಳಾತನಾಗಿ ಜಜ್ಞೇ = ಹುಟ್ಟಿದನು. ||೬೧||

ವೈವಸ್ವತಸ್ಯ ಮನೋಃ = ವೈವಸ್ವತ ಮನುವಿನ ಅಂತರೇ ತು = ತರುವಾ

1 ದುರ್ಬುದ್ಧಿಯನುಳ್ಳಂಥಾ (ಖ) 2 ತೇ ಜಾತಾ (ಘ) 3 ಅಂತರೋ (ಘ)

ತದಾ ದಕ್ಷಸ್ಯ ಧರ್ಮಾರ್ಥಂ ಪ್ರವೃತ್ತಸ್ಯ ದುರಾತ್ಮನಃ
ಮಹೇಶಃ ಕೃತವಾನ್ವಿಘ್ನಂ ಮನೌ ವೈವಸ್ವತೇ ಸತಿ ||೬೩||

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ-ಪೂರ್ಣಚಂದ್ರಸ್ಯ ಗೋರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ-ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ ಶಿವಾಧಿಕ್ಯಕಥನೇ 'ಪರಮೇಶ್ವರದತ್ತದಕ್ಷಶಾಪಕ್ರಮೋ ನಾಮ'.
ಪಂಚದಶೋಽಧ್ಯಾಯಃ

---

ಯಲ್ಲಿ ಬ್ರಹ್ಮಣಃ = ಬ್ರಹ್ಮನ ಯಜ್ಞೇ = ಯಾಗದಲ್ಲಿ ಭೃಗ್ವಾದಯೋಽಪಿ = ಭೃಗುವೊದಲಾದಂಥಾವರುಗಳು ವಾರುಣೀಂ = ವರುಣನ ಸಂಬಂಧವಹಂಥಾ ತನುಂ = ಶರೀರವನು ಬಿಭ್ರತಃ = ಧರಿಸುತ್ತಿದ್ದಂಥಾವರುಗಳಾಗಿ ಜಾತಾಃ ವೈ = ಹುಟ್ಟದರು.

ವೈವಸ್ವತೇ ಮನೌ ಸತಿ = ವೈವಸ್ವತಮನುವಾಗುತ್ತಿರಲು ತದಾ = ಆಗ ಧರ್ಮಾರ್ಥಂ = ಧರ್ಮನಿಮಿತ್ತವಾಗಿ ಪ್ರವೃತ್ತಸ್ಯ = ವರ್ತಿಸುತ್ತಿದ್ದಂಥಾ ದುರಾತ್ಮನಃ = ದುರ್ಬುದ್ಧಿಯನುಳ್ಳಂಥಾ ದಕ್ಷಸ್ಯ = ದಕ್ಷಂಗೆ ಮಹೇಶಃ = ಪರಮೇಶ್ವರನು ವಿಘ್ನಂ = ವಿಘ್ನವನು ಕೃತವಾನ್ = ಮಾಡಿದನು. ||೬೩||

# ಷೋಡಶೋಽಧ್ಯಾಯಃ

## ( ದಕ್ಷಾಧ್ವರಧ್ವಂಸನಮ್ )

ಶೈವೇ ವಾಯವೀಯಸಂಹಿತಾಯಾಂ—

ಋಷಯ ಊಚುಃ—

ಕಥಂ ದಕ್ಷಸ್ಯ ಧರ್ಮಾರ್ಥಂ ಪ್ರವೃತ್ತಸ್ಯ ದುರಾತ್ಮನಃ
ಮಹೇಶಃ ಕೃತವಾನ್ವಿಘ್ನಮೇತದಿಚ್ಛಾಮ ವೇದಿತುಮ್[1] ||೧||

ವಾಯುರುವಾಚ—

ವಿಶ್ವಸ್ಯ ಜಗತೋ ಮಾತುರಪಿ ದೇವ್ಯಾಸ್ತಪೋಬಲಾತ್
ಪಿತೃಭಾವಮುಪಾಗಮ್ಯ ಮುದಿತೇ ಹಿಮವದ್ಗಿರೌ ||೨||

---

ಶೈವೇ ವಾಯವೀಯಸಂಹಿತಾಯಾಂ = ಶೈವಪುರಾಣದಲ್ಲಿ ವಾಯವೀಯಸಂಹಿತೆ-ಯಲ್ಲಿ ಹೇಳುತ್ತಿದ್ದುದು.

ಋಷಯ ಊಚುಃ = *ನೈಮಿ[ಶಾ]ರಣ್ಯ*ವಾಸಿಗಳಹಂಥಾ ಋಷಿಗಳು ನುಡಿವುತ್ತಿದ್ದಾರು.

ಧರ್ಮಾರ್ಥಂ = ಧರ್ಮನಿಮಿತ್ತವಾಗಿ ಪ್ರವೃತ್ತಸ್ಯ = ವರ್ತಿಸುತ್ತಿದ್ದಂಥಾ ದುರಾತ್ಮನಃ = ದುರ್ಬುದ್ಧಿಯನುಳ್ಳಂಥಾ ದಕ್ಷಸ್ಯ = ದಕ್ಷಂಗೆ ಮಹೇಶಃ = ಪರಮೇಶ್ವರನು ಕಥಂ = ಹೇಂಗೆ ವಿಘ್ನಂ = ವಿಘ್ನವನು ಕೃತವಾನ್ = ಮಾಡಿದನು, ಏತತ್ = ಇದನು ವೇದಿತುಂ = ಅರಿಯಲು ಇಚ್ಛಾಮಃ = ಇಚ್ಛೈಸುತ್ತಿದ್ದೇವು.

ವಾಯುರುವಾಚ = ವಾಯು ನುಡಿದನು.

ವಿಶ್ವಸ್ಯ ಜಗತಃ = ಸಮಸ್ತ ಲೋಕಕ್ಕೆ ಮಾತುಃ = ತಾಯಹಂಥಾ ದೇವ್ಯಾಃ = ಪರಮೇಶ್ವರಿಗೆ ತಪೋಬಲಾತ್ = ತಪಸ್ಸಿನ ಸಾಮರ್ಥ್ಯದ ದೆಸೆಯಿಂದ ಪಿತೃಭಾವಮಪಿ = ತಂದೆಯ ಸ್ವಭಾವವನು ಉಪಾಗಮ್ಯ = ಎಯ್ದಿ ಹಿಮವದ್ಗಿರೌ = ಹಿಮವತ್ಪರ್ವತ[2][ನು][3] [3][ಮುದಿತೇ ಸತಿ = ಸಂತೋಷಿಸುತ್ತಿರಲಾಗಿ,][3] ||೨||

---

[1] ದಿಚ್ಛಾಮಹೇ ವಯಮ್ (ಘ) * ನೈಮಿಷಾರಣ್ಯ (ಕ.ಖ.)

[2] ವನು (ಕ) [3] ಉದಿತೇ ಸತಿ–ಉನ್ನತವಾಗಿರುತ್ತಂವಿರಲೂ (ಕ ಖ)
ಮುದಿತೇ ಸತಿ (ಕ) ಮೂಲ ಪಾಠ

ದೇವೇಽಪಿ ಚ ಕೃತೋದ್ವಾಹೇ ಹಿಮವಚ್ಛಿಖರಾಲಯೇ
ಕ್ರೀಡಮಾನೇಽಂಬಯಾ ಸಾರ್ಧಂ ಕಾಲೇ ಬಹುತಿಥೇ ಗತೇ ||೩||

ವೈವಸ್ವತೇಽಂತರೇ ಪ್ರಾಪ್ತೇ ದಕ್ಷಃ ಪ್ರಾಚೇತಸಃ ಸ್ವಯಮ್
ಅಶ್ವಮೇಧೇನ ಯಜ್ಞೇನ ಯಕ್ಷಮಾಣೋಽನ್ವಪದ್ಯತ ||೪||

ತತೋ ಹಿಮವತಃ ಪೃಷ್ಠೇ ದಕ್ಷೋ ವೈ ಯಜ್ಞಮಾರಭತ್[2]
ಗಂಗಾದ್ವಾರೇ ಶುಭೇ ದೇಶೇ ಮುನಿಸಿದ್ಧನಿಷೇವಿತೇ ||೫||

ತಸ್ಯ ತಸ್ಮಿನ್ಮಖೇ ದೇವಾಸ್ಸರ್ವೇ ಶಕ್ರಪುರೋಗಮಾಃ
ಗಮನಾಯ ಸಮಾಗಮ್ಯ ಬುದ್ಧಿಮಾಪೇದಿರೇ ತದಾ ||೬||

---

ದೇವೇ = ಪರಮೇಶ್ವರನು ಕೃತೋದ್ವಾಹೇ ಸತ್ಯಪಿ = ಮಾಡಲುಪಟ್ಟ ವಿವಾಹವನುಳ್ಳಂಥಾತನಾಗು[3]ತ್ತಿರಲು, [3]ಹಿಮವಚ್ಛಿಖರಾಲಯೇ = ಹಿಮವತ್ಪರ್ವ[4]ತನ[4] ಅರಮನೆಯಲ್ಲಿ ಅಂಬಯಾ ಸಾರ್ಧಂ = ಪಾರ್ವತಿಯೊಡನೆ ಕ್ರೀಡಮಾನೇ ಸತಿ = ಕ್ರೀಡಿಸುತ್ತಂವಿರಲು ಬಹುತಿಥೇ ಕಾಲೇ = ಬಹಳ ಕಾಲವು ಗತೇ ಸತಿ = ಹೋಗುತ್ತಿರಲಾಗಿ, ||೩||

ವೈವಸ್ವತೇಽಂತರೇ = ವೈವಸ್ವತಮನ್ವಂತರವು ಪ್ರಾಪ್ತೇ ಸತಿ = ವರ್ತಿಸುತ್ತಿರಲು ದಕ್ಷಃ = ದಕ್ಷನು ಸ್ವಯಂ = ತಾನೇ ಪ್ರಾಚೇತಸಃ = ವರುಣನ ಪುತ್ರನಾಗಿ ಅಶ್ವಮೇಧೇನ ಯಜ್ಞೇನ = ಅಶ್ವಮೇಧ ಯಜ್ಞದಿಂದ ಯಕ್ಷಮಾಣಃ = ಯಜಿಸಲು ಪಟ್ಟಂಥಾತನಾಗಿ ಅನ್ವಪದ್ಯತ = ಉಪಕ್ರಮಿಸಿದನು. ||೪||

ತತಃ = ಅನಂತರದಲ್ಲಿ ದಕ್ಷಃ = ದಕ್ಷನು ಮುನಿಸಿದ್ಧನಿಷೇವಿತೇ = ಋಷಿಗಳು ಸಿದ್ಧರುಗಳಿಂದ ಇರಲುಪಟ್ಟಂಥಾ ಗಂಗಾದ್ವಾರೇ = ಗಂಗಾಪ್ರವಾಹವನುಳ್ಳಂಥಾ ಶುಭೇ ದೇಶೇ = ಒಪ್ಪುತ್ತಂವಿದ್ಧ ಸ್ಥಾನವನುಳ್ಳಂಥಾ ಹಿಮವತಃ = ಹಿಮವತ್ಪರ್ವತನ ಪೃಷ್ಠೇ = ತಪ್ಪಲಲ್ಲಿ ಯಜ್ಞಂ = ಯಾಗವನು ಆರಭತ್[1] = ಉಪಕ್ರಮಿಸಿದನು. ||೫||

ತದಾ = ಆಗ ತಸ್ಯ = ಆ ದಕ್ಷನ ತಸ್ಮಿನ್ ಮಖೇ = ಆ ಯಜ್ಞದಲ್ಲಿ ಶಕ್ರಪುರೋಗಮಾಃ = ಇಂದ್ರಮೊದಲಾದಂಥಾ ಸರ್ವೇ ದೇವಾಃ = ಸಮಸ್ತ ದೇವರ್ಕಳುಗಳು ಸಮಾಗಮ್ಯ — ಕೂಡಿ ಗಮನಾಯ = ಬರ [ಹೋಗ]ಲೋಸ್ಕರ ಬುದ್ಧಿಂ = ಬುದ್ಧಿಯನು ಆಪೇದಿರೇ = ನಿಶ್ಚೈಸಿದರು. ||೬||

---

[1] ನೇಽಂಬಯಾ (ಘ) [2] ಭೇತ್ (ಖ) [3] ತ್ತಂವಿರಲು (ಖ) [4] ದಶಿಖರದ (ಕ)

ಊಷ್ಮಪಾಃ ಸೋಮಪಾಶ್ಚೈವ ಆಜ್ಯಪಾ ಮಧುಪಾಸ್ತಥಾ
ಅಶ್ವಿನೌ ಪಿತರಶ್ಚೈವ ತಥಾ ಚಾನ್ಯೇ ಮಹರ್ಷಯಃ ||
ವಿಷ್ಣುನಾ ಸಹಿತಾಸ್ಸರ್ವೇ ಹ್ಯಾಗತಾ ಯಜ್ಞಭಾಗಿನಃ ||೭||

ದೃಷ್ಟ್ವಾ ದೇವಕುಲಂ ಕೃತ್ಸ್ನಮೀಶ್ವರೇಣ ವಿನಾ[2]ಕೃತಮ್[2]
ದಧೀಚೋ ಮನ್ಯುನಾಽವಿಷ್ಟೋ ದಕ್ಷಮೇವಮಭಾಷತ ||೮||

[3]ದಧೀಚ ಉವಾಚ[3]—

ಅಪೂಜ್ಯಪೂಜನೇ ಚೈವ ಪೂಜ್ಯಾನಾಂ ಚಾಪ್ಯಪೂಜನೇ
ನರಃ ಪಾಪಮವಾಪ್ನೋತಿ ಮಹತ್ವೈ ನಾತ್ರ ಸಂಶಯಃ ||೯||

ಊಷ್ಮಪಾಃ = ಅಗ್ನಿಜ್ವಾಲೆಯನು ಪಾನವ ಮಾಡುವಂಥಾ ದೇವರ್ಕಳು, ಸೋಮಪಾಶ್ಚೈವ = ಸೋಮಪಾನವ ಮಾಡುವವರುಗಳು, ಆಜ್ಯಪಾಃ = ಆಜ್ಯವನು ಪಾನವ ಮಾಡುವಂಥಾವರುಗಳು ತಥಾ = ಹಾಂಗೆ ಮಧುಪಾಃ = ಜೇನುತುಪ್ಪವನು ಪಾನವ ಮಾಡುವಂಥಾ ದೇವರ್ಕಳೂ ಅಶ್ವಿನೌ = ಅಶ್ವಿನೀದೇವತೆಗಳೂ ಪಿತರಶ್ಚೈವ = ಪಿತೃಗಳೂ ತಥಾ ಚ = ಹಾಂಗೆ ಅನ್ಯೇ = ಮತ್ತೆ ಕೆಲಬರು ದೇವರ್ಕಳು ಮಹರ್ಷಯಃ = ಮಹಾ ಋಷಿಗಳು ಯಜ್ಞಭಾಗಿನಃ = ಯಜ್ಞದಲ್ಲಿ ಭಾಗೆಯನು ಕೊಂಬಂಥಾ ಸರ್ವೇ = ಸಮಸ್ತದೇವರ್ಕಳೂ ವಿಷ್ಣುನಾ = ವಿಷ್ಣುವಿನೊಡನೆ ಸಹಿತಾಃ = ಸಂಘಾತವನುಳ್ಳವರುಗಳಾಗಿ ಆಗತಾ ಹಿ = ಬಂದರಲಾ. ||೭||

ಈಶ್ವರೇಣ ವಿನಾ = ಪರಮೇಶ್ವರನಿಲ್ಲದೇ ಕೃತಂ = ಮಾಡಲುಪಟ್ಟಂಥಾ ಕೃತ್ಸ್ನಂ = ಬಹಳವಹಂಥಾ ದೇವಕುಲಂ = ದೇವರ್ಕಳ ಸಮೂಹವನು ದೃಷ್ಟ್ವಾ = ಕಂಡು ದಧೀಚಃ = ದಧೀಚ ಋಷೀಶ್ವರನು ಮನ್ಯುನಾ = ಕೋಪದಿಂದ ಆವಿಷ್ಟಃ = ಪ್ರವೇಶಿಸಲುಪಟ್ಟಾತನಾಗಿ [ದಕ್ಷಂ = ದಕ್ಷನನು ಕುರಿತು ಏವಂ = ಈ ಪ್ರಕಾರದಲ್ಲಿ) ಅಭಾಷತ = ನುಡಿದನು. ||೮||

ದಧೀಚ ಉವಾಚ = ದಧೀಚ ಮಹಾಋಷಿಯು ನುಡಿದನು.

ಅಪೂಜ್ಯಪೂಜನೇ ಚೈವ = ಪೂಜೆಗೆ ಯೋಗ್ಯರಲ್ಲದವರುಗಳ ಪೂಜಿಸುವಲ್ಲಿಯೂ ಪೂಜ್ಯಾನಾಂ = ಪೂಜೆಗೆ ಯೋಗ್ಯರುಗಳ ಅಪೂಜನೇಽಪಿ = ಪೂಜಿಸದಿಹುದರಲ್ಲಿಯೂ ನರಃ = ಮನುಷ್ಯನು ಮಹತ್ = ದೊಡ್ಡಿತ್ತಹಂಥಾ ಪಾಪಂ ವೈ = ಪಾಪವನು ಅವಾಪ್ನೋತಿ = ಎಯ್ದುತ್ತಿಹನು. ಅತ್ರ ಚ = ಈ ಹೇಳಿದರ್ಥದಲ್ಲಿಯೂ ಸಂಶಯಃ = ಸಂದೇಹವು ನ = ಇಲ್ಲ. ||೯||

---

[2] ಗತಂ (ಘ) [3] ದಧೀಚಿರುವಾಚ (ಕ. ಘ) ದಧೀಚಃ (ಖ.ಚ)

ಅಸತಾಂ ಸನ್ಮತಿರ್ಯತ್ರ ಸತಾಮವಮತಿಸ್ತಥಾ
ದಂಡೋ ದೈವಕೃತಸ್ತತ್ರ ಸದ್ಯಃ ಪತತಿ ದಾರುಣಃ ||೧೦||

ಏವಮುಕ್ತ್ವಾ ತು ವಿಪ್ರರ್ಷಿಃ ಪುನರ್ದಕ್ಷಮಭಾಷತ ||೧೧||

ಕಿಮೇಭಿರಮರೈರನ್ಯೈಃ ಪೂಜಿತೈರಧ್ವರೇ ಫಲಮ್
ರಾಜಾ ಚೇದಧ್ವರಸ್ಯಾಸ್ಯ ನ ರುದ್ರಃ ಪೂಜ್ಯತೇ ತ್ವಯಾ ||೧೨||

ಬ್ರಹ್ಮವಿಷ್ಣುಸುರೇಶಾನಾಂ ಸ್ರಷ್ಟಾ ಯಃ ಪ್ರಭುರವ್ಯಯಃ
ಬ್ರಹ್ಮಾದಯಃ ಪಿಶಾಚಾಂತಾಃ ಯಸ್ಯ ಕಿಂಕರವಾದಿನಃ ||೧೩||

---

ಯತ್ರ=ಆವುದಾನೊಂದು ಠಾವಿನಲ್ಲಿ ಅಸತಾಂ=ಸತ್ಪುರುಷರಲ್ಲದವರುಗಳಿಗೆ ಸನ್ಮತಿಃ=ಮನ್ನಣೆಯಹುದು, ತಥಾ=ಹಾಂಗೆ ಸತಾಂ=ಸತ್ಪುರುಷರುಗಳಿಗೆ ಅವಮತಿಃ=ಅವಮನ್ನಣೆಯಹುದು, ತತ್ರ=ಆ ಠಾವಿನಲ್ಲಿ ದೈವಕೃತಃ=ದೈವದಿಂದ ಮಾಡಲುಪಟ್ಟಂಥಾ ದಾರುಣಃ=ಭಯಂಕರವಹಂಥಾ ದಂಡಃ=ಶಿಕ್ಷೆ ಸದ್ಯಃ=ಆ ಕ್ಷಣದಲ್ಲಿ ಪತತಿ=ಎಯ್ದುತ್ತಿಹುದು. ಪತಲ್ೃ=ಗತೌ ಎಂಬ ಧಾತು. ||೧೦||

ವಿಪ್ರರ್ಷಿಃ=ಬ್ರಹ್ಮಋಷಿಯಹಂಥಾ ದಧೀಚಿ ಏವಂತು=ಈ ಪ್ರಕಾರದಲ್ಲಿಯೂ ಉಕ್ತ್ವಾ=ನುಡಿದು ಪುನಃ=ಮರಳಿ ದಕ್ಷಂ=ದಕ್ಷನನು ಕುರಿತು ಅಭಾಷತ=ನುಡಿದನು.* ||೧೧||

ಅಸ್ಯ ಅಧ್ವರಸ್ಯ=ಈ ಯಜ್ಞಕ್ಕೆ ರಾಜಾ=ಅರಸಹಂಥಾ ರುದ್ರಃ=ಪರಮೇಶ್ವರನು ತ್ವಯಾ=ನಿನ್ನಿಂದ ನ ಪೂಜ್ಯತೇ=ಪೂಜಿಸಿಕೊಳಲುಪಟ್ಟುದಿಲ್ಲ. ಚೇತ್=ಹಾಂಗಾದ ಪಕ್ಷದಲ್ಲಿ ಅಧ್ವರೇ=ಯಜ್ಞದಲ್ಲಿ ಪೂಜಿತೈಃ=ಪೂಜಿಸಿಕೊಳಲುಪಟ್ಟಂಥಾ ಏಭಿಃ=ಈ ಅಮರೈಃ=ದೇವರ್ಕಳಿಂದವು ಅನ್ಯೈಃ=ಋಷಿಗಳಿಂದವೂ ಕಿಂ ಫಲಂ=ಏನು ಪ್ರಯೋಜನವು? ||೧೨||

ಪ್ರಭುಃ=ಒಡೆಯನಹಂಥಾ ಅವ್ಯಯಃ=ಕೇಡಿಲ್ಲದೇ ಇದ್ದಂಥಾ ಯಃ=ಆವನಾನೊಬ್ಬ ಪರಮೇಶ್ವರನು ಬ್ರಹ್ಮವಿಷ್ಣುಸುರೇಶಾನಾಂ=ಬ್ರಹ್ಮವಿಷ್ಣುದೇವೇಂದ್ರರುಗಳ ಸ್ರಷ್ಟಾ=ಸೃಷ್ಟಿಯ ಮಾಡಿದಾತನು ಬ್ರಹ್ಮಾದಯಃ=ಬ್ರಹ್ಮ

---

*ಇದಾದ ನಂತರ 'ದಧೀಚಃ—ದಧೀಚಿ ಋಷಿಯ ವಾಕ್ಯವು (ಖ) ಎಂದಿದೆ.

ಪ್ರಕೃತೀನಾಂ ಪರಶ್ಚೈವ ಪುರುಷಸ್ಯ ಚ ಯಃ ಪ್ರಭುಃ
ಚಿಂತ್ಯತೇ ಯೋಗವಿದ್ವದ್ಭಿರ್ಮುನಿಭಿಸ್ತತ್ತ್ವದರ್ಶಿಭಿಃ ||೧೪||

ಅಕ್ಷರಂ ಪರಮಂ ಬ್ರಹ್ಮ [1]ಯದಸತ್ಸದಸಚ್ಚ ಯತ್[1]
ಅನಾದಿಮಧ್ಯನಿಧನಮಪ್ರತರ್ಕ್ಯಂ ಸನಾತನಮ್ ||೧೫||

ಯಃ ಸ್ರಷ್ಟಾ ಚೈವ ಸಂಹರ್ತಾ ಭರ್ತಾ ಚೈವ ಮಹೇಶ್ವರಃ
ತಸ್ಮಾದನ್ಯಂ ನ ಪಶ್ಯಾಮಿ ಶಂಕರಾನ್ಮಾನ್ಯಮಧ್ವರೇ ||೧೬||

---

ಮೊದಲಾದಂಥಾ [2]ತ್ರಯಸ್ತ್ರಿಂಶತ್ಕೋಟಿ ದೇವರ್ಕಳು[2] ಪಿಶಾಚಾಂತಾಃ = [3]ಪಿಶಾಚಿಗಳು ಕಡೆ[3]ಯಾದಂಥಾವರುಗಳು ಯಸ್ಯ = ಆವನಾನೋರ್ವ ಪರಮೇಶ್ವರಂಗೆ ಕಿಂಕರವಾದಿನಃ = ಏನು ಸೇವೆಯ ಮಾಡಬೇಕೆಂದು ಬಿನ್ನೈಸುತ್ತಿಹರು. ||೧೩||

ಯಃ = ಆವನಾನೊಬ್ಬ ಪರಮೇಶ್ವರನು ಪ್ರಕೃತೀನಾಂ = ಮಾಯಾತತ್ತ್ವಂಗಳಿಗೆ ಪರಃ = ಮೇಲಣಾತನು. ಪುರುಷಸ್ಯ ಚೈವ = ಆತ್ಮಂಗೆಯೂ ಪ್ರಭುಃ = ಒಡೆಯ[4]ನಹಾತನು[4]. ಯೋಗವಿದ್ವದ್ಭಿಃ = ಯೋಗದಲ್ಲಿ ಬಲ್ಲಿದರಹಂಥಾ (ಯೋಗವನು ಬಲ್ಲಂಥಾ ಯೋಗಿಗಳಿಂದ) ತತ್ತ್ವದರ್ಶಿಭಿಃ = ತತ್ತ್ವನಿಶ್ಚಯವನು ಕಂಡಂಥಾ ಮುನಿಭಿಶ್ಚ = ಋಷಿಗಳಿಂದವು ಚಿಂತ್ಯತೇ = ಧ್ಯಾನಿಸಿಕೊಳಲುಪಡುತ್ತಿಹನು. ||೧೪||

ಯತ್ = ಆವುದಾನೊಂದು ಕಾರಣವಾಗಿ ಅಸತ್ = ಸತ್ಸ್ವರೂಪ[5]ನಲ್ಲದೇ[5] ಇದ್ದಂಥಾ ಸದಸತ್ = ಸತ್ಸ್ವರೂಪ ಅಸತ್ಸ್ವರೂಪನಹಂಥಾ ಅನಾದಿಮಧ್ಯ-ನಿಧನಂ = ಆದಿ ಮಧ್ಯ ಅವಸಾನವಿಲ್ಲದೇ ಇದ್ದಂಥಾ ಅಪ್ರತರ್ಕ್ಯಂ = ಊಹೆಗೆ ನಿಲುಕದಂಥಾ (ಊಹಿಸಲು ಬಾರದೆ ಇದ್ದಂಥಾ) ಸನಾತನಂ = ನಿತ್ಯ (ಸನಾತನ)ನಹಂಥಾ ಅಕ್ಷರಂ = ಕೇಡಿಲ್ಲದೇ ಇದ್ದಂಥಾ ಯತ್ಪರಂ ಬ್ರಹ್ಮ = ಆವುದಾನೊಂದು ಪರಬ್ರಹ್ಮಸ್ವರೂಪನಹಂಥಾತನೀಗ ಶಿವನು. ||೧೫||

ಯಃ ಮಹೇಶ್ವರ ಏವ = ಆವನಾನೊಬ್ಬ ಪರಮೇಶ್ವರನೇ ಸ್ರಷ್ಟಾ ಚ = ಸೃಷ್ಟಿಯ ಮಾಡುವನು ಭರ್ತಾ ಚ = ಪಾಲಿಸುವನು ಸಂಹರ್ತಾ ಏವ = ಸಂಹರಿಸುವನು ತಸ್ಮಾತ್ = ಆದಕಾರಣದ ದೆಸೆಯಿಂದ (ಅದು ಕಾರಣವಾಗಿ) ಅಧ್ವರೇ =

---

[1] (ಘ) ಮೂಲ ಪಾಠ. ಯಚ್ಚ ಸತ್ತದಸಚ್ಚ ಯತ್ (ಘ) ಪಾಠಾಂತರ
[2] (ಖ) ಪಾಠ [3] ಪಿಶಾಚ ಕೊನೆ (ಕ) [4] ನು (ಖ) [5] ವಲ್ಲದೇ (ಖ)

ಯಸ್ಮಾನ್ನಾರಾಧಿತೋ ರುದ್ರಸ್ಸರ್ವದೇವೇಶ್ವರೇಶ್ವರಃ
ತಸ್ಮಾದ್ದಕ್ಷ ತವಾಶೇಷೋ [1]ಯಜ್ಞೋಽಯಂ[1] ನ ಭವಿಷ್ಯತಿ ||೧೭||

ಇತ್ಯುಕ್ತ್ವಾ ವಚನಂ ಕ್ರುದ್ಧೋ [2]ದಧೀಚೋ ಮುನಿಸತ್ತಮಃ[2]
ನಿರ್ಗತ್ಯ ಚ ತತೋ ದೇಶಾಜ್ಜಗಾಮ ಸ್ವಕಮಾಶ್ರಮಮ್ ||೧೮||

ನಿರ್ಗತೇಽಪಿ ಮುನೌ ತಸ್ಮಿನ್ ದೇವಾ ದಕ್ಷಂ ನ ತತ್ಯಜುಃ
ಅವಶ್ಯಮನುಭಾವ್ಯತ್ವಾದನರ್ಥಸ್ಯ ತು ಭಾವಿನಃ ||೧೯||

---

ಯಜ್ಞದಲ್ಲಿ ಶಂಕರಾತ್ = ಈಶ್ವರನ ದೆಸೆಯಿಂದಲೂ ಮಾನ್ಯಂ = ಪೂಜ್ಯನಹಂಥಾ ಅನ್ಯಂ = ಮತ್ತೊಬ್ಬ ದೇವನನು ನ ಪಶ್ಯಾಮಿ = ಕಾಣೆನು. ||೧೬||

ಸರ್ವದೇವೇಶ್ವರೇಶ್ವರಃ = ಸಮಸ್ತ ದೇವರ್ಕಳ [3]ಒಡೆಯನಹಂಥಾ[3] ರುದ್ರಃ = ಪರಮೇಶ್ವರನು ಯಸ್ಮಾತ್ = ಆವುದಾನೊಂದು ಕಾರಣವಾಗಿ ಆರಾಧಿತೋ ನ = ಆರಾಧಿಸಿಕೊಳಲುಪಟ್ಟುದಿಲ್ಲ ತಸ್ಮಾತ್ = ಅದು ಕಾರಣವಾಗಿ ಭೋ ದಕ್ಷ = ಎಲೆ ದಕ್ಷನೇ ! ತವ = ನಿನ್ನ ಅಶೇಷಃ = ಬಹಳವಹೆಂಥಾ ಅಯಂ = ಈ ಯಜ್ಞಃ = ಯಾಗವು ನ ಭವಿಷ್ಯತಿ = ಆಗದು. ||೧೭||

ಮುನಿಸತ್ತಮಃ = ಋಷಿಗಳಿಗೆ ಶ್ರೇಷ್ಠನಹಂಥಾ ದಧೀಚಃ = ದಧೀಚಮಹಾ [4]ಋಷೀ[4]ಶ್ವರನು ಕ್ರುದ್ಧಃ = ಕ್ರೋಧಿತನಾಗಿ ಇತಿ = ಹೀಂಗೆಂದು ವಚನಂ = ವಾಕ್ಯವನು ಉಕ್ತ್ವಾ = ನುಡಿದು ತತಃ = ಅಷ್ಟರಮೇಲೆ ದೇಶಾತ್ = ದಕ್ಷನ ಯಾಗಮಂಟಪದ ಸ್ಥಾನದ ದೆಸೆಯಿಂದ ನಿರ್ಗತ್ಯ = ಹೊರವಂಟು ಸ್ವಕಂ = ತನ್ನ ಸಂಬಂಧವಹಂಥಾ ಆಶ್ರಮಂ = ಆಶ್ರಮವನು ಜಗಾಮ = ಎಯ್ದಿದನು. ||೧೮||

ತಸ್ಮಿನ್ ಮುನೌ = ಆ ದಧೀಚಿ ಮಹಾಋಷಿ ನಿರ್ಗತೇ ಸತ್ಯಪಿ = ಹೊರವಡುತ್ತಿರಲಾಗಿ ದೇವಾಃ = ದೇವರ್ಕಳು ಅನರ್ಥಸ್ಯ = ಅನರ್ಥವ ಅವಶ್ಯಂ = ನಿಶ್ಚಯವಾಗಿ ಅನುಭಾವ್ಯತ್ವಾತ್ = ಅನುಭವಿಸುವತನದ ದೆಸೆಯಿಂದ ಭಾವಿನಃ = ಆಗಲುಳ್ಳವರುಗಳಾಗಿ ದಕ್ಷಂ ತು = ದಕ್ಷನನು ನ ತತ್ಯಜುಃ = ಬಿಟ್ಟುದಿಲ್ಲವು.

---

[1] ಯಾಗೋಽಯಂ (ಗ) [2] ದಧೀಚಮುನಿಸತ್ತಮಃ (ಘ)
[3] ಒಡೆಯರಿಗೊಡೆಯನಹಂಥಾ (ಖ) [4] ಮುನೀ (ಖ)

ಪ್ರಕೃತೀನಾಂ ಪರಶ್ಚೈವ ಪುರುಷಸ್ಯ ಚ ಯಃ ಪ್ರಭುಃ
ಚಿಂತ್ಯತೇ ಯೋಗವಿದ್ವದ್ಭಿರ್ಮುನಿಭಿಸ್ತತ್ತ್ವದರ್ಶಿಭಿಃ ||೧೪||

ಅಕ್ಷರಂ ಪರಮಂ ಬ್ರಹ್ಮ [1]ಯದಸತ್ಸದಸಚ್ಚ ಯತ್[1]
ಅನಾದಿಮಧ್ಯನಿಧನಮಪ್ರತರ್ಕ್ಯಂ ಸನಾತನಮ್ ||೧೫||

ಯಃ ಸ್ರಷ್ಟಾ ಚೈವ ಸಂಹರ್ತಾ ಭರ್ತಾ ಚೈವ ಮಹೇಶ್ವರಃ
ತಸ್ಮಾದನ್ಯಂ ನ ಪಶ್ಯಾಮಿ ಶಂಕರಾನ್ಮಾನ್ಯಮಧ್ವರೇ ||೧೬||

---

ಮೊದಲಾದಂಥಾ [2]ತ್ರಯಸ್ತ್ರಿಂಶತ್ಕೋಟಿ ದೇವರ್ಕಳು[2] ಪಿಶಾಚಾಂತಾಃ = [3]ಪಿಶಾಚಿಗಳು ಕಡೆ[3]ಯಾದಂಥಾವರುಗಳು ಯಸ್ಯ = ಆವನಾನೋರ್ವ ಪರಮೇಶ್ವರಂಗೆ ಕಿಂಕರವಾದಿನಃ = ಏನು ಸೇವೆಯ ಮಾಡಬೇಕೆಂದು ಬಿನ್ನೈಸುತ್ತಿಹರು. ||೧೩||

ಯಃ = ಆವನಾನೊಬ್ಬ ಪರಮೇಶ್ವರನು ಪ್ರಕೃತೀನಾಂ = ಮಾಯಾತತ್ತ್ವಂಗಳಿಗೆ ಪರಃ = ಮೇಲಣಾತನು. ಪುರುಷಸ್ಯ ಚೈವ = ಆತ್ಮಂಗೆಯೂ ಪ್ರಭುಃ = ಒಡೆಯ[4]ನಹಾತನು[4]. ಯೋಗವಿಸ್ವದ್ಭಿಃ = ಯೋಗದಲ್ಲಿ ಬಲ್ಲಿದರಹಂಥಾ (ಯೋಗವನು ಬಲ್ಲಂಥಾ ಯೋಗಿಗಳಿಂದ) ತತ್ತ್ವದರ್ಶಿಭಿಃ = ತತ್ತ್ವನಿಷ್ಠ ಯುವನು ಕಂಡಂಥಾ ಮುನಿಭಿಶ್ಚ = ಋಷಿಗಳಿಂದವು ಚಿಂತ್ಯತೇ = ಧ್ಯಾನಿಸಿಕೊಳಲುಪಡುತ್ತಿಹನು. ||೧೪||

ಯತ್ = ಆವುದಾನೊಂದು ಕಾರಣವಾಗಿ ಅಸತ್ = ಸತ್ಸ್ವರೂಪ[5]ನಲ್ಲದೇ[5] ಇದ್ದಂಥಾ ಸದಸತ್ = ಸತ್ಸ್ವರೂಪ ಅಸತ್ಸ್ವರೂಪವಹಂಥಾ ಅನಾದಿಮಧ್ಯನಿಧನಂ = ಆದಿ ಮಧ್ಯ ಅವಸಾನವಿಲ್ಲದೇ ಇದ್ದಂಥಾ ಅಪ್ರತರ್ಕ್ಯಂ = ಊಹೆಗೆ ನಿಲುಕದಂಥಾ (ಊಹಿಸಲು ಬಾರದೆ ಇದ್ದಂಥಾ) ಸನಾತನಂ = ನಿತ್ಯ (ಸನಾತನ)ನಹಂಥಾ ಅಕ್ಷರಂ = ಕೇಡಿಲ್ಲದೇ ಇದ್ದಂಥಾ ಯತ್ಪರಂ ಬ್ರಹ್ಮ = ಆವುದಾನೊಂದು ಪರಬ್ರಹ್ಮಸ್ವರೂಪನಹಂಥಾತನೀಗ ಶಿವನು. ||೧೫||

ಯಃ ಮಹೇಶ್ವರ ಏವ = ಆವನಾನೊಬ್ಬ ಪರಮೇಶ್ವರನೇ ಸ್ರಷ್ಟಾ ಚ = ಸೃಷ್ಟಿಯ ಮಾಡುವನು ಭರ್ತಾ ಚ = ಪಾಲಿಸುವನು ಸಂಹರ್ತಾ ಏವ = ಸಂಹರಿಸುವನು ತಸ್ಮಾತ್ = ಆದಕಾರಣದ ದೆಸೆಯಿಂದ (ಅದು ಕಾರಣವಾಗಿ) ಅಧ್ವರೇ =

---

[1] (ಘ) ಮೂಲ ಪಾಠ. ಯಚ್ಚ ಸತ್ತದಸಚ್ಚ ಯತ್ (ಘ) ಪಾಠಾಂತರ
[2] (ಖ) ಪಾಠ [3] ಪಿಶಾಚ ಕೊನೆ (ಕ) [4] ನು (ಖ) [5] ವಲ್ಲದೇ (ಖ)

ಯಸ್ಮಾನ್ನಾರಾಧಿತೋ ರುದ್ರಸ್ಸರ್ವದೇವೇಶ್ವರೇಶ್ವರಃ
ತಸ್ಮಾದ್ದಕ್ಷ ತವಾಶೇಷೋ [1]ಯಜ್ಞೋಽಯಂ[1] ನ ಭವಿಷ್ಯತಿ ||೧೭||

ಇತ್ಯುಕ್ತ್ವಾ ವಚನಂ ಕ್ರುದ್ಧೋ [2]ದಧೀಚೋ ಮುನಿಸತ್ತಮಃ[2]
ನಿರ್ಗತ್ಯ ಚ ತತೋ ದೇಶಾಜ್ಜಗಾಮ ಸ್ವಕಮಾಶ್ರಮಮ್ ||೧೮||

ನಿರ್ಗತೇಽಪಿ ಮುನೌ ತಸ್ಮಿನ್ ದೇವಾ ದಕ್ಷಂ ನ ತತ್ಯಜುಃ
ಅವಶ್ಯಮನುಭಾವ್ಯತ್ವಾದನರ್ಥಸ್ಯ ತು ಭಾವಿನಃ ||೧೯||

---

ಯಜ್ಞದಲ್ಲಿ ಶಂಕರಾತ್ = ಈಶ್ವರನ ದೆಸೆಯಿಂದಲೂ ಮಾನ್ಯಂ = ಪೂಜ್ಯನಹಂಥಾ ಅನ್ಯಂ = ಮತ್ತೊಬ್ಬ ದೇವನನು ನ ಪಶ್ಯಾಮಿ = ಕಾಣೆನು. ||೧೬||

ಸರ್ವದೇವೇಶ್ವರೇಶ್ವರಃ = ಸಮಸ್ತ ದೇವರ್ಕಳ [3]ಒಡೆಯನಹಂಥಾ[3] ರುದ್ರಃ = ಪರಮೇಶ್ವರನು ಯಸ್ಮಾತ್ = ಆವುದಾನೊಂದು ಕಾರಣವಾಗಿ ಆರಾಧಿತೋ ನ = ಆರಾಧಿಸಿಕೊಳಲುಪಟ್ಟುದಿಲ್ಲ ತಸ್ಮಾತ್ = ಅದು ಕಾರಣವಾಗಿ ಭೋ ದಕ್ಷ = ಎಲೆ ದಕ್ಷನೇ ! ತವ = ನಿನ್ನ ಅಶೇಷಃ = ಬಹಳವಹೆಂಥಾ ಅಯಂ = ಈ ಯಜ್ಞಃ = ಯಾಗವು ನ ಭವಿಷ್ಯತಿ = ಆಗದು. ||೧೭||

ಮುನಿಸತ್ತಮಃ = ಋಷಿಗಳಿಗೆ ಶ್ರೇಷ್ಠನಹಂಥಾ ದಧೀಚಃ = ದಧೀಚಮಹಾ [4]ಋಷೀ[4]ಶ್ವರನು ಕ್ರುದ್ಧಃ = ಕ್ರೋಧಿತನಾಗಿ ಇತಿ = ಹೀಂಗೆಂದು ವಚನಂ = ವಾಕ್ಯವನು ಉಕ್ತ್ವಾ = ನುಡಿದು ತತಃ = ಅಷ್ಟರಮೇಲೆ ದೇಶಾತ್ = ದಕ್ಷನ ಯಾಗಮಂಟಪದ ಸ್ಥಾನದ ದೆಸೆಯಿಂದ ನಿರ್ಗತ್ಯ = ಹೊರವಂಟು ಸ್ವಕಂ = ತನ್ನ ಸಂಬಂಧವಹಂಥಾ ಆಶ್ರಮಂ = ಆಶ್ರಮವನು ಜಗಾಮ = ಎಯ್ದಿದನು. ||೧೮||

ತಸ್ಮಿನ್ ಮುನೌ = ಆ ದಧೀಚಿ ಮಹಾಋಷಿ ನಿರ್ಗತೇ ಸತ್ಯಪಿ = ಹೊರವಡುತ್ತಿರಲಾಗಿ ದೇವಾಃ = ದೇವರ್ಕಳು ಅನರ್ಥಸ್ಯ = ಅನರ್ಥವ ಅವಶ್ಯಂ = ನಿಶ್ಚಯವಾಗಿ ಅನುಭಾವ್ಯತ್ವಾತ್ = ಅನುಭವಿಸುವತನದ ದೆಸೆಯಿಂದ ಭಾವಿನಃ = ಆಗಲುಳ್ಳವರುಗಳಾಗಿ ದಕ್ಷಂ ತು = ದಕ್ಷನನು ನ ತತ್ಯಜುಃ = ಬಿಟ್ಟುದಿಲ್ಲವು.

---

1 ಯಾಗೋಽಯಂ (ಗ) 2 ದಧೀಚಮುನಿಸತ್ತಮಃ (ಘ)
3 ಒಡೆಯರಿಗೊಡೆಯನಹಂಥಾ (ಖ) 4 ಮುನೀ (ಖ)

ಏತಸ್ಮಿನ್ನೇವ ಕಾಲೇ ತು ಜ್ಞಾತ್ವಾ ತತ್ಸರ್ವಮೀಶ್ವರಮ್
ದಗ್ಧುಂ ದಕ್ಷಾಧ್ವರಂ [1]ಕ್ಷಿಪ್ರಾದ್ದೇವೀ[1] ದೇವಮಚೋದಯತ್ ||೨೦||

ದೇವ್ಯಾ ಸಂಚೋದಿತೋ ದೇವೋ ದಕ್ಷಾಧ್ವರಜಿಘಾಂಸಯಾ
ಸಸರ್ಜ ಸಹಸಾ ವೀರಂ ವೀರಭದ್ರಂ ಗಣೇಶ್ವರಮ್ ||೨೧||

ಸಹಸ್ರವದನಂ ದೇವಂ ಸಹಸ್ರಚರಣೇಕ್ಷಣಮ್
ಸಹಸ್ರಮುದ್ಗರಧರಂ[2] ಸಹಸ್ರಶತಪಾಣಿಕಮ್[2] ||೨೨||

ಶೂಲಟಂಕಗದಾಹಸ್ತಂ ದೀಪ್ತಕಾರ್ಮುಕಧಾರಿಣಮ್
ಚಕ್ರವಜ್ರಧರಂ ಘೋರಂ ಚಂದ್ರಾರ್ಧಕೃತಶೇಖರಮ್ ||೨೩||

---

ಏತಸ್ಮಿನ್‌ಕಾಲೇ ಏವ = ಈ ಕಾಲದಲ್ಲಿಯೇ ತತ್ಸರ್ವಂ = ಅದೆಲ್ಲವನು ಜ್ಞಾತ್ವಾ = ಅರಿದು ದೇವೀ = ಪಾರ್ವತೀದೇವಿ ಕ್ಷಿಪ್ರಾತ್ = ಬೇಗದ ದೆಸೆಯಿಂದ ದಕ್ಷಾಧ್ವರಂ = ದಕ್ಷನ ಯಾಗವನು ದಗ್ಧುಂ = ದಹನವ ಮಾಡಲೋಸ್ಕರ ದೇವಂ = ಪ್ರಕಾಶಸ್ವರೂಪನಹಂಥಾ ಈಶ್ವರಂ ತು = ಪರಮೇಶ್ವರನನು ಕುರಿತು ಅಚೋದಯತ್ = ಪ್ರೇರಿಸಿದಳು. ಚುದ—ಪ್ರೇರಣೇ ಇತಿ ಧಾತುಃ ||೨೦||

ದೇವ್ಯಾ = ಪಾರ್ವತೀದೇವಿಯಿಂದ ಸಂಚೋದಿತಃ = ಪ್ರೇರಿಸಲುಪಟ್ಟಂಥಾ ದೇವಃ = ಪರಮೇಶ್ವರನು ದಕ್ಷಾಧ್ವರಜಿಘಾಂಸಯಾ = ದಕ್ಷನ ಯಾಗವ ಕೆಡಿಸುವ ಇಚ್ಛೆಯಿಂದ ಸಹಸಾ = ಆ ಕ್ಷಣದಲ್ಲಿ ವೀರಂ = ವೀರನಹಂಥಾ ವೀರಭದ್ರಂ = ವೀರಭದ್ರನನು ಸಸರ್ಜ = ಸೃಷ್ಟಿಸಿದನು. ||೨೧||

ಸಹಸ್ರವದನಂ = ಸಾವಿರ ಮುಖಂಗಳನುಳ್ಳಂಥಾ ಸಹಸ್ರಚರಣೇಕ್ಷಣಂ = ಸಾವಿರ ಪಾದ ಸಾವಿರ ನಯನಂಗಳನುಳ್ಳಂಥಾ ಸಹಸ್ರಮುದ್ಗರಧರಂ = ಸಾವಿರ ಕಬ್ಬುನದ ಡಾಣೆಯು ಧರಿಸಿದಂಥಾ ಸಹಸ್ರಶತಪಾಣಿಕಂ = ಒಂದು ಲಕ್ಷ ಭುಜಸನುಳ್ಳಂಥಾ ದೇವಂ = ಪ್ರಕಾಶಿಸುತ್ತಿದ್ದಂಥಾ, ||೨೨||

ಶೂಲಟಂಕಗದಾಹಸ್ತಂ = ತ್ರಿಶೂಲ ಟಂಕ ಗದಾಹಸ್ತವನುಳ್ಳಂಥಾ ದೀಪ್ತ-ಕಾರ್ಮುಕಧಾರಿಣಂ = ಹೊಳವುತ್ತಿದ್ದ ಬಿಲ್ಲ ಧರಿಸಿದಂಥಾ ಚಕ್ರವಜ್ರಧರಂ = ಚಕ್ರವಜ್ರಗಳ ಧರಿಸಿದಂಥಾ ಚಂದ್ರಾರ್ಧಕೃತಶೇಖರಂ = ಅರ್ಧಚಂದ್ರನಿಂದ ಅಲಂಕಾರವ ಮಾಡಲುಪಟ್ಟ ಮಕುಟವನುಳ್ಳಂಥಾ ಘೋರಂ = ಭಯಂಕರವಹಂಥಾ,

---

[1] ಕ್ಷಿಪ್ರಂ ದೇವೀ (ಘ) [2] ಸಹಸ್ರಶರಪಾಣಿಕಂ (ಘ)

ಕುಲಿಶೋದ್ಯೋತಿತಕರಂ ತಟಿದುಜ್ಜ್ವಲಮೂರ್ಧಜಮ್
ದಂಷ್ಟ್ರಾಕರಾಲಂ ಬಿಭ್ರಾಣಂ ಮಹಾವಕ್ತ್ರಂ ಮಹೋದರಮ್ ||೨೪||

ವಿದ್ಯುಜ್ಜಿಹ್ವಂ ಪ್ರಲಂಬೋಷ್ಠಂ ಮೇಘಸಾಗರನಿಸ್ಸ್ವನಮ್
ವಸಾನಂ ಚರ್ಮ ವೈಯಾಘ್ರಂ ಮಹಾರುಧಿರನಿಸ್ಸ್ರವಮ್ ||೨೫||

ಗಂಡದ್ವಿತಯಸಂಸ್ಪೃಷ್ಟಮಂಡಲೀಕೃತಕುಂಡಲಮ್
ವರಾಮರಶಿರೋಮಾಲಾವಲೀಕಲಿತಶೇಖರಮ್ ||೨೬||

ರಣನ್ನೂಪುರಕೇಯೂರಮಹಾಕಟಕಭೂಷಿತಮ್
ರತ್ನಸಂಚಯಸಂದೀಪ್ತಹಾರಭಾರಾವೃತೋರಸಮ್ ||೨೭||

---

ಕುಲಿಶೋದ್ಯೋತಿತಕರಂ = ವಜ್ರದಿಂದ ಪ್ರಕಾಶಿಸಲುಪಟ್ಟ ಹಸ್ತವನುಳ್ಳಂಥಾ ತಟಿದುಜ್ಜ್ವಲಮೂರ್ಧಜಂ = ಮಿಂಚಿನೋಪಾದಿ ಹೊಳವುತ್ತಿದ್ದ ಜೆಡೆಯನುಳ್ಳಂಥಾ ದಂಷ್ಟ್ರಾಕರಾಳಂ = ದಾಡೆಗಳಿಂದ ಭಯಂಕರವನು ಬಿಭ್ರಾಣಂ = ಧರಿಸುತ್ತಂ ಇದ್ದಂಥಾ ಮಹಾವಕ್ತ್ರಂ = ದೊಡ್ಡಿಹ ಮುಖಂಗಳನುಳ್ಳಂಥಾ ಮಹೋದರಂ = ದೊಡ್ಡಿಹ ಉದರವನುಳ್ಳಂಥಾ, ||೨೪||

ವಿದ್ಯುಜ್ಜಿಹ್ವಂ = ಮಿಂಚಿನೋಪಾದಿ ನಾಲಗೆಯನುಳ್ಳಂಥಾ ಪ್ರಲಂಬೋಷ್ಠಂ = ಅತ್ಯಂತ ನೇಲುತ್ತಂವಿದ್ದ ತುಟಿಗಳನುಳ್ಳಂಥಾ ಮೇಘಸಾಗರನಿಸ್ಸ್ವನಂ = ಮೇಘ ಸಮುದ್ರಂಗಳೋಪಾದಿ ಧ್ವನಿಯನುಳ್ಳಂಥಾ ವೈಯಾಘ್ರಂ = ಹುಲಿಯ ಸಂಬಂಧವಹಂಥಾ ಮಹಾರುಧಿರನಿಸ್ಸ್ರವಂ = ಒಹಳ ರಕ್ತ ಸುರಿವುತ್ತಿದ್ದಂಥಾ ಚರ್ಮ = ಚರ್ಮವನು ವಸಾನಂ = ಹೊದ್ದುಕೊಂಡಿದ್ದಂಥಾ, ||೨೫||

ಗಂಡದ್ವಿತಯಸಂಸ್ಪೃಷ್ಟಮಂಡಲೀಕೃತಕುಂಡಲಂ = ಗಲ್ಲಗಳೆರಡರಲ್ಲಿ[1]ಒರಸು[1]ತ್ತಿರ್ದ ವೃತ್ತಾಕಾರವಾಗಿ ಮಾಡಲುಪಟ್ಟ ಕುಂಡಲಂಗಳನುಳ್ಳಂಥಾ ವರಾಮರಶಿರೋ-ಮಾಲಾವಲೀಕಲಿತಶೇಖರಂ = ಮುಖ್ಯವಹಂಥಾ ದೇವರ್ಕಳ ಶಿರೋಮಾಲೆಗಳ ಸಮೂಹದಿಂದ ಸಂಬಂಧಿಸಲುಪಟ್ಟ ಜಟಾಮಕುಟವನುಳ್ಳಂಥಾ. ||೨೬||

ರಣನ್ನೂಪುರಕೇಯೂರಮಹಾಕಟಕಭೂಷಿತಂ = ಧ್ವನಿಗೆಯ್ಯುತ್ತಂವಿದ್ದ ಜೆಡೆಯ, ಬಾಹುಪೂರೆಯ, ದೊಡ್ಡಿಹ ಕಡಗಂಗಳಿಂದ ಅಲಂಕರಿಸಲುಪಟ್ಟಂಥಾ ರತ್ನ-ಸಂಚಯಸಂದೀಪ್ತಹಾರಭಾರಾವೃತೋರಸಂ = ರತ್ನಂಗಳ ಸಮೂಹದಿಂದ ಹೊಳವುತ್ತಿದ್ದ ಹಾರಂಗಳ ಭಾರದಿಂದ ಮುಸುಕಲುಪಟ್ಟ ವಕ್ಷಸ್ಥಲವನುಳ್ಳಂಥಾ, ||೨೭||

---

[1] ಒಸರು ? (ಖ)

ಮಹಾಶರಭಶಾರ್ದೂಲಸಿಂಹೈಸ್ಸದೃಶವಿಕ್ರಮಮ್
ಪ್ರಶಸ್ತಮತ್ತಮಾತಂಗಸಮಾನಗಮನಾಲಸಮ್ ॥೨೮॥

ಶಂಖಚಾಮರಕುಂದೇಂದುಮೃಣಾಳಸದೃಶಪ್ರಭಮ್
[1]ಸತುಷಾರ ಇವಾದ್ರೀಂದ್ರಃ ಸಾಕ್ಷಾಜ್ಜಂಗಮತಾಂ ಗತಮ್ ॥೨೯॥

ಜ್ವಾಲಾಮಾಲಾಪರಿಕ್ಷಿಪ್ತಂ ದೀಪ್ತಮೌಕ್ತಿಕಭೂಷಣಮ್
ತೇಜಸಾ ಚೈವ ದೀಪ್ಯಂತಂ ಯುಗಾಂತ ಇವ ಪಾವಕಮ್ ॥೩೦॥

ಸ ಜಾನುಭ್ಯಾಂ ಮಹೀಂ ಗತ್ವಾ ಪ್ರಣತಃ ಪ್ರಾಂಜಲಿಸ್ತದಾ
ಪಾರ್ಶ್ವತೋ ದೇವದೇವಸ್ಯ ಪರ್ಯತಿಷ್ಠದ್ಗಣೇಶ್ವರಃ ॥೩೧॥

ಮಹಾಶರಭಶಾರ್ದೂಲಸಿಂಹೈಃ = [2]ದೊಡ್ಡಿಹ ಶರಭ ಶಾರ್ದೂಲ ಸಿಂಹಂ ಗಳೊಡನೆ ಸದೃಶವಿಕ್ರಮಂ = ಸಮಾನವಹ ಪರಾಕ್ರಮವನುಳ್ಳಂಥಾ ಪ್ರಶಸ್ತ ಮತ್ತಮಾತಂಗಸಮಾನಗಮನಾಲಸಂ = ಒಪ್ಪುತ್ತಂವಿದ್ದ ಮದಸೊಕ್ಕಿದ ಆನೆಗೆ ಸಮಾನವಹ ಮಂದಗಮನವನುಳ್ಳಂಥಾ, ॥೨೮॥

ಶಂಖಚಾಮರಕುಂದೇಂದುಮೃಣಾಳಸದೃಶಪ್ರಭಂ = ಶಂಖ ಚಾಮರ ಮೊಲ್ಲೆ ಹೂ ಚಂದ್ರ ತಾವರೆಯ ನೂಲುಗಳಿಗೆ ಸಮಾನವಹ ಕಾಂತಿಯನುಳ್ಳಂಥಾ ಸತುಷಾರಃ = ಹಿಮದಿಂದ ಸಹಿತವಹಂಥಾ ಅದ್ರೀಂದ್ರಃ = ಗಿರಿರಾಜನು ಸಾಕ್ಷಾತ್ = ಪ್ರತ್ಯಕ್ಷ ವಾಗಿ ಜಂಗಮತಾಂ = ಚಲಿಸುವತನವನು ಗತಮಿವ = ಎಯ್ದಿದನಕ್ಕೈ ಎಂಬ ಹಾಂಗೆ ಇದ್ದಂಥಾ, ॥೨೯॥

ಜ್ವಾಲಾಮಾಲಾಪರಿಕ್ಷಿಪ್ತಂ = ಜ್ವಾಲೆಗಳ ಮಾಲೆಯಿಂದ ಮುಸುಕಲುಪಟ್ಟಂಥಾ ದೀಪ್ತಮೌಕ್ತಿಕಭೂಷಣಂ = ಹೊಳವುತ್ತಿದ್ದ ಮುತ್ತಿನಾಭರಣಂಗಳನುಳ್ಳಂಥಾ ತೇಜಸಾ ಚೈವ = ತೇಜಸ್ಸಿನಿಂದವೇ ಯುಗಾಂತೇ = ಪ್ರಳಯಕಾಲದಲ್ಲಿಯ ದೀಪ್ಯಂತಂ = ಪ್ರಕಾಶಿಸುತ್ತಿದ್ದಂಥಾ ಪಾವಕಮಿವ = ಅಗ್ನಿಯಕ್ಕೈ ಎಂಬ ಹಾಂಗೆ ಇದ್ದಂಥಾ ವೀರಭದ್ರನನು ಸಸರ್ಜ ಸೃಷ್ಟಿಸಿದನು. ॥೩೦॥

ಗಣೇಶ್ವರಃ = ಗಣೇಶ್ವರನಹಂಥಾ ಸಃ = ಆ ವೀರಭದ್ರನು ತದಾ = ಆಗ ಜಾನುಭ್ಯಾಂ = ಮೊಳಕಾಲುಗಳಿಂದ ಮಹೀಂ = ಭೂಮಿಯನು ಗತ್ವಾ = ಎಯ್ದಿ ಪ್ರಣತಃ = ನಮಸ್ಕರಿಸಿದಾತನಾಗಿ ಪ್ರಾಂಜಲಿಃ = ಕೈಮುಗಿದುಕೊಂಡು ದೇವದೇವಸ್ಯ = ಪರಮೇಶ್ವರನ ಪಾರ್ಶ್ವತಃ = ಕೆಲದಲ್ಲಿ ಪರ್ಯತಿಷ್ಠತ್ = ಇದ್ದನು. ॥೩೧॥

1 ಸತುಷಾರಮಿವಾದ್ರೀಂದ್ರಂ (ಗ, ಘ) 2 ದೊಡ್ಡಿಯ (ಕ)

ಮನ್ಯುನಾ ಚಾಸೃಜದ್ಭದ್ರಾಂ ಭದ್ರಕಾಲೀಂ [1]ಮಹೇಶ್ವರೀ।
ಆತ್ಮನಃ ಕರ್ಮಸಾಕ್ಷಿತ್ವೇ ತೇನ ಗಂತುಂ ಸಹೈವ ತು ॥೩೨॥

ತಂ ದೃಷ್ಟ್ವಾಽವಸ್ಥಿತಂ ವೀರಭದ್ರಂ ಕಾಲಾಗ್ನಿಸನ್ನಿಭಮ್
ಭದ್ರಯಾ ಸಹಿತಂ ಪ್ರಾಹ ಭದ್ರಮಸ್ತ್ವಿತಿ ಶಂಕರಃ ॥೩೩॥

ಸ ಚ ವಿಜ್ಞಾಪಯಾಮಾಸ ಸಹ ದೇವ್ಯಾ ಮಹೇಶ್ವರಮ್
ಆಜ್ಞಾಪಯ ಮಹಾದೇವ ಕಿಂ ಕಾರ್ಯಂ ಕರವಾಣ್ಯಹಮ್ ॥೩೪॥

ತತಸ್ತ್ರಿಪುರಹಾ ಪ್ರಾಹ ಹೈಮವತ್ಯಾಃ ಪ್ರಿಯೇಪ್ಸಯಾ
ವೀರಭದ್ರಂ ಮಹಾಬಾಹುಂ ವಾಚಾ ವಿಪುಲನಾದಯಾ ॥೩೫॥

---

ಮಹೇಶ್ವರೀ = ಪಾರ್ವತೀದೇವಿ ಆತ್ಮನಃ = ತನ್ನ ಕರ್ಮಸಾಕ್ಷಿತ್ವೇ = ಕಾರ್ಯಕ್ಕೆ ಸಾಕ್ಷಿಯ ಹತನದಲ್ಲಿ ತೇನ ಸಹೈವ = ಆ ವೀರಭದ್ರನೊಡನೆ ಗಂತುಂ = ಹೋಗಲೋಸ್ಕರ ಮನ್ಯುನಾ ಚ = ಕೋಪದಿಂದವೂ ಭದ್ರಾಂ = ಒಪ್ಪುತ್ತಿದ್ದಂಥಾ ಭದ್ರಕಾಳೀಂ ತು = ಭದ್ರಕಾಳಿಯನು ಅಸೃಜತ್ = ಸೃಜಿಸಿದಳು. ॥೩೨॥

ಭದ್ರಯಾ = ಭದ್ರಕಾಳಿಯಿಂದ ಸಹಿತಂ = ಸಹಿತವಾಗಿ ಅವಸ್ಥಿತಂ = ಇರುತ್ತಿದ್ದಂಥಾ ಕಾಲಾಗ್ನಿಸನ್ನಿಭಂ = ಕಾಲಾಗ್ನಿಗೆ ಸಮಾನವಾಗುತ್ತಂವಿದ್ದಂಥಾ ತಂ ವೀರಭದ್ರಂ = ಆ ವೀರಭದ್ರನನು ದೃಷ್ಟ್ವಾ = ಕಂಡು ಭದ್ರಂ = ಮಂಗಳವು ಅಸ್ತು = ಆಗಲಿ ಇತಿ = ಹೀಂಗೆಂದು ಶಂಕರಃ = ಪರಮೇಶ್ವರನು ಪ್ರಾಹ = ನುಡಿದನು. ॥೩೩॥

ಸ ಚ = ಆ ವೀರಭದ್ರನು ದೇವ್ಯಾ ಸಹ = ಪಾರ್ವತೀದೇವಿಯೊಡನೆ ಮಹೇಶ್ವರಂ = ಶಿವನನು ಕುರಿತು ವಿಜ್ಞಾಪಯಾಮಾಸ = ಬಿನ್ನೈಸಿದನು. ಭೋ ಮಹಾದೇವ = ಎಲೇ ಪರಮೇಶ್ವರನೇ ! ಆಜ್ಞಾಪಯ = ನಿರೂಪಿಸು. ಕಾರ್ಯಂ ಕಿಂ = ಕಾರ್ಯವಾವುದು ? ಅಹಂ = ನಾನು ಕರವಾಣಿ = ಮಾಡುವೆನು. ॥೩೪॥

ತತಃ = ಅನಂತರದಲ್ಲಿ ತ್ರಿಪುರಹಾ = ತ್ರಿಪುರಸಂಹಾರಿಯಹಂಥಾ ಹೈಮವತ್ಯಾಃ = ಪಾರ್ವತೀದೇವಿಗೆ ಪ್ರಿಯೇಪ್ಸಯಾ = ಪ್ರೀತಿಯ ಬಯಸುವದರಿಂದ ಮಹಾಬಾಹುಂ = ದೊಡ್ಡಿಹ ಭುಜಂಗಳನುಳ್ಳಂಥಾ ವೀರಭದ್ರಂ = ವೀರಭದ್ರನನು ಕುರಿತು ವಿಪುಲನಾದಯಾ = ಬಹಳವಹ ಧ್ವನಿಯನುಳ್ಳಂಥಾ ವಾಚಾ = ವಾಕ್ಯದಿಂದ ಪ್ರಾಹ = ನುಡಿದನು. ॥೩೫॥

---

[1] (ಘ) ಮೂಲಪಾಠ. ಮಹೇಶ್ವರೀಂ (ಘ) ಪಾಠಾಂತರ

[1]ಈಶ್ವರ ಉವಾಚ[1]—

ಪ್ರಾಚೇತಸಸ್ಯ ದಕ್ಷಸ್ಯ ಯಜ್ಞಮದ್ಯ ವಿನಾಶಯ
ಭದ್ರಕಾಲ್ಯಾ ಸಹಾಶು [2]ತ್ವಮೇತತ್ಕಾರ್ಯಂ[2] ಗಣೇಶ್ವರ ||೩೬||

ಅಹಮಪ್ಯನಯಾ ಸಾರ್ಧಂ ರೈಭ್ಯಾಶ್ರಮಸಮೀಪತಃ
ಸ್ಥಿತ್ವಾ ಪ್ರೇಕ್ಷ್ಯೇ ಗಣೇಶಾನ ವಿಕ್ರಮಂ ತವ ದುಸ್ಸಹಮ್ ||೩೭||

ವೃಕ್ಷಾಃ ಕನಖಲೇ ಯೇ ತು ಗಂಗಾದ್ವಾರಸಮೀಪಗಾಃ
ಸುವರ್ಣಶೃಂಗಶ್ಶಿಖರೀ ಮೇರುಮಂದರಸನ್ನಿಭಃ ||೩೮||

---

ಈಶ್ವರ ಉವಾಚ=ಪರಮೇಶ್ವರನು ನುಡಿದನು.

ಭೋ ಗಣೇಶ್ವರ=ಎಲೆ ಗಣೇಶ್ವರನೇ ತ್ವಂ=ನೀನು ಭದ್ರಕಾಲ್ಯಾ ಸಹ ಭದ್ರಕಾಳಿಯಿಂದ ಸಹಿತವಾಗಿ ಪ್ರಾಚೇತಸಸ್ಯ = ವರುಣನಪುತ್ರನೆಹಂಥಾ ದಕ್ಷಸ್ಯ =ದಕ್ಷನ ಯಜ್ಞಂ = ಯಾಗವನು ಅದ್ಯ = ಇಂದು ಆಶು = ಬೇಗ ವಿನಾಶಯ=ಕೆಡಿಸು. ಏತತ್=ಇದು ಕಾರ್ಯಂ = ಮಾಡಬೇಕಾದಂಥಾದ್ದು.

ಅಹಮಪಿ= ನಾನು ಅನಯಾ ಸಾರ್ಧಂ = ಈ ಪಾರ್ವತೀದೇವಿಯೊಡನೆ ರೈಭ್ಯಾಶ್ರಮಸಮೀಪತಃ—ರೈಭ್ಯಋಷಿಯ ಆಶ್ರಮದ ಸಮೀಪದಲ್ಲಿ ಸ್ಥಿತ್ವಾ=ಇದ್ದು ಭೋ ಗಣೇಶಾನ=ಎಲೆ ಗಣೇಶ್ವರನೇ! ತವ = ನಿನ್ನ ದುಸ್ಸಹಂ = ಸೈರಿಸಲು ಬಾರದೇ ಇದ್ದಂಥಾ ವಿಕ್ರಮಂ= ಪರಾಕ್ರಮವನು ಪ್ರೇಕ್ಷ್ಯೇ = ನೋಡುವೆನು (ನೋಡೇನು). ||೩೭||

ಕನಖಲೇ=ಕನಖಲೆ ಎಂಬ ಸ್ಥಾನದಲ್ಲಿ ಗಂಗಾದ್ವಾರಸಮೀಪಗಾಃ=ಗಂಗಾ ಪ್ರವಾಹದ ಸಮೀಪವನೆಯ್ದಿದಂಥಾ ಯೇ ತು = ಆವವು ಕೆಲವು ವೃಕ್ಷಾಃ— ವೃಕ್ಷಂಗಳುಂಟು ಮೇರುಮಂದರಸನ್ನಿಭಃ = ಮೇರುಪರ್ವತ ಮಂದರಪರ್ವತಕ್ಕೆ ಸಮಾನವಾಗುತ್ತಂ [3]ಇದ್ದಂಥಾ[3] ಸುವರ್ಣಶೃಂಗಃ = ಸುವರ್ಣಶೃಂಗವೆಂಬಂಥಾ ಶಿಖರೀ=[4]ಪರ್ವತವುಂಟು.[4] ||೩೮||

---

[1] ದೇವಃ — ಪರಮೇಶ್ವರನವಾಕ್ಯವು (ಖ)

[2] ತ್ವಮೇತತ್ಕೃತ್ಯಂ (ಖ)

[3] ವಿದಂಥಾದ್ದ (ಖ) [4] ಲುಪ್ತ (ಕ)

ತಸ್ಮಿನ್ಪ್ರದೇಶೇ ದಕ್ಷಸ್ಯ ಯಜ್ಞಃ ಸಂಪ್ರತಿ ವರ್ತತೇ
ಸಹಸಾ ತಸ್ಯ ಯಜ್ಞಸ್ಯ ವಿನಾಶಂ ಕುರು ಮಾ ಚಿರಮ್ ||೩೯||

ಇತ್ಯುಕ್ತೇ ಸತಿ ದೇವೇನ ದೇವೀ ಹಿಮಗಿರೀಂದ್ರಜಾ
ಭದ್ರಂ ಭದ್ರಾಂ ಚ ಸಂಪ್ರೇಕ್ಷ್ಯ ವತ್ಸಂ ಧೇನುರಿವೌರಸಮ್ ||೪೦||

ಆಲಿಂಗ್ಯ ಚ [1]ತದಾಽಽಘ್ರಾಯ[1] ಮೂರ್ಧ್ನಿ ಷಡ್ವದನಂ ಯಥಾ
ಸಸ್ಮಿತಂ ವಚನಂ ಪ್ರಾಹ ಮಧುರಂ ಮಧುರಸ್ವನಾ ||೪೧||

ದೇವ್ಯುವಾಚ—

---

ತಸ್ಮಿನ್ ಪ್ರದೇಶೇ=ಆ ಠಾವಿನಲ್ಲಿ ದಕ್ಷಸ್ಯ=ದಕ್ಷನ ಯಜ್ಞಃ=ಯಾಗವು ಸಂಪ್ರತಿ ವರ್ತತೇ=ಈಗ ವರ್ತಿಸುತ್ತಿದ್ದೂದು. ಸಹಸಾ = ಬೇಗ ತಸ್ಯ = ಆ ಯಜ್ಞಸ್ಯ=[2]ಯಾಗದ[2] ವಿನಾಶಂ=ನಾಶವನು ಕುರು=ಮಾಡು. ಮಾ ಚಿರಂ =[3]ತಡಮಾಡಬೇಡ[3]. ||೩೯||

ದೇವೇನ=ಪರಮೇಶ್ವರನಿಂದ ಇತ್ಯುಕ್ತೇ ಸತಿ= [4]ಈ ಪ್ರಕಾರ ಹೇಳುತ್ತಂ-ವಿರಲಾಗಿ[4] ಹಿಮಗಿರೀಂದ್ರಜಾ =ಹಿಮವತ್ಪರ್ವತ[5]ಸಿಂದ[5] ಜನಿಸಿದಂಥಾ ದೇವೀ= ಪಾರ್ವತೀದೇವಿಯು ಔರಸಂ = ಬಸುರಲ್ಲಿ ಹುಟ್ಟಿದಂಥಾ ವತ್ಸಂ = ಕರುವನು ಧೇನುರಿವ=ಗೋವು [6]ಎಹಗೋ ಅಹಗೆ.[6] ಭದ್ರಂ=ವೀರಭದ್ರನನು ಭದ್ರಾಂ ಚ =[7]ಭದ್ರಕಾಳಿಕೆ[7]ಯನೂ ಸಂಪ್ರೇಕ್ಷ್ಯ=ನೋಡಿ, ||೪೦||

ತದಾ=ಆಗ ಷಡ್ವದನಂ ಯಥಾ = ಸ್ವಾಮಿ[8]ಕಾರ್ತಿಕೇಯನನು ಹೇಗೋ ಹಾಗೆ[8] ಆಲಿಂಗ್ಯ ಚ= ತಕ್ಕೈಸಿಕೊಂಡು ಮೂರ್ಧ್ನಿ =ಶಿರಸ್ಸಿನಲ್ಲಿ ಆಘ್ರಾಯ =ಆಘ್ರಾಣಿಸಿ ಮಧುರಸ್ವನಾ=ಮಧುರಸ್ವರವನುಳ್ಳಂಥಾ ಪಾರ್ವತೀದೇವಿ ಸಸ್ಮಿತಂ =ಮುಗುಳು ನಗೆಯಿಂದ ಸಹಿತವಹಂಥಾ ಮಧುರಂ=ಮಧುರವಹಂಥಾ ವಚನಂ =ವಾಕ್ಯವನು ಪ್ರಾಹ= ನುಡಿದಳು. ||೪೧||

ದೇವ್ಯುವಾಚ—[9]ಪಾರ್ವತೀದೇವಿಯ ವಾಕ್ಯವು.[9]

---

[1] ತಥಾಽಽಘ್ರಾಯ (ಘ) [2] ಯಾಗವ (ಖ)

[3] ತಕ್ಕೈಯ ಬೇಡ (ಖ) [4] ಹೀಗೆಂದು ನುಡಿವುತ್ತಂವಿರಲು (ಖ)

[5] ನಲ್ಲಿ (ಖ) [6] ಎಸಗಹಗೆ (ಖ)

[7] ಭದ್ರಕಾಳಿಯನೂ (ಖ) [8] ಕಾರ್ತಿಕನೆಹಗಹಗೆ(ಖ) [9] ಲುಪ್ತ (ಕ)

ವತ್ಸ ಭದ್ರ ಮಹಾಭಾಗ ಮಹಾಬಲಪರಾಕ್ರಮ
ಮತ್ಪ್ರಿಯಾರ್ಥಂ ತ್ವಮುತ್ಪನ್ನೋ ಮಮ ಮನ್ಯುಂ ಪ್ರಮಾರ್ಜಯ ॥

ಯಜ್ಞೇಶ್ವರಮನಾಹೂಯ ಯಜ್ಞಕರ್ಮರತೋಽಭವತ್
ದಕ್ಷೋ ವೈರೇಣ ತಂ ತಸ್ಮಾತ್ ಭಿಂಧಿ [1]ಯಜ್ಞಾಂಕಣೇ ಸುರೈಃ ॥೪೩॥

ಯಜ್ಞಲಕ್ಷ್ಮ್ಯಾ ಹ್ಯಲಕ್ಷ್ಮೀತ್ವಂ ಭದ್ರ ಕೃತ್ವಾ ಮಮಾಜ್ಞಯಾ
ಯಜಮಾನಂ ಚ ತಂ ಹತ್ವಾ ವತ್ಸೈಹಿ ಸಹ ಭದ್ರಯಾ ॥೪೪॥

[2]ಸ ಶೇಷಾಮಿವ ತಾಮಾಜ್ಞಾಂ ಶಿವಯೋಶ್ಚಿತ್ರಕೃತ್ಯಯೋಃ
ಮೂರ್ಧ್ನಿ ಕೃತ್ವಾ ನಮಸ್ಕೃತ್ಯ ಭದ್ರೋ ಗಂತುಂ ಪ್ರಚಕ್ರಮೇ ॥೪೫॥

---

ಮಹಾಭಾಗ=ಮಹಾಭಾಗ್ಯವನುಳ್ಳಂಥಾ ಮಹಾಬಲಪರಾಕ್ರಮ=[3]ಅತುಳ ಬಲಪರಾಕ್ರಮವನುಳ್ಳಂಥಾ ಭದ್ರ = ಎಲೆ ವೀರಭದ್ರನೇ! ವತ್ಸ = ಎಲೆ [ಕಂದನೇ] ಕರುವೇ![3] ತ್ವಂ=ನೀನು ಮತ್ಪ್ರಿಯಾರ್ಥಂ = ಎನ್ನ ಪ್ರೀತಿಗೋಸ್ಕರ ಉತ್ಪನ್ನಃ = ಹುಟ್ಟಿದಾತನು. ಮಮ = ಎನ್ನ ಮನ್ಯುಂ = ಕೋಪವನು ಪ್ರಮಾರ್ಜಯ=ತಗ್ಗಿಸು. ॥೪೨॥

ದಕ್ಷಃ=ದಕ್ಷನು ವೈರೇಣ=ವೈರದಿಂದ ಯಜ್ಞೇಶ್ವರಂ = ಯಜ್ಞಂಗಳಿ-ಗೊಡೆಯನಹಂಥಾ ಪರಮೇಶ್ವರನನು ಅನಾಹೂಯ = ಕರೆಯದೆ ಯಜ್ಞ-ಕರ್ಮರತಃ=ಯಜ್ಞಕರ್ಮದಲ್ಲಿ ತತ್ಪರನು ಅಭವತ್ = ಆದನು (ಆಗಿರುವನು.) ತಸ್ಮಾತ್=ಅದು ಕಾರಣದ ದೆಸೆಯಿಂಹ ತಂ=ಆ ದಕ್ಷನನು ಯಜ್ಞಾಂಕಣೇ= ಯಜ್ಞಶಾಲೆಯ ಅಂಗಣದಲ್ಲಿ ಸುರೈಃ= ದೇವರ್ಕಳೊಡನೆ ಭಿಂಧಿ = ವಿದಾರಿಸು.

ಹೇ ಭದ್ರ=ಎಲೆ ವೀರಭದ್ರನೇ! ಹಿ = ಆವುದಾನೊಂದು ಕಾರಣವಾಗಿ ಮಮ=ಎನ್ನ ಆಜ್ಞಯಾ = ಆಜ್ಞೆಯಿಂದ ಯಜ್ಞಲಕ್ಷ್ಮ್ಯಾಃ = ಯಾಗದ ಸಿರಿಯ ಅಲಕ್ಷ್ಮೀತ್ವಂ=ಅಮಂಗಳವಹತನವನು ಕೃತ್ವಾ—ಮಾಡಿ ಯಜಮಾನಂ =ಯಜಮಾನನಹಂಥಾ ತಂ=ಆ ದಕ್ಷನನು ಹತ್ವಾ= ಕೊಂದು ಭೋ ವತ್ಸ =ಎಲೆ ಮಗನೇ ಭದ್ರಯಾ ಸಹ=ಭದ್ರಕಾಳಿಯೊಡನೆ ಏಹಿ=ಬಾ. ॥೪೪॥

ಸ ಭದ್ರಃ=ಆ ವೀರಭದ್ರನು ಚಿತ್ರಕೃತ್ಯಯೋಃ=ಆಶ್ಚರ್ಯವಹ ಕಾರ್ಯ-ವನುಳ್ಳಂಥಾ ಶಿವಯೋಃ=ಪಾರ್ವತೀ ಪರಮೇಶ್ವರರುಗಳ ತಾಂ ಆಜ್ಞಾಂ = ಆ

---

[1] ಯಜ್ಞಾಂಗಣೇ (ಘ) [2] ಸಭೂಷಾಮಿವ (ಘ) [3] ಲುಪ್ತ (ಕ)

ಅಥೈಷ ಭಗವಾನ್ ಕ್ರುದ್ಧಃ ಪ್ರೇತವಾಸಕೃತಾಲಯಃ
ವೀರಭದ್ರೋ [1]ಮಹಾವೇಗೋ[1] ದೇವ್ಯಾ ಮನ್ಯುಪ್ರಮಾರ್ಜಕಃ ||೪೬||

ಸಸರ್ಜ ರೋಮಕೂಪೇಭ್ಯೋ ರೋಮಜಾಖ್ಯಾನ್ ಗಣೇಶ್ವರಾನ್
ರುದ್ರಾನುಭಾವಾನ್ ರೌದ್ರಾಂಶ್ಚ ರೌದ್ರವೀರ್ಯಪರಾಕ್ರಮಾನ್ ||

ದಕ್ಷಿಣಾದ್ಭುಜದೇಶಾತ್ತು ಶತಕೋಟಿಗಣೇಶ್ವರಾನ್
ಸದಾರಾನ್ಸರ್ವತೋ ಭದ್ರಾನ್ [2]ಸಾಸ್ತ್ರಾನ್ವಾ[2]ಮಾಚ್ಚ ವೈ ಭುಜಾತ್ ||

---

ಆಜ್ಞೆಯನು ಶೇಷಾಮಿವ = ಸೇಸೆಯನು ಕ್ಕೆ ಎಂಬ ಹಾಂಗೆ ಮೂರ್ಧ್ನಿ = ಶಿರಸ್ಸಿನಲ್ಲಿ ಕೃತ್ವಾ = ಧರಿಸಕೊಂಡು ನಮಸ್ಕೃತ್ಯ = ನಮಸ್ಕರಿಸಿ ಗಂತುಂ = ಎಯ್ದಲು ಪ್ರಚಕ್ರಮೇ = ಉಪಕ್ರಮಿಸಿದನು. ||೪೫||

ಅಥ = ಅನಂತರದಲ್ಲಿ ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಹಂಥಾ ಪ್ರೇತವಾಸಕೃತಾಲಯಃ = ಶ್ಮಶಾನದಲ್ಲಿ ಮಾಡಲು ಪಟ್ಟ ಸ್ಥಾನವನುಳ್ಳಂಥಾ ಮಹಾವೇಗಃ = ಅತಿ ವೇಗವನುಳ್ಳಂಥಾ ದೇವ್ಯಾಃ = ಪಾರ್ವತೀದೇವಿಯ ಮನ್ಯು-ಪ್ರಮಾರ್ಜಕಃ = ಕೋಪವನು ತಗ್ಗಿಸುತ್ತಿದ್ದಂಥಾ ಏಷ ವೀರಭದ್ರಃ = ಈ ಲಯ-ಕಾಲದ ವೀರಭದ್ರನು ಕ್ರುದ್ಧಃ = ಕೋಪಿಸಿದಾತನಾಗಿ, ||೪೬||

ರೋಮಕೂಪೇಭ್ಯಃ = ರೋಮಕೂಪಂಗಳ ದೆಸೆಯಿಂದ ರೋಮಜಾಖ್ಯಾನ್ = ರೋಮಜರೆಂಬ ಹೆಸರನುಳ್ಳಂಥಾ ರುದ್ರಾನುಭಾವಾನ್ = ರುದ್ರನ ಸಾಮರ್ಥ್ಯವನುಳ್ಳಂಥಾ ರೌದ್ರಾನ್ = ರೌದ್ರರುಗಳಹಂಥಾ ರುದ್ರವೀರ್ಯಪರಾಕ್ರಮಾನ್ = ರುದ್ರನ ಪ್ರತಾಪದೋಪಾದಿ ಪರಾಕ್ರಮವನುಳ್ಳಂಥಾ ಗಣೇಶ್ವರಾಂಶ್ಚ = ಗಣೇಶ್ವರರುಗಳನು ಸಸರ್ಜ = ಹುಟ್ಟಿಸಿದನು. ||೪೭||

ದಕ್ಷಿಣಾತ್ ಭುಜದೇಶಾತ್ = ದಕ್ಷಿಣಭುಜದ ದೆಸೆಯಿಂದ ವಾಮಾತ್ ಭುಜಾಸ್ಚೈ = ವಾಮಭುಜದ ದೆಸೆಯಿಂದ ಸರ್ವತಃ = ಎಲ್ಲಾ ಕಡೆಯಲ್ಲಿಯೂ ಭದ್ರಾನ್ = ಮನೋಹರರಹಂಥಾ ಸದಾರಾನ್ = ಸ್ತ್ರೀಯರುಗಳಿಂದ ಸಹಿತರಹಂಥಾ ಸಾಸ್ತ್ರಾನ್ ಚ = ಆಯುಧಂಗಳಿಂದ ಸಹಿತರಹಂಥಾ ಶತಕೋಟಿಗಣೇಶ್ವರಾನ್ = ನೂರುಕೋಟಿ ಗಣೇಶ್ವರರುಗಳನು ಸಸರ್ಜ = ಸೃಜಿಸಿದನು. ||೪೮||

---

[1] ಮಹಾದೇವೋ (ಘ) [2] ಸಾಕ್ಷಾದ್ವಾ (ಘ) ಶಸ್ತ್ರಾನ್ವಾ (ಖ)

ಪಾದಾತ್ತಥೋರುದೇಶಾಚ್ಚ ಪೃಷ್ಠಾತ್ಪಾರ್ಶ್ವಾತ್ ಮುಖಾದ್ಗಲಾತ್
ಗುಹ್ಯಾದ್ಗುಲ್ಫಾಚ್ಛಿರೋಮಧ್ಯಾತ್[2]ಕರ್ಣಾದಾಸ್ಯಾತ್ತಥೋದರಾತ್ ॥

ತಥಾ ಗಣೇಶ್ವರೈರ್ಭದ್ರೈರ್ಭದ್ರತುಲ್ಯಪರಾಕ್ರಮೈಃ
ಸಂಭಾದಿತಮಭೂತ್ಸರ್ವಂ ಸಾಕಾಶವಿವರಂ ಜಗತ್ ॥೫೦॥

ಸರ್ವೇ ಸಹಸ್ರಹಸ್ತಾಸ್ತೇ ಸಹಸ್ರಾಯುಧಪಾಣಯಃ
ರುದ್ರಸ್ಯಾನುಚರಾಸ್ಸರ್ವೇ ಸರ್ವೇ ರುದ್ರಸಮಪ್ರಭಾಃ ॥೫೧॥

---

ಪಾದಾತ್—ವೀರಭದ್ರದೇವರು ತಮ್ಮ ಶ್ರೀಚರಣದ ದೆಸೆಯಿಂದ ತಥಾ = ಹಾಂಗೆ ಊರುದೇಶಾಚ್ಚ = ತೊಡೆಗಳ ಸ್ಥಾನದ ದೆಸೆಯಿಂದವೂ ಪೃಷ್ಠಾತ್ = ಬೆನ್ನ ದೆಸೆಯಿಂದವೂ ಪಾರ್ಶ್ವಾತ್ = ಬದಿಯ ದೆಸೆಯಿಂದ ಮುಖಾತ್ = ಮುಖದ ದೆಸೆಯಿಂದ ಗಲಾತ್ = ಕೊರಳ ದೆಸೆಯಿಂದ ಗುಹ್ಯಾತ್ = ಶಿಶ್ನೆಯ ದೆಸೆಯಿಂದ ಗುಲ್ಫಾತ್ = ಹರಡಿನ ದೆಸೆಯಿಂದ ಶಿರೋಮಧ್ಯಾತ್ = ಶಿರಸ್ಸಿನ ಮಧ್ಯದ ದೆಸೆಯಿಂದ ಕರ್ಣಾತ್ = ಕಿವಿಯ ದೆಸೆಯಿಂದ ಆಸ್ಯಾತ್ = ಬಾಯ ದೆಸೆಯಿಂದ ತಥಾ = ಹಾಂಗೆ ಉದರಾತ್ = ಹೊಟ್ಟೆಯ ದೆಸೆಯಿಂದ ಸಸರ್ಜ = ಸೃಜಿಸಿದನು ॥೪೯॥

ತದಾ = ಆಗ ಭದ್ರೈಃ = ಒಪ್ಪುತ್ತಂಯಿದ್ದಂಥಾ ಭದ್ರತುಲ್ಯಪರಾಕ್ರಮೈಃ = ವೀರಭದ್ರಂಗೆ ಸಮಾನವಹ ಪರಾಕ್ರಮವನುಳ್ಳಂಥಾ ಗಣೇಶ್ವರೈಃ = ಗಣೇಶ್ವರರುಗಳಿಂದ ಸಾಕಾಶವಿವರಂ = ಆಕಾಶದ ತೆರಹಿಂ(ದಿಂ?)ದ ಸಹಿತವಹಂಥಾ ಸರ್ವಂ ಜಗತ್ = ಸಮಸ್ತ ಲೋಕವು ಸಂಭಾದಿತಂ = ಮುಸುಕಲ್ಪಟ್ಟಂಥಾದ್ದು ಅಭೂತ್ = ಆಯಿತ್ತು. ॥೫೦॥

ತೇ ಸರ್ವೇ = ಆ ಎಲ್ಲರು ಸಹಸ್ರಹಸ್ತಾಃ = ಸಾವಿರ ಭುಜಂಗಳನುಳ್ಳವರುಗಳು ಸಹಸ್ರಾಯುಧಪಾಣಯಃ = ಸಹಸ್ರ ಆಯುಧಂಗಳೇ ಹಸ್ತಂಗಳಲ್ಲುಳ್ಳವರುಗಳು, ಸರ್ವೇ = ಸಮಸ್ತರೂ ರುದ್ರಸ್ಯ = ಪರಮೇಶ್ವರನ ಅನುಚರಾಃ = ಸೇವಕರುಗಳು. ಸರ್ವೇ = ಎಲ್ಲರೂ ರುದ್ರಸಮಪ್ರಭಾಃ = ಈಶ್ವರಂಗೆ ಸಮಾನವಹ ಕಾಂತಿಯನುಳ್ಳವರುಗಳು. ॥೫೧॥

---

[2] ಕರ್ಣಾದಾ (ಖ.ಗ). ಕಂಠಾದಾ (ಘ) ಮತ್ತು (ಕ) ಮೂಲ. ಎಂಬೆರಡು ಪಾಠಗಳಿದ್ದರೂ (ಕ) ವ್ಯಾಖ್ಯಾನದಲ್ಲಿ ಬಿಟ್ಟುಹೋಗಿದೆ. (ಖ)ದಲ್ಲಿ ಕರ್ಣಾತ್ — ಕಿವಿಯ ದೆಸೆಯಿಂದ ಎಂಬ ವ್ಯಾಖ್ಯಾನವಿದೆ.

ಶೂಲಶಕ್ತಿಗದಾಹಸ್ತಾಷ್ಟಂಕೋಪಲಶಿಲಾಯುಧಾಃ
ಕಾಲಾಗ್ನಿರುದ್ರಸಂಕಾಶಾಸ್ತ್ರಿಣೇತ್ರಾಶ್ಚ ಜಟಾಧರಾಃ ॥೫೨॥

ನಿಪೇತುರ್ಭೃಶಮಾಕಾಶೇ ಶತಶಸ್ಸಿಂಹವಾಹನಾಃ
[1]ನಿನೇದುಶ್ಚ[1] ಮಹಾನಾದಂ ಜಲದಾ ಇವ ಭದ್ರಜಾಃ ॥೫೩॥

ತೈರ್ಭದ್ರೈರ್ಭಗವಾನ್ಭದ್ರಃ ತದಾ ಪರಿವೃತೋ ಬಭೌ
ಕಾಲಾನಲಶತೈರ್ಯುಕ್ತೋ ಯಥಾಽಂತೇ ಕಾಲಭೈರವಃ ॥೫೪

ತೇಷಾಂ ಮಧ್ಯೇ ಸಮಾರುಹ್ಯ ವೃಷೇಂದ್ರಂ ವೃಷಭಧ್ವಜಃ
ಜಗಾಮ ಭಗವಾನ್ ಭದ್ರಃ ಶುಭ್ರಮಭ್ರಂ ಯಥಾ ಭವಃ ॥೫೫॥

---

ಶೂಲಶಕ್ತಿಗದಾಹಸ್ತಾಃ = ತ್ರಿಶೂಲ ಶಕ್ತಿ ಗದೆಗಳ ಹಸ್ತಂಗಳಲುಳ್ಳವರುಗಳು ಟಂಕೋಪಲಶಿಲಾಯುಧಾಃ = ಟಂಕವೆಂಬಾಯುಧ ಕಲ್ಲುಗುಂಡುಗಳೇ ಆಯುಧಂಗಳಾಗಿ ಉಳ್ಳವರುಗಳು ಕಾಲಾಗ್ನಿರುದ್ರಸಂಕಾಶಾಃ = ಕಾಲಾಗ್ನಿರುದ್ರಗೆ ಸಮಾನವಹಂಥಾ ವರುಗಳು ತ್ರಿಣೇತ್ರಾಶ್ಚ = ಮೂರು ಕಣ್ಣನುಳ್ಳವರುಗಳು ಜಟಾಧರಾಶ್ಚ = ಜಟಾಮಕುಟಧಾರಿಗಳು. ಟಂಕವೆಂದರೆ [2]ಉಳಿ ಎಂದರ್ಥ.[2] ॥೫೨॥

ಭದ್ರಜಾಃ = ವೀರಭದ್ರನಿಂದ ಹುಟ್ಟಿದಂಥಾ ಗಣೇಶ್ವರರುಗಳು ಸಿಂಹವಾಹನಾಃ = ಸಿಂಹವಾಹನವನುಳ್ಳವರುಗಳಾಗಿ ಶತಶಃ = ಲೆಕ್ಕವಿಲ್ಲದವರುಗಳು ಆಕಾಶೇ = ಆಕಾಶದಲ್ಲಿ ಭೃಶಂ = ಅತ್ಯಂತ ನಿಪೇತುಃ = ಎದ್ದಿದರು. ಜಲದಾ ಇವ = ಮೇಘಂಗಳಕ್ಕೆ ಎಂಬ ಹಾಂಗೆ ಮಹಾನಾದಂ ಚ = ಮಹಾಧ್ವನಿಯನು ಕುರಿತು ನಿನೇದುಃ = ಬೊಬ್ಬಿಟ್ಟರು. ॥೫೩॥

ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಭದ್ರಃ = ವೀರಭದ್ರನ ಭದ್ರೈಃ = ಒಪ್ಪು[3]ತ್ತಂವಿ[3]ದ್ದಂಥಾ ತೈಃ = ಆ ಗಣೇಶ್ವರರುಗಳಿಂದ ಪರಿವೃತಃ = ಮುಸುಕಲುಪಟ್ಟಾತನಾಗಿ ತದಾ = ಆಗ ಬಭೌ = ಒಪ್ಪಿದನು. ತದ್ಯಥಾ = ಅದು ಹೇಂಗೆಯೂ ಎಂದಡೆ, ಅಂತೇ = ಪ್ರಳಯಕಾಲದಲ್ಲಿ ಕಾಲಾನಲಶತೈಃ = ಕಾಲಾಗ್ನಿ[4]ಶ[4]ತಂಗಳಿಂದ ಯುಕ್ತಃ = ಕೂಡಲುಪಟ್ಟಂಥಾ ಕಾಲಭೈರವೋ ಯಥಾ = ಕಾಲಭೈರವನೆಹಗೋ ಅಹಗೆ. ॥೫೪॥

ತೇಷಾಂ = ಆ ಗಣೇಶ್ವರರುಗಳ ಮಧ್ಯೇ = ಮಧ್ಯದಲ್ಲಿ ಭಗವಾನ್ = ಸಾಮರ್ಥ್ಯವನುಳ್ಳಂಥಾ ಭದ್ರಃ = ವೀರಭದ್ರನು ವೃಷಭಧ್ವಜಃ = ವೃಷಭಧ್ವಜವ

---

[1] ವಿನೇದುಶ್ಚ (ಘ) [2] ಉಳಿಯು ಹೆಸರು (ಖ) [3] ತ್ರಿ (ಖ) [4] ಅಸಂಖ್ಯಾ (ಖ)

ತಮೇವ ವೃಷಮಾರುಹ್ಯ ಭದ್ರೇಣ ಭಸಿತಪ್ರಿಯಃ
ಬಭಾರ ಮೌಕ್ತಿಕಚ್ಛತ್ರಂ ಗೃಹೀತಸಿತಚಾಮರಃ ||೩೬||

ಸ ತದಾ ಶುಶುಭೇ ಪಾರ್ಶ್ವೇ ಭದ್ರಸ್ಯ ಭಸಿತಪ್ರಿಯಃ
ಭಗವಾನಿವ ಶೈಲಾದಿಃ[1] ಪಾರ್ಶ್ವೇ ವಿಶ್ವಜಗದ್ಗುರೋಃ ||೩೭||

ಸೋಽಪಿ ತೇನ ಬಭೌ ಭದ್ರಃ ಶ್ವೇತಚಾಮರಪಾಣಿನಾ
ಸೋಮವರ್ಣೇನ ಸೌಮ್ಯೇನ ಯಥಾ ಶೂಲವರಾಯುಧಃ ||೩೮||

---

ನುಳ್ಳಾತನಾಗಿ ವೃಷೇಂದ್ರಂ—ವೃಷಭೇಶ್ವರನನು ಸಮಾರುಹ್ಯ—ಏರಿ ಜಗಾಮ =ಎಯ್ದಿದನು. ತದ್ಯಥಾ—ಅದು ಹೇಂಗೆಯಾ ಎಂದಡೆ, ಭವಃ—ಪರಮೇಶ್ವರನು ಶುಭ್ರಂ — ಬಿಳಿದಹಂಥಾ ಅಭ್ರಂ ಯಥಾ — ಮೇಘವನು ಎಹಗೋ ಅಹಗೆ. ಪರಮೇಶ್ವರಂಗೆ ಮೇಘವಾಹನನೆಂಬುದು ಪ್ರಸಿದ್ಧವು. |೩೫||

ಭದ್ರೇಣ=ವೀರಭದ್ರನೊಡನೆ ತಂ ವೃಷಮೇವ—ಆ ವೃಷಭನನೇ ಆರುಹ್ಯ —ಏರಿ ಭಸಿತಪ್ರಿಯಃ — ವಿಭೂತಿಯಲ್ಲಿ ಪ್ರೀತಿಯನುಳ್ಳಂಥಾ ಶೈಲಾದಿಃ — ನಂದಿಕೇಶ್ವರನು ಗೃಹೀತಸಿತಚಾಮರಃ — ಇಕ್ಕಲುಪಟ್ಟ ಬಿಳಿಯ ಚಾಮರಂಗಳನು ಳ್ಳಾತನಾಗಿ ಮೌಕ್ತಿಕಚ್ಛತ್ರಂ—ಮುತ್ತಿನ ಸತ್ತಿಗೆಯನು ಬಭಾರ—ಹಿಡಿದನು.

ಭಸಿತಪ್ರಿಯಃ — ವಿಭೂತಿಯಲ್ಲಿ ಪ್ರೀತಿಯನುಳ್ಳಂಥಾ ಭಗವಾನ್ — ಸಾಮರ್ಥ್ಯವನುಳ್ಳಂಥಾ ಶೈಲಾದಿಃ —ಶಿಲಾದಋಷಿಯ ಪುತ್ರನಹಂಥಾ ಸಃ— ಆ ನಂದಿಕೇಶ್ವರನು ಭದ್ರಸ್ಯ—ವೀರಭದ್ರನ ಪಾರ್ಶ್ವೇ — ಕೆಲದಲ್ಲಿ ತದಾ — ಆಗ ಶುಶುಭೇ—ಒಪ್ಪಿದನು. ಕಥಮಿವ — ಅದು ಹೇಂಗೆಯಾ ಎಂದಡೆ ವಿಶ್ವ ಜಗದ್ಗುರೋಃ—ಸಮಸ್ತಲೋಕಕ್ಕೆ ಗುರುವಹಂಥಾ ಪರಮೇಶ್ವರನ ಪಾರ್ಶ್ವೇ ಇವ —ಕೆಲದಲ್ಲಿ [2]ಹೇಗೋ ಹಾಗೆ.[2] ಈ ಎರಡು ಶ್ಲೋಕ ಕುಳಕವು. ||೩೭||

ಸ ಭದ್ರೋಽಪಿ—ಆ ವೀರಭದ್ರನು ಸೋಮವರ್ಣೇನ— ಚಂದ್ರವರ್ಣದೋಪಾದಿಯ ವರ್ಣವನುಳ್ಳಂಥಾ ಸೌಮ್ಯೇನ—ಒಪ್ಪುತ್ತಂವಿದ್ದಂಥಾ ಶ್ವೇತಚಾಮರ ಪಾಣಿನಾ—ಬಿಳಿಯ ಚಾಮರಂಗಳೇ ಹಸ್ತಂಗಳಲುಳ್ಳಂಥಾ ತೇನ—ಆ ನಂದಿಕೇಶ್ವರನಿಂದ ಬಭೌ—ಒಪ್ಪಿದನು. ತದ್ಯಥಾ—ಅದು ಹೇಂಗೆಯಾ ಎಂದಡೆ ಶೂಲವರಾಯುಧೋ ಯಥಾ—ತ್ರಿಶೂಲವೇ ಶ್ರೇಷ್ಠವಹ ಆಯುಧವಾಗಿ ಉಳ್ಳ ಶಿವನೆಹಗಹಗೆ.

---

[1] ಶೈಲೇಂದ್ರಃ (ಘ) ಪಾಠಾಂತರ ಮೂಲ ಶೈಲಾದಿಃ (ಘ)

[2] ಎಹಗಹಗೆ (ಖ)

ದಧ್ಮೌ ಶಂಖಂ ಸಿತಂ ಭದ್ರಂ ಭದ್ರಸ್ಯ ಪುರತಃ ಶುಭಮ್
ಭಾನುಕಂಪೋ ಮಹಾತೇಜಾ ಹೇಮರತ್ನೈರಲಂಕೃತಮ್ ||೫೯||

ದೇವದುಂಧುಭಯೋ ನೇದುರ್ದಿವಿ ಸಂಕುಲನಿಸ್ವನಾಃ
ವವೃಷುಶ್ಚ ತತೋ ಮೂರ್ಧ್ನಿ ಪುಷ್ಪವರ್ಷಂ ಬಲಾಹಕಾಃ ||೬೦||

ಫುಲ್ಲಾನಾಂ ಮಧುಗರ್ಭಾಣಾಂ ಪುಷ್ಪಾಣಾಂ ಗಂಧಬಂಧವಃ
ಮಾರ್ಗಾನುಕೂಲಸಂವಾಹಾ ವವುಶ್ಚ ಪಥಿ ಮಾರುತಾಃ ||೬೧||

ತತೋ ಗಣೇಶ್ವರಾಸ್ಸರ್ವೇ ಮತ್ತಾ ಯುದ್ಧಬಲೋದ್ಧತಾಃ
ನನೃತುರ್ಮುಮುದುರ್ನೇದುಃ ಜಹಸುರ್ಜಗದುರ್ಜಗುಃ ||೬೨||

---

ಭದ್ರಸ್ಯ—ವೀರಭದ್ರನ ಪುರತಃ — ಮುಂದೆ ಮಹಾತೇಜಾಃ — ಮಹಾತೇಜಸ್ಸನುಳ್ಳಂಥಾ ಭಾನುಕಂಪಃ—ಭಾನುಕಂಪನೆಂಬ ಗಣೇಶ್ವರನು ಹೇಮರತ್ನೈಃ — ಸುವರ್ಣರತ್ನಂಗಳಿಂದ ಅಲಂಕೃತಂ — ಅಲಂಕರಿಸಲುಪಟ್ಟಂಥಾ ಶುಭಂ— ಒಪ್ಪುತ್ತಂವಿದ್ದಂಥಾ ಭದ್ರಂ—ಮಂಗಳವಹಂಥಾ ಸಿತಂ—ಬಿಳಿದಹಂಥಾ ಶಂಖಂ —ಶಂಖವನು ದಧ್ಮೌ—ಊದಿದನು. ಧ್ಮಾ—ಪೂರಣೇ ಇತಿ ಧಾತುಃ.

ದೇವದುಂದುಭಯಃ—ದೇವದುಂದುಭಿಗಳು ಸಂಕುಲನಿಸ್ವನಾಃ—ವ್ಯಾಕುಲವಹೆ ಧ್ವನಿಗಳನುಳ್ಳಂಥಾವಾಗಿ ದಿವಿ—ಆಕಾಶದಲ್ಲಿ ನೇದುಃ — ಧ್ವನಿಗೆಯ್ದುವು. ನದ-ಅವ್ಯಕ್ತೇ ಶಬ್ದೇ [1]ಎಂಬ[1] ಧಾತು. ತತಃ—ಅನಂತರದಲ್ಲಿ ಬಲಾಹಕಾಶ್ಚ—ಮೇಘಂಗಳು ಪುಷ್ಪವರ್ಷಂ — [2]ಹೂ[2]ಮಳೆಯನು ಮೂರ್ಧ್ನಿ — ಶಿರಸ್ಸಿನಲ್ಲಿ ವವೃಷುಃ — ಕರೆದುವು. ||೬೦||

ಫುಲ್ಲಾನಾಂ—ವಿಕಸಿತವಾದಂಥಾ ಮಧುಗರ್ಭಾಣಾಂ — ರಸವನು ಗರ್ಭೀಕರಿಸಿಕೊಂಡಿದ್ದಂಥಾ ಪುಷ್ಪಾಣಾಂ — ಪುಷ್ಪಂಗಳ ಗಂಧಬಂಧವಃ — ಪರಿಮಳಕ್ಕೆ ಬಂಧುಗಳಹಂಥಾ ಮಾರುತಾಃ — ವಾಯುಗಳು ಮಾರ್ಗಾನುಕೂಲಸಂವಾಹಾಃ —ಮಾರ್ಗಕ್ಕೆ ಅನುಕೂಲವಾಗಿ ಎಯ್ದುತ್ತಂವಿದ್ದಂಥಾವಾಗಿ ಪಥಿ ಚ — ಮಾರ್ಗದಲ್ಲಿಯೂ ವವುಃ—ಬೀಸಿದವು. ವಾ-ಗತಿಗಂಧನಯೋಃ ಎಂಬ ಧಾತು. ||೬೧||

ತತಃ—ಅಿಷ್ಟರ ಮೇಲೆ ಮತ್ತಾಃ —ಮದೋನ್ಮತ್ತ[3]ರಹಂಥಾ[3] ಯುದ್ಧ-ಬಲೋದ್ಧತಾಃ — ಕಾಳಗದ ಬಲುಮೆಯಲ್ಲಿ ಉನ್ನತರಹಂಥಾ ಸರ್ವೇ ಗಣೇಶ್ವರಾಃ

---

[1] ಇತಿ (ಖ) [2] ಹೂವಿನ (ಖ) [3] ರುಗಳಹಂಥಾ (ಕ)

ತದಾ ಭದ್ರಗಣಾಂತಸ್ಥೋ ಬಭೌ ಭದ್ರಃ ಸ ಭದ್ರಯಾ
ಯಥಾ ರುದ್ರಗಣಾಂತಸ್ಥಃ ತ್ರ್ಯಂಬಕೋಽಂಬಿಕಯಾ ಸಹ ॥೬೩॥

ತತ್ಕ್ಷಣಾದೇವ ದಕ್ಷಸ್ಯ ಯಜ್ಞವಾಟಂ ಹಿರಣ್ಮಯಮ್
ಪ್ರವಿವೇಶ ಮಹಾಬಾಹುಃ ವೀರಭದ್ರೋಽದ್ರಿಜಾನುಗಃ ॥೬೪॥

[1] ತತಸ್ತು ದಕ್ಷಪ್ರತಿಪಾದಿತಸ್ಯ
ಕ್ರತುಪ್ರಧಾನಸ್ಯ ಗಣಪ್ರಧಾನಃ
ಪ್ರಯೋಗಭೂಮಿಂ ಪ್ರವಿವೇಶ ಭದ್ರೋ
ಯಥಾ ಯುಗಾಂತೇ ಭುವನಂ ದಿಧಕ್ಷುಃ ॥೬೫॥

---

=ಸಮಸ್ತ ಗಣೇಶ್ವರರುಗಳೂ ನನೃತುಃ — ಕುಣಿದಾಡಿದರು. ಮುಮುದುಃ — ಸಂತೋಷಿಸಿದರು. ನೇದುಃ—ಬೊಬ್ಬಿಟ್ಟರು. ಜಹಸುಃ—ನಕ್ಕರು. ಜಗದುಃ— [2]ಮಾತಾಡಿ[2]ದರು. ಜಗುಃ—ಹಾಡಿದರು. ॥೬೨॥

ತದಾ—ಆಗ ಭದ್ರಗಣಾಂತಸ್ಥಃ—ಒಪ್ಪುತ್ತಿಂವಿದ್ದ ಗಣಂಗಳ ಮಧ್ಯಭಾಗದಲ್ಲಿದ್ದಂಥಾ ಸಃ ಭದ್ರಃ—ಆ ವೀರಭದ್ರನು ಭದ್ರಯಾ—ಭದ್ರಕಾಳಿಯೊಡನೆ ಬಭೌ — [3]ಪ್ರಕಾಶಿಸಿದನು[3] ಕಥಮಿತಿ ಚೇತ್ — ಅದು ಹೇಂಗೆಯಾ ಎಂದಡೆ ರುದ್ರಗಣಾಂತಸ್ಥಃ—ರುದ್ರಗಣಂಗಳ ಮಧ್ಯದಲ್ಲಿ ಇದ್ದಂಥಾ ತ್ರ್ಯಂಬಕಃ—ಪರಮೇಶ್ವರನು ಅಂಬಿಕಯಾ ಸಹ ಯಥಾ—ಪಾರ್ವತಿಯೊಡನೆಹಗಹಗೆ. ॥೬೩॥

ಅದ್ರಿಜಾನುಗಃ — ಪಾರ್ವತೀದೇವಿಯ ಸೇವಕನಹಂಥಾ ಮಹಾಬಾಹುಃ — ದೊಡ್ಡಿತ್ತಹ ಭುಜಂಗಳನುಳ್ಳಂಥಾ ವೀರಭದ್ರಃ—ವೀರಭದ್ರನು ತತ್ಕ್ಷಣಾದೇವ = ಆ ಕ್ಷಣದ ವೇಳೆಯಿಂದವೇ ದಕ್ಷಸ್ಯ—ದಕ್ಷನ ಹಿರಣ್ಮಯಂ—ಸುವರ್ಣಮಯವಹಂಥಾ ಯಜ್ಞವಾಟಂ—ಯಜ್ಞಶಾಲೆಯನು ಪ್ರವಿವೇಶ—ಪ್ರವೇಶಿಸಿದನು. ॥೬೪॥

ತತಸ್ತು — ಅಪ್ಪರ ಮೇಲೆ (ಆನಂತರದಲ್ಲಿ) ಗಣಪ್ರಧಾನಃ— [4]ಗಣಂಗಳಲ್ಲಿ ಪ್ರಧಾನ[4]ನಹಂಥಾ ಭದ್ರಃ — ವೀರಭದ್ರನು ದಕ್ಷಪ್ರತಿಪಾದಿತಸ್ಯ = ದಕ್ಷನಿಂದ ಮಾಡಲುಪಟ್ಟಂಥಾ ಕ್ರತುಪ್ರಧಾನಸ್ಯ — ಮುಖ್ಯವಹಂಥಾ ಯಾಗದ ಪ್ರಯೋಗಭೂಮಿಂ—ಪ್ರಯೋಗಸ್ಥಾನವನು ಪ್ರವಿವೇಶ—ಪ್ರವೇಶಿಸಿದನು. ತದ್ಯಥಾ—ಅದು ಹೇಂಗೆಯಾ ಎಂದಡೆ ಯುಗಾಂತೇ— ಯುಗದ ಕಡೆಯಲ್ಲಿ ಭುವನಂ — ಲೋಕವನು ದಿಧಕ್ಷುರ್ಯಥಾ—ದಹಿಸಲಿಚ್ಛೆಯನುಳ್ಳಂಥಾ ರುದ್ರನೆಹಗಹಗೆ. ॥೬೫॥

---

[1] [ ಉಪೇಂದ್ರವಜ್ರಾವೃತ್ತ ] [2] ಮಾಳಿನಾ (ಖ) [3] ಒಪ್ಪಿದನು (ಖ)
[4] ಗಣಂಗಳಿಗೆ ಮುಖ್ಯ (ಖ)

ತತೋ ವಿಷ್ಣುಪ್ರಧಾನಾನಾಂ ದೇವಾನಾಮಮಿತೌಜಸಾಮ್
ದದರ್ಶ ಸಹಸಾ ತತ್ರ ಚಿತ್ರಾಧ್ವರಪರಿಷ್ಕೃತಮ್ ||೬೬||

ಸುದರ್ಭರಜ್ಜುಸಂಸ್ತೀರ್ಣಂ ಸುಸಮಿದ್ಧಹುತಾಶನಮ್
ಕಾಂಚನೈರ್ಯಜ್ಞಭಾಂಡೈಶ್ಚ ಭ್ರಾಜಿಷ್ಣುಭಿರಲಂಕೃತಮ್ ||೬೭||

ಋತ್ವಿಗ್ಭಿರ್ಯಜ್ಞಪಟುಭಿಃ ಯಥಾವತ್ಕರ್ಮಕರ್ತೃಭಿಃ
ವಿಧಿನಾ ವೇದದೃಷ್ಟೇನ ಸ್ವನುಷ್ಠಿತಹುತಕ್ರಮಮ್ ||೬೮||

ದಿವ್ಯಾಂಗನಾಸಹಸ್ರಾಢ್ಯಮಪ್ಸರೋಗಣಸೇವಿತಮ್
ವೇಣುವೀಣಾರವೈರ್ಜುಷ್ಟಂ ವೇದಘೋಷೈಸ್ತು ಬೃಂಹಿತಮ್ ||೬೯||

---

ತತಃ=ಅನಂತರ ಮೇಲೆ ತತ್ರ—ಆ ಯಾಗಶಾಲೆಯಲ್ಲಿ ಚಿತ್ರಾಧ್ವರಪರಿಷ್ಕೃತಂ ವಿಚಿತ್ರವಹ ಯಜ್ಞದಿಂದ ಅಲಂಕರಿಸಲುಪಟ್ಟಂಥಾ ದಕ್ಷನನು ವಿಷ್ಣುಪ್ರಧಾನಾನಾಂ —ವಿಷ್ಣುಮುಖ್ಯವಹಂಥಾ ಅಮಿತೌಜಸಾಂ—ಹವಣಿಸಲು ಬಾರದೇ ಇದ್ದ ತೇಜಸ್ಸ ನುಳ್ಳಂಥಾ ದೇವಾನಾಂ — ದೇವರ್ಕಳ ಸಹಸಾ — ಆ ಕ್ಷಣದಲ್ಲಿ ದದರ್ಶ — ಕಂಡನು. ಷಷ್ಠ್ಯರ್ಥೇ ದ್ವಿತೀಯಾ ಎಂಬ ವಕ್ತವ್ಯಸೂತ್ರದಿಂದ ದೇವರ್ಕಳ ಎಂಬ ಷಷ್ಠೀ ವಿಭಕ್ತಿ [1]ದ್ವಿತೀಯಾವಿಭಕ್ತಿಯ ನುಡಿವುದು.[1] ||೬೬||

ಸುದರ್ಭರಜ್ಜುಸಂಸ್ತೀರ್ಣಂ — ಒಪ್ಪುತ್ತಂವಿದ್ದ ದರ್ಭೆಯ ರಜ್ಜುಗಳಿಂದ ಹೆರಹಲುಪಟ್ಟಂಥಾ ಸುಸಮಿದ್ಧಹುತಾಶನಂ — ಒಪ್ಪುತ್ತಂವಿದ್ದ ಸಮಿತ್ತುಗಳಿಂದ ಬೆಳಸಲುಪಟ್ಟ ಯಜ್ಞಹುತಾಶನನುಳ್ಳಂಥಾ ಕಾಂಚನೈಃ=ಸುವರ್ಣಮಯವಹಂಥಾ ಭ್ರಾಜಿಷ್ಣುಭಿಃ — ಒಪ್ಪುತ್ತಂವಿದ್ದಂಥಾ ಯಜ್ಞಭಾಂಡೈಶ್ಚ = ಯಜ್ಞಾರ್ಥವಹ ಭಾಂಡಂಗಳಿಂದ ಅಲಂಕೃತಂ—ಅಲಂಕರಿಸಲುಪಟ್ಟಂಥಾ, ||೬೭||

ಯಜ್ಞಪಟುಭಿಃ—ಯಾಗದಲ್ಲಿ ಸಮರ್ಥರಹಂಥಾ ಯಥಾವತ್—ಯಥೋಕ್ತ ವಾಗಿ ಕರ್ಮಕರ್ತೃಭಿಃ — ಕರ್ಮವನು ಮಾಡುತ್ತಿದ್ದಂಥಾ ಋತ್ವಿಗ್ಭಿಃ — ಋತ್ವಿಕ್ಕುಗಳಿಂದ ವೇದದೃಷ್ಟೇನ— ವೇದದಿಂದ ಕಾಣಲುಪಟ್ಟಂಥಾ ವಿಧಿನಾ — ವಿಧಾನದಿಂದ ಸ್ವನುಷ್ಠಿತಹುತಕ್ರಮಂ — ಲೇಸಾಗಿ ಮಾಡಲುಪಟ್ಟ ಹೋಮದ ಕ್ರಮವನುಳ್ಳಂಥಾ, ||೬೮||

ದಿವ್ಯಾಂಗನಾಸಹಸ್ರಾಢ್ಯಂ— ದೇವಸ್ತ್ರೀಯರುಗಳ ಅಸಂಖ್ಯಾತದಿಂದ ಒಪ್ಪುತ್ತಂ ವಿದ್ದಂಥಾ ಅಪ್ಸರೋಗಣಸೇವಿತಂ — ಅಪ್ಸರಸ್ತ್ರೀಯರುಗಳ ಸಮೂಹದಿಂದ

---

1 ಲುಪ್ತ ಕ

ದೃಷ್ಟ್ವಾ ದಕ್ಷಾಧ್ವರಂ ವೀರೋ ವೀರಭದ್ರಃ ಪ್ರತಾಪವಾನ್
ಸಿಂಹನಾದಂ ತದಾ ಚಕ್ರೇ ಗಂಭೀರಂ ನೀರದೋ ಯಥಾ ||೭೦||

ತತಃ ಕಿಲಕಿಲಾಶಬ್ದ ಆಕಾಶಂ ಪೂರಯನ್ನಿವ
ಗಣೇಶ್ವರೈಃ ಕೃತೋ ಜಜ್ಞೇ ಮಹಾನ್ನ್ಯಕ್ಕೃತಸಾಗರಃ ||೭೧||

ತೇನ ಶಬ್ದೇನ ಮಹತಾ ತ್ರಸ್ತಾಸ್ಸರ್ವೇ ದಿವೌಕಸಃ
ದುದ್ರುವುಃ ಪರಿತೋ ಭೀತಾಃ ಸ್ರಸ್ತವಸ್ತ್ರವಿಭೂಷಣಾಃ ||೭೨||

ಕಿಂಸ್ವಿದ್ಭಿನ್ನೋ ಮಹಾಮೇರುಃ ಕಿಂಸ್ವಿತ್ಸಂದೀರ್ಯತೇ ಮಹೀ
ಕಿಮಿದಂ ಕಿಮಿದಂ ಚೇತಿ ಜಜಲ್ಪುಸ್ತ್ರಿದಶಾ ಭೃಶಮ್ ||೭೩||

---

ಓಲೈಸಲುಪಟ್ಟಂಥಾ ವೇಣುವೀಣಾರವೈಃ = ಕೊಳಲು ವೀಣೆಗಳ ಧ್ವನಿಗಳಿಂದ ಜುಷ್ಟಂ—ಮನೋಹರವಹಂಥಾ ವೇದಘೋಷೈಶ್ಚ— ವೇದ ಘೋಷಂಗಳಿಂದವೂ ಬೃಂಹಿತಂ—ಹೆಚ್ಚಿಗೆಯನುಳ್ಳಂಥಾ, ||೬೯||

ದಕ್ಷಾಧ್ವರಂ—ದಕ್ಷಯಾಗವನು ದೃಷ್ಟ್ವಾ— ಕಂಡು ಪ್ರತಾಪವಾನ್ — ಪ್ರತಾಪವನುಳ್ಳಂಥಾ ವೀರಃ—ವೀರನಹಂಥಾ ವೀರಭದ್ರಃ— ವೀರಭದ್ರನು ತದಾ —ಆಗ ಗಂಭೀರಂ — ಗಂಭೀರವಹಂಥಾ ಸಿಂಹನಾದಂ — ಸಿಂಹದ ಧ್ವನಿಯನು ಚಕ್ರೇ—ಮಾಡಿದನು. ತದ್ಯಥಾ—ಅದು ಹೇಂಗೆಯಾ ಎಂದಡೆ ನೀರದೋ ಯಥಾ ಮೇಘವು ಹೇಗೋ ಹಾಗೆ. ||೭೦||

ತತಃ — ಅಪ್ಪರ ಮೇಲೆ ಗಣೇಶ್ವರೈಃ — ಗಣೇಶ್ವರರುಗಳಿಂದ ಕೃತಃ — ಮಾಡಲುಪಟ್ಟಂಥಾ ನ್ಯಕ್ಕೃತಸಾಗರಃ— ತಿರಸ್ಕರಿಸಲುಪಟ್ಟ ಸಮುದ್ರವನುಳ್ಳಂಥಾ ಮಹಾನ್ — ದೊಡ್ಡಿತ್ತಹಂಥಾ ಕಿಲಕಿಲಾಶಬ್ದಃ — ಘೀಳಿಡಲುಪಟ್ಟಂಥಾ ಧ್ವನಿ ಆಕಾಶಂ—ಆಕಾಶವನು ಪೂರಯನ್ನಿವ—ತುಂಬಿತಕ್ಕೆ ಎಂಬ ಹಾಂಗೆ ಜಜ್ಞೇ— ಹುಟ್ಟಿತ್ತು. ||೭೧||

ಮಹತಾ—ಬಹಳವದಂಥಾ ತೇನ ಶಬ್ದೇನ—ಆ ಧ್ವನಿಯಿಂದ ತ್ರಸ್ತಾಃ— ನಡುಗುತ್ತಿದ್ದಂಥಾ ಸರ್ವೇ ದಿವೌಕಸಃ— ಸಮಸ್ತ ದೇವರ್ಕಳುಗಳೂ ಪರಿತಃ— ಎಲ್ಲಾ ಕಡೆಯಲ್ಲಿಯೂ ಭೀತಾಃ — ಭೀತಿಯನುಳ್ಳವರುಗಳಾಗಿ ಸ್ರಸ್ತವಸ್ತ್ರ ವಿಭೂಷಣಾಃ— ಸಡಲಿದ ವಸ್ತ್ರಾಲಂಕಾರಂಗಳನುಳ್ಳವರಾಗುತ್ತವು ದುದ್ರುವುಃ — ಓಡಿದರು. ದ್ರು-ಗತೌ ಎಂಬ ಧಾತು. ||೭೨||

ಕಿಂಸ್ವಿತ್—ಇದೇನು. ಮಹಾಮೇರುಃ—ಮಹಾಮೇರುಪರ್ವತವು ಭಿನ್ನಃ

ಮೃಗೇಂದ್ರಾಣಾಂ ಯಥಾ ನಾದಂ ಗಜೇಂದ್ರಾ ಗಹನೇ ವನೇ
ಶ್ರುತ್ವಾ [1]ತಥಾ[1]ಸುರಾಃ ಕೇಚಿತ್ ತತ್ಯಜುರ್ಜೀವಿತಂ ಭಯಾತ್ ॥

ಪರ್ವತಾಶ್ಚ ವ್ಯಶೀರ್ಯಂತ ಚಕಂಪೇ ಚ ವಸುಂಧರಾ
ಮಾರುತಾಶ್ಚ ವ್ಯಘೂರ್ಣಂತ ಚುಕ್ಷುಭೇ ಮಕರಾಲಯಃ ॥೭೫॥

ಅಗ್ನಯೋ ನೈವ ದೀಪ್ಯಂತೇ ನ ಚ ದೀಪ್ಯತಿ ಭಾಸ್ಕರಃ
ಗ್ರಹಾಶ್ಚ ನ ಪ್ರಕಾಶಂತೇ ನ ನಕ್ಷತ್ರಾಣಿ ತಾರಕಾಃ ॥೭೬॥

ಏತಸ್ಮಿನ್ನೇವ ಕಾಲೇ ತು ಯಜ್ಞವಾಟಂ ತದುಜ್ಜ್ವಲಮ್
ಸಂಪ್ರಾಪ್ಯ ಭಗವಾನ್ ಭದ್ರೋ ಭದ್ರೈಶ್ಚ ಸಹ ಭದ್ರಯಾ ॥೭೭॥

---

—ಒಡೆಯಿತ್ತೋ, ಕಿಂಸ್ವಿತ್—ಇದೇನು ಮಹೀ—ಭೂಮಿಯು ಸಂದೀರ್ಯತೇ —ಬಿರಿಯಲುಪಡುತ್ತಿದ್ದುದೋ, ಕಿಮಿದಂ ಕಿಮಿದಂಚೇತಿ—ಇದೇನಿದೇನೆಂದು ಹೀಂಗೆ ತ್ರಿದಶಾಃ—ದೇವತೆಗಳು ಭೃಶಂ—ಅತ್ಯಂತವಾಗಿ ಜಜಲ್ಪುಃ—ನುಡಿದರು. ॥೭೩॥

ಗಹನೇ— ಬಹಳವಹಂಥಾ ವನೇ — ಅರಣ್ಯದಲ್ಲಿ ಮೃಗೇಂದ್ರಾಣಾಂ — ಸಿಂಹಗಳ ನಾದಂ—ಧ್ವನಿಯನು ಶ್ರುತ್ವಾ—ಕೇಳಿ ಗಜೇಂದ್ರಾಯಥಾ—ಆನೆಗಳು ಎಹಗಹಗೆ ತಥಾ — ಹಾಂಗೆ ಕೇಚಿತ್ಸುರಾಃ — ಕೆಲಬರು ದೇವರ್ಕಳುಗಳು ಭಯಾತ್-ಭೀತಿಯು ದೆಸೆಯಿಂವ ಜೀವಿತಂ—ಜೀವವನು ತತ್ಯಜುಃ — ಬಿಟ್ಟರು ತ್ಯಜ—ಹಾನೌ ಇತಿ ಧಾತು. ॥೭೪॥

ಪರ್ವತಾಶ್ಚ—ಪರ್ವತಂಗಳು ವ್ಯಶೀರ್ಯಂತ — ಬಿರಿದವು. ವಸುಂಧರಾ ಚ ಭೂಮಿ ಚಕಂಪೇ—[2]ನಡುಗಿತ್ತು. ಮಾರುತಾಶ್ಚ—ವಾಯುಗಳು ವ್ಯಘೂರ್ಣಂತ —ತಿರ್ರನೆ ತಿರುಗಿದವು. ಮಕರಾಲಯಃ— ಸಮುದ್ರವು ಚಕ್ಷುಭೇ—ಕದಡಿತ್ತು.

ಅಗ್ನಯಃ—ತ್ರೇತಾಗ್ನಿಗಳು ನೈವ ದೀಪ್ಯಂತೇ — ಪ್ರಕಾಶಿಸಲುಪಟ್ಟುದಿಲ್ಲ. ಭಾಸ್ಕರಃ—ಸೂರ್ಯನು ನ ದೀಪ್ಯತಿ—ಪ್ರಕಾಶಿಸಿದುದಿಲ್ಲ. ಗ್ರಹಾಶ್ಚ—ಗ್ರಹಂಗಳು ನ ಪ್ರಕಾಶಂತೇ—ಪ್ರಕಾಶಂಗಳಾದದಿಲ್ಲ. ನಕ್ಷತ್ರಾಣಿ—ಅಶ್ವಿನ್ಯಾದಿ ನಕ್ಷತ್ರಂಗಳು ತಾರಕಾಃ—ತಾರಕಿಗಳು ನ—ಪ್ರಕಾಶಿಸಿದುದಿಲ್ಲ. ॥೭೬॥

ಏತಸ್ಮಿನ್ ಕಾಲೇ ಏವ ತು—ಈ ಕಾಲದಲ್ಲಿಯೇ ಭಗವಾನ್—ಷಡ್ಗುಣೈಶ್ವರ್ಯ ಸಂಪನ್ನಹಂಥಾ ಭದ್ರಃ— ವೀರಭದ್ರನು ಭದ್ರೈಶ್ಚ — ಒಪ್ಪುತ್ತಂವಿದ್ದ

---

[1] ತದಾ (ಘ) [2] ನಡಿ (ಕ)

ಅಥೋವಾಚ ಗಣಾಧ್ಯಕ್ಷೋ ದೇವಾನ್ವಿಷ್ಣುಪುರೋಗಮಾನ್
ಯಸ್ಮಾದಸ್ಮಿನ್ಮಖೇ ದೇವೈರಿತ್ಥಂ ವಯಮಸತ್ಕೃತಾಃ ||೭೮||

ತಸ್ಮಾದ್ವೋ ಜೀವಿತೈಃ ಸಾರ್ಧಮಪನೇಷ್ಯಾಮಿ ಗರ್ವಿತಮ್
ಇತ್ಯುಕ್ತ್ವಾ ಭಗವಾನ್ ಕ್ರುದ್ಧೋ ವ್ಯದಹನ್ನೇತ್ರವಹ್ನಿನಾ
ಯಜ್ಞವಾಟಂ ಮಹಾಕೂಟಂ ಯಥಾ ತಿಸ್ರಃ ಪುರೋ ಹರಃ ||೭೯||

ತತೋ ಗಣೇಶ್ವರಾಸ್ಸರ್ವೇ ಪರ್ವತೋದಗ್ರವಿಗ್ರಹಾಃ
ಯೂಪಾನುತ್ಪಾಟ್ಯ ಹೋತೄಣಾಂ ಕಂಠೇಷ್ವಾಬಧ್ಯ ರಜ್ಜುಭಿಃ ||೮೦||

---

ಗಣೇಶ್ವರರುಗಳಿಂದವೂ ಭದ್ರಯಾ ಸಹ—ಭದ್ರಕಾಳಿಯಿಂದ ಸಹಿತನಾಗಿ ಉಜ್ಜ್ವಲಂ — ಒಪ್ಪುತ್ತಂವಿದ್ದಂಥಾ ತತ್ — ಆ ಯಜ್ಞವಾಟಂ — ಯಜ್ಞಶಾಲೆಯನು ಸಂಪ್ರಾಪ್ಯ—ಎಯ್ದಿ, ||೭೭||

ಅಥ—ಅನಂತರದಲ್ಲಿ ಗಣಾಧ್ಯಕ್ಷಃ—ಗಣಂಗಳಿಗೆ ಒಡೆಯನಹಂಥಾ ವೀರಭದ್ರನು ವಿಷ್ಣುಪುರೋಗಮಾನ್— ವಿಷ್ಣು ಮೊದಲಾದಂಥಾ ದೇವಾನ್ — ದೇವತೆಗಳನು ಕುರಿತು ಉವಾಚ—ನುಡಿದನು. ಯಸ್ಮಾತ್ — ಆವುದಾನೊಂದು ಕಾರಣವಾಗಿ ಅಸ್ಮಿನ್ಮಖೇ—ಈ ಯಜ್ಞದಲ್ಲಿ ದೇವೈಃ—ದೇವರ್ಕಳೊಡನೆ ಇತ್ಥಂ—ಈ ಪ್ರಕಾರ ದಲ್ಲಿ ವಯಂ — ನಾವು ಅಸತ್ಕೃತಾಃ — ಸತ್ಕರಿಸಿಕೊಳಲುಪಟ್ಟವರುಗಳು ಆದುದಿಲ್ಲ. ||೭೮||

ತಸ್ಮಾತ್—[1]ಅದು[1]ಕಾರಣವಾಗಿ ಗರ್ವಿತಂ=ಗರ್ವಿಸಿದಂಥಾ ದಕ್ಷನನು ವಃ —ನಿಮ್ಮ ಜೀವಿತೈಸ್ಸಾರ್ಧಂ—ಪ್ರಾಣಂಗಳೊಡನೆ ಅಪನೇಷ್ಯಾಮಿ—ತೊಲಗಿಸೇನು ಇತಿ—ಹೀಂಗೆಂದು ಉಕ್ತ್ವಾ — ನುಡಿದು ಭಗವಾನ್ — ಭಗವಾನ್ನುಳ್ಳಹಂಥಾ ವೀರಭದ್ರನು ಕ್ರುದ್ಧಃ — ಕೋಪಿಸಿದಾತನಾಗಿ ನೇತ್ರವಹ್ನಿನಾ — ಭಾಳಾಕ್ಷದ ಅಗ್ನಿಯಿಂದ ಮಹಾಕೂಟಂ—ಬಹಳವಹ ಕೂಟವನುಳ್ಳಂಥಾ ಯಜ್ಞವಾಟಂ—

ಅಗ್ನಿಯಿಂದ ಮಹಾಕೂಟಂ—ಬಹಳವಹ ಕೂಟವನುಳ್ಳಂಥಾ ಯಜ್ಞವಾಟಂ—

ಯಜ್ಞಶಾಲೆಯನು ವ್ಯದಹತ್— ದಹಿಸಿದನು. ತದ್ಯಥಾ — ಅದು ಹೇಂಗೆಯಾ ಎಂದಡೆ ಹರಃ— ಪರಮೇಶ್ವರನು ತಿಸ್ರಃ ಪುರೋ ಯಥಾ — ತ್ರಿಪುರಂಗಳನೆಹಗ ಹಗೆ. ||೭೯||

ತತಃ — ಅಷ್ಟರ ಮೇಲೆ ಪರ್ವತೋದಗ್ರವಿಗ್ರಹಾಃ = ಪರ್ವತದೋಪಾದಿ ಉನ್ನತವಹ ಶರೀರಂಗಳನುಳ್ಳಂಥಾ ಸರ್ವೇ ಗಣೇಶ್ವರಾಃ=ಸಮಸ್ತ ಗಣೇಶ್ವರರುಗಳು

---

1 ಅದ (ಕ)

ಯಜ್ಞಪಾತ್ರಾಣಿ ಚಿತ್ರಾಣಿ ಭಿತ್ತ್ವಾ ಸಂಚೂರ್ಣ್ಯ ಚಾರಣೀವ್
ತತ್ರ ದಿವ್ಯಾನ್ನಪಾನಾನಾಂ ರಾಶಯಃ ಪರ್ವತೋಪಮಾಃ ॥೮೧॥

ಕ್ಷೀರನದ್ಯೋ ಘೃತಸ್ರಾವಾಃ ಸುಸ್ನಿಗ್ಧದಧಿಕರ್ದಮಾಃ
ಉಚ್ಚಾವಚಾನಿ ಮಾಂಸಾನಿ ಭಕ್ಷ್ಯಾಣಿ ಸುರಭೀಣಿ ಚ ॥೮೨॥

ರಸವಂತಿ ಚ ಪಾನಾನಿ ಲೇಹ್ಯಚೋಷ್ಯಾಣಿ ತಾನಿ ವೈ
ಗೃಹೀತ್ವಾ[1]ಽಶ್ವಂ ಚ[1] ಯಜ್ಞಾಂಗಂ ಗಂಗಾಸ್ರೋತಸಿ ಚಿಕ್ಷಿಪುಃ॥೮೩॥

ಸ್ರುವಾನಪಹರಂತಶ್ಚ ಕ್ಷಿಪಂತೋಽಗ್ನಿಂ ಜಲೇಷು ಚ
ಕಲಶಾನಪಿ ಭಿಂದಂತಃ ಛಿಂದಂತೋ ಮಣಿವೇದಿಕಾಃ ॥೮೪॥

---

ಯೂಪಾನ್—ಯೂಪಸ್ತಂಭಗಳನು ಉತ್ಪಾಟ್ಯ — ಕಿತ್ತು ಹೋತೄಣಾಂ = ಹೋಮವ ಮಾಡುವಂಥಾವರುಗಳ ಕಂಠೇಷು = [2]ಕೊರಳುಗಳಲ್ಲಿ[2] ರಜ್ಜುಭಿಃ— ದರ್ಭೆಯ ನೇಣುಗಳಿಂದ ಆಬಧ್ಯ—ಕಟ್ಟಿ, ॥೮೦॥

ಚಿತ್ರಾಣಿ—ಆಶ್ಚರ್ಯವಹಂಥಾ ಯಜ್ಞಪಾತ್ರಾಣಿ — ಯಜ್ಞಪಾತ್ರೆಗಳನು ಭಿತ್ವಾ—ಒಡೆದು ಚಾರಣೀಂ*—ಚರುಸಂಬಂಧವಹಂಥಾ ಭಾಜನವನು ಸಂಚೂರ್ಣ್ಯ —ಚೂರ್ಣವ ಮಾಡಿ ತತ್ರ—ಆ ಯಜ್ಞಶಾಲೆಯಲ್ಲಿ ದಿವ್ಯಾನ್ನಪಾನಾನಾಂ— ಮನೋಹರವಹ ಅನ್ನಪಾನಂಗಳ ಪರ್ವತೋಪಮಾಃ—ಪರ್ವತಕ್ಕೆ ಸಮಾನವಹಂಥಾ ‡ರಾಶಯಃ—ರಾಶಿಗಳನು‡

ಕ್ಷೀರನದ್ಯಃ—ಕ್ಷೀರದ ನದಿಗಳನು ಘೃತಸ್ರಾವಾಃ— ತುಪ್ಪದ ಕಡಲುಗಳನು ಸುಸ್ನಿಗ್ಧದಧಿಕರ್ದಮಾಃ—ಅತಿ ಮನೋಹರವಹ ಮೊಸರ ಕೆಸರುಗಳನು ಉಚ್ಚಾವಚಾನಿ—ಉನ್ನತವಹಂಥಾ ಮಾಂಸಾನಿ—ಮಾಂಸಂಗಳನು ಸುರಭೀಣಿ—ಪರಿಮಳಿಸುತ್ತಿದ್ದಂಥಾ ಭಕ್ಷ್ಯಾಣಿ ಚ—ಭಕ್ಷ್ಯಂಗಳನು, ॥೮೨॥

ರಸವಂತಿ—ರಸವನುಳ್ಳಂಥಾ ಪಾನಾನಿ ಚ— ಪಾನಂಗಳನು ತಾನಿ — ಆ ಲೇಹ್ಯಚೋಷ್ಯಾಣಿ ವೈ—ಲೇಹ್ಯ ಚೋಷ್ಯಂಗಳನು ಯಜ್ಞಾಂಗಂ — ಯಾಗಕ್ಕೆ ಅನುಗುಣವಹಂಥಾ ಅಶ್ವಂಚ—ಅಶ್ವವನು ಗೃಹೀತ್ವಾ—ತೆಗೆದುಕೊಂಡು ಗಂಗಾ-ಸ್ರೋತಸಿ—ಗಂಗಾಪ್ರವಾಹದಲ್ಲಿ ಚಿಕ್ಷಿಪುಃ = ಹಾಕಿದರು ಕ್ಷಿಪ-ಪ್ರೇರಣೇ ಇತಿ ಧಾತುಃ. ॥೮೩॥

ಸ್ರುವಾನ್ ಚ—ಆಹುತಿಯ ಬೇಳು (ಜೇರು)ವಹಂಥಾ ಸ್ರುಕ್ ಸ್ರುವಂ

---

[1] ಚೈವ (ಘ) [2] ಕೊರಳಲ್ಲಿ (ಕ) * [ಅರಣಿಂ ಚ—ಎಂದಿರಬಹುದೇ!] ‡ ವಿಭಕ್ತಿ

* ಉತ್ಪಾಟ್ಯ ಚೋತ್ಪಾಟ್ಯ ಗೃಹಾಣಿ ಕೇಚಿತ್
ಸಜಾಲವಾತಾಯನವೇದಿಕಾನಿ
ಪ್ರಕ್ಷಿಪ್ಯ ನಿಕ್ಷಿಪ್ಯ ಜಲಸ್ಯ ಮಧ್ಯೇ
ಕಾಲಾಂಬುದಾಭಾಃ ಪ್ರಮಥಾಃ ನಿನೇದುಃ ||೮೫||

‡ ಉದ್ವರ್ತಿತದ್ವಾರಕವಾಟಕುಡ್ಯಂ
† ವಿನ್ಯಸ್ತ†ಶಾಲಾವಲಭೀಗವಾಕ್ಷಮ್
ಅಹೋ ಬತಾಭಜ್ಯತ ಯಜ್ಞವಾಟ-
ಮನಾಪ್ತವದ್ವಾಕ್ಯಮಿವಾಯಥಾರ್ಥಮ್ ||೮೬||

§ ಹಾ ನಾಥನಾಥೇತಿ ಪಿತಃ ಸುತೇತಿ
ಭ್ರಾತರ್ಮಮಾಂಬೇತಿ ಚ ಮಾತುಲೇತಿ

ಗಳನು ಅಪಹರಂತಃ—ಬಿಸಾಟರು. ಅಗ್ನಿಂ—ಹೋಮಾಗ್ನಿಯನು ಜಲೇಷು ಚ —ಉದಕಂಗಳಲ್ಲಿ ಕ್ಷಿಪಂತಃ—ಹಾಯಿಕಿದರು. ಕಲಶಾನಪಿ— ಸುವರ್ಣ ಕಲಶಂಗಳನು ಭಿಂದಂತಃ — ಒಡೆದರು. ಮಣಿವೇದಿಕಾಂ — ರತ್ನಮಯಮಹಂಥಾ ಹೋಮ ಜಗುಲಿಗಳನು ಭಿಂದಂತಃ—ಒಡ ಕು(ಕಿ?)ಟ್ಟದರು. ||೮೪||

ಕಾಲಾಂಬುದಾಭಾಃ = ಕಾಳಮೇಘದೋಪಾದಿ ಕಾಂತಿಯನುಳ್ಳಂಥಾ ಕೇಚಿತ್ —ಕೆಲಬರು ಪ್ರಮಥಾಃ— ಗಣೇಶ್ವರರುಗಳು ಸಜಾಲವಾತಾಯನವೇದಿಕಾನಿ — ಬಹಳ ಗವಾಕ್ಷಂಗಳಿಂದ ಜಗಲಿಗಳಿಂದ ಸಹಿತಮಹಂಥಾ ಗೃಹಾಣಿ ಚ—ಗೃಹಂಗಳನು ಉತ್ಪಾಟ್ಯ — ಕಿತ್ತು ಕಿತ್ತು ಜಲಸ್ಯ — ಗಂಗಾಜಲದ ಮಧ್ಯೇ — ಮಧ್ಯದಲ್ಲಿ ಪ್ರಕ್ಷಿಪ್ಯ ನಿಕ್ಷಿಪ್ಯ—ಹಾಯಿಕಿ ಹಾಯಿಕಿ ನಿನೇದುಃ—ಬೊಬ್ಬಿಟ್ಟರು. ||೮೫||

ಉದ್ವರ್ತಿತದ್ವಾರಕವಾಟಕುಡ್ಯಂ—[1]ಪೂಸಿ[1]ಕಾರಣೇ (ಕಾರಃಣೆ ?) ಗೊಳಲುಪಟ್ಟ ಬಾಗಿಲು ಕದ ಗೋಡೆಗಳನುಳ್ಳಂಥಾ ವಿನ್ಯಸ್ತಶಾಲಾವಲಬೀಗವಾಕ್ಷಂ — ಪಟ್ಟಸಾಲೆ ಮದನಕ್ಕೆ ಗವಾಕ್ಷಂಗಳನುಳ್ಳಂಥಾ ಯಜ್ಞವಾಟಂ — ಯಾಗಶಾಲೆ ಅಭಜ್ಯತ — ಮುರಿಸುಲುಪಟ್ಟಿತ್ತು. ಭಜ – ವ್ಯತಿಕರಣೇ (?) ಇತಿಧಾತುಃ. ಅಹೋ — ಆಶ್ಚರ್ಯವು. ಬತ—ಅಕಟಾ ಕಥಮಿವ—ಅದು ಹೇಗೆಯಾ ಎಂದಡೆ ಅಯಥಾರ್ಥಂ — ಯಥಾರ್ಥವಲ್ಲದೇ ಇದ್ದಂಥಾ ಅನಾಪ್ತವತ್ — ಇಷ್ಟವಲ್ಲದೇ ಇದ್ದಂಥಾ ವಾಕ್ಯಮಿವ—ವಾಕ್ಯವೆಹಗಹಗೆ. ||೮೬||

ಹಿ— ಆವುದಾನೊಂದು ಕಾರಣದಿಂದ ಗೃಹೇಷು— ಮನೆಗಳು ಉತ್ಪಾಟ್ಯ-

* ಇಂದ್ರವಜ್ರಾವೃತ್ತ (ಕ. ಖ) ‡ ಉಪೇಂದ್ರವಜ್ರಾವೃತ್ತ † ವಿಧ್ವಸ್ತ (ಘ)
§ ಇಂದ್ರವಜ್ರಾವೃತ್ತ [1] ಹೂಸಿ (ಖ)

ಉತ್ಪಾಟ್ಯಮಾನೇಷು ಗೃಹೇಷು ನಾರ್ಯೋ
ಹ್ಯನಾರ್ಯಶಬ್ದಾನ್ಬಹುಶಃ ಪ್ರಕುರ್ಯುಃ ||೮೭||

ಆಶ್ರಮಸ್ಥಾನ್ಸಮಾಕೃಷ್ಯ ಮಾರಯಂತಿ ತಪೋಧನಾನ್
ವಜ್ರೈಶ್ಚಕ್ರೈರ್ಮಹಾಶೂಲೈಃ ಶಕ್ತಿಭಿಃ [1]ಪಾಶಪಟ್ಟಿಶೈಃ ||೮೮||

ಮುಸಲೈರಸಿಭಿಷ್ಟಂಕೈರ್[2]ಭಿಂಡಿವಾಲೈಃ ಪರಶ್ವಧೈಃ
ಉತ್ಥಿತಾನ್ ತ್ರಿದಶಾನ್ಸರ್ವಾನ್ ಲೋಕಪಾಲಪುರಸ್ಸರಾನ್
ಬಿಭಿದುರ್ಬಲಿನೋ ವೀರಾ ವೀರಭದ್ರಾಂಗಸಂಭವಾಃ ||೮೯||

---

ಮಾನೇಷು ಸತ್ಸು—ಕಿತ್ತು ಹಾ(ಯಿ)ಕುತ್ತಿರಲಾಗಿ ನಾರ್ಯಃ— ಸ್ತ್ರೀಯರುಗಳು ಹಾ ನಾಥ—ಅಕಟ ಗಂಡನೇ: ನಾಥೇತಿ—ಒಡೆಯನೇ ! ಹೀಂಗೆಂದು, ಪಿತಃ— ಎಲೇ ತಂದೇ ! ಸುತ — ಎಲೆ ಮಗನೇ ! ಇತಿ— ಹೀಂಗೆಂದು ಭ್ರಾತಃ—ಒಡಹುಟ್ಟಿದನೇ ! ಮಮ—ಎನ್ನ ಅಂಬ—ತಾಯೇ ಇತಿ ಚ—ಹೀಗೆಂದು ಮಾತುಲ— ಎಲೆ ಮಾವನೇ ! ಇತಿ—ಹೀಗೆಂದು ಅನಾರ್ಯಶಬ್ದಾನ್— ಕ್ಲೇಶದ ಮಾತುಗಳನು ಬಹುಶಃ—ಬಹಳವಾಗಿ (ಹಲವನು) ಪ್ರಕುರ್ಯುಃ—ಮಾಡಿದರು. ||೮೭||

ಆಶ್ರಮಸ್ಥಾನ್—ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥ ಯತಿ ಎಂಬ ನಾಲ್ಕು ಆಶ್ರಮಂಗಳಲ್ಲಿ ಇದ್ದಂಥಾ ತಪೋಧನಾನ್—ಋಷಿಗಳನು ಸಮಾಕೃಷ್ಯ—ಎಳೆದು ವಜ್ರೈಃ—ವಜ್ರಂಗಳಿಂದ ಚಕ್ರೈಃ—ಚಕ್ರಂಗಳಿಂದ ಮಹಾಶೂಲೈಃ—ದೊಡ್ಡಿಯ ತ್ರಿಶೂಲಂಗಳಿಂದ ಶಕ್ತಿಭಿಃ — ಶಕ್ತಿಯೆಂಬ ಆಯುಧಂಗಳಿಂದ ಪಾಶಪಟ್ಟಿಶೈಃ— ಹಗ್ಗ ಪಟ್ಟಿಯಂಗಳಿಂದ ಮಾರಯಂತಿ— ಹೊಡೆಯುತ್ತಿದ್ದರು. (ಕೊಲ್ಲುತ್ತಿದ್ದರು.)

ಮುಸಲೈಃ—ಒನಕೆಗಳಿಂದ ಅಸಿಭಿಃ—[3]ಅಡ್ಡಾ[3]ಯುಧಂಗಳಿಂದ ಟಂಕೈಃ— ಟಂಕವೆಂಬಾಯುಧಂಗಳಿಂದ ಭಿಂಡಿವಾಲೈಃ — [4]ಭಿಂಡಿ[4]ವಾಳಂಗಳಿಂದ [5]ಪರಶ್ವಧೈಃ — ಕೊಡಲಿಗಳಿಂದ[5] ವೀರಭದ್ರಾಂಗಸಂಭವಾಃ — ವೀರಭದ್ರನ ಶರೀರದಿಂದ ಹುಟ್ಟಿದಂಥಾ ಬಲಿನಃ—ಬಲ್ಲಿದರುಗಳಹಂಥಾ ವೀರಾಶ್ಚ—ವೀರರುಗಳು ಉತ್ಥಿತಾನ್ —ಏಳುತ್ತಿದ್ದಂಥಾ ಲೋಕಪಾಲಪುರಸ್ಸರಾನ್— ಲೋಕಪಾಲರುಗಳು ಮೊದಲಾದಂಥಾ ಸರ್ವಾನ್ ತ್ರಿದಶಾನ್—ಸಮಸ್ತ ದೇವರ್ಕಳುಗಳನು ಬಿಭಿದುಃ—ಪ್ರಹರಿಸಿದರು. ||೮೯||

---

[1] ಪ್ರಾಸ (ಘ) ಪಾಪ (ಖ) [2] ರ್ಭಿಂದಿವಾಲೈಃ (ಘ)
[3] ಅಡಾ (ಖ) [4] ಪಿಂಡಿ (ಖ) [5] ಲುಪ್ತ (ಕ)

ಭಿಂದಿ ಭಿಂದಿ ಕ್ಷಿಪ ಕ್ಷಿಪ್ರಂ ಮಾರ್ಯತಾಂ ಮಾರ್ಯತಾಮಿತಿ
ಹರಸ್ವ ಚ ಹರಸ್ವೇತಿ ಪಾಟಯೋತ್ಪಾಟಯೇತಿ ಚ ||೯೦||

ಸಂರಂಭ ಪ್ರಭವಾಃ ಕ್ರೂರಾಃ ಶಬ್ದಾಃ ಶ್ರವಣಶಂಕವಃ
ತತ್ರ ತತ್ರ ಗಣೇಶಾನಾಂ ಜಜ್ಞಿರೇ ಸಮಯೋಚಿತಾಃ ||೯೧||

* [1] ನಿರ್ಮಥ್ಯ ಸೇಂದ್ರಾನಮರಾನ್ಗಣೇಂದ್ರಾಃ
ವೃಷೇಂದ್ರ ನಾಗೇಂದ್ರಮೃಗೇಂದ್ರಸಾರಾಃ
ಚಕ್ರುರ್ಬಹೂನ್ಯಪ್ರತಿಮಪ್ರಭಾವಾಃ
ಸಹರ್ಷರೋಮಾಣಿ ವಿಚೇಷ್ಟಿತಾನಿ ||೯೨||

---

ಭಿಂದಿ—ಕಡಿ. ಭಿಂದಿ—ಬಡಿ (ಇರಿ). ಕ್ಷಿಪ— [2]ಎಸೆ[2]. ಕ್ಷಿಪ್ರಂ— ಬೇಗ ಮಾರ್ಯತಾಂ — ಹೊಡೆಯಲ್ಪಡಲಿ (ಕೊಲಲುಪಡಲಿ), ಮಾರ್ಯತಾಂ — ಹೊಡೆಯಲುಪಡಲಿ (ಕೊಲಲುಪಡಲಿ). ಇತಿ—ಹೀಂಗೆಂದು, ಹರಸ್ವ—ಕೊಲ್ಲು, ಹರಸ್ವ—ಕೊಲ್ಲು ಇತಿ ಚ—ಹೀಂಗೆಂದು, ಪಾಟಯ — ಸೀಳು, ಉತ್ಪಾಟಯ —ಸೀಳು ಇತಿ ಚ—ಹೀಗೆಂಬಂಥಾ, ||೯೦||

ತತ್ರ ತತ್ರ — ಆ ಯಾಗವ ಕೆಡಿಸುವ ಆ ಆ ವೇಳೆಯಲ್ಲಿ ಗಣೇಶಾನಾಂ— ಗಣೇಶ್ವರರುಗಳ ಸಂರಂಭಪ್ರಭವಾಃ— ಕೋಪದಿಂದ ಹುಟ್ಟಿದಂಥಾ— ಕ್ರೂರಾಃ — ನಿಷ್ಠುರವಹಂಥಾ ಶ್ರವಣಶಂಕವಃ — ಕಿವಿಗೆ (ಕಿವಿಗಳಿಗೆ) [3]ಗೂಟ[3]ವಹಂಥಾ ಸಮಯೋಚಿತಾಃ—[4]ಕಾಲಗಕ್ಕೆ ಉಚಿತವಹಂಥಾ ಶಬ್ದಾಃ—ಧ್ವನಿಗಳು ಜಜ್ಞಿರೇ— ಹುಟ್ಟಿದವು.[4] ||೯೧||

ವೃಷೇಂದ್ರನಾಗೇಂದ್ರಮೃಗೇಂದ್ರಸಾರಾಃ — ವೃಷಭಗಜಸಿಂಹಗಳೋಪಾದಿ ಸತ್ತ್ವವನುಳ್ಳಂಥಾ, ಅಪ್ರತಿಮಪ್ರಭಾವಾಃ— ಸಮಾನವಿಲ್ಲದೇ ಇದ್ದ ಸಾಮರ್ಥ್ಯವನುಳ್ಳಂಥಾ, ಗಣೇಂದ್ರಾಃ = ಗಣೇಶ್ವರರುಗಳು ಸೇಂದ್ರಾನಮರಾನ್—ಇಂದ್ರನೊಡನೆ ಕೂಡಿವಂಥಾ ದೇವರ್ಕಳನು ನಿರ್ಮಥ್ಯ— ಸದೆದು ಸಹರ್ಷರೋಮಾಣಿ —ಹರುಷದೊಡನೆ ಕೂಡಿದ ರೋಮಾಂಚನಂಗಳನುಳ್ಳಂಥಾ ಬಹೂನಿ — ಬಹಳವಹಂಥಾ ವಿಚೇಷ್ಟಿತಾನಿ—ವ್ಯಾಪಾರಂಗಳನು ಚಕ್ರುಃ—ಮಾಡಿದರು. ||೯೨||

---

1 ಉಪೇಂದ್ರ ವಜ್ರವೃತ್ತ ವೆಂದಿದೆ (ಕ) 2 ಹಾಕು (ಖ) 3 ಗೂಠ (ಕ)
4 ಕಾಳಗಕ್ಕೆ ಉಚಿತವಹಂಥಾವರುಗಳು ಜಜ್ಞಿರೇ-ಹುಟ್ಟಿದರು ಎಂದಿಷ್ಟು ವ್ಯಾಖ್ಯಾನವಿದ್ದು 'ಶಬ್ದಾಃ' ಎಂಬ ಪದ ವ್ಯಾಖ್ಯಾನದಲ್ಲಿ ಬಂದಿಲ್ಲವು (ಕ) * ಇಂದ್ರವಜ್ರಾವೃತ್ತ

*ನಂದಂತಿ ಕೇಚಿತ್ ಪ್ರರುದಂತಿ ಕೇಚಿತ್
ಧಾವಂತಿ ಕೇಚಿತ್ ಪ್ರಲಪಂತಿ ಕೇಚಿತ್
ನೃತ್ಯಂತಿ ಕೇಚಿತ್ ವಿಹಸಂತಿ ಕೇಚಿತ್
ವಲ್ಗಂತಿ ಕೇಚಿತ್ ಪ್ರಮಥಾ ಮದೇನ ||೯೩||

*ಕೇಚಿಜ್ಜಿಘೃಕ್ಷಂತಿ ಘನಾನ್ಸತೋಯಾನ್
ಕೇಚಿದ್ಗೃಹೀತುಂ ರವಿಮುತ್ಪತಂತಿ
ಕೇಚಿತ್ಪ್ರಸರ್ತುಂ ಪವನೇನ ಸಾರ್ಧ-
ಮಿಚ್ಛಂತಿ ಭೀಮಾಃ ಪ್ರಮಥಾಃ ವಿಯತ್ಸ್ಥಾಃ ||೯೪||

§ಉತ್ಕ್ಷಿಪ್ಯ ಕೇಚಿಚ್ಚ ವರಾಯುಧಾನಿ
ಮಹಾಭುಜಂಗಾನಿವ ವೈನತೇಯಾಃ

---

ಕೇಚಿತ್‌ಪ್ರಮಥಾಃ—ಕೆಲಬರು ಗಣೇಶ್ವರರುಗಳು ನಂದಂತಿ—ಸಂತೋಷಿಸುತ್ತಿದ್ದರು. ಕೇಚಿತ್—ಕೆಲಬರು ಪ್ರರುದಂತಿ — ದೇವರ್ಕಳ ಯಾತನೆಯು ಕಂಡು ಅಣಕಿಸಿ ಅಳುತ್ತಿದ್ದರು. ಕೇಚಿತ್ — ಕೆಲಬರು ಧಾವಂತಿ — ಹರಿದಾಡುತ್ತಿದ್ದರು. ಕೇಚಿತ್—ಕೆಲಬರು ಪ್ರಲಪಂತಿ—ದಕ್ಷನ ಯಾಗದ ಸಿರಿ ಕೆಟ್ಟುದಕ್ಕೆ ವಿನೋದದಿಂದ ಪ್ರಳಾಪಿಸುತ್ತಿದ್ದರು. ಕೇಚಿತ್— ಕೆಲಬರು ನೃತ್ಯಂತಿ — ನೃತ್ಯವನಾಡುತ್ತಿದ್ದರು. ಕೇಚಿತ್—ಕೆಲಬರು ವಿಹಸಂತಿ—ನಗುತ್ತಿದ್ದರು. ಕೇಚಿತ್—ಕೆಲಬರು ವಲ್ಗಂತಿ —ಕುಣಿದಾಡುತ್ತಿದ್ದರು. ವಲ್ಗ–ಕಂಪನೇ ಎಂಬ (ಇತಿ) ಧಾತು. ||೯೩||

ಭೀಮಾಃ—ಭಯಂಕರವಹಂಥಾ ಕೇಚಿತ್ಪ್ರಮಥಾಃ—ಕೆಲವರು ಪ್ರಮಥರುಗಳು ವಿಯತ್ಸ್ಥಾಃ—ಆಕಾಶದಲ್ಲಿ ಇದ್ದಂಥಾವರುಗಳಾಗಿ ಸತೋಯಾನ್—ಉದಕದೊಡನೆ ಕೂಡಿದಂಥಾ ಘನಾನ್ — ಮೇಘಂಗಳನು ಜಿಘೃಕ್ಷಂತಿ — ಹೀರುತ್ತಿದ್ದರು. ಕೇಚಿತ್— ಕೆಲಬರು ರವಿಂ — ಸೂರ್ಯನನು ಗೃಹೀತುಂ — ತುಡುಕಲು ಉತ್ಪತಂತಿ—ನೆಗವುತ್ತಿದ್ದರು. ಕೇಚಿತ್—ಕೆಲಬರು ಪವನೇನ ಸಾರ್ಧಂ—ವಾಯುವಿನೊಡನೆ ಪ್ರಸರ್ತುಂ — ಹರಿದಾಡಲು ಇಚ್ಛಂತಿ— ಇಚ್ಛೈಸುತ್ತಲಿದ್ದರು. [1]ಪ್ರಗಂಧಾದಾನೇ[1] (?) ಇತಿ ಧಾತುಃ. ||೯೪||

ಪರ್ವತಕೂಟಕಲ್ಪಾಃ—ಪರ್ವತಶಿಖರಕ್ಕೆ ಸಮಾನವಾಗುತ್ತಿದ್ದಂಥಾ ಕೇಚಿತ್ —ಕೆಲಬರು ಗಣೇಶ್ವರರುಗಳು ಖಮಂಡಲೇ— ಆಕಾಶಮಂಡಲದಲ್ಲಿ ದೇವಾನಪಿ

---

[1] ಘ್ರಾ ಗಂಧೋಪಾದಾನೇ ? *[ ಇಂದ್ರವಜ್ರಾವೃತ್ತ ] §[ ಉಪಜಾತಿವೃತ್ತ ]

ಭ್ರಮಂತಿ ದೇವಾನಪಿ ವಿದ್ರವಂತಃ
ಖಮಂಡಲೇ ಪರ್ವತಕೂಟಕಲ್ಪಾಃ ॥೯೫॥

ತತಸ್ತ್ರಿದಶಮುಖ್ಯಾಸ್ತೇ ವಿಷ್ಣುಶಕ್ರಪುರೋಗಮಾಃ
ಸರ್ವೇ ಭಯಪರಿತ್ರಸ್ತಾ ದುದ್ರುವುರ್ಭಯವಿಹ್ವಲಾಃ ॥೯೬॥

ನಿಜೈರದೂಷಿತೈರಂಗೈರ್ದೃಷ್ಟ್ವಾ [1]ದೇವಾನಭಿಪ್ಲುತಾನ್[1]
ದಂಡ್ಯಾನದಂಡಿತಾನ್ಮತ್ವಾ ಚುಕೋಪ ಗಣಪುಂಗವಃ ॥೯೭॥

ತತಸ್ತ್ರಿಶೂಲಮಾದಾಯ ಸರ್ವಶತ್ರುನಿಬರ್ಹಣಮ್
ಊರ್ಧ್ವದೃಷ್ಟಿರ್ಮಹಾಬಾಹುರ್ಮುಖಾಜ್ಜ್ವಾಲಾಸ್ಸಮುತ್ಸೃಜನ್ ॥

—ದೇವರ್ಕಳನು ಕುರಿತು ವರಾಯುಧಾನಿ ಚ— ಒಪ್ಪುತ್ತಂವಿದ್ದ ಆಯುಧಂಗಳನು ಉತ್ಕ್ಷಿಪ್ಯ—ಇಟ್ಟು ವಿದ್ರವಂತಃ—ಅಟ್ಟುತ್ತಿದ್ದಂಥಾವರುಗಳಾಗಿ ಭ್ರಮಂತಿ — ತಿರಿಗಿ ಆಡುತ್ತಿದ್ದರು. ಕಥಮಿವ—ಅದು ಹೇಂಗೆಯೂ ಎಂದಡೆ ವೈನತೇಯಾಃ— ಗರುಡರುಗಳು ಮಹಾಭುಜಂಗಾನಿವ—ದೊಡ್ಡಿಯ ಸರ್ಪಂಗಳನೆಹಗಹಗೆ. ॥೯೫॥

ತತಃ—ಅಷ್ಟರ ಮೇಲೆ ವಿಷ್ಣುಶಕ್ರಪುರೋಗಮಾಃ— ವಿಷ್ಣು ಇಂದ್ರ ಮೊದಲಾದಂಥಾ ತ್ರಿದಶಮುಖ್ಯಾಃ—ದೇವರ್ಕಳು ಮುಖ್ಯರಾದಂಥಾ ತೇ—ಅವರುಗಳು ಭಯಪರಿತ್ರಸ್ತಾಃ—ಭೀತಿಯಿಂದ ನಡುಗುತ್ತಿದ್ದರು. ಸರ್ವೇ — ಎಲ್ಲರು ಭಯ-ವಿಹ್ವಲಾಃ—ಭೀತಿಯಿಂದ ಮುಂದುಗೆಟ್ಟವರುಗಳಾಗಿ ದುದ್ರುವುಃ—ಓಡಿದರು. ದೃ-ಗತೌ ಎಂಬ ಧಾತು. ॥೯೬॥

ಅದೂಷಿತೈಃ—ಜರಸಿಕೊಳ್ಳಸೆ ಇದ್ದಂಥಾ ನಿಜೈಃ—ತಮ್ಮ ಸಂಬಂಧವಹಂಥಾ ಅಂಗೈಃ—ಸೇನಾಂಗವಹ ಚಾತುರ್ಬಲಂಗಳೊಡನೆ ಅಭಿಪ್ಲುತಾನ್—ಓಡುತ್ತಿದ್ದಂಥಾ ದೇವಾನ್ — ಸಮಸ್ತ ದೇವರ್ಕಳನು ದೃಷ್ಟ್ವಾ — ಕಂಡು ಗಣಪುಂಗವಃ — ಗಣಂಗಳಿಗೆ ಶ್ರೇಷ್ಠನಹಂಥಾ ವೀರಭದ್ರನು ದಂಡ್ಯಾನ್ — ಶಿಕ್ಷೆಗೆ ಯೋಗ್ಯರುಗಳನು ಅದಂಡಿತಾನ್ — ಶಿಕ್ಷೆಗೆ ಯೋಗ್ಯರಲ್ಲದವರುಗಳನು ಮತ್ವಾ — ಅರಿದು ಚುಕೋಪ—ಕೋಪಿಸಿದನು. ॥೯೭॥

ತತಃ—ಅಷ್ಟರ ಮೇಲೆ ಮಹಾಬಾಹುಃ—ದೊಡ್ಡಿಯ ಭುಜಂಗಳನುಳ್ಳಂಥಾ ವೀರಭದ್ರಃ—ವೀರಭದ್ರನು ಸರ್ವಶತ್ರುನಿಬರ್ಹಣಂ—ಸಮಸ್ತಶತ್ರುಗಳ ಸಂಹರಿಸು

[1] ದೇವಾನಭಿಷ್ಟುತಾನ್ (ಘ) ದೇವಾನಭಿಷ್ಠಿತಾನ್ (ಗ). ದೇವಾನಭಿಷ್ಟುತಾನ್ (ಖ)

ಅಮರಾನಭಿದುದ್ರಾವ ದ್ವಿರದಾನಿವ ಕೇಸರೀ
ತಾನಭಿದ್ರವತಸ್ತಸ್ಯ ಗಮನಂ ಸುಮನೋಹರಮ್ ||
ವಾರಣಸ್ಯೇವ ಮತ್ತಸ್ಯ ಜಗಾಮ ಪ್ರೇಕ್ಷಣೀಯತಾಮ್ ||೯೯||

ತತಸ್ತತ್ ಕ್ಷೋಭಯಾಮಾಸ ಸ್ವಯಂ ಸುರಬಲಂ ಬಲೀ
ಮಹಾಸರೋವರಂ ಯದ್ವನ್ಮತ್ತೋ ವಾರಣಯೂಥಪಃ ||೧೧೦||

ಕುರ್ವನ್ಬಹುವಿಧಾನ್ವರ್ಣಾನ್ನೀಲಪಾಂಡುರಲೋಹಿತಾನ್
ಬಿಭ್ರದ್ವ್ಯಾಘ್ರಾಜಿನಂ ವಾಸೋ ಹೇಮಪ್ರವರತಾರಕಮ್ ||
ವ್ಯಚರದ್ದೇವಸಂಘೇಷು ಭದ್ರೋಽಗ್ನಿರಿವ ಕಕ್ಷಗಃ ||೧೧೧||

---

ವಂಥಾ ತ್ರಿಶೂಲಂ — ತ್ರಿಶೂಲವನು ಆದಾಯ — ತೆಗೆದುಕೊಂಡು ಊರ್ಧ್ವದೃಷ್ಟಿಃ— ಊರ್ಧ್ವದೃಷ್ಟಿಯನುಳ್ಳಾತನಾಗಿ ಮುಖಾತ್ — ಮುಖದ ದೆಸೆಯಿಂದ ಜ್ವಾಲಾಃ — ಜ್ವಾಲೆಗಳನು ಸಮುತ್ಸೃಜನ್—ಬಿಡುತ್ತವು, ||೯೮||

ಅಮರಾನ್ — ದೇವರ್ಕಳುಗಳನು ಅಭಿದುದ್ರಾವ—ಅಟ್ಟಿದನು. ದ್ವಿರದಾನ್ — ಆನೆಗಳನು ಕೇಸರೀವ — ಸಿಂಹನೆಹಗಹಗೆ. ತಾನ್ — ಆ ದೇವತೆಗಳನು ಅಭಿದ್ರವತಃ ಅಟ್ಟುತ್ತಿದ್ದಂಥಾ ತಸ್ಯ — ಆ ವೀರಭದ್ರನ ಸುಮನೋಹರಂ— ಅತ್ಯಂತ ಒಪ್ಪುತ್ತಿದ್ದಂಥಾ ಗಮನಂ—ನಡೆಯು ಮತ್ತಸ್ಯ—ಮದಸೊಕ್ಕಿದಂಥಾ ವಾರಣಸ್ಯ — ಆನೆಯ ಗಮನಮಿವ — ಗಮನವ (ನಡೆಯು)ಕ್ಕೈ ಎಂಬ ಹಾಂಗೆ ಪ್ರೇಕ್ಷಣೀಯತಾಂ—ನೋಡಲು ಯೋಗ್ಯವಹತನವನು ಜಗಾಮ — ಎಯ್ದಿತ್ತು. ಈ ಶ್ಲೋಕವು ಕುಳಕ. ||೯೯||

ತತಃ—ಅಷ್ಟರ ಮೇಲೆ ಬಲೀ—ಬಲ್ಲಿದನಹಂಥಾ ವೀರಭದ್ರನು ಸ್ವಯಂ —ತಾನೇ ತತ್ ಸುರಬಲಂ— ಆ ದೇವರ್ಕಳ ದೆಸೆಯನು ಕ್ಷೋಭಯಾಮಾಸ— ಕಲಕಿದನು. ಮತ್ತಃ — ಮದಸೊಕ್ಕಿದಂಥಾ ವಾರಣಯೂಥಪಃ—ಆನೆಯ ಹಿಂಡುಗಳಿಗೆ ಒಡೆಯನಹಂಥಾ ಗಜವು ಮಹಾಸರೋವರಂ ಯದ್ವತ್ — ದೊಡ್ಡಿಯ ಸರೋವರನೆಹಗಹಗೆ. ||೧೧೦||

ಭದ್ರಃ—ವೀರಭದ್ರನು ಬಿಭ್ರತ್—ಧರಿಸಿದಂಥಾ ವಾಸಃ—ವಸ್ತ್ರವಹಂಥಾ ಹೇಮಪ್ರವರತಾರಕಂ—ಭಂಗಾರವರ್ಣ ಒಪ್ಪುತ್ತಂವಿದ್ದ ಬೆಳ್ಳಿಯ ವರ್ಣವನುಳ್ಳಂಥಾ ವ್ಯಾಘ್ರಾಜಿನಂ—ಪುಲಿಚರ್ಮವನು ನೀಲಪಾಂಡುರಲೋಹಿತಾನ್ — ಘಾಯವಾದ ದೇವರ್ಕಳ ಶರೀರದಿಂದ ಸುರಿದ ಕನ್ನೆತ್ತರು ಮಜ್ಜೆ ರಕ್ತದಿಂದ ಕರಿದು ಬಿಳಿದು ಕೆಂಪನುಳ್ಳಂಥಾ ಬಹುವಿಧಾನ್—ನಾನಾಪ್ರಕಾರವಹಂಥಾ ವರ್ಣಂಗಳನೂ ಕುರ್ವನ್

ತತ್ರ ತತ್ರ ಮಹಾವೇಗಾಚ್ಚಲಂತಂ ಶೂಲಧಾರಿಣಮ್
ತಮೇಕಂ ತ್ರಿದಶಾಸ್ಸರ್ವೇ ಸಹಸ್ರಮಿವ ಮೇನಿರೇ ||೧೦೨||

ಭದ್ರಕಾಳೀ ಚ ಸಂಕ್ರುದ್ಧಾ ಯುದ್ಧವೃದ್ಧಮದೋದ್ಧತಾ
ಮುಕ್ತಜ್ವಾಲೇನ ಶೂಲೇನ ನಿರ್ಬಿಭೇದ ರಣೇ ಸುರಾನ್ ||೧೦೩||

ಸ [1]ತಯಾ[1] ರುರುಚೇ ಭದ್ರೋ ರುದ್ರಕೋಪಸಮುದ್ಭವಃ
ಪ್ರಭಯೇವ ಯುಗಾಂತಾಗ್ನಿಶ್ಚಲಯಾ ಧೂಮಧೂಮ್ರಯಾ ||೧೦೪||

ಭದ್ರಕಾಳೀ ತದಾ ಯುದ್ಧೇ ವಿದ್ರುತತ್ರಿದಶಾ ಬಭೌ
ಕಲ್ಪಶೇಷಾನಲಜ್ವಾಲಾ ದಗ್ಧವಿಶ್ವ[2]ಜಗದ್ಯಥಾ[2] ||೧೦೫||

—ಮಾಡುತ್ತವು ದೇವಸಂಘೇಷು—ದೇವರ್ಕಳ ಸಮೂಹಂಗಳಲ್ಲಿ ವ್ಯಚರತ್—ಚರಿಸಿದನು. ಕಕ್ಷಗಃ—ಮೆಳೆಯನೆಯ್ದಿದಂಥಾ ಅಗ್ನಿರಿವ—ಅಗ್ನಿಯೆಹಗಹಗೆ. ||೧೦೧

ತತ್ರ ತತ್ರ — ಅಲ್ಲಿ ಅಲ್ಲಿ ಮಹಾವೇಗಾತ್ — ಅತಿವೇಗದ ದೆಸೆಯಿಂದ ಚಲಂತಂ—ಹರಿವುತ್ತಿದ್ದಂಥಾ ಶೂಲಧಾರಿಣಂ—ತ್ರಿಶೂಲವ ಧರಿಸಿದಂಥಾ ತಮೇಕಂ—ಆ ವೀರಭದ್ರನೊಬ್ಬನನು ಸರ್ವೇ ತ್ರಿದಶಾಃ—ಸಮಸ್ತ ದೇವರ್ಕಳೂ ಸಹಸ್ರಮಿವ—ಸಾವಿರ ವೀರಭದ್ರರನ್ನಾಗಿ ಮೇನಿರೇ—ಬಗೆದರು. ||೧೦೨||

ಯುದ್ಧವೃದ್ಧಮದೋದ್ಧತಾ—ಯುದ್ಧದಲ್ಲಿ ಹೆಚ್ಚಲುಪಟ್ಟ ಮದದ ಉನ್ನತಿಕೆಯನುಳ್ಳಂಥಾ ಭದ್ರಕಾಳೀ ಚ — ಭದ್ರಕಾಳಿಯೂ ಸಂಕ್ರುದ್ಧಾ—ಅತ್ಯಂತ ಕೋಪಿಸಿದಾಯ(ನಾ)ಳಾಗಿ ಮುಕ್ತಜ್ವಾಲೇನ — ಉಗುಳಲ್ಪಟ್ಟ ಜ್ವಾಲೆಯನುಳ್ಳಂಥಾ ಶೂಲೇನ — ತ್ರಿಶೂಲದಿಂದ ರಣೇ — ಕಾಳಗದಲ್ಲಿ ಸುರಾನ್ — ದೇವತೆಗಳನು ನಿರ್ಬಿಭೇದ—ಇರಿದಳು. ||೧೦೩||

ರುದ್ರಕೋಪಸಮುದ್ಭವಃ—ಪರಮೇಶ್ವರನ ಕೋಪದಿಂದ ಹುಟ್ಟಿದಂಥಾ ಸಃ ಭದ್ರಃ—ಆ ವೀರಭದ್ರನು ಧೂಮಧೂಮ್ರಯಾ — ಹೊಗೆಯೋಪಾದಿ ಕೃಷ್ಣವರ್ಣವನುಳ್ಳಂಥಾ ತಯಾ—ಆ ಭದ್ರಕಾಳಿಯಿಂದ ರುರುಚೇ—ಒಪ್ಪಿದನು. ಕಥಮಿವ—ಅದು ಹೇಂಗೆಯೂ ಎಂದೊಡೆ ಯುಗಾಂತಾಗ್ನಿಃ — ಯುಗದ ಕಡೆಯ ಕಾಲದಗ್ನಿ ಚಲಯಾ—ಚಂಚಲಿಸುತ್ತಿದ್ದಂಥಾ ಪ್ರಭಯಾ ಇವ — ಪ್ರಭೆಯಿಂದವೆಹಗಹಗೆ.

ಯುದ್ಧೇ—ಕಾಳಗದಲ್ಲಿ ವಿದ್ರುತತ್ರಿದಶಾ — ಅಟ್ಟುತ್ತಂವಿದ್ದ ದೇವರ್ಕಳನುಳ್ಳಂಥಾ ಭದ್ರಕಾಳೀ— ಭದ್ರಕಾಳಿಯು ತದಾ — ಆಗ ಬಭೌ — ಒಪ್ಪಿದಳು.

[1] ತಥಾ (ಘ) [2] ಜಗತ್ಯಥಾ (ಘ)

ತದಾ ಸ ವಜ್ರಿಣಂ ಸೂರ್ಯಂ ಕಾಲರುದ್ರಗಣಾಗ್ರಣೀಃ
ಭದ್ರೋ ಮೂರ್ಧ್ನಿ ಜಘಾನಾಶು ವಾಮಪಾದೇನ ಲೀಲಯಾ ||೧೦೬||

ಅಸಿಭಿಃ ಪಾವಕಂ ಶಕ್ರಂ ಪಟ್ಟಿಶೈಶ್ಚ ಯಮಂ ಯಮೀ
ಪರಿಘೈರ್ನಿರ್‍ಋತಿಂ ವಾಯುಂ ಟಂಕೈಷ್ಟಂಕಧರಸ್ಸ್ವಯಮ್ ||
ನಿರ್ಬಿಭೇದ ರಣೇ ವೀರೋ ಲೀಲಯೈವ ಗಣೇಶ್ವರಃ ||೧೦೭||

ತತೋ ದೇವಃ ಸರಸ್ವತ್ಯಾ ನಾಸಿಕಾಗ್ರಂ ಸುಶೋಭನಮ್
ಚಿಚ್ಛೇದ ಕರಜಾಗ್ರೇಣ ದೇವಮಾತುಸ್ತಥೈವ ಚ ||೧೦೮||

---

ತದ್ಯಥಾ—ಅದು ಹೇಂಗೆಯಾ ಎಂದಡೆ, ದಗ್ಧವಿಶ್ವಜಗತ್—ದಹಿಸಲುಪಟ್ಟ ಸಮಸ್ತ ಲೋಕವನುಳ್ಳಂಥಾ ಕಲ್ಪಶೇಷಾನಲಜ್ವಾಲಾ ಯಥಾ— ಕಲ್ಪಾಂತರದಲ್ಲಿ ಉಳಿದ ಅಗ್ನಿಜ್ವಾಲೆಯೆಹಗಹಗೆ. ||೧೦೫||

ತದಾ—ಆಗ ಕಾಲರುದ್ರಗಣಾಗ್ರಣೀಃ—ಕಾಲರುದ್ರನ ಗಣಂಗಳಿಗೆ ಅಗ್ರಗಣ್ಯನಹಂಥಾ ಸ ಭದ್ರಃ— ಆ ವೀರಭದ್ರನು ಲೀಲಯಾ — ಲೀಲೆಯಿಂದ ವಾಮ-ಪಾದೇನ—ಎಡದ ಪಾದದಿಂದ ವಜ್ರಿಣಂ—ಇಂದ್ರನನು ಸೂರ್ಯಂ— ಸೂರ್ಯನನು ಕುರಿತು ಆಶು—ಬೇಗ ಮೂರ್ಧ್ನಿ—ಶಿರಸ್ಸಿನಲ್ಲಿ ಜಘಾನ—ಒದೆದನು.

ಟಂಕಧರಃ—ಟಂಕವೆಂಬಾಯುಧವ ಧರಿಸಿದಂಥಾ ಯಮೀ—ನಿಯಮಶೀಲನಹಂಥಾ ವೀರಃ—ವೀರನಹಂಥಾ ಗಣೇಶ್ವರಃ—ವೀರಭದ್ರನು ಸ್ವಯಂ—ತಾನೇ ಲೀಲಯೈವ—ಲೀಲೆಯಿಂದವೇ ರಣೇ—ಕಾಳಗದಲ್ಲಿ ಅಸಿಭಿಃ — ಅಡ್ದಾಯುಧಂ-ಗಳಿಂದ ಪಾವಕಂ—ಅಗ್ನಿಯನು ಪಟ್ಟಿಶೈಃ—ಪಟ್ಟಿಯಂಗಳಿಂದ ಶಕ್ರಂ—ಇಂದ್ರನನು ಯಮಂ ಚ — ಯಮನನು ಪರಿಘೈಃ — ಕಬ್ಬಿನದ ದಡಿಗಳಿಂದ ನಿರ್‍ಋತಿಂ—ನೈಋತ್ಯನನು ವಾಯುಂ—ವಾಯುವನೂ ಟಂಕೈಃ—ಟಂಕವೆಂಬಾಯುಧಂಗಳಿಂದ ನಿರ್ಬಿಭೇದ—ಅಪ್ಪಳಿಸಿದನು. ||೧೦೭||

ತತಃ—ಅಪ್ಪರ ಮೇಲೆ ದೇವಃ — ಪ್ರಕಾಶಸ್ವರೂಪನಹಂಥಾ ವೀರಭದ್ರನು ಸರಸ್ವತ್ಯಾಃ—ಸರಸ್ವತಿಯ ಸುಶೋಭನಂ—ಅತ್ಯಂತ ಒಪ್ಪುತ್ತಿದ್ದಂಥಾ ನಾಸಿಕಾಗ್ರಂ —ಮೂಗಿನ ತುದಿಯನು ಕರಜಾಗ್ರೇಣ — ಉಗುರ ತುದಿಯಿಂದ ಚಿಚ್ಛೇದ—ಛೇದಿಸಿದನು. ತಥೈವ—ಹಾಂಗೆ ದೇವಮಾತುಃ—ದೇವರ್ಕಳ ತಾಯಹಂಥಾ ಅದಿತಿ ದೇವಿಯ ನಾಸಿಕದ ತುದಿಯನು ಛೇದಿಸಿದನು. ||೧೦೮||

ಚಿಚ್ಛೇದ ಚ ಕುಠಾರೇಣ ಬಾಹುದಂಡಂ ವಿಭಾವಸೋಃ
ಅಗ್ರತೋ ದ್ವ್ಯಂಗುಲಂ ಜಿಹ್ವಾಮಾತ್ತಹವ್ಯಾಂ ಲುಲಾವ ಚ ||೧೦೯||

ಸ್ವಾಹಾದೇವ್ಯಾಸ್ತಥಾ ದೇವೋ ದಕ್ಷಿಣಂ ನಾಸಿಕಾಪುಟಮ್
ಚಕರ್ತ ಕರಜಾಗ್ರೇಣ ವಾಮತಸ್ತನಚೂಚುಕಮ್ ||೧೧೦||

ಭಗಸ್ಯ ವಿಪುಲೇ ನೇತ್ರೇ ಶತಪತ್ರಸಮಪ್ರಭೇ
ಪ್ರಸಹ್ಯೋತ್ಪಾಟಯಾಮಾಸ ಭದ್ರಃ ಪರಮವೇಗವಾನ್ ||೧೧೧||

ಪೂಷ್ಣೋ ದಶನಲೇಖಾಂ ಚ ದೀಪ್ತಮುಕ್ತಾವಲೀಮಿವ
ಜಘಾನ ಧನುಷಃ ಕೋಟ್ಯಾ ಸ ತೇನಾಸ್ಪಷ್ಟವಾಗಭೂತ್ ||೧೧೨||

---

ಕುಠಾರೇಣ—ಕೊಡಲಿಯಿಂದ ವಿಭಾವಸೋಃ—ಅಗ್ನಿಯ ಬಾಹುದಂಡಂ—ಭುಜದಂಡವನ್ನು ಚಿಚ್ಛೇದ—ಕಡಿದನು. ಅಗ್ರತಃ—ಕೊಡಲಿಯ ತುದಿಯಿಂದ ಆತ್ತಹವ್ಯಾಂ — ಸ್ವೀಕರಿಸಲುಪಟ್ಟ ಹವಿಸ್ಸುಗಳನ್ನುಳ್ಳಂಥಾ ದ್ವ್ಯಂಗುಲಾಂ—ಎರಡಂಗುಲಪ್ರಮಾಣವಹಂಥಾ ಜಿಹ್ವಾಂ ಚ — ನಾಲಗೆಯನ್ನು ಲುಲಾವ — ಭೇದಿಸಿದನು. ಲೂಞ್—ಛೇದನೇ ಇತಿ ಧಾತುಃ ||೧೦೯||

ದೇವಃ—ವೀರಭದ್ರದೇವನು ಸ್ವಾಹಾದೇವ್ಯಾಃ — ಯಜ್ಞಪುರುಷನ ಸ್ತ್ರೀಯು ಹಂಥಾ ಸ್ವಾಹಾದೇವಿಯ ದಕ್ಷಿಣಂ—ಬಲದ ಕಡೆಯದಹಂಥಾ ನಾಸಿಕಾಪುಟಂ—ಮೂಗಿನ ಹೊಳ್ಳೆಯನ್ನು ಕರಜಾಗ್ರೇಣ — ಉಗುರ ತುದಿಯಿಂದ ಚಕರ್ತ—ಕತ್ತರಿಸಿದನು. ವಾಮತಃ—ಎಡದ ಕಡೆಯ ಸ್ತನಚೂಚುಕಂ—ಮೊಲೆಯ ತೊಟ್ಟನ್ನು ತಥಾ—ಹಾಂಗೆ ಉಗುರ ತುದಿಯಿಂದ ಚಕರ್ತ—[1]ಬೆರಟಿದನು.[1] ||೧೧೦||

ಪರಮವೇಗವಾನ್—ಅತಿ ವೇಗವನ್ನುಳ್ಳಂಥಾ ಭದ್ರಃ—ವೀರಭದ್ರನು ಭಗಸ್ಯ—ಭಗನೆಂಬ ಸೂರ್ಯನ ವಿಪುಲೇ — ವಿಶಾಲವಹಂಥಾ ಶತಪತ್ರಸಮಪ್ರಭೇ—ತಾವರೆಗೆ ಸಮಾನವಹ ಕಾಂತಿಯನ್ನುಳ್ಳಂಥಾ ನೇತ್ರೇ — ಎರಡು ಕಣ್ಣುಗಳನ್ನು ಪ್ರಸಹ್ಯ—ಬಲಾತ್ಕರಿಸಿ ಉತ್ಪಾಟಯಾಮಾಸ—ಮೀಂಟಿದನು (ಬೆರಟಿದನು.)೧೧೧

ಸಃ—ಆ ವೀರಭದ್ರನು ಧನುಷಃ ಕೋಟ್ಯಾ—ಬಿಲ್ಲ ಕೊಪ್ಪಿನಿಂದ ದೀಪ್ತಮುಕ್ತಾವಲೀಮಿವ = ಹೊಳವುತ್ತಿದ್ದ ಮುತ್ತುಗಳ ಸಮೂಹವಕ್ಕೈ ಎಂಬ ಹಾಂಗೆ ಇದ್ದಂಥಾ ಪೂಷ್ಣಃ = ಪೂಷ್ಣನೆಂಬ ಸೂರ್ಯನ ದಶನಲೇಖಾಂ ಚ = ದಂತಂಗಳ

---

[1] ಮೀಂಟಿದನು (ಕ)

ತತಶ್ಚಂದ್ರಮಸಂ ದೇವಃ ಪಾದಾಂಗುಷ್ಠೇನ ಲೀಲಯಾ
ಕ್ಷಣಾತ್ಕ್ರಿಮಿವದಾಕ್ರಮ್ಯ ಘರ್ಷಯಾಮಾಸ ಭೂತಲೇ ||೧೧೩||

ಅಥೇದೃಶಮವಜ್ಞಾನಂ ದೃಷ್ಟ್ವಾ ತತ್ಪೂರ್ವಸಂಭವಮ್
ವಿಷ್ಣುಃ ಪರಮಸಂಕ್ರುದ್ಧೋ ಯುದ್ಧಾಯಾಭವದುದ್ಯತಃ ||೧೧೪||

ತಮುವಾಹ ಮಹಾವೇಗಃ ಸ್ಕಂಧೇನಾನತಸಂಧಿನಾ
ಸರ್ವೇಷಾಂ ವಯಸಾಂ ರಾಜಾ ಗರುಡಃ ಪನ್ನಗಾಶನಃ ||೧೧೫||

ದೇವಾಶ್ಚ ಹತಶಿಷ್ಟಾ ಯೇ ದೇವರಾಜಪುರೋಗಮಾಃ
ಪ್ರಚಕ್ರುಸ್ತಸ್ಯ ಸಾಹಾಯ್ಯಂ ಪ್ರಾಣಾನ್ ತ್ಯಕ್ತುಮಿವೋದ್ಯತಾಃ ||

---

ಸಾಲನು ಜಘಾನ = ಉದುರಿಸಿದನು. ತೇನ — ಆ ದಂತಂಗಳುದುರಿದದರಿಂದ ಅಸ್ಪಷ್ಟವಾಕ್ = ಅರಿಯಬಾರದ ಮಾತನುಳ್ಳಾತನು ಅಭೂತ್ = ಆದನು. ||೧೧೨||

ದೇವಃ = ವೀರಭದ್ರನು ಲೀಲಯಾ — ವಿಲಾಸದಿಂದ ಪಾದಾಂಗುಷ್ಠೇನ — ಪಾದದ ಹೆಬ್ಬೆರಳಿಂದ ಚಂದ್ರಮಸಂ — ಚಂದ್ರಮನನು ಕ್ಷಣಾತ್ — ಕ್ಷಣಮಾತ್ರದ ದೆಸೆಯಿಂದ ಕ್ರಿಮಿವತ್ — ಕ್ರಿಮಿಯೋಪಾದಿಯಲ್ಲಿ ಆಕ್ರಮ್ಯ — ಮೆಟ್ಟಿ ಭೂತಲೇ = ಭೂಮಿಯಲ್ಲಿ ಘರ್ಷಯಾಮಾಸ — ಒರಸಿದನು. ||೧೧೩||

ಅಥ — ಅನಂತರದಲ್ಲಿ [1]ವಿಷ್ಣುಃ — ವಿಷ್ಣು, ಪೂರ್ವಸಂಭವಂ — ಮೊದಲಲ್ಲಿ ಹುಟ್ಟಿದಂಥಾ ಈದೃಶಂ — ಈ ಪ್ರಕಾರವಹಂಥಾ ತತ್ — ಆ[1] ಅವಜ್ಞಾನಂ = ಭಂಗವನು ದೃಷ್ಟ್ವಾ — ಕಂಡು ಪರಮಸಂಕ್ರುದ್ಧಃ — ಅತ್ಯಂತ ಕೋಪಿಸಿದಾತನಾಗಿ ಯುದ್ಧಾಯ — ಕಾಳಗಕ್ಕೋಸ್ಕರ ಉದ್ಯತಃ — ಉದ್ಯೋಗವುಳ್ಳಾತನು ಅಭವತ್ — ಆದನು. ||೧೧೪||

ಸರ್ವೇಷಾಂ — ಸಮಸ್ತವಹಂಥಾ ವಯಸಾಂ — ಪಕ್ಷಿಗಳಿಗೆ ರಾಜಾ — ಅರಸ ಹಂಥಾ ಪನ್ನಗಾಶನಃ — [2]ಸರ್ಪಂಗಳೇ ಆ[2]ಹಾರವಾಗಿ ಉಳ್ಳಂಥಾ ಮಹಾವೇಗಃ — [3]ಅತ್ಯಂತ[3]ವೇಗವನುಳ್ಳಂಥಾ ಗರುಡಃ = ಗರುಡಪಕ್ಷಿಯು ತಮ್ = ಆ ವಿಷ್ಣುವನು ಕುರಿತು ಆನತಸಂಧಿನಾ = ಬಾಗಲುಪಟ್ಟ ಅವಯವಂಗಳ ಸಂದನುಳ್ಳಂಥಾ ಸ್ಕಂಧೇನ — ಹೆಗಲಿಂದ ಉವಾಹ — ಧರಿಸಿದನು. ವಹ-ಪ್ರಾಪಣೇ [4]ಎಂಬ[4]ಧಾತು. ||೧೧೫||

ಹತಶಿಷ್ಟಾಃ — ಸತ್ತು ಉಳಿದಂಥಾ ದೇವರಾಜಪುರೋಗಮಾಃ — ಇಂದ್ರ ಮೊದಲಾದಂಥಾ ಯೇ — ಆದಾವ (ಆರು ಕೆಲಬರು) ದೇವರ್ಕಳುಗಳು ಪ್ರಾಣಾನ್

---

[1] ಲುಪ್ತ (ಕ) [2] ಸರ್ಪವಾ (ಕ) [3] ತಿ (ಖ) [4] ಇತಿ (ಖ)

ವಿಷ್ಣುನಾ ಸಹಿತಾನ್ದೇವಾನ್ ಮೃಗೇಣ ಕ್ರೋಷ್ಟುಕಾನಿವ
ದೃಷ್ಟ್ವಾ ಜಹಾಸ ಭೂತೇಂದ್ರೋ ಮೃಗೇಂದ್ರ ಇವ ವಿವ್ಯಥಃ ||೧೧೭||

ತಸ್ಮಿನ್ನವಸರೇ ವ್ಯೋಮ್ನಿ ಸಮಾವಿರಭವದ್ರಥಃ
ಸಹಸ್ರಸೂರ್ಯಸಂಕಾಶಶ್ಚಾರುಚೀರವೃಷಧ್ವಜಃ ||೧೧೮||

ಅಶ್ವರತ್ನದ್ವಯೋದಾರಶ್ಚಾರುಚಕ್ರಚತುಷ್ಟಯಃ
ಸಂಚಿತಾನೇಕದಿವ್ಯಾಸ್ತ್ರಚಿತ್ರರತ್ನಪರಿಷ್ಕೃತಃ ||೧೧೯||

ತಸ್ಯಾಪಿ ರಥವರ್ಯಸ್ಯ ಸ್ಯಾತ್ಸ ಏವ ಹಿ ಸಾರಥಿಃ
ಯ ಏವ ತ್ರೈಪುರೇ ಯುದ್ಧೇ ಪೂರ್ವಂ ಶಾರ್ವೇ ರಥೇ ಸ್ಥಿತಃ ||

---

—ಪ್ರಾಣಂಗಳನು ತ್ಯಕ್ತುಂ—ಬಿಡಲು ಉದ್ಯತಾ ಇವ—ಉದ್ಯೋಗವನುಳ್ಳವರಕ್ಕೆ ಎಂಬ ಹಾಂಗೆ ತಸ್ಯ—ಆ ವಿಷ್ಣುವಿಂಗೆ ಸಾಹಾಯ್ಯಂ—ಸಹಾಯವನು ಪ್ರಚಕ್ರುಃ—ಮಾಡಿದರು. ||೧೧೬||

ವಿಷ್ಣುನಾ—ವಿಷ್ಣುವಿನೊಡನೆ ಸಹಿತಾನ್—ಕೂಡಿದಂಥಾ ದೇವಾನ್ = ದೇವರ್ಕಳನು ಕುರಿತು ಮೃಗೇಣ — ಮೃಗದೊಡನೆ ಕೂಡಿದ ಕ್ರೋಷ್ಟುಕಾನಿವ ಜಂಬುಕಂಗಳಕ್ಕೆ ಎಂಬ ಹಾಂಗೆ ದೃಷ್ಟ್ವಾ-ಕಂಡು ವಿವ್ಯಥಃ — ಭಂಗವಿಲ್ಲದೆ ಯಿದ್ದಂಥಾ ಮೃಗೇಂದ್ರ ಇವ—ಸಿಂಹವಕ್ಕೆ ಎಂಬ ಹಾಂಗೆ ಇದ್ದಂಥಾ ಭೂತೇಂದ್ರಃ—ಭೂತಗಣಂಗಳಿಗೆ ಒಡೆಯನಹಂಥಾ ವೀರಭದ್ರನು ಜಹಾಸ—ನಕ್ಕನು.||೧೧೭||

ತಸ್ಮಿನ್ನವಸರೇ—ಆ ವೇಳೆಯಲ್ಲಿ ವ್ಯೋಮ್ನಿ—ಅಕಾಶದಲ್ಲಿ ಸಹಸ್ರಸೂರ್ಯಸಂಕಾಶಃ — ಸಾವಿರ ಸೂರ್ಯರ ಪ್ರಕಾಶವನುಳ್ಳಂಥಾ ಚಾರುಚೀರವೃಷಧ್ವಜಃ—ಮನೋಹರವಹ ಪಟದಲ್ಲಿಯ ವೃಷಧ್ವಜವನುಳ್ಳಂಥಾ ಅಶ್ವರತ್ನದ್ವಯಃ — ಕುದುರೆಗಳೆರಡನುಳ್ಳಂಥಾ ಉದಾರಃ—ಒಪ್ಪುತ್ತಂವಿದ್ದಂಥಾ ಚಾರುಚಕ್ರಚತುಷ್ಟಯಃ—ಮನೋಹರವಹ ಗಾಲಿಗಳು ನಾಲ್ಕನುಳ್ಳಂಥಾ ಸಂಚಿತಾನೇಕದಿವ್ಯಾಸ್ತ್ರಃ — ಒದಗಿಸಲುಪಟ್ಟ ಅನೇಕ ದಿವ್ಯಾಸ್ತ್ರಂಗಳನುಳ್ಳಂಥಾ ಚಿತ್ರರತ್ನಪರಿಷ್ಕೃತಃ—ಆಶ್ಚರ್ಯವಹ ರತ್ನಂಗಳಿಂದ ಅಲಂಕರಿಸಲುಪಟ್ಟಂಥಾ ರಥಃ—ರಥವು ಸಮಾವಿರಭವತ್—ಪ್ರತ್ಯಕ್ಷವಾಯಿತ್ತು. ಸಮಾವಿಃ ಎಂಬ ಅವ್ಯಯ ಶಬ್ದ ಕೂಡಿದ ಕ್ರಿಯಾಪದವು.

ಪೂರ್ವಂ—ಪೂರ್ವದಲ್ಲಿ ತ್ರೈಪುರೇ—ತ್ರಿಪುರದ ಸಂಬಂಧವಹಂಥಾ ಯುದ್ಧೇ—ಯುದ್ಧದಲ್ಲಿ ಶಾರ್ವೇ— ಶಿವಸಂಬಂಧವಹಂಥಾ ರಥೇ ಏವ — ರಥದಲ್ಲಿಯೇ ಯಃ—ಆವನಾನೊಬ್ಬನು ಸ್ಥಿತಃ—ಇದ್ದನು, ಸ ಏವ—ಆ ಬ್ರಹ್ಮನೇ ತಸ್ಯ—

ಸ ತಂ ರಥವರಂ ಬ್ರಹ್ಮಾ ಶಾಸನಾದೇವ ಶೂಲಿನಃ
ವಿಭೋಸ್ಸಮೀಪಮಾನೀಯ ಕೃತಾಂಜಲಿರಭಾಷತ ||೧೨೧||

ಭಗವನ್ಭದ್ರ ಭದ್ರಾಂಗ ಭಗವಾನಿಂದುಭೂಷಣಃ
ಆಜ್ಞಾಪಯಚ್ಚ ವೀರ ತ್ವಂ ರಥಮಾರೋಢುಮವ್ಯಯಃ ||೧೨೨||

ರೈಭ್ಯಾಶ್ರಮಸಮೀಪಸ್ಥಃ ತ್ರ್ಯಂಬಕೋಽಂಬಿಕಯಾ ಸಹ
ಪಶ್ಯತ್ಯೇವ ಮಹಾಬಾಹೋ ದುಸ್ಸಹಂ ತೇ ಪರಾಕ್ರಮಮ್ ||೧೨೩||

ತಸ್ಯ ತದ್ವಚನಂ ಶ್ರುತ್ವಾ ಸ ವೀರೋ ಗಣಕುಂಜರಃ
ಆರುರೋಹ ರಥಂ ದಿವ್ಯಮನುಗೃಹ್ಯ ಪಿತಾಮಹಮ್ ||೧೨೪||

---

ಆ ರಥವರ್ಯಸ್ಯಾಪಿ—ರಥಶ್ರೇಷ್ಠಕ್ಕೂ (ಕ್ಕೆ) ಸಾರಥಿಃ—ಸಾರಥಿಯು ಸ್ಯಾದ್ಧಿ—ಆದನಲಾ ||೧೨೦||

ಸ ಬ್ರಹ್ಮಾ—ಆ ಬ್ರಹ್ಮನು ಶೂಲಿನಃ—ಪರಮೇಶ್ವರನ ಶಾಸನಾದೇವ—ಆಜ್ಞೆಯ ದೆಸೆಯಿಂದಲೇ ತಂ ರಥವರಂ—ಆ ಶ್ರೇಷ್ಠವಹಂಥಾ ರಥವನು ವಿಭೋಃ—ಒಡೆಯನಹಂಥಾ ವೀರಭದ್ರನ ಸಮೀಪಂ—ಸಮೀಪವನು ಆನೀಯ—ಎಯ್ದಿಸಿ ಕೃತಾಂಜಲಿಃ—ಕೈಮುಗಿದುಕೊಂಡಾತನಾಗಿ ಅಭಾಷತ—ನುಡಿದನು. ||೧೨೧||

ಭಗವನ್—ಸಮರ್ಥನಹಂಥಾ ಭದ್ರಾಂಗ—ಮನೋಹರವಹ ಶರೀರವನುಳ್ಳಂಥಾ ವೀರ—ವೀರನಹಂಥಾ ಭೋ ಭದ್ರ—ಎಲೆ ವೀರಭದ್ರನೇ, ತ್ವಂ—ನೀನು ರಥಂ—ರಥವನು ಆರೋಢುಂ—ಏರಲು ಭಗವಾನ್—ಷಡ್ಗುಣೈಶ್ವರ್ಯಸಂಪನ್ನನಹಂಥಾ ಅವ್ಯಯಃ—ನಿತ್ಯನಹಂಥಾ ಇಂದುಭೂಷಣಃ—ಚಂದ್ರಭೂಷಣನಹಂಥಾ ಶಿವನು ಆಜ್ಞಾಪಯತ್—ಆಜ್ಞಾಪಿಸಿದನು. ||೧೨೨||

ತ್ರ್ಯಂಬಕಃ—ಪರಮೇಶ್ವರನು ಅಂಬಿಕಯಾ ಸಹ—ಪಾರ್ವತೀದೇವಿಯೊಡನೆ ರೈಭ್ಯಾಶ್ರಮಸಮೀಪಸ್ಥಃ—ರೈಭ್ಯಋಷಿಯ ಆಶ್ರಮದ ಸಮೀಪದಲ್ಲಿ ಇದ್ದಾತನಾಗಿ ಭೋ ಮಹಾಬಾಹೋ—ಎಲೆ ದೊಡ್ಡಿಯ ಭುಜಂಗಳನುಳ್ಳಂಥಾ ವೀರಭದ್ರನೇ! ತೇ—ನಿನ್ನ ದುಸ್ಸಹಂ—ಸೈರಿಸಲು ಬಾರದೇ ಇದ್ದಂಥಾ ಪರಾಕ್ರಮಮೇವ—ಪರಾಕ್ರಮವನೇ ಪಶ್ಯತಿ—ನೋಡುತ್ತಿದ್ದಾನು. ||೧೨೩||

ತಸ್ಯ—ಆ ಬ್ರಹ್ಮನ ತದ್ವಚನಂ—ಆ ವಾಕ್ಯವನು ಶ್ರುತ್ವಾ—ಕೇಳಿ ಗಣಕುಂಜರಃ—ಗಣಂಗಳಿಗೆ ಆನೆಯಹಂಥಾ ವೀರಃ—ವೀರನಹಂಥಾ ಸಃ—ಆ

[1] ತಥಾ ವರೇ ರಥೇ[1] ತಸ್ಮಿನ್ ಸ್ಥಿತೇ ಬ್ರಹ್ಮಣಿ ಸಾರಥೌ
ಭದ್ರಸ್ಯ ವವೃಧೇ[2] ಲಕ್ಷ್ಮೀಃ[2] ರುದ್ರಸ್ಯೇವ ಪುರದ್ವಿಷಃ ||೧೨೫||

ತತಶ್ಶಂಖವರಂ ದೀಪ್ತಂ ಚಂದ್ರಕುಂದಸಮಪ್ರಭಮ್
ಪ್ರದಧ್ಮೌ ವದನೇ ಕೃತ್ವಾ ಭಾನುಕಂಪೋ ಮಹಾಬಲಃ ||೧೨೬||

ತಸ್ಯ ಶಂಖಸ್ಯ ಸನ್ನಾದಂ ಭಿನ್ನಸಾಗರಸನ್ನಿಭಮ್
ಶ್ರುತ್ವಾ ಭಯೇನ ದೇವಾನಾಂ ಜಜ್ವಾಲ ಜಠರಾನಲಃ ||೧೨೭||

ಯಕ್ಷವಿದ್ಯಾಧರಾಹೀಂದ್ರೈಃ ಸಿದ್ಧೈರ್ಯುದ್ಧದಿದೃಕ್ಷುಭಿಃ
ಕ್ಷಣೇನ ನಿಬಿಡೀಭೂತಾಃ ಸಾಕಾಶವಿವರಾ[3] ದಿಶಃ[3] ||೧೨೮||

---

ವೀರಭದ್ರನು ಪಿತಾಮಹಂ— ಬ್ರಹ್ಮನನು ಅನುಗೃಹ್ಯ — ಪತಿಕರಿಸಿ ದಿವ್ಯಂರಥಂ —ದಿವ್ಯರಥವನು ಆರುರೋಹ—ಏರಿದನು. ||೧೨೪||

ತಥಾ = ಹಾಂಗೆ ವರೇ—ಶ್ರೇಷ್ಠವಹಂಥಾ ತಸ್ಮಿನ್ ರಥೇ — ಆ ರಥದಲ್ಲಿ ಬ್ರಹ್ಮಣಿ—ಬ್ರಹ್ಮನು ಸಾರಥೌ— ಸಾರಥಿಯಾಗಿ ಸ್ಥಿತೇ ಸತಿ = ಇರುತ್ತಿರಲು, ಭದ್ರಸ್ಯ — ವೀರಭದ್ರನ ಲಕ್ಷ್ಮೀಃ — ವೀರಲಕ್ಷ್ಮಿ ಯು ವವೃಧೇ — ಹೆಚ್ಚಿದಳು. ಪುರದ್ವಿಷಃ—ತ್ರಿಪುರವೈರಿಯಹಂಥಾ ರುದ್ರಸ್ಯೇವ—ಪರಮೇಶ್ವರನಹೆಗಹಗೆ. ||೧೨೫||

ತತಃ—ಅನಂತರದಲ್ಲಿ ಮಹಾಬಲಃ—ಬಹಳ ಸತ್ತ್ವವನುಳ್ಳಂಥಾ ಭಾನು-ಕಂಪಃ — ಭಾನುಕಂಪನೆಂಬ ಗಣೇಶ್ವರನು ಚಂದ್ರಕುಂದಸಮಪ್ರಭಂ — ಚಂದ್ರಂಗೆ ಮೊಲ್ಲೆಯ ಹೂವಿಂಗೆ ಸಮಾನವಹ ಕಾಂತಿಯನುಳ್ಳಂಥಾ ದೀಪ್ತಂ — ಹೊಳವು-ತ್ತಿದ್ದಂಥಾ ಶಂಖವರಂ — ಶಂಖಶ್ರೇಷ್ಠವನು ವದನೇ — ಮುಖದಲ್ಲಿ ಕೃತ್ವಾ— ಧರಿಸಿಕೊಂಡು ಪ್ರದಧ್ಮೌ—ಊದಿದನು. ||೧೨೬||

ತಸ್ಯ ಶಂಖಸ್ಯ — ಆ ಶಂಖದ ಭಿನ್ನಸಾಗಗಸನ್ನಿಭಂ — ಹೊಡೆಯಲುಪಟ್ಟ ಸಮುದ್ರಘೋಷಕ್ಕೆ ಸಮಾನವಹಂಥಾ ಸನ್ನಾದಂ—ಒಪ್ಪುವ ಧ್ವನಿಯನು ಶ್ರುತ್ವಾ — ಕೇಳಿ ಭಯೇನ — ಭೀತಿಯಿಂದ ದೇವಾನಾಂ — ದೇವರ್ಕಳ ಜಠರಾನಲಃ — ಬಸುರ ಕಿಚ್ಚು ಜಜ್ವಾಲ — ಉರಿಯಿತು. ||೧೨೭||

ಯುದ್ಧದಿದೃಕ್ಷುಭಿಃ = ಕಾಳಗವ ನೋಡಲಿಚ್ಛೆಯನುಳ್ಳಂಥಾ ಯಕ್ಷವಿದ್ಯಾಧರಾ-ಹೀಂದ್ರೈಃ—ಯಕ್ಷರು ವಿದ್ಯಾಧರರು ನಾಗರ್ಕಳುಗಳಿಂದ ಸಿದ್ಧೈಃ—ಸಿದ್ಧರುಗಳಿಂದ

---

[1] ತಥಾ (ಘ) ತಥಾ ರಥವರೇ (ಕ) ಮೂಲ. [2] ಲಕ್ಷ್ಮೀ (ಘ) [3] ದ್ವಿಜಾಃ (ಘ)

ತತಶ್ಶಾರ್ಙ್ಗೇಂದ್ರಚಾಪಾಂಕಃ ಸ ನಾರಾಯಣನೀರದಃ
ಮಹತಾ ಬಾಣವರ್ಷೇಣ ರುರೋಧ ಗಣಗೋವೃಷಮ್ ॥೧೨೯

ತಂ ದೃಷ್ಟ್ವಾ ವಿಷ್ಣುಮಾಯಾಂತಂ ಶತಧಾ ಬಾಣವರ್ಷಿಣಮ್
[1]ಸ ಚಾದಧೇ ಧನುರ್ಜೈತ್ರಂ ಭದ್ರೋ ಬಾಣಸಹಸ್ರಮುಕ್ ॥೧೩೦॥

[2]ಸಮಾದಾಯ[3] ಚ ತದ್ದಿವ್ಯಂ ಧನುಃ ಸಮರಭೈರವಮ್
ಶನೈರ್ವಿಸ್ಫಾರಯಾಮಾಸ ಶೈಲಂ ಧನುರಿವೇಶ್ವರಃ ॥೧೩೧॥

ತಸ್ಯ ವಿಸ್ಫಾರ್ಯಮಾಣಸ್ಯ ಧನುಷೋಽಭೂನ್ಮಹಾಸ್ವನಃ
ತೇನ ಸ್ವನೇನ ಮಹತಾ ಪೃಥಿವೀ ಸಮಕಂಪತ ॥೧೩೨॥

---

ಸಾಕಾಶವಿವರಾಃ—ಆಕಾಶದ ತೆರಹಿಂದ ಸಹಿತವಹಂಥಾ ದಿಶಃ—ದಿಕ್ಕುಗಳು ಕ್ಷಣೇನ —ಕ್ಷಣಮಾತ್ರದಿಂದ ನಿಬಿಡೀಭೂತಾಃ—ತುಂಬಲುಪಟ್ಟಂಥಾವಾದವು. ॥೧೨೮॥

ತತಃ — ಅನಂತರದಲ್ಲಿ ಶಾರ್ಙ್ಗೇಂದ್ರಚಾಪಾಂಕಃ—ಶಾರ್ಙ್ಗವೆಂಬ ಇಂದ್ರಚಾಪದ ಕುರುಹನುಳ್ಳಂಥಾ ಸಃ—ಆ ನಾರಾಯಣನೀರದಃ—ವಿಷ್ಣುವೆಂಬ ಮೇಘವು ಮಹತಾ—ಬಹಳವಹಂಥಾ ಬಾಣವರ್ಷೇಣ—ಬಾಣದ ಮಳೆಯಿಂದ ಗಣಗೋವೃಷಂ — ವೀರಭದ್ರನೆಂಬ ಬಸವನನು ರುರೋಧ — ತಡೆಯಿತ್ತು. ಶಾರ್ಙ್ಗವೆಂದರೆ ಸಿಂಗಾಡಿಯ ಬಿಲ್ಲೆಂಬುದರ್ಥ. ॥೧೨೯॥

ಶತಧಾ—ನೂರು ಬಾಣವರ್ಷಿಣಂ—ಬಾಣವನು ಕರವುತ್ತಿದ್ದಂಥಾ ತಂ—ಆ ವಿಷ್ಣುಂ — ವಿಷ್ಣುವನು ದೃಷ್ಟ್ವಾ — ಕಂಡು ಸ ಭದ್ರಶ್ಚ — ಆ ವೀರಭದ್ರನು ಬಾಣಸಹಸ್ರಮುಕ್ — ಬಾಣಸಹಸ್ರವನು ಬಿಡುತ್ತಿದ್ದಂಥಾ ಜೈತ್ರಂ — ಜಯವುಳ್ಳಂಥಾ ಧನುಃ—ಬಿಲ್ಲನ್ನು ಆದಧೇ—ಹಿಡಿದನು. ॥೧೩೦॥

ಸಮರಭೈರವಂ—ಕಾಳಗದಲ್ಲಿ ಭಯಂಕರವಹಂಥಾ ತತ್—ಆ ದಿವ್ಯಂ ಧನುಶ್ಚ —ದಿವ್ಯಧನುವನು ಸಮಾದಾಯ—ಹಿಡಿದು ಶನೈಃ—ಮೆಲ್ಲನೆ ವಿಸ್ಫಾರಯಾಮಾಸ —ಜೇವಡೆದನು. ಶೈಲಂ ಧನುಃ—ಮೇರುಪರ್ವತವೆಂಬ ಚಾಪವನು ಈಶ್ವರ ಇವ —ತ್ರಿಪುರಜಯದಲ್ಲಿ ಪರಮೇಶ್ವರನೆಹಗಹಗೆ. ॥೧೩೧॥

ವಿಸ್ಫಾರ್ಯಮಾಣಸ್ಯ—ಜೇವಡೆಯಲುಪಟ್ಟಂಥಾ ತಸ್ಯ ಧನುಷಃ—ಆ ಬಿಲ್ಲಿಂಗೆ ಮಹಾಸ್ವನಃ—ಮಹಾಧ್ವನಿ ಅಭೂತ್—ಆಯಿತ್ತು. ಮಹತಾ—ಬಹಳವಹಂಥಾ ತೇನ ಸ್ವನೇನ—ಆ ಧ್ವನಿಯಿಂದ ಪೃಥಿವೀ—ಭೂಮಿ ಸಮಕಂಪತ—ನಡಿಗಿತ್ತು. ॥

---

[1] ಸಮಾಧಧೇ (ಘ) [2] ಸಮಾಧಾಯ (ಕ)

ತತಶ್ಶರವರಂ ಘೋರಂ ದೀಪ್ತಮಾಶೀವಿಷೋಪಮಮ್
ಜಗ್ರಾಹ ಗಣಪಃ ಶ್ರೀಮಾನ್ [1]ಸ್ವಗ್ರಮುಗ್ರಪರಾಕ್ರಮಃ[1] ||೧೩೩||

[2]ಬಾಣೋದ್ಧಾರೀ[2] ಭುಜಸ್ತಸ್ಯ ತೂಣೀವದನಸಂಗತಃ
ಪ್ರತ್ಯಭಾಸತ ವಲ್ಮೀಕಂ ಪ್ರಪಿತ್ಸುರಿವ ಪನ್ನಗಃ ||೧೩೪||

ಸಮುದ್ಧೃತಃ ಕರೇ ತಸ್ಯ ತತ್ಕ್ಷಣೇ ರುರುಚೇ ಶರಃ
ಮಹಾಭುಜಂಗಸಂದಷ್ಟೋ ಯಥಾ ಬಾಲಭುಜಂಗಮಃ ||೧೩೫||

ಶರೇಣ ತೇನ ತೀವ್ರೇಣ ಭದ್ರೋ ರುದ್ರಪರಾಕ್ರಮಃ
ವಿವ್ಯಾಧ ಕುಪಿತೋ ಗಾಢಂ ಲಲಾಟೇ ವಿಷ್ಣುಮವ್ಯಥಃ ||೧೩೬||

ತತಃ — ಅಂತರದಲ್ಲಿ ಶ್ರೀಮಾನ್—ಐಶ್ವರ್ಯವನುಳ್ಳಂಥಾ ಉಗ್ರಪರಾಕ್ರಮಃ —ಉಗ್ರವಹ ಪರಾಕ್ರಮವನುಳ್ಳಂಥಾ ಗಣಪಃ—ಗಣೇಶ್ವರನಹಂಥಾ ವೀರಭದ್ರನು ಘೋರಂ—ಭಯಂಕರವಹಂಥಾ ಆಶೀವಿಷೋಪಮಂ—ಸರ್ಪಂಗೆ ಸಮಾನವಹಂಥಾ ಸ್ವಗ್ರಂ — ಒಪ್ಪುತ್ತಂವಿದ್ದ ತುದಿಯುನುಳ್ಳಂಥಾ ದೀಪ್ತಂ — ಹೊಳವುತ್ತಿದ್ದಂಥಾ ಶರವರಂ—ಶ್ರೇಷ್ಠವಹಂಥಾ ಬಾಣವನು ಜಗ್ರಾಹ—ತುಡುಕಿದನು. ||೧೩೩||

ಬಾಣೋದ್ಧಾರೀ=ಬಾಣವ ತೆಗವುತಂ (ತೆಗಹುತ್ತಂ)ವಿದ್ದಂಥಾ ತೂಣೀರ ಸಂಗತಃ=ಬತ್ತಳಿಕೆಯ ಮುಖದಲ್ಲಿ ಕೂಡಿದಂಥಾ ತಸ್ಯ=ಆ ವೀರಭದ್ರನ ಭುಜಃ = ಭುಜವು ಪ್ರತ್ಯಭಾಸತ = ಒಪ್ಪಿತ್ತು. ಕಥಮಿವ = ಅದು ಹೇಂಗೆಯಾ ಎಂದೊಡೆ ವಲ್ಮೀಕಂ=ಹುತ್ತವನು ಪ್ರಪಿತ್ಸುಃ= ಹೊಗುತ್ತಂ (ತಂ) ವಿದ್ದಂಥಾ ಪನ್ನಗ ಇವ=ಸರ್ಪನೆಹೆಗಹಗೆ. ||೧೩೪||

ತಸ್ಯ=ಆ ವೀರಭದ್ರನ ಕರೇ= ಕೈಯ್ಯ (ಹಸ್ತದ)ಲ್ಲಿ ಸಮುದ್ಧೃತಃ = ತೆಗೆಯಲುಪಟ್ಟಂಥಾ ಶರು=ಬಾಣವು ತತ್‌ಕ್ಷಣೇ=ಆ ಕ್ಷಣದಲ್ಲಿ ರುರುಚೇ = ಒಪ್ಪಿತು. ತದ್ಯಥಾ= ಅದು ಹೇಂಗೆಯಾ ಎಂದೊಡೆ ಮಹಾಭುಜಂಗಸಂದಷ್ಟಃ= ದೊಡ್ಡಿಯ ಸರ್ಪನಿಂದ ಕಚ್ಚಲುಪಟ್ಟಂಥಾ ಬಾಲಭುಜಂಗಮಃ ಯಥಾ=ಚಿಕ್ಕಸರ್ಪ ನೆಹೆಗಹಗೆ. ||೧೩೫||

ತೀವ್ರೇಣ=ದೃಢವಹಂಥಾ= ತೇನ ಶರೇಣ = ಆ ಬಾಣದಿಂದ ರುದ್ರಪರಾಕ್ರಮಃ = ರುದ್ರನೋಪಾದಿ ಪರಾಕ್ರಮವನುಳ್ಳಂಥಾ ಅವ್ಯಥಃ = ಬಾಧೆ-

[1] ಸ್ವಯಮುಗ್ರಪರಾಕ್ರಮಃ (ಘ) [2] ಬಾಹೋದ್ಧಾರೀ (ಘ)

ಲಲಾಟಾಭಿಹತೋ ವಿಷ್ಣುಃ ಪೂರ್ವಮೇವಾವಮಾನಿತಃ
ಚುಕೋಪ ಸಗಣೇಂದ್ರಾಯ ಮೃಗೇಂದ್ರಾಯೇವ ಗೋವೃಷಃ ||

ಸರ್ವಾಣ್ಯಪಿ ತು ದಿವ್ಯಾಸ್ತ್ರಾಣ್ಯೈಥೈನಂ ಪ್ರತ್ಯವಾಸೃಜತ್
ಸ ತಾನ್ವಿಷ್ಣುಧನುರ್ಮುಕ್ತಾನ್ ಸರ್ವಾಂಶ್ಶರ್ವಚಮೂಪತಿಃ ||
ಸಹಸಾ ವಾರಯಾಮಾಸ ಘೋರೈಃ ಪ್ರತಿಶರೈಶ್ಶರಾನ್ ||೧೩೮||

ತತಸ್ತ್ವನಲತುಂಡೇನ ಶರೇಣಾದಿತ್ಯವರ್ಚಸಾ
ವಿವ್ಯಾಧ [1]ಸುದೃಢಂ[1] ಭದ್ರೋ ವಿಷ್ಣೋರ್ಮಹತಿ ವಕ್ಷಸಿ ||೧೩೯||

---

ಯಿಲ್ಲದೇ ಇದ್ದಂಥಾ ಭದ್ರಃ = ವೀರಭದ್ರನು, ಕುಪಿತಃ = ಕೋಪಿಸಿದಾತನಾಗಿ ವಿಷ್ಣುಂ = ವಿಷ್ಣುವನು ಕುರಿತು ಲಲಾಟೇ = ಹಣೆಯಲ್ಲಿ ಗಾಢಂ = ದೃಢವಾಗಿ ವಿವ್ಯಾಧ = ಎಚ್ಚನು. ||೧೩೬||

ಲಲಾಟಾಭಿಹತಃ = ಲಲಾಟದಲ್ಲಿ ಘಾಯವಾದಂಥಾ ಪೂರ್ವಮೇವ = ಮೊದಲೇ ಅವಮಾನಿತಃ = ಭಂಗಿತನಾದಂಥಾ ವಿಷ್ಣುಃ = ವಿಷ್ಣುವು ಚುಕೋಪ = ಕೋಪಿಸಿದನು. ಕಥಮಿವ = ಅದು ಹೇಂಗೆಯಾ ಎಂದೊಡೆ ಗೋವೃಷಃ = ಬಸವನು ಮೃಗೇಂದ್ರಾಯ ಇವ = ಸಿಂಹಕ್ಕೋಸ್ಕರವೆಹಗಹಗೆ. ||೧೩೭||

ಅಥ = ಅನಂತರದಲ್ಲಿ ಸಃ = ಆ ವಿಷ್ಣು ಏನಂ ಪ್ರತಿ = ಈ ವೀರಭದ್ರನನು ಕುರಿತು ಸರ್ವಾಣಿ ದಿವ್ಯಾಸ್ತ್ರಾಣ್ಯಪಿ ತು = ಸಮಸ್ತ ದಿವ್ಯಾಸ್ತ್ರಂಗಳನು ಅವಾಸೃಜತ್ = ಎಚ್ಚನು. ವಿಷ್ಣುಧನುರ್ಮುಕ್ತಾನ್ = ವಿಷ್ಣುವಿನ ಬಿಲ್ಲಿಂದ ಎಸೆಯಲುಪಟ್ಟಂಥಾ ಸರ್ವಾನ್ = ಸಮಸ್ತವಹಂಥಾ ತಾನ್ ಶರಾನ್ = ಆ ಬಾಣಂಗಳನು ಶರ್ವಚಮೂಪತಿಃ = ಪರಮೇಶ್ವರನ ಸೇನಾಪತಿಯುಹಂಥಾ ವೀರಭದ್ರನು ಸಹಸಾ = ಹಠಾತ್ತನೆ (ಬೇಗದಿಂದ) ಘೋರೈಃ = ಘೋರಂಗಳ (ಭಯಂಕರವ)ಹಂಥಾ ಪ್ರತಿಶರೈಃ = ಪ್ರತಿಬಾಣಂಗಳಿಂದ (ಪ್ರತ್ಯಸ್ತ್ರಂಗಳಿಂದ) ವಾರಯಾಮಾಸ = ತೊಲಗಿಸಿದನು- ೧೩೮

ತತಃ = ಅಷ್ಟರಮೇಲೆ ಅನಲತುಂಡೇನ = ಅಗ್ನಿಯೋಪಾದಿ ಮುಖವನುಳ್ಳಂಥಾ ಆದಿತ್ಯವರ್ಚಸಾ = ಸೂರ್ಯನೋಪಾದಿ ಕಾಂತಿಯನುಳ್ಳಂಥಾ ಶರೇಣ = ಬಾಣದಿಂದ ಭದ್ರಃ = ವೀರಭದ್ರನು ವಿಷ್ಣೋಃ = ವಿಷ್ಣುವಿನ ಮಹತಿ = ದೊಡ್ಡಿತ್ತಹಂಥಾ ವಕ್ಷಸಿ = ಎದೆಯಲ್ಲಿ ಸುದೃಢಂ = ಅತಿ ದೃಢವಾಗಿ ವಿವ್ಯಾಧ = ಎಚ್ಚನು. ||೧೩೯||

---

[1] ಸದೃಢಂ (ಖ.ಘ)

ಸ ತೇನ ತೀವ್ರಪಾತೇನ ಶರೇಣ [2]ದೃಢವೇಜಿತಃ
ಮಹತೀಂ ರುಜಮಾಸಾದ್ಯ ಪಪಾತ ಭುವಿ ಮೋಹಿತಃ ||೧೪೦||

ಪುನಃ ಕ್ಷಣಾದಿವೋತ್ಥಾಯ ಲಬ್ಧಸಂಜ್ಞಸ್ತದಾ ಹರಿಃ
ತತೋ ವಿಷ್ಣುಃ ಸ್ವನಾಮಾಂಕಂ ಬಾಣಮವ್ಯಾಹತಂ ಕ್ವಚಿತ್ ||
ಸಸರ್ಜ ಕ್ರೋಧರಕ್ತಾಕ್ಷಸ್ತಮುದ್ದಿಶ್ಯ ಗಣೇಶ್ವರಮ್ ||೧೪೧||

ತಂ ಬಾಣಂ ಬಾಣವರ್ಯೇಣ ಭದ್ರೋ ಭದ್ರಾಹ್ವಯೇನ ತು
ಅಪ್ರಾಪ್ತಮೇವ ಭಗವಾನ್ ಚಿಚ್ಛೇದ ಶತಧಾ ಪಥಿ ||೧೪೨||

ಅಥೈಕೇನೇಷುಣಾ ಶಾರ್ಙ್ಗಂ ದ್ವಾಭ್ಯಾಂ ಪಕ್ಷೌ ಗುರುತ್ಮತಃ
ನಿಮೇಷಾದಿವ ಚಿಚ್ಛೇದ ತದದ್ಭುತಮಿವಾಭವತ್ ||೧೪೩||

---

ತೀವ್ರಪಾತೇನ = ಅತ್ಯಂತ ನಟ್ಟಂಥಾ ತೇನ ಶರೇಣ = ಆ ಬಾಣದಿಂದ ದೃಢವೇಜಿತಃ = ಅತ್ಯಂತ ನಡುಗುತ್ತಿದ್ದಂಥಾ ಸಃ = ಆ ವಿಷ್ಣು ಮಹತೀಂ = ಬಹಳ-ವಹಂಥಾ ರುಜಂ = ದುಃಖವನು ಆಸಾದ್ಯ = ಎಯ್ದಿ ಮೋಹಿತಃ = ಮೂರ್ಛಿತನಾಗಿ ಭುವಿ = ಭೂಮಿಯಲ್ಲಿ ಪಪಾತ = ಬಿದ್ದನು. ||೧೪೦||

ತದಾ = ಆಗ ಹರಿಃ = ವಿಷ್ಣು ಕ್ಷಣಾದಿವ = ಕ್ಷಣಮಾತ್ರದಿಂದವಕ್ಕೈಯೆಂಬ ಹಾಂಗೆ ಪುನಃ = ಮರಳಿ ಉತ್ಥಾಯ = ಎದ್ದು ಲಬ್ಧಸಂಜ್ಞಃ = ಹಡೆಯಲುಪಟ್ಟ ಎಚ್ಚರಿಕೆಯನುಳ್ಳಾತನಾದನು. ತತಃ = ಅಷ್ಟರ ಮೇಲೆ ವಿಷ್ಣುಃ = ಹರಿ ಸ್ವನಾಮಾಂಕಂ = ತನ್ನ ಹೆಸರ ಕುರುಹನುಳ್ಳಂಥಾ ಕ್ವಚಿತ್ = ಒಂದೆಡೆಯಲ್ಲಿಯೂ ಅವ್ಯಾಹತಂ = ಭಂಗವಾಗದೆ ಇದ್ದಂಥಾ ಬಾಣಂ = ಬಾಣವನು ಕ್ರೋಧರಕ್ತಾಕ್ಷಃ = ಕ್ರೋಧದಿಂದ ಕೆಂಪಾದ ಕಣ್ಣನುಳ್ಳಾತನಾಗಿ ಗಣೇಶ್ವರಂ = ಗಣೇಶ್ವರನಹಂಥಾ ತಂ = ಆ ವೀರಭದ್ರನನು ಉದ್ದಿಶ್ಯ = ಕುರಿತು ಸಸರ್ಜ = ಎಚ್ಚನು. ||೧೪೧||

ಭಗವಾನ್ = ಸಮರ್ಥನಹಂಥಾ ಭದ್ರಃ = ವೀರಭದ್ರನು ತಂ ಬಾಣಮೇವ = ಆ ಬಾಣವನೆ ಪಥಿ = ಮಾರ್ಗದಲ್ಲಿ ಅಪ್ರಾಪ್ತಂ = ಬಾರದೇ ಇದ್ದಂಥಾ[3]ದನಾಗಿ ಭದ್ರಾಹ್ವಯೇನ = ವೀರಭದ್ರನ ಹೆಸರನುಳ್ಳಂಥಾ ಬಾಣವರ್ಯೇಣ = ಶ್ರೇಷ್ಠವಹ ಬಾಣದಿಂದವು ಶತಧಾ = ನೂರುಕಡಿಯಾಗಿ ಚಿಚ್ಛೇದ = ತುಂಡಿಸಿದನು. ||೧೪೨||

ಅಥ = ಅನಂತರದಲ್ಲಿ ಏಕೇನ ಇಷುಣಾ = ಒಂದು ಬಾಣದಿಂದ ಶಾರ್ಙ್ಗಂ

---

[2] ದೃಢಜೀವಿತಃ (ಗ) ದೃಢವೇದಿತಃ (ಘ) ಪಾಠಾಂತರ ದೃಢವೇಜಿತಃ (ಖ.ಘ)
[3] ಆತನಾಗಿ (ಖ)

ತತೋ ಯೋಗಬಲಾದ್ವಿಷ್ಣುರ್ದೇಹಾದ್ದೇವಾನ್ಸುದಾರುಣಾನ್
ಶಂಖಚಕ್ರಗದಾಹಸ್ತಾನ್ ವಿಸಸರ್ಜ ಸಹಸ್ರಶಃ ||೧೪೪||

ಸರ್ವಾಂಸ್ತಾನ್ಕ್ಷಣಮಾತ್ರೇಣ ತ್ರೈಪುರಾನಿವ ಶಂಕರಃ
ನಿರ್ದದಾಹ ಮಹಾಬಾಹುರ್ನೇತ್ರಸೃಷ್ಟೇನ ವಹ್ನಿನಾ ||೧೪೫||

ತತಃ ಕ್ರುದ್ಧತರೋ ವಿಷ್ಣುಶ್ಚಕ್ರಮುದ್ಯಮ್ಯ ಸತ್ವರಮ್
ತಸ್ಮಿನ್ ವೀರೇ ಸಮುತ್ಸ್ರಷ್ಟುಂ ತದಾನೀಮುದ್ಯತೋಽಭವತ್ ||೧೪೬||

ತಂ ದೃಷ್ಟ್ವಾ ಚಕ್ರಮುದ್ಯಮ್ಯ ಪುರತಃ ಸಮುಪಸ್ಥಿತಮ್
ಸ್ಮಯನ್ನಿವ ಗಣೇಶಾನೋ ವ್ಯಷ್ಟಂಭಯದಯತ್ನತಃ ||೧೪೭||

---

= ಸಿಂಗಾಡಿಯ ಬಿಲ್ಲನು ಚಿಚ್ಛೇದ = ತುಂಡಿಸಿದನು. ದ್ವಾಭ್ಯಾಂ = ಎರಡಂಬು ಗಳಿಂದ ಗರುತ್ಮತಃ = ಗರುಡನ ಪಕ್ಷೌ = ಪುಕ್ಕಂಗಳನು ನಿಮೇಷಾದಿವ = ನಿಮಿಷಮಾತ್ರದಿಂದವಕ್ಕೆಯೆ ಎಂಬ ಹಾಂಗೆ ಚಿಚ್ಛೇದ = ಛೇದಿಸಿದನು. ತತ್ = ಆ ಸಂಗ್ರಾಮವು ಅದ್ಭುತಮಿವ = ಆಶ್ಚರ್ಯವಕ್ಕೆಯೆ ಎಂಬ ಹಾಂಗೆ ಅಭವತ್ = ಆಯಿತ್ತು. ||೧೪೩||

ತತಃ = ಅಷ್ಟರಮೇಲೆ ವಿಷ್ಣುಃ = ನಾರಾಯಣನು ಯೋಗಬಲಾತ್ = ಯೋಗಸಾಮರ್ಥ್ಯದ ದೆಸೆಯಿಂದ ದೇಹಾತ್ = ತನ್ನ ದೇಹದ ದೆಸೆಯಿಂದ ಸುದಾರುಣಾನ್ = ಅತಿಭಯಂಕರರಹಂಥಾ ಶಂಖಚಕ್ರಗದಾಹಸ್ತಾನ್ = ಶಂಖ ಚಕ್ರ ಗದೆಗಳೇ ಹಸ್ತಂಗಳಲ್ಲಿ ಉಳ್ಳಂಥಾ ಸಹಸ್ರಶಃ = ಸಾವಿರ ಸಂಖ್ಯೆಯುಹಂಥಾ ದೇವಾನ್ = ದೇವರ್ಕಳುಗಳನು ವಿಸಸರ್ಜ = ಹುಟ್ಟಿಸಿದನು. ||೧೪೪||

ಮಹಾಬಾಹುಃ = ದೊಡ್ಡಿಯ ಭುಜಂಗಳನುಳ್ಳಂಥಾ ವೀರಭದ್ರನು ನೇತ್ರಸೃಷ್ಟೇನ = ಭಾಳನೇತ್ರದಿಂದ ಹುಟ್ಟಿದಂಥಾ ವಹ್ನಿನಾ = ಅಗ್ನಿಯಿಂದ ತಾನ್ ಸರ್ವಾನ್ = ಆ ಎಲ್ಲರನು ಕಣಮಾತ್ರೇಣ = ಕ್ಷಣಮಾತ್ರದಿಂದ ನಿರ್ದದಾಹ = ದಹನವ ಮಾಡಿದನು. ಕಥಮಿವ = ಅದು ಹೇಂಗೆಯಾ ಎಂದಡೆ, ಶಂಕರಃ = ಪರಮೇಶ್ವರನು ತ್ರೈಪುರಾನಿವ = ತ್ರಿಪುರಂಗಳನೆಹಗಹಗೆ. ||೧೪೫||

ತತಃ = ಅಷ್ಟರ ಮೇಲೆ ವಿಷ್ಣುಃ = ವಿಷ್ಣು ಕ್ರುದ್ಧತರಃ = ಅತ್ಯಂತ ಕೋಪಿಸಿದಾತನಾಗಿ ಸತ್ವರಂ = ಬೇಗ ಚಕ್ರಂ = ಸುದರ್ಶನಚಕ್ರವನು ಉದ್ಯಮ್ಯ = ತುಡಿಕಿ ತದಾನೀಂ = ಆಗ ತಸ್ಮಿನ್ = ಆ ವೀರೇ = ವೀರಭದ್ರನಲ್ಲಿ ಸಮುತ್ಸ್ರಷ್ಟುಂ = ಇಡಲೋಸ್ಕರ ಉದ್ಯತಃ = ಉದ್ಯೋಗವನುಳ್ಳಾತನು ಅಭವತ್ = ಆದನು.

ಚಕ್ರಂ = ಚಕ್ರವನು ಉದ್ಯಮ್ಯ = ತುಡಿಕಿ ಪುರತಃ = ಮುಂದೆ ಸಮುಪ

ಸ್ತಂಭಿತಾಂಗಸ್ತು ತಚ್ಚಕ್ರಂ ಘೋರಮಪ್ರತಿಮಂ ಕ್ವಚಿತ್
ಇಚ್ಛನ್ನಪಿ ಸಮುತ್ಸ್ರಷ್ಟುಂ ನ ವಿಷ್ಣುರಭವತ್ ಕ್ಷಮಃ ||೧೪೮||

ಕ್ರೋಶನ್ನಿವೈಕಮುದ್ಧೃತ್ಯ ಬಾಹುಂ ಚಕ್ರಸಮನ್ವಿತಮ್
ಅತಿಷ್ಠದಲಸೋ ವಿಷ್ಣುಃ ಪಾಷಾಣ ಇವ ನಿಶ್ಚಲಃ ||೧೪೯||

ವಿಶರೀರೋ ಯಥಾ ಜೀವೋ ವಿಶೃಂಗೋ ವಾ ಯಥಾ ವೃಷಃ
ವಿದಂಷ್ಟ್ರಶ್ಚ ಯಥಾ ಸರ್ಪಃ ತಥಾ ವಿಷ್ಣುರವಸ್ಥಿತಃ ||೧೫೦||

---

ಸ್ಥಿತಂ=ಇದ್ದಂಥಾ ತಂ=ಆ ವಿಷ್ಣುವನು ದೃಷ್ಟ್ವಾ=ಕಂಡು ಗಣೇಶಾನಃ= ಗಣಂಗಳಿಗೆ ಒಡೆಯುನಹಂಥಾ ವೀರಭದ್ರನು ಸ್ಮಯನ್ = ನಗುತವು ಅಯತ್ನತಃ ಇವ= ಪ್ರಯತ್ನವಿಲ್ಲದಕ್ಕೈಯೆಂಬ ಹಾಂಗೆ ವ್ಯಷ್ಟಂಭಯುತ್ = ಸ್ತಂಭಿಸಿದನು.

ಸ್ತಂಭಿತಾಂಗಃ=ಕಂಬದೋಪಾದಿ ಆಗಲುಪಟ್ಟ ಶರೀರವನುಳ್ಳಂಥಾ ವಿಷ್ಣುಸ್ತು =ವಿಷ್ಣುವೂ ಘೋರಂ=ಭಯಂಕರವಹಂಥಾ ಕ್ವಚಿತ್=ಎಲ್ಲಿಯೂ ಅಪ್ರತಿಮಂ =ಸಮಾನವಿಲ್ಲದೇ ಇದ್ದಂಥಾ ತಚ್ಚಕ್ರಮಪಿ=ಆ ಚಕ್ರವನೂ ಸಮುತ್ಸ್ರಷ್ಟುಂ =ಇಡಲೋಸ್ಕರ ಇಚ್ಛನ್=ಇಚ್ಛೈಸಿದವನಾಗುತವು (ಇಚ್ಛೈಸಿದಾತನಾಗುತ್ತ) ಕ್ಷಮಃ=ಸಮರ್ಥನು ನಾಭವತ್=ಆದದಿಲ್ಲ. ||೧೪೮||

ಚಕ್ರಸಮನ್ವಿತಂ=ಚಕ್ರದೊಡನೆ ಕೂಡಿದಂಥಾ ಏಕಂ ಬಾಹುಂ = ಒಂದು ಭುಜ (ಬಾಹು)ವನು ಉದ್ಧೃತ್ಯ=ನೆಗಹಿ ಕ್ರೋಶನ್ನಿವ=ವೊರೆಯಿಡುತ್ತಿದ್ದಾ ನಕ್ಕೈಯೆಂಬ ಹಾಂಗಿದ್ದಂಥಾ ವಿಷ್ಣುಃ=ವಿಷ್ಣು ನಿಶ್ಚಲಃ = ಚಲನೆ ಇಲ್ಲದಂಥಾ (ಚಲನೆಯಿಲ್ಲದೆ ಇದ್ದಂಥಾ ವಿಷ್ಣುಃ = ವಿಷ್ಣು ನಿಶ್ಚಲಃ = ಚಲನೆ ಇಲ್ಲದಂಥಾ (ಚಲನೆಯಿಲ್ಲದೆ ಇದ್ದಂಥಾ) ಪಾಷಾಣ ಇವ = ಪಾಷಾಣವಕ್ಕೈ ಎಂಬ ಹಾಂಗೆ ಅಲಸಃ=ಜಡನಾಗಿ ಅತಿಷ್ಠತ್=ಇದ್ದನು. ||೧೪೯||

ವಿಶರೀರಃ=ಹೋಗಲುಪಟ್ಟ ಶರೀರವನುಳ್ಳಂಥಾ ಜೀವೋ ಯಥಾ=ಜೀವನೆ ಹಗಹಗೆ, ವಿಶೃಂಗಃ=ಹೋಗಲುಪಟ್ಟ ಕೋಡನುಳ್ಳಂಥಾ ವೃಷಭೋ ಯಥಾ= ಬಸವನೆಹಗಹಗೆ, ವಿದಂಷ್ಟ್ರಶ್ಚ = ಹೋಗಲುಪಟ್ಟ ದಾಡೆಯನುಳ್ಳಂಥಾ ಸರ್ಪೋ ಯಥಾ=ಸರ್ಪನೆಹಗಹಗೆ ತಥಾ = ಹಾಂಗೆ ವಿಷ್ಣುಃ = ಹರಿ ಅವಸ್ಥಿತಃ = ಇದ್ದನು. ||೧೫೦||

ತಂ ದೃಷ್ಟ್ವಾ ದುರ್ದಶಾಪನ್ನಂ ವಿಷ್ಣುಮಿಂದ್ರಾದಯಸ್ಸುರಾಃ
ಸುಸನ್ನದ್ಧಾ ಗಣೇಂದ್ರೇಣ ಮೃಗೇಂದ್ರೇಣೇವ ಗೋವೃಷಾಃ ॥೧೫೦॥

ಪ್ರಗೃಹೀತಾಯುಧಾ ಯೋದ್ಧುಂ ಕ್ರುದ್ಧಾಃ ಸಮುಪತಸ್ಥಿರೇ
ತಾನ್ ದೃಷ್ಟ್ವಾ ಸಮರೇ ಭದ್ರಃ ಕ್ಷುದ್ರಾನಿವ ಹರಿರ್ಮೃಗಾನ್ ॥

ಅಟ್ಟಹಾಸೇನ ಘೋರೇಣ ವ್ಯಷ್ಟಂಭಯದನಿಂದಿತಃ
ತದಾ ಶತಮುಖಸ್ಯಾಪಿ ಸವಜ್ರೋ ದಕ್ಷಿಣಃ ಕರಃ ॥
ಸಿಸೃಕ್ಷುರಪಿ ತದ್ವಜ್ರಂ [1]ಚಿತ್ರೇ[1] ಕೃತ ಇವಾಭವತ್ ॥೧೫೪॥

ಅನ್ಯೇಷಾಮಪಿ ಸರ್ವೇಷಾಮುದ್ಯುಕ್ತಾ ಅಪಿ ಬಾಹವಃ
ಅಲಸಾನಾಮಿವಾರಂಭಾಸ್ತಾಂ ದಶಾಂ [2]ಚಾತಿಯಾಂತ್ಯಥ[2] ॥೧೫೫॥

ದುರ್ದಶಾಪನ್ನಂ = ಸೋಲ (ಸೋಲವನು)ನು ಎಯ್ದಿದಂಥಾ ತಂ = ಆ ವಿಷ್ಣುಂ = ವಿಷ್ಣುವನು ದೃಷ್ಟ್ವಾ = ಕಂಡು ಇಂದ್ರಾದಯಃ = ಇಂದ್ರಮೊದಲಾದಂಥಾ ಸುರಾಃ = ದೇವತೆಗಳು ಗಣೇಂದ್ರೇಣ = ವೀರಭದ್ರನೊಡನೆ ಸುಸನ್ನದ್ಧಾಃ = ಕಾದಲು ಸನ್ನದ್ಧರಾದರು. ಮೃಗೇಂದ್ರೇಣ = ಸಿಂಹದೊಡನೆ ಗೋವೃಷಾ ಇವ = ಬಸವಗಳೆಹಗಹಗೆ. ॥೧೫೦॥

ಕ್ರುದ್ಧಾಃ = ಕೋಪಿಸಿದಂಥಾ ದೇವರ್ಕಳು ಪ್ರಗೃಹೀತಾಯುಧಾಃ = ಹಿಡಿಯಲುಪಟ್ಟ ಆಯುಧಂಗಳನುಳ್ಳವರುಗಳಾಗಿ ಯೋದ್ಧುಂ = ಯುದ್ಧವ ಮಾಡಲೋಸ್ಕರ ಸಮುಪತಸ್ಥಿರೇ = ಇದ್ದರು. ಕ್ಷುದ್ರಾನ್ ಮೃಗಾನ್ = ಹುಲುಮೃಗಂಗಳನು ಹರಿರಿವ = ಸಿಂಹನೆಹಗಹಗೆ ಭದ್ರಃ = ವೀರಭದ್ರನು ಸಮರೇ = ಕಾಳಗದಲ್ಲಿ ತಾನ್ = ಆ ದೇವರ್ಕಳನು ದೃಷ್ಟ್ವಾ = ಕಂಡು. ॥೧೫೩॥

ಘೋರೇಣ = ಭಯಂಕರವಹಂಥಾ ಅಟ್ಟಹಾಸೇನ = ಗಹಗಹಿಸುವ ನಗೆಯಿಂದ ಅನಿಂದಿತಃ = ನಿಂದೆಯಿಲ್ಲದೇ ಇದ್ದಂಥಾ ವೀರಭದ್ರನು ವ್ಯಷ್ಟಂಭಯತ್ = ಸ್ತಂಭನವ ಮಾಡಿದನು, ತದಾ = ಆಗ ಶತಮುಖಸ್ಯ = ದೇವೇಂದ್ರನ ಸವಜ್ರಃ = ವಜ್ರದಿಂದ ಸಹಿತವಹಂಥಾ ದಕ್ಷಿಣಃ ಕರೋಽಪಿ = ಬಲದ ಹಸ್ತವು ತದ್ವಜ್ರಂ = ಆ ವಜ್ರವನ್ನು ಸಿಸೃಕ್ಷುರಪಿ = ಇಡಲಿಚ್ಛೆಯನುಳ್ಳದಾಯಿತ್ತಾದರೂ ಚಿತ್ರೇ = ಚಿತ್ರದಲ್ಲಿ ಕೃತ ಇವ = ಮಾಡಲುಪಟ್ಟುದಕ್ಕೆ ಎಂಬ ಹಾಂಗೆ ಅಭವತ್ = ಆಯಿತ್ತು. ॥೧೫೪॥

ಅನ್ಯೇಷಾಂ = ಉಳಿದಂಥಾ ಸರ್ವೇಷಾಮಪಿ = ಸಮಸ್ತ ದೇವರ್ಕಳ ಉದ್ಯುಕ್ತಾಃ

[1] ಚಿತ್ರಃ (ಘ) [2] ಚಾತಿಯಾಂತ್ಯಥ (ಕ) ಮೂಲಮಾತ್ರ

ಏವಂ ಭಗವತಾ ತೇನ ವ್ಯಾಹತಾಶೇಷವೈಭವಾಃ
ಅಮರಾಸ್ಸಮರೇ ತಸ್ಯ ಪುರತಃ ಸ್ಥಾತುಮಕ್ಷಮಾಃ ||೧೫೫||

ಸ್ತಬ್ಧೈರವಯವೈರೇವ ದುದ್ರುವುರ್ಭಯವಿಹ್ವಲಾಃ
ವಿದ್ರುತಾಂಸ್ತ್ರಿದಶಾನ್ವೀರೋ ವೀರಭದ್ರೋ ಮಹಾಭುಜಃ ||
ವಿವ್ಯಾಧ ನಿಶಿತೈರ್ಬಾಣೈರ್ಮೇಘೋ ವರ್ಷೈರಿವಾಚಲಾನ್ ||೧೫೬||

ಬಾಹವಸ್ತಸ್ಯ ವೀರಸ್ಯ ಬಹವಃ ಪರಿಘೋಪಮಾಃ
ಶಸ್ತ್ರೈಶ್ಚಕಾಶಿರೇ [1]ದೀಪ್ರೈಃ[1] ಸಾಗ್ನಿಜ್ವಾಲಾ ಇವೋರಗಾಃ ||೧೫೭||

---

= ಉದ್ಯೋಗವನುಳ್ಳಂಥಾ ಬಾಹವಃ ಅಪಿ = ಭುಜಂಗಳು, ಅಲಸಾನಾಂ = ಜಡರುಗಳ ಆರಂಭಾ ಇವ = ವ್ಯಾಪಾರಂಗಳಕ್ಕೈ ಎಂಬ ಹಾಂಗೆ ತಾಂ ದಶಾಂ ಚ = ಆ ಅವಸ್ಥೆಯನು ಅತಿಯಾಂತ್ಯತ = ಅತ್ಯಂತ ಎಯ್ದುತ್ತಿದ್ದವಲಾ ||೧೫೪||

ಏವಂ = ಈ ಪ್ರಕಾರದಲ್ಲಿ ಭಗವತಾ = ಮಹಾತ್ಮೆಯನುಳ್ಳಂಥಾ ತೇನ = ಆ ವೀರಭದ್ರನಿಂದ ಅಮರಾಃ = ದೇವರ್ಕಳು ವ್ಯಾಹತಾಶೇಷವೈಭವಾಃ = ಕೆಡಲುಪಟ್ಟ ಸಮಸ್ತ ಸಾಮರ್ಥ್ಯವನುಳ್ಳವರುಗಳಾಗಿ ಸಮರೇ = ಕಾಳಗದಲ್ಲಿ ತಸ್ಯ = ಆ ವೀರಭದ್ರನ ಪುರತಃ = ಮುಂದೆ ಸ್ಥಾತುಂ = ಇರಲು ಅಕ್ಷಮಾಃ = ಸಮರ್ಥರಾದುದಿಲ್ಲ. ||೧೫೫||

ಭಯವಿಹ್ವಲಾಃ = ಭೀತಿಯಿಂದ ಮುಂದುಗೆಟ್ಟಂಥಾ ದೇವರ್ಕಳು ಸ್ತಬ್ಧೈಃ = ಸ್ತಂಭನನಾದುಥಾ ಅವಯವೈರೇವ = ಅವಯವಂಗಳಿಂದವೇ ದುದ್ರುವುಃ = ಓಡಿದರು. ವೀರಃ = ವೀರನಹಂಥಾ ಮಹಾಭುಜಃ = ದೊಡ್ಡಿಯ ಭುಜಂಗಳನುಳ್ಳಂಥಾ ವೀರಭದ್ರಃ = ವೀರಭದ್ರನು ವಿದ್ರುತಾನ್ = ಓಡುತ್ತಿದ್ದಂಥಾ ತ್ರಿದಶಾನ್ = ದೇವರ್ಕಳುಗಳನು ಕುರಿತು ನಿಶಿತೈಃ = ಹರಿತ (ಕೂರಿತ) ವಹಂಥಾ ಬಾಣೈಃ = ಬಾಣಂಗಳಿಂದ ವಿವ್ಯಾಧ = ಎಚ್ಚನು. ಕಥಮಿವ = ಅದು ಹೇಂಗೆಯಾ ಎಂದೊಡೆ ಮೇಘಃ = ಮೇಘವು ವರ್ಷೈಃ = ಮಳೆಗಳಿಂದ ಅಚಲಾನಿವ = ಪರ್ವತಂಗಳನೆಹಗಹಗೆ. ||೧೫೬||

ವೀರಸ್ಯ = ವೀರನಹಂಥಾ ತಸ್ಯ = ಆ ವೀರಭದ್ರನ ಪರಿಘೋಪಮಾಃ = ಲಾಳವಿಂಡಿಗೆಗೆ ಸಮಾನವಾಗುತ್ತಿದ್ದಂಥಾ ಬಹವಃ = ಬಹಳವಹಂಥಾ ಬಾಹವಃ = ಭುಜಂಗಳು ದೀಪ್ರೈಃ = ಹೊಳವುತ್ತಿದ್ದಂಥಾ ಶಸ್ತ್ರೈಃ = ಆಯುಧಂಗಳಿಂದ ಚಕಾಶಿರೇ = ಒಪ್ಪಿದವು. ಕಥಮಿವ = ಅದು ಹೇಂಗೆಯಾ ಎಂದೊಡೆ ಸಾಗ್ನಿಜ್ವಾಲಾಃ ಅಗ್ನಿಜ್ವಾಲೆಯೊಡನೆ ಕೂಡಲು ಪಟ್ಟಂಥಾ ಉರಗಾ ಇವ = ಸರ್ಪಂಗಳೆಹಗಹಗೆ.

---

1 ದೀಪ್ತೈಃ (ಖ ಗ)

ಅಸ್ತ್ರಶಸ್ತ್ರಾಣ್ಯನೇಕಾನಿ ಸ ವೀರೋ ವಿಸೃಜನ್ ಬಭೌ
ವಿಸೃಜನ್ ಸರ್ವಭೂತಾನಿ ಯಥಾಽಽದೌ ವಿಶ್ವಸಂಭವಃ ||೧೫೮||

ಯಥಾ ರಶ್ಮಿಭಿರಾದಿತ್ಯಃ ಪ್ರಚ್ಛಾದಯತಿ ಮೇದಿನೀಮ್
ತಥಾ ವೀರಃ ಕ್ಷಣಾದೇವ ಶರೈಃ ಪ್ರಾಚ್ಛಾದಯದ್ದಿಶಃ ||೧೫೯||

ಖಮಂಡಲೇ ಗಣೇಂದ್ರಸ್ಯ ಶರಾಃ ಕನಕಭೂಷಿತಾಃ
ಉತ್ಪತಂತಸ್ತಟಿದ್ರೂಪೈರುಪಮಾನಪದಂ ಯಯುಃ ||೧೬೦||

ಮಹಾಂತಸ್ತೇ ಸುರಾನ್ ಬಾಣಾ ಮಂಡೂಕಾನಿವ ಡುಂಡುಭಾಃ
ಪ್ರಾಣೈರ್ವಿಯೋಜಯಾಮಾಸುಃ ಪಪುಶ್ಚ ರುಧಿರಾಸವಮ್ ||೧೬೧||

---

ವೀರಃ = ವೀರನಹಂಥಾ ಸಃ = ಆ ವೀರಭದ್ರನು ಅನೇಕಾನಿ = ಬಹಳವಹಂಥಾ ಅಸ್ತ್ರಶಸ್ತ್ರಾಣಿ = [1]ಬಾಣಂಗಳು[1] ಕೈದುಗಳನು ವಿಸೃಜನ್ = ಪ್ರಯೋಗಿಸುತವು ಬಭೌ = ಒಪ್ಪಿದನು. ತದ್ಯಥಾ = ಅದು ಹೇಂಗೆಯೂ ಎಂದೊಡೆ ಆದೌ = ಸೃಷ್ಟಿಯ ಮೊದಲಲ್ಲಿ ಸರ್ವಭೂತಾನಿ = ಸಮಸ್ತ ಪ್ರಾಣಿಗಳನು ವಿಸೃಜನ್ = ಸೃಜಿಸುತ್ತಿದ್ದಂಥಾ ವಿಶ್ವಸಂಭವೋ ಯಥಾ = [2]ಬ್ರಹ್ಮನೆಹಗಹಗೆ. ವಿಶ್ವಂ ಸಂಭವತಿ [ಯಸ್ಮಾತ್] ವಿಶ್ವಸಂಭವಃ. ಇದು ನಿರ್ವಚನ.[2] ||೧೫೮||

ಆದಿತ್ಯಃ = ಸೂರ್ಯನು ರಶ್ಮಿಭಿಃ = ಕಿರಣಂಗಳಿಂದ ಯಥಾ = ಹೇಂಗೆ ಮೇದಿನೀಂ = ಭೂಮಿಯನು ಪ್ರಚ್ಛಾದಯತಿ = ಮುಸುಕುತ್ತಿಹನು ತಥಾ = ಹಾಂಗೆ ವೀರಃ = ವೀರಭದ್ರನು ಕ್ಷಣಾದೇವ — ಕ್ಷಣಮಾತ್ರದ ದೆಸೆಯಿಂದವೇ ಶರೈಃ = ಬಾಣಗಳಿಂದ ದಿಶಃ = ದಿಕ್ಕುಗಳನು ಪ್ರಾಚ್ಛಾದಯತ್ = ಹೊದಸಿದನು ||೧೫೯||

ಕನಕಭೂಷಿತಾಃ = ಸುವರ್ಣದಿಂದ ಅಲಂಕರಿಸಲುಪಟ್ಟಂಥಾ ಉತ್ಪತಂತಃ = ಮೇಲು ಮುಂತಾಗಿ ಎಯ್ವುತ್ತಿದ್ದಂಥಾ ಗಣೇಂದ್ರಸ್ಯ = ವೀರಭದ್ರನ ಶರಾಃ = ಬಾಣಂಗಳು ಖಮಂಡಲೇ = ಆಕಾಶಮಂಡಲದಲ್ಲಿ ತಟಿದ್ರೂಪೈಃ = ಮಿಂಚಿನರೂಪುಗಳೊಡನೆ ಉಪಮಾನಪದಂ = ಉಪಮೇಯ ಸ್ಥಾನವನು ಯಯುಃ = ಎಯ್ದಿದವು.

ಮಹಾಂತಃ = [3]ದೊಡ್ಡಿತ್ತಹಂಥಾ ತೇ ಬಾಣಾಃ = ಆ ಬಾಣಂಗಳು[3] ಸುರಾನ್ = ದೇವರ್ಕಳನು ಕುರಿತು ಪ್ರಾಣೈಃ = ಪ್ರಾಣಂಗಳೊಡನೆ ವಿಯೋಜಯಾಮಾಸುಃ = ಕೂಡಿದವು (?) [ಬೇರ್ಪಡಿಸಿದವು] ರುಧಿರಾಸವಂ ಚ = ರಕ್ತವೆಂಬ ಮದ್ಯವನು

---

[1] ಬಾಣಂಗಳ (ಖ) [2] ಲುಪ್ತ (ಕ) [3] ಲುಪ್ತ (ಕ)

ನಿಕೃತ್ತಬಾಹವಃ ಕೇಚಿತ್ ಕೇಚಿಲ್ಲೂನವರಾನನಾಃ
[1] ಪಾರ್ಶ್ವಾವದಾರಿತಾಃ[1] ಕೇಚಿತ್ ನಿಪೇತುರಸುರಾ ಭುವಿ ||೧೬೨||

[2] ವಿಶಿಖೋನ್ಮಥಿತೈರ್ಗಾತ್ರೈಃ ಬಾಹುಭಿಶ್ಛಿನ್ನಸಂಧಿಭಿಃ
ವಿವೃತ್ತನಯನಾಃ ಕೇಚಿನ್ನಿಪೇತುರ್ಭೂತಲೇ ಮೃತಾಃ ||೧೬೩||

ಗಾಂ ಪ್ರವೇಷ್ಟುಮಿವೇಪ್ಸಂತಃ ಖಂ ಗಂತುಮಿವ ಲಿಪ್ಸವಃ
ಅಲಬ್ಧಾತ್ಮತಿರೋಧಾನಾ ವ್ಯಲೀಯಂತ ಪರಸ್ಪರಮ್ ||೧೬೪||

ಭೂಮೌ ಕೇಚಿತ್ಪ್ರವಿವಿಶುಃ ಪರ್ವತಾನಾಂ ಗುಹಾಃ ಪರೇ
ಅಪರೇ ಜಗ್ಮುರಾಕಾಶಂ ಪರೇ ಚ ವಿವಿಶುರ್ಜಲಮ್ ||೧೬೫||

ಪಪುಃ = ಪಾನಮಾಡಿದವು. ಕಥಮಿವ = ಅದು ಹೇಂಗೆಯೂ ಎಂದೊಡೆ ಡುಂಡುಭಾಃ ಒಳ್ಳೆಗಳು ಮಂಡೂಕಾನಿವ = ಕಪ್ಪೆಗಳನ್ನು ಹೇಗೋ ಹಾಗೆ (ಕಪ್ಪೆಗಳನೆಹಗಹಗೆ)

ಕೇಚಿತ್ = ಕೆಲಬರು ಅಸುರಾಃ = ದೇವರ್ಕಳು ನಿಕೃತ್ತಬಾಹವಃ = ಕತ್ತರಿಸಲುಪಟ್ಟ ತೋಳುಗಳನುಳ್ಳವರಾಗಿ, ಕೇಚಿತ್ = ಕೆಲಬರು ಲೂನವರಾನನಾಃ = ಭೇದಿಸಲುಪಟ್ಟ ಒಪ್ಪುತ್ತಂವಿದ್ದ ಮುಖವನುಳ್ಳವರುಗಳಾಗಿ, ಕೇಚಿತ್ = ಕೆಲಬರು ಪಾರ್ಶ್ವಾವದಾರಿತಾಃ = ಬದಿಕತ್ತರಿಸಲುಪಟ್ಟವರುಗಳಾಗಿ ಭುವಿ = ಭೂಮಿಯಲ್ಲಿ ನಿಪೇತುಃ = ಬಿದ್ದರು ||೧೬೨||

ಕೇಚಿತ್ = ಕೆಲಬರು ವಿಶಿಖೋನ್ಮಥಿತೈಃ = ಬಾಣಂಗಳಿಂದ ಘಾಯವಾದಂಥ ಗಾತ್ರೈಃ = ಶರೀರಂಗಳಿಂದ ಬಾಹುಭಿಃ = ತೋಳುಗಳಿಂದ ಛಿನ್ನಸಂಧಿಭಿಃ = ಕತ್ತರಿಸಲುಪಟ್ಟ ಸಂಧುಗಳಿಂದ ಮೃತಾಃ = ಮರಣವನೆಯ್ದಿದರು. ವಿವೃತ್ತನಯನಾಃ = ಸಿಡಿದ ಕಣ್ಣುಗಳನುಳ್ಳಂಥಾವರುಗಳಾಗುತ್ತವು ಭೂತಲೇ = ಭೂಮಿಯಲ್ಲಿ ನಿಪೇತುಃ = ಬಿದ್ದರು. ||೧೬೩||

ಗಾಂ = ಭೂಮಿಯುನು ಪ್ರವೇಷ್ಟುಂ = ಪ್ರವೇಶಿಸಲು ಈಪ್ಸಂತ ಇವ = ಇಚ್ಛೈಸುತ್ತಿದ್ದಾರಕ್ಕೈಯೆಂಬ ಹಾಂಗಿದ್ದರು. ಖಂ = ಆಕಾಶವನು ಗಂತುಂ = ಎಯ್ದಲು ಲಿಪ್ಸವ ಇವ = ಇಚ್ಛೆಯನುಳ್ಳವರುಗಳಕ್ಕೈಯೆಂಬ ಹಾಂಗೆ ಇದ್ದರು. ಲಬ್ಧಾತ್ಮತಿರೋಧಾನಾಃ = ಹಡೆಯಲು ಪಡದೇ ಇದ್ದ ಶರೀರವ ಅದೃಶ್ಯಕರಣವನುಳ್ಳವರುಗಳಾಗಿ ಪರಸ್ಪರಂ = ಒಬ್ಬೊಬ್ಬ[3]ರನು ಕುರಿತು[3] ವ್ಯಲೀಯಂತ = ಅಡಗಿದರು.

ಕೇಚಿತ್ = ಕೆಲಬರು ಭೂಮೌ = ಭೂಮಿಯಲ್ಲಿ ಪ್ರವಿವಿಶುಃ = ಪ್ರವೇಶಿ-

1 ಪಾರ್ಶ್ವೇವಿದಾರಿತಾಃ (ಘ) 2 ವಿಶಿಖೋನ್ಮಾಥಿತೈ (ಘ) 3 ಲುಪ್ತ (ಕ)

‡ ಗಣೇಂದ್ರಬಾಹುಚ್ಯುತಬಾಣವಿದ್ಧಾಃ
ಪ್ರದುದ್ರುವುರ್ಗಾಢರುಜಾಭಿತಪ್ತಾಃ ।
ಚೇರುಃ ಕ್ವಚಿತ್ಕೇಚನ ಶೀರ್ಣಕೇಶಾಃ
ಸೇದುಃ ಕ್ವಚಿತ್ಕೇಚನ ದೀರ್ಣಗಾತ್ರಾಃ ॥೧೬೬॥

§ ಪೇತುಃ ಕ್ವಚಿತ್ಕೇಚನ ಭಿನ್ನವಕ್ತ್ರಾಃ
ನೇಶುಃ ಕ್ವಚಿತ್ಕೇಚನ ದೇವವೀರಾಃ ।
ಕೇಚಿಚ್ಚ ತತ್ರ ತ್ರಿದಶಾ ವಿಭಿನ್ನಾಃ
ವಿಸ್ರಸ್ತವಸ್ತ್ರಾಭರಣಾಸ್ತ್ರಶಸ್ತ್ರಾಃ ॥೧೬೭॥

* ² ನಿಪೇತುರುದ್ಭ್ರಾಸಿತದೀನಮುದ್ರಾಃ
ಮದಂ ಚ ದೀರ್ಘಂ ಚ ಬಲಂ ಚ ಹಿತ್ವಾ ॥೧೬೮॥

ಸಿದರು. ಪರೇ = ಕೆಲಬರು ಪರ್ವತಾನಾಂ = ಪರ್ವತಂಗಳ ಗುಹಾಃ = ಗುಹೆಗಳನು ಪ್ರವಿವಿಶುಃ = ಪ್ರವೇಶಿಸಿದರು. ಅಪರೇ = ಮತ್ತೆ ಕೆಲಬರು ಆಕಾಶಂ = ಆಕಾಶವನು ಜಗ್ಮುಃ = ಎಯ್ದಿದರು. ಪರೇ = ಮತ್ತೆ ಕೆಲಬರು ಜಲಂ ಚ = ಉದಕವನ್ನು ವಿವಿಶುಃ = ಹೊಕ್ಕರು. ॥೧೬೫॥

ಗಣೇಂದ್ರಬಾಹುಚ್ಯುತಬಾಣವಿದ್ಧಾಃ = ವೀರಭದ್ರನ ಭುಜಂಗಳಿಂದ ಎಸೆಯಲುಪಟ್ಟ ಬಾಣಗಳಿಂದ ಘಾಯವಾದಂಥಾ ದೇವರ್ಕಳು ಗಾಢರುಜಾಭಿತಪ್ತಾಃ = ಅತ್ಯಂತ ನೋವಿಂದ ಬೆಂದಂಥಾವರುಗಳಾಗಿ ಪ್ರದುದ್ರುವುಃ = ಓಡಿದರು. ಕೇಚನ = ಕೆಲಬರು ಶೀರ್ಣಕೇಶಾಃ = ಕೆದರಿದ ಕೇಶಂಗಳ್ಳನುಳ್ಳವರುಗಳಾಗಿ ಕ್ವಚಿತ್ = ಒಂದೆಡೆಯಲ್ಲಿ ಚೇರುಃ = ಎಯ್ದಿದರು. ಕೇಚನ = ಕೆಲಬರು ದೀರ್ಣಗಾತ್ರಾಃ = ಜರ್ಝರಿತವಾಗಲುಪಟ್ಟ ಶರೀರವನುಳ್ಳವರುಗಳಾಗಿ ಸೇದುಃ = ಎಯ್ದಿದರು. ॥೧೬೬॥

ಕೇಚಿತ್ = ಕೆಲಬರು ದೇವವೀರಾಃ = ದೇವಸುಭಟರುಗಳು ಭಿನ್ನವಕ್ತ್ರಾಃ = ಭೇದಿಸಲುಪಟ್ಟ ಮುಖಂಗಳನುಳ್ಳಂಥಾವರುಗಳಾಗಿ ಕ್ವಚಿತ್ = ಕೆಲವೆಡೆಯಲ್ಲಿ (ಕಿರಿದೆಡೆಯಲ್ಲಿ) ಪೇತುಃ = ಬಿದ್ದರು. ಕೇಚನ = ಕೆಲಬರು ವಿಭಿನ್ನಾಃ = ಅತಿಘಾಯವಡದವರುಗಳಾಗಿ ಕ್ವಚಿತ್ = ಕಿರಿದೆಡೆಯಲ್ಲಿ ನೇಶುಃ = ನಷ್ಟವಾದರು. ತತ್ರ = ಆ ಸಂಗ್ರಾಮದಲ್ಲಿ ಕೇಚಿತ್ = ಕೆಲಬರು ತ್ರಿದಶಾಶ್ಚ = ದೇವರ್ಕಳು ವಿಸ್ರಸ್ತವಸ್ತ್ರಾಭರಣಾಸ್ತ್ರಶಸ್ತ್ರಾಃ = ಸಡಿಲುತ್ತಂವಿದ್ದ ವಸ್ತ್ರ ಆಭರಣ ಬಾಣ ಶಸ್ತ್ರಂಗಳ-

‡ [ ಉಪಜಾತಿವೃತ್ತ ] § [ ಇಂದ್ರವಜ್ರಾವೃತ್ತ ]

* ಈ ವೃತ್ತಾರ್ಧಮಾತ್ರವೇ (ಕ.ಖ.ಗ.ಘ.ಚ.) ಎಲ್ಲಾ ಮಾತೃಕೆಗಳಲ್ಲಿರುವುದು.

² ವಿಪೇತು (ಘ).

ಏವಂ ದೇವಬಲಂ ಸರ್ವಂ ದೀನಂ ಬೀಭತ್ಸದರ್ಶನಮ್
ಗಣೇಶ್ವರಶರೈರ್ಭಿನ್ನಂ ಕೃಪಣಂ [1]ವಪುರಾದಧೇ ||೧೭೯||

ತದಾ ಸಂಭಿನ್ನಭಿನ್ನಾಂಗೈಃ ಸ ವೀರಸ್ತ್ರಿದಶೈರ್ಬಭೌ
ಪರಿಗ್ರಸ್ತಪ್ರಜಾವರ್ಗೋ ಭಗವಾನಿವ ಭೈರವಃ ||೧೮೦||

ತದಾ ತ್ರಿದಶವೀರಾಣಾಮಸೃಕ್ಸಲಿಲವಾಹಿನೀ
ಪ್ರಾವರ್ತತ ನದೀಃ ಘೋರಾ ಪ್ರಾಣಿನಾಂ ಭಯಶಂಸಿನೀ ||೧೮೧||

ರುಧಿರೇಣ ಪರಿಕ್ಲಿನ್ನಾ ಯಜ್ಞಭೂಮಿಸ್ತದಾ ಬಭೌ
ರಕ್ತಾರ್ದ್ರವದನಾ ಶ್ಯಾಮಾ ಹತಶುಂಭೇವ ಕೌಶಿಕೀ ||೧೮೨||

---

ನುಳ್ಳವರುಗಳಾಗಿ ಮದಂ ಚ=ದರ್ಪವನು ದೀರ್ಘಂ=ಬಹಳವಹಂಥಾ ಬಲಂ ಚ = ಸತ್ವವನು ಹಿತ್ವಾ = ಬಿಟ್ಟು ಉದ್ಭಾಸಿತದೀನಮುದ್ರಾಃ = ಒಪ್ಪುತ್ತಂವಿದ್ದ ದೈನ್ಯದ ಕುರುಹನುಳ್ಳವರಾಗುತವು ನಿಪೇತುಃ=ಹೋದರು. ||೧೭೮||

ಏವಂ = ಈ ಪ್ರಕಾರದಲ್ಲಿ ಗಣೇಶ್ವರಶರೈಃ = ವೀರಭದ್ರನ ಬಾಣಂಗಳಿಂದ ಭಿನ್ನಂ=ಘಾಯವಡೆಯಲುಪಟ್ಟಂಥಾ ದೀನಂ=ದೈನ್ಯಬಟ್ಟಂಥಾ ಬೀಭತ್ಸದರ್ಶನಂ ಭಯಂಕರವಹ ದರ್ಶನವನುಳ್ಳಂಥಾ ಸರ್ವದೇವಬಲಂ = ಸಮಸ್ತ ದೇವಬಲವು ಕೃಪಣಂ=ದೈನ್ಯವಹಂಥಾ ವಪುಃ=ಶರೀರವನು ಆದಧೇ=ಅಂಗೀಕರಿಸಿತ್ತು.||೧೭೯||

ತದಾ = ಆಗ ಸಂಭಿನ್ನಭಿನ್ನಾಂಗೈಃ = ಹರಿದು(ದ) ಮುರಿದ ಶರೀರಂಗಳ-ನುಳ್ಳಂಥಾ ಸಃ = ಆ ವೀರಭದ್ರನು ಬಭೌ = ಒಪ್ಪಿದನು. ಕಥಮಿವ = ಅದು ಹೇಂಗೆಯಾ ಎಂದೊಡೆ, ಪರಿಗ್ರಸ್ತಪ್ರಜಾವರ್ಗಃ=ಎಲ್ಲಾ ಕಡೆಯಲೂ ನುಂಗಲು-ಪಟ್ಟ ಪ್ರಜೆಗಳ ಸಮೂಹಂಗಳನುಳ್ಳಂಥಾ ಭಗವಾನ್ = ಸಾಮರ್ಥ್ಯವನುಳ್ಳಂಥಾ ಭೈರವ ಇವ=ಕಾಲಭೈರವನೆಹಗಹಗೆ. ||೧೮೦||

ತದಾ=ಆಗ ತ್ರಿದಶವೀರಾಣಾಂ=ದೇವಸುಭಟರುಗಳ ಅಸೃಕ್ಸಲಿಲವಾಹಿನೀ =ರಕ್ತವೆಂಬ ಉದಕದ ಪ್ರವಾಹವನುಳ್ಳಂಥಾ ಪ್ರಾಣಿನಾಂ=ಪ್ರಾಣಿಗಳಿಗೆ ಭಯ-ಶಂಸಿನೀ = ಭೀತಿಯನು ಸೂಚಿಸುತ್ತಿದ್ದಂಥಾ ಘೋರಾ = ಭಯಂಕರವಹಂಥಾ ನದೀ=ಹೊಳೆ ಪ್ರಾವರ್ತತ=ವರ್ತಿ(ಸುತ್ತಿಹುದು)ಸಿತ್ತು. ||೧೮೧||

ರುಧಿರೇಣ = ರಕ್ತದಿಂದ ಪರಿಕ್ಲಿನ್ನಾ = ಮುಳುಗಲುಪಟ್ಟಂಥಾ ಯಜ್ಞ-ಭೂಮಿಃ=ಯಾಗದ ಸ್ಥಾನವು ತದಾ=ಆಗ ಬಭೌ=ಒಪ್ಪಿತ್ತು. ಕಥಮಿವ=

---

[1] ವಪುರಾವದೆ (ಖ)

ಹತೇಷು ದೇವಸಂಘೇಷು ಪತಿತೇಷು ಸಹಸ್ರಶಃ
ಪ್ರವಿವೇಶ ಗಣೇಶಾನಃ ಕ್ಷಣಾದಾಹವನೀಯಕಮ್ ||೧೭೩||

ಪ್ರವಿಷ್ಟಮಥ ತಂ ದೃಷ್ಟ್ವಾ ಭದ್ರಂ ಕಾಲಾಗ್ನಿಸನ್ನಿಭಮ್
ದುದ್ರಾವ ಮರಣಾದ್ಭೀತೋ ಯಜ್ಞೋ ವೃಗವಪುರ್ಧರಃ ||೧೭೪||

ಸ ವಿಸ್ಫಾರ್ಯ ಮಹಚ್ಚಾಪಂ ದೃಢಂ ಜ್ಯಾಘೋಷಭೀಷಣಮ್
ಭದ್ರಸ್ತಮಭಿದುದ್ರಾವ ವಿಕ್ಷಿಪನ್ನೇವ ಸಾಯಕಾನ್ ||೧೭೫||

ಆಕರ್ಣಪೂರ್ಣಮಾಕೃಷ್ಟಂ ಧನುರಂಬುದವನ್ನದತ್
ನಾದಯಾಮಾಸ [1]ಸಂಧ್ಯಾಂ ಚ[1] ಖಂ ಚ ಭೂಮಿಂ ಚ[2] ಸರ್ವಶಃ[2] ||

ಅದು ಹೇಂಗೆಯಾ ಎಂದಡೆ ರಕ್ತಾರ್ದ್ರವದನಾ = ರಕ್ತದಿಂದ ನನೆಯಲುಪಟ್ಟ ಮುಖವನುಳ್ಳಂಥಾ ಶ್ಯಾಮಾ = ಕಪ್ಪಹಂಥಾ ಹತಶುಂಭಾ = ಕೊಲಲುಪಟ್ಟ ಶುಂಭಾಸುರನುಳ್ಳಂಥಾ ಕೌಶಿಕೀವ = ಪಾರ್ವತಿಯ ಅಂಶೀಭೂತವಹ ಕೌಶಿಕೀ ದೇವಿಯೆಹೆಗಹಗೆ. ||೧೭೨||

ದೇವಸಂಘೇಷು = ದೆ ವಸಮೂಹಂಗಳು ಹತೇಷು ಸತ್ಸು = ಹೆತವಾಗುತ್ತಿರಲು ಸಹಸ್ರಶಃ = ಅಸಂಖ್ಯಾತರಹಂಥಾ ದೇವರ್ಕಳು ಪತಿತೇಷು ಸತ್ಸು = ಹೋಗುತ್ತಂ-ವಿರಲು ಗಣೇಶಾನಃ = ಗಣಂಗಳಿಗೆ ಒಡೆಯನಹಂಥಾ ವೀರಭದ್ರನು ಕ್ಷಣಾತ್ = ಕ್ಷಣಮಾತ್ರದ ದೆಸೆಯಿಂದ ಆಹವನೀಯಕಂ = ಆಹವನೀಯಾಗ್ನಿ ಇಹಂಥಾ ಯಜ್ಞ-ಶಾಲೆಯನು ಪ್ರವಿವೇಶ = ಹೊಕ್ಕನು. ||೧೭೩||

ಅಥ = ಅನಂತರದಲ್ಲಿ ಪ್ರವಿಷ್ಟಂ = ಪ್ರವೇಶಿಸಿದಂಥಾ ಕಾಲಾಗ್ನಿಸನ್ನಿಭಂ = ಪ್ರಳಯಕಾಲದ ಅಗ್ನಿಗೆ ಸಮಾನವಹಂಥಾ ತಂ ಭದ್ರಂ = ಆ ವೀರಭದ್ರನನು ದೃಷ್ಟ್ವಾ = ಕಂಡು ಮರಣಾತ್ = ಸಾವಿನ ದೆಸೆಯಿಂದ ಭೀತಃ = ಅಂಜುತ್ತಿದ್ದಂಥಾ ಯಜ್ಞಃ = ಯಾಗವು ವೃಗವಪುಃ = ವೃಗದ ಶರೀರವನು ಧರಃ = ಧರಿಸಿ-ಕೊಂಡಂಥಾದಾಗಿ ದುದ್ರಾವ = ಓಡಿತ್ತು. ||೧೭೪||

ಸ ಭದ್ರಃ = ಆ ವೀರಭದ್ರನು ಜ್ಯಾಘೋಷಭೀಷಣಂ = ಹೆದೆಯ ಧ್ವನಿಯಿಂದ ಭಯಂಕರವಹಂಥಾ ಮಹತ್ = ದೊಡ್ಡಿಯವಹಂಥಾ ದೃಢಂ ಚಾಪಂ = ಬಲು ಬಿಲ್ಲನು ವಿಸ್ಫಾರ್ಯ = ಜೇವಡೆದು ಸಾಯಕಾನ್ = ಅಂಬುಗಳನು ವಿಕ್ಷಿಪನ್ನೇವ = ಎಸೆಯುತವೇ ತಂ = ಆ ಯಜ್ಞಮೃಗವನು ಅಭಿದುದ್ರಾವ = ಅಟ್ಟಿದನು. ||೧೭೫||

ಆಕರ್ಣಪೂರ್ಣಂ = ಕಿವಿಪರ್ಯಂತ ತುಂಬಿ ಆಕೃಷ್ಟಂ = ಸೆಳೆಯಲುಪಟ್ಟಂಥಾ

[1] ಸಂಧ್ಯಂ (ತಜ್ಜಂ) ಚ (ಘ) [2] ಸರ್ವತಃ (ಕ) ವ್ಯಾಖ್ಯಾ ಮಾತ್ರ.

[1]ತಮುಪಶ್ರುತ್ಯ ಸನ್ನಾದಂ ಹತೋಽಸ್ಮೀತ್ಯೇವ ವಿಹ್ವಲಮ್[1]
ಶರೇಣಾರ್ಧೇಂದುವಕ್ತ್ರೇಣ ಸ ವೀರೋಽಧ್ವರಪೂರುಷಮ್ ||
ಮೃಗರೂಪೇಣ ಧಾವಂತಂ ವಿಶಿರಸ್ಕಂ ತದಾಽಕರೋತ್ ||೧೭೭||

ಶಿರಶ್ಚಿಚ್ಛೇದ ದಕ್ಷಸ್ಯ ಭದ್ರಃ [2]ಪರಮಶೋಭನಮ್[2]
ಕ್ರೋಶಂತ್ಯಾಮೇವ ವೈರಿಣ್ಯಾಂ ಭದ್ರಕಾಳ್ಯೈ ದದೌ ಚ ತತ್ ||೧೭೮||

ಸಾ ಪ್ರಹೃಷ್ಟಾ ಸಮಾದಾಯ ಶಿರಸ್ತಾಲಫಲೋಪಮಮ್
ಸಾ ದೇವೀ ಕಂದುಕಕ್ರೀಡಾಂ ಚಕಾರ ಸಮರಾಂಗಣೇ ||೧೭೯||

---

ಅಂಬುದವತ್ = ಮೇಘದೋಪಾದಿ ನದತ್ = ಧ್ವನಿಗೆಯ್ಯುತ್ತಿದ್ದಂಥಾ ಧನುಃ = ಬಿಲ್ಲು ಖಂ ಚ = ಆಕಾಶವನು ಭೂಮಿಂ ಚ = ಭೂಮಿಯನು ಸಂಧ್ಯಾಂ ಚ = ಸಂಧ್ಯಾಕಾಲವನು ಸರ್ವಶಃ = ಸಮಸ್ತ ಲೋಕಂಗಳನು ನಾದಯಾಮಾಸ = ಧ್ವನಿಮಾಡಿತ್ತು. ||೧೭೬||

ತಂ ಸನ್ನಾದಂ = ಆ ಒಪ್ಪುತ್ತವಿದ್ದಂಥಾ ಧ್ವನಿಯನು ಉಪಶ್ರುತ್ಯ = ಕೇಳಿ ಹತೋಽಸ್ಮಿ = ಹತವಹೆನು. ಇತ್ಯೇವ = ಹೀಗೆಂದೇ ವಿಹ್ವಲಂ = ಮುಂದುಗೆಟ್ಟಂಥಾ ಮೃಗರೂಪೇಣ = ಮೃಗರೂಪಿನಿಂದ ಧಾವಂತಂ = ಓಡುತ್ತಿದ್ದಂಥಾ ಅಧ್ವರ ಪೂರುಷಂ = ಯಾಗಪುರುಷನನು ಅರ್ಧೇಂದುವಕ್ತ್ರೇಣ = ಅರ್ಧಚಂದ್ರನೋಪಾದಿ ಬಾಯನುಳ್ಳಂಥಾ ಶರೇಣ = ಬಾಣದಿಂದ ಸ ವೀರಃ = ಆ ವೀರಭದ್ರನು ತದಾ = ಆಗ ವಿಶಿರಸ್ಕಂ = ಹೋಗಲುಪಟ್ಟ ಶಿರಸ್ಸನುಳ್ಳಂಥಾತನನಾಗಿ ಅಕರೋತ್ = ಮಾಡಿದನು. ||೧೭೭||

ಭದ್ರಃ = ವೀರಭದ್ರನು ವೈರಿಣ್ಯಾಂ = ಹಗೆಯಹಂಥಾ ದಕ್ಷನ ಸ್ತ್ರೀ ಕ್ರೋಶಂತ್ಯಾಂ ಸತ್ಯಾಂ ಏವ = ಮೊರೆಯಿಡುತ್ತಿರಲಾಗಿಯೇ ದಕ್ಷಸ್ಯ = ದಕ್ಷನ ಪರಮಶೋಭನಂ = ಅತ್ಯಂತ ಒಪ್ಪುತ್ತಿದ್ದಂಥಾ ಶಿರಃ = ಶಿರಸ್ಸನ್ನು ಚಿಚ್ಛೇದ = ಛೇದಿಸಿದನು. ತಚ್ಚ = ಆ ಶಿರಸನು ಭದ್ರಕಾಳ್ಯೈ = ಭದ್ರಕಾಳಿಗೋಸ್ಕರ ದದೌ = ಕೊಟ್ಟನು. ||೧೭೮||

ಸಾ = ಆ ಭದ್ರಕಾಳಿ ತಾಲಫಲೋಪಮಂ = ತಾಳ [ತಾಳೆ] ಕಾಯಿಗೆ ಸಮಾನವಹಂಥಾ ಶಿರಃ = ತಲೆಯನು ಸಮಾದಾಯ = ತೆಗೆದುಕೊಂಡು ಪ್ರಹೃಷ್ಟಾ =

---

1 ಈ ಭಾಗ (ಖ. ಘ)ಗಳಲ್ಲಿಲ್ಲ. (ಗ)ದಲ್ಲಿ 'ಸನ್ನಾದಂ ಸಮುಪಶ್ರುತ್ಯ' ಎಂಬ ಪಾಠವಿದ್ದು 'ಶರೇಣಾರ್ಧೇಂದು ..' ನಂತರ ಉತ್ತರಾರ್ಧವಾಗಿ ಬಂದಿದೆ. ಮೇಲಿನಂತೆ (ಕ) ದಲ್ಲಿ ವ್ಯಾಖ್ಯಾಸಹಿತವಾಗಿದೆ. 1 ಪರಮಶೋಭನಃ (ಘ)

ತತೋಃ ದಕ್ಷಸ್ಯ ಯಜ್ಞಶ್ರೀಃ ಕುಶೀಲಾ ಭರ್ತೃಭಿರ್ಯಥಾ
ಪಾದಾಭ್ಯಾಂ ಚೈವ ಹಸ್ತಾಭ್ಯಾಂ ಹನ್ಯತೇಸ್ಮ [1]ಗಣೇಶ್ವರೈಃ ॥೧೮೦॥

ಅರಿಷ್ಟನೇಮಿನಂ ಸೋಮಂ ಧರ್ಮಂ ಚೈವ ಪ್ರಜಾಪತಿಮ್
ಬಹುಪುತ್ರಂ ಚಾಂಗಿರಸಂ ಕೃಶಾಶ್ವಂ ಕಶ್ಯಪಂ ತಥಾ ॥೧೮೧॥
ಗಲೇ ಪ್ರಗೃಹ್ಯ ಬಲಿನೋ ಗಣಪಾಃ ಸಿಂಹವಿಕ್ರಮಾಃ
ಭರ್ತ್ಸಯಂತೋ ಭೃಶಂ ವಾಗ್ಭಿರ್ನಿಜಘ್ನುರ್ಮೂರ್ಧ್ನಿ ಮುಷ್ಟಿಭಿಃ ॥

* [2]ಘರ್ಷಿತಾ[3] ಭೂತವೇತಾಲೈರ್ದಾರಾಸ್ಸುರಪರಿಗ್ರಹಾಃ ॥೧೮೩॥

ಸಂತೋಷಿಸಿದಳು, ಸಾ ದೇವೀ = ಆ ಭದ್ರಕಾಳೀದೇವಿ ಸಮರಾಂಗಣೇ = ಕಾಳಗದ ಕಣದಲ್ಲಿ (ಕಳದಲ್ಲಿ) ಕಂದುಕಕ್ರೀಡಾಂ = ಚೆಂಡಿನ ಆಟವನು ಚಕಾರ = ಮಾಡಿದಳು. ॥೧೭೯॥

ತತಃ = ಅಷ್ಟರಮೇಲೆ ದಕ್ಷಸ್ಯ = ದಕ್ಷನ ಯಜ್ಞಶ್ರೀಃ = ಯಾಗಲಕ್ಷ್ಮಿ, ಗಣೇಶ್ವರೈಃ = ಗಣೇಶ್ವರರುಗಳಿಂದ ಪಾದಾಭ್ಯಾಂ = ಕಾಲುಗಳಿಂದ ಹಸ್ತಾಭ್ಯಾಂ ಚೈವ = ಕೈಗಳಿಂದವೇ ಹನ್ಯತೇ ಸ್ಮ = ಘಟ್ಟಿಸಿಕೊಂಡಳು. ತದ್ಯಥಾ = ಅದು ಹೇಂಗೆಯಾ ಎಂದಡೆ ಕುಶೀಲಾ = ದುಶ್ಶೀಲೆಯುಹಂಥಾ ಸ್ತ್ರೀ ಭರ್ತೃಭಿರ್ಯಥಾ = ಗಂಡರು-ಗಳಿಂದವೆಹಗಹಗೆ. ॥೧೮೦॥

ಅರಿಷ್ಟನೇಮಿನಂ = ಅರಿಷ್ಟನೇಮಿಯನು ಸೋಮಂ = ಸೋಮನನು ಧರ್ಮಂ ಚೈವ = ಧರ್ಮನನು ಪ್ರಜಾಪತಿಂ = ಪ್ರಜಾಪತಿಯನು ಬಹುಪುತ್ರಂ ಚ = ಬಹು ಪುತ್ರನನು ಅಂಗಿರಸಂ = ಅಂಗಿರಸಋಷಿಯನು ಕೃಶಾಶ್ವಂ = ಕೃಶಾಶ್ವನನು ತಥಾ = ಹಾಂಗೆ ಕಶ್ಯಪಂ = ಕಶ್ಯಪನನು ಗಲೇ = ಕೊರಳಲ್ಲಿ ಪ್ರಗೃಹ್ಯ = ಬಿಗಿದು ಬಲಿನಃ = ಬಲಿಷ್ಠರಹಂಥಾ ಸಿಂಹವಿಕ್ರಮಾಃ = ಸಿಂಹದೋಪಾದಿ ಪರಾಕ್ರಮವನು ಳ್ಳಂಥಾ ಗಣಪಾಃ = ಗಣೇಶ್ವರರುಗಳು ವಾಗ್ಭಿಃ = ವಾಕ್ಯಂಗಳಿಂದ ಭೃಶಂ = ಅತ್ಯಂತ ಭರ್ತ್ಸಯಂತಃ = ಝಂಕಿಸುತ್ತಿದ್ದವರುಗಳಾಗಿ ಮುಷ್ಟಿಭಿಃ = ಮುಷ್ಟಿ ಗಳಿಂದ ಮೂರ್ಧ್ನಿ = ಮಸ್ತಕದಲ್ಲಿ ನಿಜಘ್ನುಃ = ತಿವಿದರು. ॥೧೮೧-೧೮೨॥

ಸುರಪರಿಗ್ರಹಾಃ = ದೇವರ್ಕಳು ಅಂಗೀಕರಿಸಿದಂಥಾ ದಾರಾಃ = ಸ್ತ್ರೀಯರು

---

[1] ರಣೇಶ್ವರೈಃ (ಗ) [2] ಧರ್ಷಿತಾ (ಘ) [3] ಕೊರಳಿನಲ್ಲಿ (ಕ)

* ಇದರ ಉತ್ತರಾರ್ಧ, (ಘ) ದಲ್ಲಿ ಮಾತ್ರವೇ ಹೀಗಿದೆ—

'ಯಥಾ ಕಲಿಯುಗೇ ಚಾರೈರ್ಬಲೇನ ಕುಲಯೋಷಿತಃ॥' [ಈ ಪಾಠ (ಕ ಖ ಗ ಚ) ಗಳಲ್ಲಿಲ್ಲವಾಗಿ ಇದಕ್ಕೆ ವ್ಯಾಖ್ಯಾನವೂ ಇಲ್ಲ.]

ತಚ್ಚ ವಿಧ್ವಸ್ತಕಲಶಂ ಭಗ್ನಯೂಪಂ ಗತೋತ್ಸವಮ್
ಪ್ರಮರ್ದಿತಮಹಾಶಾಲಂ ಪ್ರಭಿನ್ನದ್ವಾರತೋರಣಮ್ ||೧೮೪||

ಉತ್ಸಾರಿತಸುರಾನೀಕಂ ಹನ್ಯಮಾನತಪೋಧನಮ್
ಪ್ರಶಾಂತಬ್ರಹ್ಮನಿರ್ಘೋಷಂ ಪ್ರಕ್ಷೀಣಜಲಸಂಚಯಮ್ ||೧೮೫||

ಕ್ರಂದಮಾನಾಮರಸ್ತ್ರೀಕಂ ಹತಾಶೇಷಪರಿಚ್ಛದಮ್
ಶೂನ್ಯಾರಣ್ಯನಿಭಂ ಜಜ್ಞೇ ಯಜ್ಞವಾಟಂ ತದಾಽರ್ಧಿತಮ್ ||೧೮೬||

§ ತ್ವಮುತ್ಪಥಪ್ರಸ್ಥಿತಮುಪ್ರಧೃಷ್ಯೋ
ವಿಕ್ಷಿಪ್ಯ ಡಕ್ಷಾಧ್ವರಮುಕ್ಷತಾಸ್ತ್ರಃ ।

---

ಗಳು ಭೂತವೇತಾಲೈಃ = ಭೂತಬೇತಾಳಂಗಳಿಂದ ಘರ್ಷಿತಾಃ = ಘಾಸಿಯಾಗಲು ಪಟ್ಟರು. ||೧೮೩||

ತಚ್ಚ = ಆ ಯಾಗದ ಸ್ಥಾನವು ವಿಧ್ವಸ್ತಕಲಶಂ = ಒಡೆಯಲುಪಟ್ಟ ಕಲಶಂಗಳನುಳ್ಳಂಥಾ ಭಗ್ನಯೂಪಂ = ಮುರಿಯಲುಪಟ್ಟ ಯೂಪಸ್ತಂಭವನುಳ್ಳಂಥಾ ಗತೋತ್ಸವಂ = ಹೋಗಲುಪಟ್ಟ ಉತ್ಸಾಹವನುಳ್ಳಂಥಾ ಪ್ರಮರ್ದಿತಮಹಾಶಾಲಂ = ಕೆಡಿಸಲುಪಟ್ಟ ಯಾಗಶಾಲೆಯನುಳ್ಳಂಥಾ ಪ್ರಭಿನ್ನದ್ವಾರತೋರಣಂ = ಮುರಿಯಲುಪಟ್ಟ ಬಾಗಿಲು ತೋರಣಂಗಳನುಳ್ಳಂಥಾದಾಯಿತ್ತು. ||೧೮೪||

ಉತ್ಸಾರಿತಸುರಾನೀಕಂ = ತೊಲಗಿಸಲುಪಟ್ಟ ದೇವರ್ಕಳ ಸೇನೆಯನುಳ್ಳಂಥಾ ಹನ್ಯಮಾನತಪೋಧನಂ = ಕೊಲಲುಪಟ್ಟ ತಪೋಧನರನುಳ್ಳಂಥಾ ಪ್ರಶಾಂತಬ್ರಹ್ಮನಿರ್ಘೋಷಂ = ತಗ್ಗಲುಪಟ್ಟ ವೇದಘೋಷವನುಳ್ಳಂಥಾ ಪ್ರಕ್ಷೀಣಜಲಸಂಚಯಂ = ನಷ್ಟವಾಗಲುಪಟ್ಟ ಉದಕದ ಸಮೂಹವನುಳ್ಳಂಥಾದಾಯಿತ್ತು. ||೧೮೫||

ಕ್ರಂದಮಾನಾಮರಸ್ತ್ರೀಕಂ = ಅಳುತ್ತಂಯಿದ್ದ ದೇವಸ್ತ್ರೀಯರನುಳ್ಳಂಥಾ ಹತಾಶೇಷಪರಿಚ್ಛದಂ = ಹತವಾದ ಸಮಸ್ತಜನದ ಮೊತ್ತವನುಳ್ಳಂಥಾ ಅರ್ಧಿತಂ[2] = ಹೆಚ್ಚುಗೆಯನುಳ್ಳಂಥಾ ಯಜ್ಞ[3]ವಾಟಂ = ಯಜ್ಞಮಂಟಪವು[3] ತದಾ = ಆಗ ಶೂನ್ಯಾರಣ್ಯನಿಭಂ = [4]ಹಾಳಾದ ಅಡವಿಗೆ ಸ[4]ಮಾನವಹಂಥಾದ್ದು ಜಜ್ಞೇ = ಆಯಿತ್ತು. ||೧೮೬||

ಉತ್ಪಥಪ್ರಸ್ಥಿತಂ = ಉನ್ನತವಹ ಮಾರ್ಗದಲ್ಲಿ ಇರುತ್ತಿದ್ದಂಥಾ ತಂ

---

§ ಉಪೇಂದ್ರವಜ್ರಾವೃತ್ತಂ॥

2, 3, 4 ಲುಪ್ತ (ಕ)

ಬಭೌ ಗಣೇಶಃ ಸ ಗಣೇಶ್ವರಾಣಾಂ
ಮಧ್ಯೇ ಸ್ಥಿತಸ್ಸಿಂಹ ಇವರ್ಷಭಾಣಾವ್ ||೧೮೭||

ಇತಿ [1]ಸಂಭಿನ್ನಭಿನ್ನಾಂಗಾ[1] ದೇವಾ ವಿಷ್ಣುಪುರೋಗವಾಃ
ಕ್ಷಣಾತ್ಕಷ್ಟಾಂ ದಶಾಮೇತ್ಯ ತ್ರೇಸುಸ್ತೋಕಾವಶೇಷಿತಾಃ ||೧೮೮||

ತ್ರಸ್ತಾಂಸ್ತಾನಮರಾನ್ [2]ವೀರಾ[2]ವೀರಭದ್ರೇಣ ಚೋದಿತಾಃ
ಪ್ರಗೃಹ್ಯ ಚ ಯಥಾ ದೋಷಂ [3]ನಿಗಲ್ಯೈ[3]ರಾಯಸೈರ್ದೃಢೈಃ ||
ಬಬಂಧುಃ ಪಾಣಿಪಾದೇಷು ಕಂಧರಾಸೂದರೇಷು ಚ ||೧೮೯||

---

ದಕ್ಷಾಧ್ವರಂ = ಆ ದಕ್ಷನ ಯಾಗವನು ವಿಕ್ಷಿಪ್ಯ = [4]ಕೆಡಿಸಿ ಅಕ್ಷತಾಸ್ತ್ರಃ = ಕೆಡದೆ ಯಿದ್ದ ಬಾಣಂಗಳನು [5]ಂಥಾ ಅಪ್ರಧೃಷ್ಯಃ = ಎದುರಲುಬಾರದೆ ಇದ್ದಂಥಾ ಗಣೇಶ್ವರಃ = ಗಣೇಶ್ವರನಹುಥಾ[1] ಸ ಗಣೇಶಃ = ಆ ವೀರಭದ್ರನು ಗಣೇಶ್ವರಾಣಾಂ = ಗಣೇಶ್ವರರುಗಳ ಮಧ್ಯೇ = ಮಧ್ಯದಲ್ಲಿ ಬಭೌ = ಒಪ್ಪಿದನು. ಕಥಮಿವ = ಅದು ಹೇಂಗೆಯಾ ಎಂದೊಡೆ ಋಷಭಾಣಾಂ = ಬಸವಂಗಳ ಮಧ್ಯೇ = ಮಧ್ಯದಲ್ಲಿ ಸ್ಥಿತಂ = ಇದ್ದಂಥಾ ಸಿಂಹ ಇವ = ಸಿಂಹವೆಹಗಹಗೆ. ||೧೮೭||

ಇತಿ = ಈ ಪ್ರಕಾರದಲ್ಲಿ ಸಂಭಿನ್ನಭಿನ್ನಾಂಗಾಃ = ಕಡಿಸಿ ಇರಿಸಿಕೊಳಲುಪಟ್ಟ ಶರೀರಗಳನುಳ್ಳಂಥಾ ಸ್ತೋಕಾವಶೇಷಿತಾಃ = ಅಲ್ಪವಾಗಿ ಉಳಿದಂಥಾ ವಿಷ್ಣುಪುರೋಗವಾಃ = ವಿಷ್ಣು ಮೊದಲಾದಂಥಾ ದೇವಾಃ = ದೇವರ್ಕಳುಗಳು ಕ್ಷಣಾತ್ = ಕ್ಷಣಮಾತ್ರದ ದೆಸೆಯಿಂದ ಕಷ್ಟಾಂ = ಅತಿ ಕಷ್ಟವಹಂಥಾ ದಶಾಂ = ಅವಸ್ಥೆಯನು ಏತ್ಯ = ಎಯ್ದಿ ತ್ರೇಸುಃ = ನಡುಗಿದರು. * [ತ್ರಸೀ-ಉದ್ವೇಗೇ ]* ಎಂಬ ಧಾತು.

ತ್ರಸ್ತಾನ್ = [5]ಅಂಜುತ್ತಿ[5]ದ್ದಂಥಾ ತಾನ್ ಅಮರಾನ್ = ಆ ದೇವರ್ಕಳುಗಳನ್ನು ವೀರಭದ್ರೇಣ = ವೀರಭದ್ರನಿಂದ ಚೋದಿತಾಃ = ಪ್ರೇರೇಪಿಸಲುಪಟ್ಟಂಥಾ ವೀರಾಃ = ವೀರರುಗಳು ಪ್ರಗೃಹ್ಯ = ಹಿಡಿದು ಯಥಾದೋಷಂ = ಅಪರಾಧಕ್ಕೆ ತಕ್ಕಹಾಂಗೆ ಆಯಸೈಃ = ಕಬ್ಬಿನದ ಸಂಬಂಧವಹಂಥಾ ದೃಢೈಃ = ಬಲಿಷ್ಠವಹಂಥಾ ನಿಗಲೈಶ್ಚ = ಸಂಕಲೆಗಳಿಂದವು ಪಾಣಿಪಾದೇಷು — ಕೈಕಾಲುಗಳಲ್ಲಿ ಕಂಧರಾಸು = ಕೊರಳುಗಳಲ್ಲಿ ಉದರೇಷು ಚ = ಹೊಟ್ಟೆಗಳಲ್ಲಿಯೂ ಬಬಂಧುಃ = ಸಂಬಂಧಿಸಿದರು. ಬಧ — ಬಂಧನೇ ಎಂಬ (ಇತಿ) ಧಾತು. ||೧೮೯||

---

[1] ಇತಿ ಸಂಭಿನ್ನಸರ್ವಾಂಗಾ (ಘ) [2] ವೀರೋ (ಘ) [3] ನಿಗಡೈ (ಘ)
[4], [5] ಲುಪ್ತ (ಕ) * ತ್ರೋಸ — ಭಯೇ (ಕ) ತ್ರಾಸ — ಭಯೇ (ಖ) ?

ತಸ್ಮಿನ್ನವಸರೇ ಬ್ರಹ್ಮಾ ಭದ್ರಮದ್ರೀಂದ್ರಜಾನುಗಮ್
[1]ಸಾರಥ್ಯಾಲ್ಲಬ್ಧವಾತ್ಸಲ್ಯಃ[1] ಪ್ರಾರ್ಥಯನ್ಪ್ರಣತೋಽಬ್ರವೀತ್ ||೧೯೦||

ಅಲಂ ಕ್ರೋಧೇನ ಭಗವನ್ನಷ್ಟಾಶ್ಚೈತೇ ದಿವೌಕಸಃ
ಪ್ರಸೀದ ಕ್ಷಮ್ಯತಾಂ ಸರ್ವಂ ರೋಮಜೈಸ್ಸಹ ಸುವ್ರತ ||೧೯೧||

ಏವಂ ವಿಜ್ಞಾಪಿತಸ್ತೇನ ಬ್ರಹ್ಮಣಾ ಪರಮೇಷ್ಠಿನಾ
ಶಮಂ [2]ಜಗಾಮ[2] ಸಂಪ್ರೀತೋ ಗಣಪಸ್ತಸ್ಯ ಗೌರವಾತ್ ||೧೯೨||

ದೇವಾಶ್ಚ ಲಬ್ಧಾವಸರಾ ದೇವದೇವಸ್ಯ [3]ಮಂತ್ರಿಣಾ[3]
ಘಟಯಂತೋಽಂಜಲಿಂ ಮೂರ್ಧ್ನಿ ತುಷ್ಟುವುರ್ವಿವಿಧೈಸ್ಸ್ತವೈಃ ||

---

ತಸ್ಮಿನ್ನವಸರೇ = ಆ ವೇಳೆಯಲ್ಲಿ ಬ್ರಹ್ಮಾ = ಬ್ರಹ್ಮನು ಸಾರಥ್ಯಾತ್ = ಸಾರಥಿಯಾದ ದೆಸೆಯಿಂದ ಲಬ್ಧವಾತ್ಸಲ್ಯಃ = ಹಡೆಯಲುಪಟ್ಟ ಮಮಕಾರವನುಳ್ಳಂಥಾತನಾಗಿ ಅದ್ರೀಂದ್ರಜಾನುಗಂ = ಪಾರ್ವತೀದೇವಿಯ ಸೇವಕನಹಂಥಾ ಭದ್ರಂ = ವೀರಭದ್ರನನು ಪ್ರಾರ್ಥಯನ್ = ಬೇಡಿಕೊಳುತವು ಪ್ರಣತಃ = [4]ನಮಸ್ಕರಿಸಿದಾತನಾಗಿ[4] ಅಬ್ರವೀತ್ = ನುಡಿದನು. ||೧೯೦||

ಹೇ ಭಗವನ್ = ಎಲೆ ಷಡ್ಗುಣೈಶ್ವರ್ಯವನುಳ್ಳಂಥಾ ವೀರಭದ್ರನೇ! ಏತೇ ದಿವೌಕಸಶ್ಚ = ಈ ದೇವರ್ಕಳುಗಳು ನಷ್ಟಾಃ = ನಷ್ಟವಾದರು. ಕ್ರೋಧೇನ = ಕೋಪದಿಂದ ಅಲಂ = ಸಾಕು. ಭೋ ಸುವ್ರತ = ಎಲೆ ಒಪ್ಪುತ್ತಂವಿದ್ದ ವ್ರತವನುಳ್ಳಾತನೇ! ಸರ್ವಂ = ಸಮಸ್ತ ಅಪರಾಧವು ರೋಮಜೈಸ್ಸಹ = [5]ರೋಮಂಗಳಲ್ಲಿ[5] ಹುಟ್ಟಿದ ಗಣೇಶ್ವರರುಗಳಿಂದ ಸಹಿತವಾಗಿ ಕ್ಷಮ್ಯತಾಂ = ಸೈರಿಸಲ್ಪಡಲಿ. ಪ್ರಸೀದ = ಪ್ರಸನ್ನನಾಗು. ||೧೯೧||

ಏವಂ = ಈ ಪ್ರಕಾರದಲ್ಲಿ ಪರಮೇಷ್ಠಿನಾ = ಪರಮಪದವಿಯಲ್ಲಿ ಇರುತ್ತಿದ್ದಂಥಾ ತೇನ ಬ್ರಹ್ಮಣಾ = ಆ ಬ್ರಹ್ಮನಿಂದ ವಿಜ್ಞಾಪಿತಃ = ಬಿನ್ನೈಸಿಕೊಳಲುಪಟ್ಟಂಥಾ ಗಣಪಃ = ಗಣೇಶ್ವರನಹಂಥಾ ವೀರಭದ್ರನು ಸಂಪ್ರೀತಃ = ಸಂತೋಷಿಸಿದಾತನಾಗಿ ತಸ್ಯ = ಆ ವಾಕ್ಯದ ಗೌರವಾತ್ = ಗುರುತ್ವದ ದೆಸೆಯಿಂದ ಶಮಂ = ಸೈರಣೆಯನು ಜಗಾಮ = ಎಯ್ದಿದನು. ||೧೯೨||

ದೇವಾಶ್ಚ = ದೇವರ್ಕಳುಗಳು ಮಂತ್ರಿಣಾ = ಮಂತ್ರಿಯಹಂಥಾ ಬೃಹಸ್ಪತಿ-

---

1 ಸಾರಥ್ಯಲಬ್ಧವಾತ್ಸಲ್ಯಃ (ಘ) 2 ಜಗಾದ (ಘ) 3 ಮಂತ್ರಿಣಃ (ಕ) ಮೂಲಮಾತ್ರ
4 ಲುಪ್ತ (ಕ) 5 ರೋಮಂಗಳಿಂದ (ಖ)

ದೇವಾ ಊಚುಃ—

ನಮಃ ಶಿವಾಯ ರುದ್ರಾಯ ಯಜ್ಞಹರ್ತ್ರೇ ತ್ರಿಶೂಲಿನೇ
ರುದ್ರಭಕ್ತಾಯ ರುದ್ರಾಣಾಂ ಪತಯೇ ರುದ್ರಮೂರ್ತಯೇ ||೧೯೪||

ಕಾಲಾಗ್ನಿರುದ್ರರೂಪಾಯ ಕಾಲಕಾಮಾಂಗಹಾರಿಣೇ
ದೇವತಾನಾಂ ಶಿರೋಹರ್ತ್ರೇ ದಕ್ಷಸ್ಯ ಚ ದುರಾತ್ಮನಃ ||೧೯೫||

ಸಂಸರ್ಗಾದಸ್ಯ ಪಾಪಸ್ಯ [3]ದಕ್ಷಸ್ಯ ಕ್ಲಿಷ್ಟಕರ್ಮಣಃ[3]
ಶಾಸಿತಾಃ ಸಮರೇ ದೇವ ತ್ವಯಾ ವಯಮನಿಂದಿತಾಃ ||೧೯೬||

ಯಿಂದ ದೇವದೇವಸ್ಯ = ದೇವದೇವನಹಂಥಾ ವೀರಭದ್ರನ ಲಬ್ಧಾವಸರಾಃ = ಪಡೆಯಲುಪಟ್ಟ ವೇಳೆಯನುಳ್ಳಂಥಾವರುಗಳಾಗಿ ಮೂರ್ಧ್ನಿ = ಮಸ್ತಕದಲ್ಲಿ ಅಂಜಲಿಂ = ಕೈಮುಗಿಹವನು ಘಟಯಂತಃ = ಸಂಘಟಿಸಲ್ಪಟ್ಟವರುಗಳಾಗುತವು ವಿವಿಧೈಃ ಸ್ತವೈಃ = ನಾನಾಪ್ರಕಾರವಹಂಥಾ ಸ್ತೋತ್ರಗಳಿಂದ ತುಷ್ಟುವುಃ = ಕೊಂಡಾಡಿದರು.

ದೇವಾ ಊಚುಃ = ಸಮಸ್ತ ದೇವರ್ಕಳೂ ಬಿನ್ನಹಂ ಮಾಡುತ್ತಿದ್ದಾರು.

ಶಿವಾಯ = ಮಂಗಳಸ್ವರೂಪನವಂಥಾ ರುದ್ರಾಯ = ದುಃಖವ ಕೆಡಿಸುತ್ತಿದ್ದಂಥಾ ಯಜ್ಞಹರ್ತ್ರೇ = ಯಜ್ಞವ ಸಂಹರಿಸಿದಂಥಾ ತ್ರಿಶೂಲಿನೇ = ತ್ರಿಶೂಲವನುಳ್ಳಂಥಾ ರುದ್ರಭಕ್ತಾಯ = ಪರಮೇಶ್ವರನ ಭಕ್ತನಹಂಥಾ ರುದ್ರಮೂರ್ತಯೇ = ರುದ್ರಸ್ವರೂಪನಹಂಥಾ ರುದ್ರಾಣಾಂ = ರುದ್ರರುಗಳಿಗೆ ಪತಯೇ = ಒಡೆಯನಹಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೧೯೪||

ಕಾಲಾಗ್ನಿರುದ್ರರೂಪಾಯ = ಕಾಲಾಗ್ನಿರುದ್ರಸ್ವರೂಪನಹಂಥಾ ಕಾಲಕಾಮಾಂಗಹಾರಿಣೇ = ಕಾಲಕಾಮರುಗಳ ಶರೀರವ ಸಂಹರಿಸಿದಂಥಾ ದೇವತಾನಾಂ = ದೇವರ್ಕಳ ಶಿರೋಹರ್ತ್ರೇ = ಶಿರಸ್ಸನು ಸಂಹರಿಸಿದಂಥಾ ದುರಾತ್ಮನಃ = ದುರಾತ್ಮನಹಂಥಾ ದಕ್ಷಸ್ಯ = ದಕ್ಷನ ಶಿರೋಹರ್ತ್ರೇ = ಶಿರಸ್ಸನು ಸಂಹರಿಸಿದಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೧೯೫||

ಭೋ ದೇವ! = ಎಲೆ ದೇವನೇ! ಅನಿಂದಿತಾಃ = ನಿಂದೆಯಿಲ್ಲದೇ ಇದ್ದಂಥಾ ವಯಂ = ನಾವು ಪಾಪಸ್ಯ = ಪಾಪಿಯಹಂಥಾ ಕ್ಲಿಷ್ಟಕರ್ಮಣಃ = ಕ್ಲಿಷ್ಟ(ಕೆಟ್ಟ) ಕರ್ಮವನುಳ್ಳಂಥಾ ಅಸ್ಯ ದಕ್ಷಸ್ಯ = ಈ ದಕ್ಷನ ಸಂಸರ್ಗಾತ್ = ಸಂಸರ್ಗದ ದೆಸೆಯಿಂದ ತ್ವಯಾ = ನಿನ್ನಿಂದ ಸಮರೇ = ಕಾಳಗದಲ್ಲಿ ಶಾಸಿತಾಃ = ಶಿಕ್ಷಿಸಿಕೊಳ್ಳಲುಪಟ್ಟವರುಗಳು. ||೧೯೬||

[3] ದಕ್ಷಸ್ಯಾಕ್ಲಿಷ್ಟಕರ್ಮಣಃ (ಘ)

ದಗ್ಧಾಶ್ಚೈತೇ ವಯಂ ಸರ್ವೇ ತ್ವತ್ತೋ ಭೀತಾಶ್ಚ ಭೂತಪ
ತ್ವಮೇವ ಗತಿರಸ್ಮಾಕಂ ತ್ರಾಹಿ ನಃ ಶರಣಾಗತಾನ್ ||೯೭||

ತುಷ್ಟಸ್ತ್ವೇವಂ ಸ್ತುತೋ [1]ದೇವಾನ್ನಿರ್ಭಜ್ಯ ನಿಗಲಾನ್ ಪ್ರಭುಃ[1]
ಅನಯದ್ದೇವದೇವಸ್ಯ ಸಮೀಪಮಮರಾರಿಹಾ ||೯೮||

ದೇವೋಽಪಿ ತತ್ರ ಭಗವಾನಂತರಿಕ್ಷೇ ಸ್ಥಿತಃ ಪ್ರಭುಃ
ಸಗಣಃ ಸರ್ವಗಃ ಶರ್ವಃ ಸರ್ವಲೋಕಮಹೇಶ್ವರಃ ||೯೯||

ತಂ ದೃಷ್ಟ್ವಾ ಪರಮೇಶಾನಂ ದೇವಾ ವಿಷ್ಣುಪುರೋಗಮಾಃ
ಪ್ರೀತಾ ಅಪಿ ಚ ಭೀತಾಶ್ಚ ನಮಶ್ಚಕ್ರುರ್ಮಹೇಶ್ವರಮ್ ||೧೦೦||

ಭೋ ಭೂತಪ = ಎಲೈ ಭೂತನಾಥನಹಂಥಾ ದೇವನೇ! ಏತೇ ವಯಂ ಸರ್ವೇಽಪಿ = ಈ ನಾವೆಲ್ಲರು ತ್ವತ್ತಃ = ನಿನ್ನ ದೆಸೆಯಿಂದ ಭೀತಾಶ್ಚ = ಭೀತರುಗಳಾಗಿ ದಗ್ಧಾಃ = ಬೇಯಲುಪಟ್ಟವರುಗಳು. ಅಸ್ಮಾಕಂ = ನಮಗೆ ತ್ವಮೇವ = ನೀನೇ ಗತಿಃ = ಗತಿ. ಶರಣಾಗತಾನ್ = ಮೊರೆಹೊಕ್ಕಂಥಾ ನಃ = ನಮ್ಮನು ತ್ರಾಹಿ = ರಕ್ಷಿಸು. ||೯೭||

ಏವಂ = ಈ ಪ್ರಕಾರದಲ್ಲಿ ಸ್ತುತಃ = ಸ್ತೋತ್ರವ ಮಾಡಿಸಿಕೊಳುತ್ತಿದ್ದಂಥಾ ಅಮರಾರಿಹಾ = ದೇವರ್ಕಳ ಶತ್ರುಗಳಹ ರಾಕ್ಷಸರ ಸಂಹರಿಸುವಂಥಾ ಪ್ರಭುಃ = ಒಡೆಯನಹಂಥಾ ವೀರಭದ್ರನು ತುಷ್ಟಃ = ಸಂತುಷ್ಟನಾಗಿ ದೇವಾಂಸ್ತು = ದೇವರ್ಕಳನು ಕುರಿತು ನಿಗಳಾನ್ = ಸಂಕಲೆಗಳನು ನಿರ್ಭಜ್ಯ = ಖಂಡಿಸಿ ( ಕಂಡಿಸಿ ? ) ದೇವದೇವಸ್ಯ = ದೇವರ ದೇವನಹಂಥಾ ಪರಮೇಶ್ವರನ ಸಮೀಪಂ = ಸಮೀಪವನು ಆನಯತ್ = ಎಯ್ದಿಸಿದನು. ||೯೮||

ದೇವಃ—ಪ್ರಕಾಶಿಸುತ್ತಿದ್ದಂಥಾ ಭಗವಾನ್ — ಷಡ್ಗುಣೈಶ್ವರ್ಯಸಂಪನ್ನನಹಂಥಾ ಪ್ರಭುಃ—ಸಮರ್ಥನಹಂಥಾ ಸರ್ವಗಃ—ಸರ್ವಗತನಹಂಥಾ ಸರ್ವಲೋಕಮಹೇಶ್ವರಃ — ಸಮಸ್ತ ಲೋಕಂಗಳಿಗೆ ಅತ್ಯಂತ ಒಡೆಯನಹಂಥಾ ಶರ್ವಃ — ಪರಮೇಶ್ವರನು ಸಗಣಃ — ಗಣೇಶ್ವರರುಗಳಿಂದ ಸಹಿತವಾಗಿ ತತ್ರ—ಆ ರೈಭ್ಯಾಶ್ರಮದ ಸಮೀಪದಲ್ಲಿ ಅಂತರಿಕ್ಷೇ—ಆಕಾಶದಲ್ಲಿ ಸ್ಥಿತಃ—ಇದ್ದನು. ||೯೯||

ತಂ ಪರಮೇಶಾನಂ—ಆ ಪರಮೇಶ್ವರನನು ದೃಷ್ಟ್ವಾ—ಕಂಡು ವಿಷ್ಣುಪುರೋಗಮಾಃ—ವಿಷ್ಣುಮೊದಲಾದಂಥಾ ದೇವಾಃ—ದೇವರ್ಕಳುಗಳು ಪ್ರೀತಾ ಅಪಿ ಚ —

[1] ದೇವಾನ್ವಿಸೃಜ್ಯ ನಿಗಡಾತ್ಪ್ರಭುಃ (ಘ)

ದೃಷ್ಟ್ವಾ ತಾನಮರಾನ್ಭೀತಾನ್ ಪ್ರಣತಾನ್ಪ್ರಣತಾರ್ತಿಹಾ
ಇದಮಾಹ ಮಹಾದೇವಃ ಪ್ರಹಸನ್ಪ್ರೇಕ್ಷ್ಯ ಪಾರ್ವತೀಮ್ ||೨೦೧||

ಮಾ ಭೈಷ್ಟ ತ್ರಿದಶಾ ಯೂಯಂ ಕ್ಷಾಂತೋಽಸ್ಮಾಭಿರ್ವ್ಯತಿಕ್ರಮಃ
ಕ್ರುದ್ಧೇಷ್ವಸ್ಮಾಸು ಯುಷ್ಮಾಕಂ ನ ಸ್ಥಿತಿರ್ನ ಚ ಜೀವಿತಮ್ ||೨೦೨||

ಇತ್ಯುಕ್ತಾಸ್ತ್ರಿದಶಾಸ್ಸರ್ವೇ ಶರ್ವೇಣಾಮಿತತೇಜಸಾ
ಸದ್ಯೋ ವಿಗತಸಂತ್ರಾಸಾ ನನೃತುರ್ವಿವಶಾ ಮುದಾ ||೨೦೩||

ಅಥಾಸ್ಮಿನ್ನಂತರೇ ಬ್ರಹ್ಮಾ ಪ್ರಣಿಪತ್ಯ ಕೃತಾಂಜಲಿಃ
ಏವಂ ಹ್ಯವಸರಪ್ರಾಪ್ತಂ ವ್ಯಜ್ಞಾಪಯತ ಶೂಲಿನೇ ||೨೦೪||

---

ಸಂತೋಷಿಸಿದವರುಗಳಾಗಿಯೂ ಭೀತಾಶ್ಚ—ಅಂಜುತ್ತಿದ್ದವರುಗಳಾಗಿ ಮಹೇಶ್ವರಂ—ಪರಮೇಶ್ವರನನು ಕುರಿತು ನಮಃ—ನಮಸ್ಕಾರವನು ಚಕ್ರುಃ—ಮಾಡಿದರು.

ಪ್ರಣತಾರ್ತಿಹಾ—ನಮಸ್ಕರಿಸಿದವರುಗಳ ಕ್ಲೇಶವನು ಕೆಡಿಸುವಂಥಾ ಮಹಾದೇವಃ — ಪರಮೇಶ್ವರನು ಭೀತಾನ್ — ಭೀತಿಗೊಳುತ್ತಿದ್ದಂಥಾ ಪ್ರಣತಾನ್ — ನಮಸ್ಕರಿಸುತ್ತಿದ್ದಂಥಾ ತಾನ್ ಅಮರಾನ್—ಆ ದೇವರ್ಕಳುಗಳನು ದೃಷ್ಟ್ವಾ—ಕಂಡು, ಪಾರ್ವತೀ—ಪಾರ್ವತೀದೇವಿಯನು ಪ್ರೇಕ್ಷ್ಯ—ನೋಡಿ, ಪ್ರಹಸನ್—ನಗುತವು ಇದಂ—ಈ ವಾಕ್ಯವನು ಆಹ—ನುಡಿದನು. ||೨೦೧||

ಭೋ ತ್ರಿದಶಾಃ = ಎಲೇ ದೇವರ್ಕಳಿರಾ! ಯೂಯಂ = ನೀವು ಮಾ ಭೈಷ್ಟ = ಅಂಜದಿರಿ. ವ್ಯತಿಕ್ರಮಃ = ಮೀರಿ ನಡದಂಥಾದು ಅಸ್ಮಾಭಿಃ = ನಮ್ಮಿಂದ ಕ್ಷಾಂತಃ = ಸೈರಿಸಲುಪಟ್ಟಿತ್ತು. ಅಸ್ಮಾಸು = ನಾವು ಕ್ರುದ್ಧೇಷು ಸತ್ಸು = ಕೋಪಿಸುತ್ತಿರಲಾಗಿ ಯುಷ್ಮಾಕಂ = ನಿಮಗೆ ಸ್ಥಿತಿಃ = ಗತಿ ನ = ಇಲ್ಲ. ಜೀವಿತಂ = ಬದುಕು ನ = ಇಲ್ಲ. ||೨೦೨||

ಅಮಿತತೇಜಸಾ = ಹವಣಿಸಲು ಬಾರದೇ ಇದ್ದ ತೇಜಸ್ಸನುಳ್ಳಂಥಾ ಶರ್ವೇಣ = ಪರಮೇಶ್ವರನಿಂದ ಇತಿ = ಈ ಪ್ರಕಾರದಲ್ಲಿ ಉಕ್ತಾಃ = ನುಡಿಯಲುಪಟ್ಟಂಥಾ ಸರ್ವೇ ತ್ರಿದಶಾಃ = ಸಮಸ್ತ ದೇವರ್ಕಳುಗಳು ಸದ್ಯಃ = ಆ ಕ್ಷಣದಲ್ಲಿ ವಿಗತಸಂತ್ರಾಸಾಃ = ಹೋಗಲುಪಟ್ಟ ಭೀತಿಯನುಳ್ಳವರುಗಳಾಗಿ ವಿವಶಾಃ = ಪರವಶವಾದವರುಗಳಾಗುತವು ಮುದಾ = ಸಂತೋಷದಿಂದ ನನೃತುಃ = ಕುಣಿದಾಡಿದರು.

ಅಥ = ಅನಂತರದಲ್ಲಿ ಅಸ್ಮಿನ್ನಂತರೇ = ಈ ತರುವಾಯಲ್ಲಿ ಬ್ರಹ್ಮಾ = ಬ್ರಹ್ಮನು ಕೃತಾಂಜಲಿಃ = ಕೈಮುಗಿದುಕೊಂಡಾತನಾಗುತವು ಶೂಲಿನೇ =

ಬ್ರಹ್ಮೋವಾಚ—

ಜಯ ದೇವ ಮಹಾದೇವ ಪ್ರಣತಾರ್ತಿಪ್ರಭಂಜನ
ಈದೃಶೇಷ್ವಪರಾಧೇಷು ಕೋಽನ್ಯಸ್ತ್ವತ್ತಃ ಪ್ರಸೀದತಿ ||೨೦೫||

ಲಬ್ಧಾತ್ಮಾನೋ ಭವಿಷ್ಯಂತಿ ಯೇ ಸುರಾ [1]ನಿಹತಾ[1] ಮಖೇ
ಪ್ರತ್ಯಾಪತ್ತಿರ್ನ ಕಸ್ಯ ಸ್ಯಾತ್ ಪ್ರಸನ್ನೇ ಪರಮೇಶ್ವರೇ ||೨೦೬||

ಯದಿದಂ ದೇವ ದೇವಾನಾಂ ಕೃತಮಂಗೇಷು ದೂಷಣಮ್
ತದಿದಂ ಭೂಷಣಂ ಮನ್ಯೇ ತವಾಂಗೀಕಾರಗೌರವಾತ್ ||೨೦೭||

---

ಪರಮೇಶ್ವರಂಗೋಸ್ಕರ ಪ್ರಣಿಪತ್ಯ = ನಮಸ್ಕರಿಸಿ ಏವಂ = ಈ ಪ್ರಕಾರದಲ್ಲಿ ಅವಸರಪ್ರಾಪ್ತಂ = ವೇಳೆಗೊದಗಿದಂಥಾ ವಾಕ್ಯವನು ವ್ಯಜ್ಞಾಪಯತ ಹಿ — ಬಿನ್ನೈಸಿದನಲಾ. ||೨೦೪||

ಬ್ರಹ್ಮೋವಾಚ—ಬ್ರಹ್ಮನು ನುಡಿದನು. (ಬ್ರಹ್ಮನ ವಾಕ್ಯವು.)

ಪ್ರಣತಾರ್ತಿಪ್ರಭಂಜನಃ = ನಮಸ್ಕರಿಸಿದವರುಗಳ ಕ್ಲೇಶವನು ಕೆಡಿಸುವಂಥಾ ದೇವ ! = ಪ್ರಕಾಶಸ್ವರೂಪನಹಂಥಾ ಭೋ ಮಹಾದೇವ = ಎಲೈ ಮಹಾದೇವನೇ ! ಜಯ = ಜಯಶೀಲನಾಗು. ಈದೃಶೇಷು = ಈ ಪ್ರಕಾರವಹಂಥಾ ಅಪರಾಧೇಷು = ಅಪರಾಧಂಗಳಲ್ಲಿ ತ್ವತ್ತಃ = ನಿನ್ನಿಂದಲೂ ಅನ್ಯಃ ಕಃ = ಮತ್ತಾವಾತನು ಪ್ರಸೀದತಿ = ಪ್ರಸನ್ನನಾಗುತ್ತಿಹನು ? ನೀನೇ ಸೈರಿಸುವಾತನೆಂಬುದರ್ಥ. ||೨೦೫||

ಮಖೇ = ಯಾಗದಲ್ಲಿ ನಿಹತಾಃ = ಸತ್ತಂಥಾ ಯೇ ಸುರಾಃ = ಆರು ಕೆಲಬರು ದೇವರ್ಕಳುಗಳು ಲಬ್ಧಾತ್ಮಾನಃ = ಹಡೆಯಲು[2]ಪಟ್ಟ ಸ್ವರೂಪವನುಳ್ಳಂಥಾವರುಗಳು[2] ಭವಿಷ್ಯಂತಿ = ಆದಾರು. ಪರಮೇಶ್ವರೇ = ಪರಮೇಶ್ವರನು ಪ್ರಸನ್ನೇ ಸತಿ = ಪ್ರಸನ್ನ ವಾಗುತ್ತಿರಲು ಪ್ರತ್ಯಾಪತ್ತಿಃ = ಹೋದಂಥಾದ್ದು ತಿರಿಗಿ ಬರುಹವು ಕಸ್ಯ = ಆವಾತಂಗೆ ನ ಸ್ಯಾತ್ = ಆಗದು ? ಪರಮೇಶ್ವರನ ಪ್ರಸನ್ನತಿಕೆ ಉಂಟಾದಾತಂಗೆ ಹೋದಂಥಾ ವಸ್ತು ತಿರಿಗಿ ಬಹುದೆಂಬುದರ್ಥ. ||೨೦೬||

ಭೋ ದೇವ = ಎಲೈ ದೇವನೇ ! ದೇವಾನಾಂ = ದೇವರ್ಕಳ ಅಂಗೇಷು = [1]ಶರೀರಂಗಳಲ್ಲಿ[1] ಯತ್ = ಆವುದಾನೊಂದು ಇದಂ ದೂಷಣಂ = ಈ ಭಂಗವು ಕೃತಂ = ಮಾಡಲುಪಟ್ಟಿತ್ತು ತದಿದಂ = ಆ ಈ ಭಂಗವನು ತವ = ನಿನ್ನ ಅಂಗೀಕಾರ ಗೌರವಾತ್ = ಅಂಗೀಕಾರದ ಗುರುತ್ವದ ದೆಸೆಯಿಂದ ಭೂಷಣಂ = ಭೂಷಣವಾಗಿ ಮನ್ಯೇ = ಬಗೆವುತ್ತಿದ್ದೇನು. ||೨೦೭||

---

[1] ನಿಹಿತಾ (ಘ) [2] ಪಟ್ಟಂಥಾ ಅವರುಗಳು (ಕ) [1] ಲುಪ್ತ (ಕ)

ಇತಿ ವಿಜ್ಞಾಪ್ಯಮಾನಸ್ತು ಬ್ರಹ್ಮಣಾ ಪರಮೇಷ್ಠಿನಾ
ವಿಲೋಕ್ಯ ವದನಂ ದೇವ್ಯಾಃ ದೇವದೇವಃ ಸ್ಮಯನ್ನಿವ ||೨೦೮||

ಪುತ್ರಭೂತಸ್ಯ ವಾತ್ಸಲ್ಯಾದ್ಬ್ರಹ್ಮಣಃ ಪದ್ಮಜನ್ಮನಃ
[1]ಪ್ರನಷ್ಟಾನಾಂ ಪುನಸ್ತೇಷಾಂ ಪ್ರದದೌ ಪೂರ್ವವತ್ತನುಮ್[1] ||೨೦೯||

ತತಃ ಕ್ಷಣೇನ ವೈ ದೇವಾಃ ಶತಕ್ರತುಪುರೋಗಮಾಃ
ಪ್ರತ್ಯಾಪನ್ನಶರೀರಾಂಗಾಃ ಪ್ರಣೇಮುಃ ಪರಮೇಶ್ವರಮ್ ||೨೧೦||

ವಾಗೀಶಾದ್ಯಾಶ್ಚ ಯಾ ದೇವ್ಯೋ ದಂಡಿತಾ ದೇವಮಾತರಃ
ತಾಸಾಮಪಿ ಯಥಾಪೂರ್ವಂ ತಾನ್ಯಂಗಾನಿ ದದೌ ಭವಃ ||೨೧೧||

---

ಇತಿ = [2]ಈ ಪ್ರಕಾರದಲ್ಲಿ ಪರಮೇಷ್ಠಿನಾ = ಪರಮಪದವಿಯಲ್ಲಿ[2] ಇರುತ್ತಿದ್ದಂಥಾ ಬ್ರಹ್ಮಣಾ = [3]ಬ್ರಹ್ಮನಿಂದ[3] ವಿಜ್ಞಾಪ್ಯಮಾನಃ—ಬಿನ್ನೈಸಿಕೊಳಲುಪಟ್ಟಂಥಾ ದೇವದೇವಸ್ತು = ದೇವದೇವನಹಂಥಾ ಪರಮೇಶ್ವರನು ದೇವ್ಯಾಃ = ಪಾರ್ವತೀದೇವಿಯ ವದನಂ = ಮುಖವನು ವಿಲೋಕ್ಯ = ನೋಡಿ ಸ್ಮಯನ್ನಿವ = ನಗುತ್ತಿದ್ದನಕ್ಕೈ ಎಂಬ ಹಾಂಗೆ ಇದ್ದನು. ||೨೦೮||

ಪುತ್ರಭೂತಸ್ಯ—[4][ಪುತ್ರಭೂತನಾದಂಥಾ]* ಪದ್ಮಜನ್ಮನಃ—ತಾವರೆಯಲ್ಲಿ ಜನನವನುಳ್ಳಂಥಾ[4] ಬ್ರಹ್ಮಣಃ—ಬ್ರಹ್ಮನ ಮೇಲಣ ವಾತ್ಸಲ್ಯಾತ್ — ಸ್ನೇಹದ ದೆಸೆಯಿಂದ ಪ್ರನಷ್ಟಾನಾಂ—ಸತ್ತಂಥಾ ತೇಷಾಂ— ಆ ದೇವರ್ಕಳಿಗೆ ಪುನಃ— ಮರಳಿ ಪೂರ್ವವತ್—ಮುನ್ನಿನೋಪಾದಿಯ ತನುಂ—ಶರೀರವನು ಪ್ರದದೌ— ಕೊಟ್ಟನು. ||೨೦೯||

ತತಃ—ಅಷ್ಟರ ಮೇಲೆ [5]ಕ್ಷಣೇನ ವೈ—ಕ್ಷಣಮಾತ್ರದಿಂದವೇ[5] ಶತಕ್ರತು- ಪುರೋಗಮಾಃ—ನೂರು ಯಜ್ಞವ ಮಾಡಿದ ದೇವೇಂದ್ರ ಮೊದಲಾದಂಥಾ ದೇವಾಃ —ದೇವರ್ಕಳುಗಳು ಪ್ರತ್ಯಾಪನ್ನಶರೀರಾಂಗಾಃ — ಮರಳಿ ಹಡೆಯಲುಪಟ್ಟ ಶರೀರ ಅವಯವಂಗಳನುಳ್ಳಂಥಾವರುಗಳಾಗಿ ಪರಮೇಶ್ವರಂ — ಪರಮೇಶ್ವರನನು ಕುರಿತು ಪ್ರಣೇಮುಃ—ನಮಸ್ಕರಿಸಿದರು. ||೨೧೦||

ವಾಗೀಶಾದ್ಯಾಃ— [6]ಸರಸ್ವತಿ ಮೊದಲಾದಂಥಾ ಯಾಃ — ಆರು ಕೆಲಂಬರು ದೇವಮಾತರಃ — ದೇವರ್ಕಳ ತಾಯಿಗಳಹಂಥಾ ದೇವ್ಯಶ್ಚ — ದೇವಿಯರುಗಳು

---

1 (ಖ)ದಲ್ಲಿ ಈ ಭಾಗದ ಮೂಲ ಬಿಟ್ಟುಹೋಗಿದ್ದರೂ ವ್ಯಾಖ್ಯಾನದಲ್ಲಿ ಈ ಭಾಗವೂ ಇದೆ

2,3,4 ಲುಪ್ತ (ಕ) * ಅರ್ಥ ಬಿಟ್ಟು ಹೋಗಿವೆ (ಖ) 5,6 ಲುಪ್ತ (ಕ)

ದಕ್ಷಸ್ಯ ಭಗವಾನೇವ ಸ್ವಯಂ ಬ್ರಹ್ಮಾ ಪಿತಾಮಹಃ
ತತ್ಕರ್ಮಾನುಗುಣಂ ಚಕ್ರೇ ಜರಚ್ಛಾಗಮುಖಂ ಮುಖಮ್ ||೨೧೨||

ಸೋಽಪಿ ಸಂಜ್ಞಾಂ ಯಥಾ ಲಬ್ಧ್ವಾ ಸಮುತ್ಥಾಯ ಕೃತಾಂಜಲಿಃ
ಪ್ರಲಪನ್ ಬಹುಧಾ ಭೀತಸ್ತುಷ್ಟಾವ ಪರಮೇಶ್ವರಮ್ ||೨೧೩||

ತಂ ತಥಾ ವ್ಯಾಕುಲಂ ಭೀತಂ ಪ್ರಲಪಂತಂ ಕೃತಾಗಸಮ್
ಸ್ಮಯನ್ನಿವಾವದತ್ಪ್ರೇಕ್ಷ್ಯ ಮಾ ಭೈರಿತಿ ಘೃಣಾನಿಧಿಃ ||೨೧೪||

---

ದಂಡಿತಾಃ—ಶಿಕ್ಷೆಯ ಮಾಡಿಸಿಕೊಂಡವರುಗಳಾದರು, ತಾಸಾಮಪಿ—ಆ ದೇವಿಯರು ಗಳಿಗೆ ಯಥಾಪೂರ್ವಂ—ಮುನ್ನಿನ ಹಾಂಗೆ ತಾನಿ ಅಂಗಾನಿ—ಆ ಅವಯವಂಗಳನು ಭವಃ—ಪರಮೇಶ್ವರನು ದದೌ—ಕೊಟ್ಟನು. ||೨೧೧||

ಪಿತಾಮಹಃ—ಲೋಕಕ್ಕೆ ಪಿತಾಮಹನಹಂಥಾ ಭಗವಾನ್ — ಸಾಮರ್ಥ್ಯ ವನುಳ್ಳಂಥಾ [1]ಬ್ರಹ್ಮಾ—ಬ್ರಹ್ಮನು ಸ್ವಯಮೇವ—ತಾನೇ ದಕ್ಷಸ್ಯ—ದಕ್ಷಂಗೆ[1] ತತ್ಕರ್ಮಾನುಗುಣಂ — ಆ ಕರ್ಮಕ್ಕೆ ಅನುಗುಣವಾಗಿಹಂಥಾ ಜರಚ್ಛಾಗಮುಖಂ ಮುದುಹೋತಿನ ಮುಖವನುಳ್ಳಂಥಾ ಮುಖಂ — ಮೋರೆಯನು ಚಕ್ರೇ — ಮಾಡಿದನು. ||೨೧೨||

ಸೋಽಪಿ—ಆ ದಕ್ಷನು ಯಥಾಸಂಜ್ಞಾಂ — ಮುನ್ನಿನೋಪಾದಿ ಎಚ್ಚರಿಕೆ ಯನು ಲಬ್ಧ್ವಾ—ಪಡೆದು ಸಮುತ್ಥಾಯ — ಎದ್ದು ಕೃತಾಂಜಲಿಃ — ಕೈ ಮುಗಿದು[2]ಕೊಂಡಂಥಾವನಾಗಿ[2] [3]ಬಹುಧಾ—ಹಲವು ಪ್ರಕಾರವಾಗಿ ಪ್ರಲಪನ್— ಪ್ರಲಾಪಿಸುತ್ತವು[3] ಭೀತಃ — ಭೀತನಾಗಿ ಪರಮೇಶ್ವರಂ — ಪರಮೇಶ್ವರನನು ತುಷ್ಟಾವ—ಸ್ತೋತ್ರವ ಮಾಡಿದನು. ||೨೧೩||

ತಥಾ—ಹಾಂಗೆ ವ್ಯಾಕುಲಂ—ತರಹರಿಸಲರಿಯದೇ ಇದ್ದಂಥಾ ಭೀತಂ— ಅಂಜಿಕೆಯನುಳ್ಳಂಥಾ ಪ್ರಲಪಂತಂ— ಪ್ರಲಾಪಿಸುತ್ತಂವಿದ್ದಂಥಾ ಕೃತಾಗಸಂ — ಮಾಡಲುಪಟ್ಟ ಅಪರಾಧವನುಳ್ಳಂಥಾ ತಂ—ಆ ದಕ್ಷನನು ಪ್ರೇಕ್ಷ್ಯ—ನೋಡಿ, ಘೃಣಾನಿಧಿಃ—[4]ಕೃಪೆಗೆ ಸ್ಥಾನನಹಂಥಾ[4] ಪರಮೇಶ್ವರನು ಮಾ ಭೈರಿತಿ—ಅಂಜದಿರು ಎಂದು ಹೀಂಗೆ ಸ್ಮಯನ್ನಿವ— ನಗುತ್ತಿದ್ದಾನೆಂಬ ಹಾಂಗೆ ಅವದತ್ — ನುಡಿದನು. ||೨೧೪||

---

1 ಲುಪ್ತ (ಕ) 2 ಕೊಂಡು (ಖ) 3 ಲುಪ್ತ (ಖ) 4 ಲುಪ್ತ (ಕ)

ತತೋ ಬ್ರಹ್ಮಾ ಮಹಾದೇವಮಭಿವಂದ್ಯ ಕೃತಾಂಜಲಿಃ
ತುಷ್ಟಾವ ಶುಭಯಾ ವಾಚಾ ದೇವೀಂ ಚ ಗಿರಿಜಾಮಿಮಾಮ್ ||

ತತೋ ವಿಷ್ಣುಸ್ತತೋ ದೇವಾಸ್ತತಃ ಸರ್ವೇ ಮಹರ್ಷಯಃ
ತುಷ್ಟುವುರ್ದೇವದೇವೇಶಂ ದೇವೇಶೀಂ ಚ ಪೃಥಕ್ಪೃಥಕ್ ||೨೧೬||

ತದಾ ಪಾರ್ಶ್ವೇ ಸ್ಥಿತಂ ವೀಕ್ಷ್ಯ ಭದ್ರಮದ್ರೀಂದ್ರಜಾ ಸ್ವಯಮ್
ಕೃತಾತ್ಮಪ್ರೇಕ್ಷಣಂ ಪುತ್ರಂ ಗೃಹೀತ್ವಾ ತಂ ಕೃತಾಂಜಲಿಮ್ ||೨೧೭||

ಆಕೃಷ್ಯ ಭದ್ರಯಾ ಸಾರ್ಧಮಂಕೇ ಸಮುಪವೇಶ್ಯ ಚ
ಸಸ್ವಜೇ ಗುಹವದ್ಗಾಢಂ [1]ಸಮಾಜಿಘ್ರೇ ಚ ಮೂರ್ಧನಿ ||೨೧೮||

---

ತತಃ—ಅಸ್ಟರಮೇಲೆ ಬ್ರಹ್ಮಾ=ಬ್ರಹ್ಮನು ಮಹಾದೇವಂ—ಪರಮೇಶ್ವರನನು ಅಭಿವಂದ್ಯ—ನಮಸ್ಕರಿಸಿ ಕೃತಾಂಜಲಿಃ—ಕೈಮುಗಿದುಕೊಂಡಾತನಾಗಿ ಶುಭಯಾ — ಒಪ್ಪುತ್ತಂವಿದ್ದಂಥಾ ವಾಚಾ — ವಾಕ್ಯದಿಂದ ಇಮಾಂ — ಈ ಗಿರಿಜಾಂ ದೇವೀಂ—ಪಾರ್ವತೀ ದೇವಿಯನು ತುಷ್ಟಾವ—ಸ್ತೋತ್ರವ ಮಾಡಿದನು. ||೨೧೫||

ತತಃ — ಅಸ್ಟರ ಮೇಲೆ ವಿಷ್ಣುಃ — ವಿಷ್ಣುವು ತತಃ — ಅಸ್ಟರಮೇಲೆ ದೇವಾಃ—ದೇವರ್ಕಳು ತತಃ—ಅಸ್ಟರ ಮೇಲೆ ಸರ್ವೇ ಮಹರ್ಷಯಃ—ಸಮಸ್ತ ಋಷಿಗಳು ದೇವದೇವೇಶಂ=ದೇವದೇವೇಶ್ವರನ ಹಂಥಾ ಶಿವನನು ದೇವೇಶೀಂ ಚ — ಪಾರ್ವತೀದೇವಿಯನು ಪೃಥಕ್ ಪೃಥಕ್ — ಬೇರೆ ಬೇರೆ ತುಷ್ಟುವುಃ — ಸ್ತೋತ್ರವ ಮಾಡಿದರು. ||೨೧೬||

ತದಾ—ಆಗ ಪಾರ್ಶ್ವೇ—ಕೆಲದಲ್ಲಿ ಸ್ಥಿತಂ—ಇರುತ್ತಿದ್ದಂಥಾ ಭದ್ರಂ—ವೀರಭದ್ರನನು ವೀಕ್ಷ್ಯ—ನೋಡಿ ಅದ್ರೀಂದಜಾ— ಪಾರ್ವತೀದೇವಿ ಸ್ವಯಂ —ತಾನೇ ಕೃತಾತ್ಮ ಪ್ರೇಕ್ಷಣಂ—ಮಾಡಲುಪಟ್ಟ ತನ್ನಲ್ಲಿಯ ನೋಟವನುಳ್ಳಂಥಾ ಕೃತಾಂಜಲಿಂ—ಮಾಡಲುಪಟ್ಟ ಕೈಮುಗಿಹವನುಳ್ಳಂಥಾ ತಂ ಪುತ್ರಂ—ಆ ಮಗನನು ಗೃಹೀತ್ವಾ—ಪರಿಗ್ರಹಿಸಿ, ||೨೧೭||

ಭದ್ರಯಾ ಸಾರ್ಧಂ—ಭದ್ರಕಾಳಿಯೊಡನೆ ಆಕೃಷ್ಯ—ಸೆಳದು ಅಂಕೇ — ತೊಡೆಯ ಮೇಲೆ ಸಮುಪವೇಶ್ಯ ಚ—ಕುಳ್ಳಿರಿಸಿಕೊಂಡು ಗುಹವತ್—ಸ್ವಾಮಿ ಕಾರ್ತಿಕನೋಪಾದಿ ಗಾಢಂ—ಬಿಗಿದು ಸಸ್ವಜೇ—ತಕ್ಕೈಸಿಕೊಂಡಳು. ಮೂರ್ಧನಿ ಚ—ಶಿರಸ್ಸಿನಲ್ಲಿಯೂ ಸಮಾಜಿಘ್ರೇ—ಮುದ್ದುಕೊಟ್ಟಳು. ||೨೧೮||

---

[1] ಸಮಾಜಿಘ್ರಚ್ಚ (ಘ)

ತತಃ ಪ್ರೀತಾ ತದಾ ದೇವೀ ವೀರಭದ್ರಾಯ ಶೂಲಿನೇ
ಪ್ರದದೌ ವಿವಿಧಾನಿಷ್ಟಾನ್ [1]ವರಾನ್ವರಸಹಸ್ರಧಾ[1] ||೨೧೯||

[2] ಅಥ ತದಾ ಹರಿಶಕ್ರಪಿತಾಮಹ-
ಪ್ರಭೃತಯಃ ಸುರಲೋಕಮಹೇಶ್ವರಾಃ
ಸಕಲಲೋಕಮಹೇಶ್ವರಮೀಶ್ವರೀಂ
ಶರಣಮೇತ್ಯ ಕೃತಾಂಜಲಯೋಽಸ್ತುವನ್ ||೨೨೦||

[3] ಸ ಚ ಗಣಾಂಸ್ತ್ರಿದಶಾನ್ ಶರಣಾಗತಾನ್
ಪರಮಕಾರುಣಿಕಃ ಪರಮೇಶ್ವರಃ
ಅನುಗತಸ್ಮಿತಲಕ್ಷಣಯಾ ಗಿರಾ
ಶಮಿತಸರ್ವಭಯಂ ಸಮಭಾಷತ ||೨೨೧||

---

ತತಃ—ಅನಂತರದಲ್ಲಿ ದೇವೀ—ಪಾರ್ವತೀದೇವಿಯು ಪ್ರೀತಾ—ಸಂತುಷ್ಟೆಯಾಗಿ ತದಾ—ಆಗ ಶೂಲಿನೇ—ತ್ರಿಶೂಲವನ್ನುಳ್ಳಂಥಾ ವೀರಭದ್ರಾಯ—ವೀರಭದ್ರನಿಗೋಸ್ಕರ ವಿವಿಧಾನ್—ನಾನಾ ಪ್ರಕಾರವಹಂಥಾ ಇಷ್ಟಾನ್—ಬಯಕೆಯನುಳ್ಳಂಥಾ ವರಾನ್ — ಶ್ರೇಷ್ಠಂಗಳಹಂಥಾ ವರಸಹಸ್ರಧಾ — ವರಸಹಸ್ರಂಗಳನು ಪ್ರದದೌ—ಕೊಟ್ಟಳು. ||೨೧೯||

ಅಥ—ಅನಂತರದಲ್ಲಿ ತದಾ—ಆಗ ಹರಿಶಕ್ರಪಿತಾಮಹಪ್ರಭೃತಯಃ—ವಿಷ್ಣು ಇಂದ್ರ ಬ್ರಹ್ಮ ಮೊದಲಾದಂಥಾ ಸುರಲೋಕಮಹೇಶ್ವರಾಃ — ಸ್ವರ್ಗಲೋಕಕ್ಕೆ ಒಡೆಯರಹಂಥಾ ದೇವರ್ಕಳು ಸಕಲಲೋಕಮಹೇಶ್ವರಂ — ಸಮಸ್ತ ಲೋಕಕ್ಕೆ ಒಡೆಯನಹಂಥಾ ಪರಮೇಶ್ವರನನು ಈಶ್ವರೀಂ — ಪರಮೇಶ್ವರಿಯನು ಶರಣಂ — ಮರೆಯೊಗುಹವನು ಏತ್ಯ—ಎಯ್ದಿ, ಕೃತಾಂಜಲಯಃ—ಕೈಮುಗಿಹವನುಳ್ಳವರುಗಳಾಗಿ ಅಸ್ತುವನ್—ಸ್ತೋತ್ರವ ಮಾಡಿದರು. ||೨೨೦||

ಶರಣಾಗತಾನ್—ಶರಣುಹೊಕ್ಕಂಥಾ ತ್ರಿದಶಾನ್ಗಣಾನ್—ದೇವಗಣಂಗಳನು ಕುರಿತು ಪರಮಕಾರುಣಿಕಃ—ಅತ್ಯಂತ ಕರುಣವನುಳ್ಳಂಥಾ ಸ ಪರಮೇಶ್ವರಃ—ಆ ಪರಮೇಶ್ವರನು ಅನುಗತಸ್ಮಿತಲಕ್ಷಣಯಾ—ಬಳಿವಿಡಿದು ಎಯ್ದಲುಪಟ್ಟ ನಗೆಯ ಕುರುಹನುಳ್ಳಂಥಾ ಗಿರಾ — ವಾಕ್ಯದಿಂದ ಶಮಿತಸರ್ವಭಯಂ — ತಗ್ಗಿಸಲುಪಟ್ಟ ಸಮಸ್ತ ಭಯವೆಹಗಹುದಹಗೆ ಸಮಭಾಷತ—ನುಡಿದನು. ||೨೨೧||

---

1 ವರಾನ್ವರಸಹಸ್ರಧಾ (ಘ) [2] ವಿಯೋಗಿನೀವೃತ್ತ. ಇದು ದ್ರುತವಿಲಂಬಿತವೆಂಬ ವೃತ್ತವಾಗುವುದು. ದ್ರುತವಿಲಂಬಿತಮಾಹನಭೌಭರೌ ಎಂದು ಲಕ್ಷಣ (ಸಂ).
3 ದ್ರುತವಿಲಂಬಿತವೃತ್ತ ಪೂರ್ವವಿಲಂಬಿತವೃತ್ತ (ಕ ಖ)

[1]ಯದಿದಮಾಹುರಿಹಾಚರಿತಂ ಸುರೈ-
ರ್ವಿಧಿನಿಯೋಗವಶಾದಿವ ಯಂತ್ರಿತೈಃ
ಶರಣಮೇವ ಗತಾನವಲೋಕ್ಯ ವ-
ಸ್ತದಖಿಲಂ ಕಿಲ ವಿಸ್ಮೃತಮೇವ ನಃ ||೨೨೨||

‡ತದಿಹ ಯೂಯಮಪಿ ಪ್ರಕೃತಂ ಮನ-
ಸ್ಯವಿಗಣಯ್ಯ ವಿಮರ್ದಮಪತ್ರಪಾಃ
ಹರಿವಿರಿಂಚಿ[2]ಸುರೇಂದ್ರಮುಖಾಸ್ಸುರಾಃ
* ಕಿಲ ಸುಖಂ ವ್ರಜತ ದೇವಪುರಂ ಪ್ರತಿ ||೨೨೩||

---

ಯಂತ್ರಿತೈಃ — ಪ್ರಯತ್ನವನುಳ್ಳಂಥಾ ಸುರೈಃ — ದೇವರ್ಕಳಿಂದ ಇಹ—ಈ ನಮ್ಮಲ್ಲಿ ಯತ್ — ಆವುದಾನೊಂದು ಇದಂ — ಈ ಅಪರಾಧವು ಆಚರಿತಂ — ಮಾಡಲುಪಟ್ಟಿತ್ತು, ತತ್ — ಆ ಅಪರಾಧವನು ವಿಧಿನಿಯೋಗವಶಾದಿವ—ದೈವ-ಪ್ರೇರಣೆಯ ಅಧೀನವೆಂದೇ ಆಹುಃ — ಹೇಳುವರು. ಇವ ಶಬ್ದ ಅವ್ಯಯವಾದ ನಿಮಿತ್ತ ಉಚಿತಾರ್ಥವ ನುಡಿವುದು. ಶರಣಮೇವ—ಮರೆಯೋಗುಹವನೇ ಗತಾನ್ —ಎಯ್ದಿದಂಥಾ ವಃ—ನಿಮ್ಮನು ಅವಲೋಕ್ಯ—ನೋಡಿ ತತ್—ಆ ಅಖಿಲಂ —ಸಮಸ್ತವು ನಃ—ನಮಗೆ ವಿಸ್ಮೃತಮೇವ — ಮರೆಯಲುಪಟ್ಟಿತ್ತು. ಕಿಲ— ಆಶ್ಚರ್ಯ. ||೨೨೨||

ಯೂಯಮಪಿ—ನೀವೂ ಇಹ — ಈ ನಮ್ಮಿಂದ ಪ್ರಕೃತಂ—ಮಾಡಿದಂಥಾ ತತ್—ಆ ವಿಮರ್ದನಂ—ಶಿಕ್ಷೆಯನು ಮನಸಿ—ಮನಸ್ಸಿನಲ್ಲಿ ಅವಿಗಣಯ್ಯ— ಎಣಿಸದೇ ಅಪತ್ರಪಾಃ—ಹೋಗಲುಪಟ್ಟ ನಾಚಿಕೆಯನುಳ್ಳವರುಗಳಾಗಿ ಹರಿವಿರಿಂಚಿ ಸುರೇಂದ್ರಮುಖಾಃ — ವಿಷ್ಣು ಬ್ರಹ್ಮ ದೇವೇಂದ್ರ ಮೊದಲಾದಂಥಾ ಸುರಾಃ—ಎಲೆ ದೇವರ್ಕಳಿರಾ! ದೇವಪುರಂ ಪ್ರತಿ—ಸ್ವರ್ಗವನು ಕುರಿತು ಸುಖಂ—ಸುಖವೆಡಗ-ಹುವಹಗೆ (ಸುಖವಹುದೆಹಗಹಗೆ) ವ್ರಜತ ಕಿಲ—ಎಯ್ದಿ. ||೨೨೩||

---

[1] ದ್ರುತವಿಲಂಬಿತ ವೃತ್ತ. ದ್ರುತಪೂರ್ವವಿಲಂಬಿತವೃತ್ತ (ಕ.ಖ.) [2] ಚ(ಘ)

‡ ದ್ರುತವಿಲಂಬಿತ ವೃತ್ತಂ * ಛಂದೋವ್ಯತ್ಯಯವಾಗಿದೆ ಈ ನಾಲ್ಕನೆಯ ಪಾದದಲ್ಲಿ. (ಘ) ದಲ್ಲಿ ಈ 4ನೆಯ ಪಾದವು ' ವ್ರಜತ ದೇವಪುರಂ ಪ್ರತಿಸಂಪ್ರತಿ ' ಎಂದಿದ್ದು ಛಂದೋನುಗುಣವಾಗಿದೆ. ಆದರೆ ಯಾವ ಪ್ರತಿಗಳಲ್ಲೂ 'ಸಂಪ್ರತಿ' ಪದವು ಮೂಲ ಮತ್ತು ವ್ಯಾಖ್ಯಾನಗಳಲ್ಲಿರುವುದಿಲ್ಲ.

§ಇತಿ ಸುರಾನಭಿಧಾಯ ಸುರೇಶ್ವರೋ
ನಿಕೃತದಕ್ಷಕೃತಕ್ರತುರಕ್ರತುಃ
ಸ ಗಿರಿಜಾನುಚರಃ ಸಪರಿಚ್ಛದಃ
ಸ್ಥಿರಧಿಯಾಂ ಪುರತೋಽಂತರಧೀಯತ ||೨೨೪||

§ಅಥ ಸುರಾ ಅಪಿ ತೇ ವಿಗತವ್ಯಥಾಃ
ಕಥಿತಭದ್ರಸುಭದ್ರಪರಾಕ್ರಮಾಃ
ಸಪದಿ ಖೇನ ಸುಖೇನ ಯಥಾ ತಥಾ
ಯಯುರನೇಕಮುಖಂ ಮಘವನ್ಮುಖಾಃ ||೨೨೫||

ವಾಯುರುವಾಚ

ಅಹೋ ವಿಧಿವಿಪರ್ಯಾಸಮಶ್ವಮೇಧೋಽಯಮಧ್ವರಃ
ಯಜಮಾನಃ ಸ್ವಯಂ ದಕ್ಷೋ ಬ್ರಹ್ಮಪುತ್ರಃ ಪ್ರಜಾಪತಿಃ ||೨೨೬||

ಇತಿ—ಈ ಪ್ರಕಾರದಲ್ಲಿ ಸುರಾನ್—ದೇವರ್ಕಳನು ಕುರಿತು ಅಭಿಧಾಯ—ನುಡಿದು ಸುರೇಶ್ವರಃ — ದೇವರ್ಕಳಿಗೊಡೆಯನಹಂಥಾ ನಿಕೃತದಕ್ಷಕೃತಕ್ರತುಃ—ಅಳಿಯಲ್ಪಟ್ಟ ದಕ್ಷಮಾಡಿದ ಯಜ್ಞವನುಳ್ಳಂಥಾ ಅಕ್ರತುಃ—ಕರ್ಮರಹಿತನಹಂಥಾ ಗಿರಿಜಾನುಚರಃ — ಪಾರ್ವತೀದೇವಿಗೆ ಸಂಗಡಿಗನಹಂಥಾ ಸಃ — ಆ ಪರಮೇಶ್ವರನು ಸಪರಿಚ್ಛದಃ — ಪ್ರಮಥಗಣಂಗಳ ಆವರಣದಿಂದ ಸಹಿತನಾಗಿ ಸ್ಥಿರಧಿಯಾಂ—ಸ್ಥಿರಬುದ್ಧಿಯನುಳ್ಳಂಥಾ ದೇವರ್ಕಳ ಪುರತಃ — ಮುಂದೆ ಅಂತರಧೀಯತ — ಅದೃಶ್ಯವಾದನು. ||೨೨೪||

ಅಥ — ಅನಂತರದಲ್ಲಿ ಮಘವನ್ಮುಖಾಃ — ಇಂದ್ರ ಮುಖ್ಯವಾದಂಥಾ ತೇ ಸುರಾ ಅಪಿ — ಆ ದೇವರ್ಕಳುಗಳೂ ವಿಗತವ್ಯಥಾಃ — ಹೋಗಲುಪಟ್ಟ ನೋವನುಳ್ಳವರುಗಳಾಗಿ ಕಥಿತಭದ್ರಸುಭದ್ರಪರಾಕ್ರಮಾಃ—ಕೊಂಡಾಡಲು ಪಟ್ಟ ವೀರಭದ್ರನ ಒಪ್ಪುತ್ತಂವಿದ್ದ ಪರಾಕ್ರಮವನುಳ್ಳವರಾಗುತವು ಸಪದಿ — ಆ ಕ್ಷಣದಲ್ಲಿ ಸುಖೇನ ಯಥಾ ತಥಾ—[1]ಸುಖದಿಂದೇಗಹುದೋ ಹಾಂಗೆ ಖೇನ—ಆಕಾಶಮಾರ್ಗದಿಂದ ಅನೇಕಮುಖಂ—ಹಲವು ಮುಖವಾಗಿ ಯಯುಃ—ಎಯ್ದಿದರು. ||೨೨೫||

ವಾಯುರುವಾಚ—ವಾಯು ನುಡಿವುತ್ತಿದ್ದಾನು.

ಅಯಂ—ಇದು ಅಶ್ವಮೇಧೋಽಧ್ವರಃ — ಅಶ್ವಮೇಧಯಜ್ಞವು. ಬ್ರಹ್ಮಪುತ್ರಃ—ಬ್ರಹ್ಮನ ಪುತ್ರನಹಂಥಾ ದಕ್ಷಃ ಪ್ರಜಾಪತಿಃ ಸ್ವಯಂ — ದಕ್ಷಪ್ರಜಾಪತಿ

§ ದ್ರುತವಿಲಂಬಿತವೃತ್ತ [1] ಸುಖದಿಂದ ಹೆಂಗಹುದು ಹಾಂಗೆ (ಖ)

ಧರ್ಮಾದಯಃ ಸದಸ್ಯಾಶ್ಚ ರಕ್ಷಿತಾ ಗರುಡಧ್ವಜಃ
ಭಾಗಾಂಶ್ಚ ಪ್ರತಿಗೃಹ್ಣಂತಿ ಸಾಕ್ಷಾದಿಂದ್ರಾದಯಸ್ಸುರಾಃ ||೨೨೭||

ತಥಾಽಪಿ ಯಜಮಾನಸ್ಯ ಸಯಜ್ಞಸ್ಯ ಸಹರ್ತ್ವಿಜಃ
ಸದ್ಯ ಏವ ಶಿರಚ್ಛೇದಃ ಸಾಧು ಸಂಪದ್ಯತೇ ಫಲಮ್ ||೨೨೮||

ಕೃತ್ವಾ ಚ ಸುಮಹತ್ಪುಣ್ಯಮಿಷ್ಟ್ವಯಜ್ಞಶತೈರಪಿ
ನ ತತ್ಫಲಮವಾಪ್ನೋತಿ ಭಕ್ತಿಹೀನೋ ಯದೀಶ್ವರೇ ||೨೨೯||

ಕೃತ್ವಾಽಪಿ ಸುಮಹತ್ಪಾಪಂ ಭಕ್ತ್ಯಾ ಯಜತಿ ಯಃ ಶಿವಮ್
ಮುಚ್ಯತೇ ಪಾತಕೈಃ ಸರ್ವೈರ್ನಾತ್ರ ಕಾರ್ಯಾ ವಿಚಾರಣಾ ||೨೩೦||

---

ತಾನೇ ಯಜಮಾನಃ—ಯಜ್ಞವ ಮಾಡುವಾತನು. [1] [ ತಥಾಽಪಿ—ಹಾಗಿದ್ದರೂ ವಿಧಿವಿಪರ್ಯಾಸಂ—ವಿಧಿಯ ವಿಪರೀತವರ್ತನೆಯು ಅಹೋ—ಆಶ್ಚರ್ಯವು. ] [2]

ಧರ್ಮಾದಯಃ — ಧರ್ಮರಾಜ ಮೊದಲಾದಂಥಾವರುಗಳು ಸದಸ್ಯಾಶ್ಚ — ಸಭೆಯಲ್ಲಿಹವರುಗಳು. ಗರುಡಧ್ವಜಃ—ವಿಷ್ಣು ರಕ್ಷಿತಾ—ಯಾಗವ ರಕ್ಷಿಸುವಾತನು. ಇಂದ್ರಾದಯಃ—ಇಂದ್ರನೇ ಮೊದಲಾದಂಥಾ ಸುರಾಃ—ದೇವರ್ಕಳು ಸಾಕ್ಷಾತ್— ಪ್ರತ್ಯಕ್ಷವಾಗಿ ಭಾಗಾಂಶ್ಚ—ಹವಿರ್ಭಾಗಗಳನು ಪ್ರತಿಗೃಹ್ಣಂತಿ—ಸ್ವೀಕರಿಸುತ್ತಿದ್ದರು.

ತಥಾಽಪಿ—ಹಾಂಗಾಯಿತ್ತಾದರು ಸಯಜ್ಞಸ್ಯ—ಯಾಗದಿಂದ ಸಹಿತನಹಂಥಾ ಸಹರ್ತ್ವಿಜಃ—ಋತ್ವಿಕ್ಕುಗಳೊಡನೆ ಕೂಡಿದಂಥಾ ಯಜಮಾನಸ್ಯ—ಯಜಮಾನನ ಹಂಥಾ ದಕ್ಷನ ಶಿರಃ—ಶಿರಸ್ಸು ಸದ್ಯ ಏವ—ಆ ಕ್ಷಣದಲ್ಲಿಯೇ ಛೇದಃ—ಛೇದಿಸಲು ಪಟ್ಟಿತ್ತು. ಫಲಂ — ಯಜ್ಞಫಲವು ಸಾಧು—ಲೇಸಾಗಿ ಸಂಪದ್ಯತೇ—ಆಗಲು- ಪಟ್ಟಿತ್ತು. ವಿಧಿವಿಪರ್ಯಾಸಂ — ವಿಧಿಯ ( ದೈವಮಾಡುವಂಥಾ ) ವಿಪರೀತವು ಅಹೋ—ಆಶ್ಚರ್ಯವು ಈ ಮೂರು ಶ್ಲೋಕ ಕುಳಕವು. || ೨೨೮||

ಇಷ್ಟ್ವಯಜ್ಞಶತೈರಪಿ = ಇಷ್ಟವಹಂಥಾ ನೂರು ಯಾಗಂ(ಯಜ್ಞಂ) ಗಳಿಂದವೂ ಸುಮಹತ್ = ಬಹಳವಹಂಥಾ ಪುಣ್ಯಂ ಚ = ಪುಣ್ಯವನು ಕೃತ್ವಾ = ಮಾಡಿ ಯದಿ = ಎತ್ತಲಾನು ಈಶ್ವರೇ = ಪರಮೇಶ್ವರನಲ್ಲಿ ಭಕ್ತಿಹೀನೇ ಸತಿ = ಭಕ್ತಿ ಇಲ್ಲ(ದಿರಲು) ದಾತನಾಗುತ್ತಿರಲು ತತ್ಫಲಂ = ಆ ಯಜ್ಞಫಲವನು ನ ಅಪ್ನೋತಿ = ಪಡವುತ್ತಿರನು.

ಯಃ = ಆವನಾನೊಬ್ಬನು ಸುಮಹತ್ಪಾಪಂ = ಅತಿ ಬಹಳವಹಂಥಾ ಪಾಪವ- ನಾಯಿತ್ತಾದರೂ ಕೃತ್ವಾ = ಮಾಡಿ ಭಕ್ತ್ಯಾ = ಭಕ್ತಿಯಿಂದ ಶಿವಂ = ಶಿವನನು

---

1 ಈ ಭಾಗದ ವ್ಯಾಖ್ಯಾನ ಬಿಟ್ಟುಹೋಗಿದೆ. ೨೨೮ನೇ ಶ್ಲೋಕದ ವ್ಯಾಖ್ಯಾನ ನೋಡಿರಿ.

ಬಹುನಾತ್ರ ಕಿಮುಕ್ತೇನ ವೃಥಾ ದಾನಂ ವೃಥಾ ತಪಃ
ವೃಥಾ ಯಜ್ಞೋ ವೃಥಾ ಹೋಮಃ ಶಿವನಿಂದಾರತಸ್ಯ ತು ||೨೩೦||

ತಸ್ಮಾನ್ನಾವೇದನಿರ್ದಿಷ್ಟಂ ನ ಚೇಶ್ವರಬಹಿಷ್ಕೃತಮ್
ನಾಸತ್ಪರಿಗೃಹೀತಂ ಚ ಕರ್ಮ ಕುರ್ಯಾತ್[1] ಕದಾಚನ ||೨೩೨||

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ-
ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ-
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ
ಶಿವಾಧಿಕ್ಯಕಥನೇ 'ದಕ್ಷಾಧ್ವರಧ್ವಂಸನಂ ನಾಮ'
ಷೋಡಶೋಽಧ್ಯಾಯಃ

---

ಯಜತಿ = ಪೂಜಿಸುತ್ತಿಹನು. [ಅವನು] ಸರ್ವೈಃ ಪಾತಕೈಃ = ಸಮಸ್ತ ಪಾತಕಂಗಳಿಂದ ಮುಚ್ಯತೇ = ಮುಕ್ತನಾಗು (ಬಿಡಲುಪಡು) ತ್ತಿಹನು. ಅತ್ರ ವಿಚಾರಣಾ ನ ಕಾರ್ಯಾ = *ಈ ಹೇಳಿದ ಅರ್ಥದಲ್ಲಿ [ವಿಚಾರಣೆಮಾಡಬೇಕಿಲ್ಲ]* ||೨೩೮||

ಅತ್ರ = ಇಲ್ಲಿ ಬಹುನಾ ಉಕ್ತೇನ ತು = ಹಲವು ನುಡಿದುದರಿಂದ ಕಿಂ = ಏನು ಪ್ರಯೋಜನವು. ಶಿವನಿಂದಾರತಸ್ಯ = ಶಿವನ ನಿಂದಿಸುವಲ್ಲಿ ತಾತ್ಪರ್ಯವನುಳ್ಳಂಥಾತನ ದಾನಂ = ದಾನವು ವೃಥಾ = ವ್ಯರ್ಥವು. ತಪಃ = ತಪಸ್ಸು ವೃಥಾ = ವ್ಯರ್ಥವು. ಯಜ್ಞಃ = ಯಜ್ಞವು ವೃಥಾ = ವ್ಯರ್ಥವು. ಹೋಮಃ = ಹೋಮವು ವೃಥಾ = ವ್ಯರ್ಥವು. ||೨೩೦||

ತಸ್ಮಾತ್ = ಅದು ಕಾರಣವಾಗಿ ಅವೇದನಿರ್ದಿಷ್ಟಂ = ವೇದದಲ್ಲಿ ಹೇಳದೇ ಇದ್ದಂಥಾ ಕರ್ಮ = ಕರ್ಮವನು ಕದಾಚನ = ಒಂದು ಬಾರಿಯೂ ನ ಕುರ್ಯಾತ್ = ಮಾಡಲಾಗದು. ಈಶ್ವರಬಹಿಷ್ಕೃತಂ ಚ = ಈಶ್ವರ ಹೊರತಾಗಿ ಮಾಡಲು-ಪಟ್ಟಂಥಾ ಕರ್ಮ = ಕರ್ಮವನು ನ ಕುರ್ಯಾತ್ = ಮಾಡಲಾಗದು. ಅಸತ್ ಪರಿಗೃಹೀತಂ ಚ = ಸತ್ಪುರುಷ[1]ರಲ್ಲದವರಿಂದ ಪರಿಗ್ರಹಿಸಲ್ಪಟ್ಟುದಾಯಿತ್ತಾದರೂ [2]ಕದಾಚನ[2] = ಒನ್ನೊಮ್ಮೆಯಾಯಿತ್ತಾದರೂ[1] ನ ಕುರ್ಯಾತ್ = ಮಾಡಲಾಗದು.

---

[1] ನ ಕದಾಚನ (ಖ) * ಕಾರ್ಯವು ವಿಚಾರಿಸಲಿಲ್ಲ (ಖ). (ಕ)ದಲ್ಲಿ ಲುಪ್ತ

[1] ರುಗಳು ಅಂಗೀಕರಿಸದೆ ಯಿದ್ದಂಥಾ ಕರ್ಮವನು (ಖ).

# ಅಥ ಸಪ್ತದಶೋಽಧ್ಯಾಯಃ

## ( ಶರಭಲೀಲಾ )

ಸ್ಕಾಂದೇ ಕಾಲಿಕಾಖಂಡೇ ಋಷಯ ಊಚುಃ

ಕಥಂ ದೇವೋ ಮಹಾದೇವೋ ವಿಶ್ವಸಂಹಾರಕಾರಕಃ
ಶರಭಾಖ್ಯಂ ಮಹಾಘೋರಂ ವಿಕೃತಂ ರೂಪಮಾಸ್ಥಿತಃ ||೧||

ಕಿಮರ್ಥಂ ಕೀದೃಶಂ ಕೇನ ಹೇತುನಾ ಲೋಕಭೀಷಣಮ್
ಕಿಂ ಕಿಂ ವೀರ್ಯಂ ಕೃತಂ ತೇನ ಬ್ರೂಹಿ ಬ್ರಹ್ಮನ್ನಶೇಷತಃ ||೨||

ಸೂತ ಉವಾಚ—

---

ಸ್ಕಾಂದೇ ಕಾಲಿಕಾಖಂಡೇ ಋಷಯ ಊಚುಃ = ಸ್ಕಾಂದಪುರಾಣದಲ್ಲಿ ಕಾಳಿಕಾ-ಖಾಂಡದಲ್ಲಿ ನೈಮಿಶಾರಣ್ಯವಾಸಿಗಳಹಂಥಾ ಋಷಿಗಳು ನುಡಿವುತ್ತಿದ್ದಾರು.

ದೇವಃ = ಪ್ರಕಾಶಸ್ವರೂಪನಹಂಥಾ ವಿಶ್ವಸಂಹಾರಕಾರಕಃ = [1]ಸಮಸ್ತ ಲೋಕ[1]ಸಂಹಾರಕನಹಂಥಾ ಮಹಾದೇವಃ = ಪರಮೇಶ್ವರನು ಶರಭಾಖ್ಯಂ = ಶರಭನೆಂಬ ಹೆಸರನುಳ್ಳಂಥಾ ಮಹಾಘೋರಂ = ಅತಿ ಭಯಂಕರವಹಂಥಾ ವಿಕೃತಂ = ವಿಕಾರವಹಂಥಾ ರೂಪಂ = ರೂಪನು ಕಥಂ = ಹೇಂಗೆ ಆಸ್ಥಿತಃ = ಮಾಡಿಕೊಂಡನು. ||೧||

ಕೇನ ಹೇತುನಾ = ಆವ ಕಾರಣದಿಂದ ಕಿಮರ್ಥಂ = ಆವುದಕ್ಕೋಸ್ಕರ ಲೋಕಭೀಷಣಂ = ಲೋಕಕ್ಕೆ ಭಯಂಕರವಹಂಥಾ ಕೀದೃಶಂ = ಎಂಥಾ ರೂಪಾ-[2]ಯಿತ್ತು? ಕಿಂ ವೀರ್ಯಂ = ಎಂಥಾ ಪರಾಕ್ರಮುವನುಳ್ಳದು ?[2] ತೇನ = ಆ ಶರಭ ರೂಪಿಂದ ಕಿಂ ಕೃತಂ = ಏನು ಮಾಡಲುಪಟ್ಟಿತ್ತು ? ಭೋ ಬ್ರಹ್ಮನ್ = ಎಲೆ ಬ್ರಹ್ಮಋಷಿಯೇ ! ಅಶೇಷತಃ = ಸಮಸ್ತವನು ಬ್ರೂಹಿ = ಹೇಳು. ||೨||

ಸೂತಉವಾಚ = ಸೂತಮುನಿಯು ನುಡಿದನು

---

[1] ಸರ್ವ (ಕ) [2] ಲುಪ್ತ (ಕ)

ಶೃಣುಧ್ವಂ ಋಷಯಸ್ಸರ್ವೇ ಕಥಾಮಾಶ್ಚರ್ಯಕಾರಿಣೀಮ್
ಸರ್ವಪಾಪಪ್ರಶಮನೀಂ ಸರ್ವದುಃಖನಿವಾರಿಣೀಮ್ ||೩||

ಪುರಾ ಸನತ್ಕುಮಾರಾಯ ನಂದೀ ಚಾಖ್ಯಾತವಾನಿಮಾಮ್
ಸನತ್ಕುಮಾರಾಚ್ಛ್ರುತವಾನ್ ವ್ಯಾಸಸ್ತಸ್ಮಾನ್ಮುನೇರಹಮ್ ||೪||

ಕೇನಾಪಿ ಹೇತುನಾ ಪೂರ್ವಂ ಪುರಾಣಃ ಪುರುಷೋತ್ತಮಃ
ಸಹಸ್ರಮೂರ್ತಿರ್ವಿಶ್ವಾತ್ಮಾ ಜಗತ್ಸೃಷ್ಟ್ಯಾದಿಕಾರಕಃ ||೫||

ವಿಕೃತಂ ಭೀಷಣಂ ರೂಪಮುಗ್ರಂ ವೀರ್ಯೋಜ್ಜ್ವಲಂ ಮುಖಮ್
ದಂಷ್ಟ್ರಾಕರಾಲಂ ದುರ್ದರ್ಶಮತಿರೌದ್ರಂ ಮಹಾಭಯಮ್ ||೬||

---

ಸರ್ವೇ ಋಷಯಃ = ಎಲೆ ಸಮಸ್ತ ಋಷಿಗಳಿರಾ ! ಸರ್ವಪಾಪಪ್ರಶಮನೀಂ = ಸಮಸ್ತ ಪಾಪಂಗಳ ಕೆಡಿಸುತ್ತಿದ್ದಂಥಾ ಸರ್ವದುಃಖನಿವಾರಿಣೀಂ = ಸಮಸ್ತ ದುಃಖಂಗಳ ತೊಲಗಿಸುತ್ತಿದ್ದಂಥಾ ಆಶ್ಚರ್ಯಕಾರಿಣೀಂ = ಆಶ್ಚರ್ಯವ ಮಾಡುತ್ತಿದ್ದಂಥಾ ಕಥಾಂ = ಕಥೆಯನು ಶೃಣುಧ್ವಂ = ಕೇಳಿ. ||೩||

ಪುರಾ = ಪೂರ್ವದಲ್ಲಿ ನಂದೀ ಚ = ನಂದಿಕೇಶ್ವರನು ಇಮಾಂ = ಈ ಕಥೆಯನು ಸನತ್ಕುಮಾರಾಯ = ಸನತ್ಕುಮಾರಂಗೋಸ್ಕರ ಆಖ್ಯಾತವಾನ್ = ಹೇಳಿದನು. ಸನತ್ಕುಮಾರಾತ್ = ಸನತ್ಕುಮಾರನ ದೆಸೆಯಿಂದ ವ್ಯಾಸಃ = ವೇದವ್ಯಾಸಋಷೀಶ್ವರನು ಶ್ರುತವಾನ್ = ಕೇಳಿದನು. ತಸ್ಮಾನ್ಮುನೇಃ = ಆ ವೇದವ್ಯಾಸ ಋಷಿಯ ದೆಸೆಯಿಂದ ಅಹಂ = ನಾನು ಕೇಳಿದೆನು. ||೪||

ಕೇನ ಹೇತುನ್ನಾಪಿ = ಆವುದಾನೊಂದು ಕಾರಣದಿಂದವೂ ಪೂರ್ವಂ = ಪೂರ್ವದಲ್ಲಿ ಸಹಸ್ರಮೂರ್ತಿಃ = ಸಹಸ್ರಸ್ವರೂಪನಹಂಥಾ ವಿಶ್ವಾತ್ಮಾ = ವಿಶ್ವರೂಪನಹಂಥಾ ಜಗತ್ಸೃಷ್ಟ್ಯಾದಿಕಾರಕಃ = ಲೋಕಸೃಷ್ಟಿ ಮೊದಲಾದಂಥಾವ ಮಾಡುತ್ತಿದ್ದಂಥಾ ಪುರಾಣಃ ಪುರುಷೋತ್ತಮಃ = ಪುರಾಣಪುರುಷೋತ್ತಮನು. ||೫||

ವಿಕೃತಂ = ವಿಕಾರವಹಂಥಾ ಭೀಷಣಂ ರೂಪಂ = ಭಯಂಕರರೂಪವನುಳ್ಳಂಥಾ ಉಗ್ರಂ = ಉಗ್ರವಹಂಥಾ ವೀರ್ಯೋಜ್ಜ್ವಲಂ = ಪರಾಕ್ರಮದಿಂದ ಜ್ವಲಿಸುತ್ತಿದ್ದಂಥಾ ದಂಷ್ಟ್ರಾಕರಾಳಂ = ದಾಡೆಗಳಿಂದ ಭಯಂಕರವಹಂಥಾ ಮುಖಂ

ನೃಸಿಂಹರೂಪಮಾಸ್ಥಾಯ ಹಿರಣ್ಯಾಖ್ಯಂ ಮಹಾಸುರಮ್
ಹಂತಾರಂ ಸರ್ವಲೋಕಾನಾಮವಧೀದ್ದರ್ಪವಿಹ್ವಲಮ್ ||೭||

ತತಸ್ತು ಭಗವಾನ್ವಿಷ್ಣುರತಿರೌದ್ರಂ ಮಹಾಬಲಮ್
ನಿಯಂತುಮಥವಾ ಸೋಢುಂ ನ ಶಶಾಕ ವಿಜೃಂಭಿತಮ್ ||೮||

ತೇನ ರೌದ್ರೇಣ ಮಹತಾ ಸರ್ವಲೋಕಾಶ್ಚಕಂಪಿರೇ
ಚುಕ್ಷುಭುಸ್ಸಾಗರಾಸ್ಸರ್ವೇ ವಿನೇಶುಸ್ಸರ್ವದೇವತಾಃ ||೯||

ತತೋ ಬ್ರಹ್ಮಾದಯಸ್ಸರ್ವೇ ಸಂಭೂಯ ಪರಮೇಶ್ವರಮ್
ಆತ್ಮತ್ರಾಣಾಯ ಶರಣಂ ಜಗ್ಮುಃ ಪರಮಕಾರಣಮ್ ||೧೦||

---

= ಮುಖವನುಳ್ಳಂಥಾ ದುರ್ದರ್ಶಂ = ನೋಡಲು ಬಾರದೇಇದ್ದಂಥಾ [1]ಅತಿರೌದ್ರಂ = ಅತ್ಯಂತ ರೌದ್ರವಹಂಥಾ[1] ಮಹಾಭಯಂ = ಅತಿಭಯಂಕರವಹಂಥಾ ||೬||

ನೃಸಿಂಹರೂಪಂ = ನರಸಿಂಹರೂಪನು ಅಸ್ಥಾಯ = ಮಾಡಿಕೊಂಡು ಸರ್ವಲೋಕಾನಾಂ = ಸಮಸ್ತಲೋಕಂಗಳ ಹಂತಾರಂ = ಕೊಲುತ್ತಿದಂಥಾ ಹಿರಣ್ಯಾಖ್ಯಂ = ಹಿರಣ್ಯನೆಂಬ ಹೆಸರನುಳ್ಳಂಥಾ ದರ್ಪವಿಹ್ವಲಂ = ಗರ್ವದಿಂದ ಮುಂದರಿಯದಂಥಾ ಮಹಾಸುರಂ = ಮಹಾದೈತ್ಯನನು ಅವಧೀತ್ = ಕೊಂದನು. ವಧ + ತಾಡನೇ ಎಂಬ ಧಾತು. ||೭||

ತತಃ = ಅಷ್ಟರ ಮೇಲೆ ಭಗವಾನ್ = ಭಗವಾನ್ನುವಹಂಥಾ ವಿಷ್ಣುಸ್ತು = ವಿಷ್ಣುವು ಅತಿರೌದ್ರಂ = ಅತ್ಯಂತ ರೌದ್ರನಹಂಥಾ ವಿಜೃಂಭಿತಂ = ಹೆಚ್ಚಿದಂಥಾ ಮಹಾಬಲಂ = ಮಹಾಸತ್ತ್ವವನು ನಿಯಂತುಂ = ಹವಣಿಸಿಕೊಳಲೋಸ್ಕರ ಅಥವಾ ಅಲ್ಲದಿದ್ದ ಪಕ್ಷದಲ್ಲಿ ಸೋಢುಂ = ಸೈರಿಸಲು ನ ಶಶಾಕ = ಸಮರ್ಥನಾದದಿಲ್ಲ. ||೮||

ಮಹತಾ = ಬಹಳವಹಂಥಾ ತೇನ ರೌದ್ರೇಣ = ಆ ರೌದ್ರದಿಂದ ಸರ್ವಲೋಕಾಃ = ಸಮಸ್ತಲೋಕಂಗಳೂ ಚಕಂಪಿರೇ = ನಡುಗಿದವು. ಸರ್ವೇ ಸಾಗರಾಃ = ಸಮಸ್ತ ಸಮುದ್ರಂಗಳೂ ಚುಕ್ಷುಭುಃ = ಕದಡಿದವು. ಸರ್ವದೇವತಾಃ = ಸಮಸ್ತ ದೇವರ್ಕಳುಗಳೂ ವಿನೇಶುಃ = ನಷ್ಟವಾದರು. ||೯||

ತತಃ = ಅಷ್ಟರಮೇಲೆ ಬ್ರಹ್ಮಾದಯಃ = ಬ್ರಹ್ಮ ಮೊದಲಾದಂಥಾ ಸರ್ವೇ = ಸಮಸ್ತ ದೇವತೆಗಳು ಪರಮೇಶ್ವರಂ = ಪರಮೇಶ್ವರನನು ಸಂಭೂಯ =

---

[1] ಲುಪ್ತ (ಕ)

ಮಂದರಸ್ಥಂ ಮಹಾದೇವಂ ಕ್ರೀಡಮಾನಂ ಸಹೋಮಯಾ
ಸೇವಿತಂ ಗಣಗಂಧರ್ವೈಃ ಸಿದ್ಧೈರಪ್ಸರಸಾಂ ಗಣೈಃ ||೧೧||

ದೇವತಾಭಿಸ್ಸಹ ಬ್ರಹ್ಮಾ ಭೀತಭೀತಃ ಸಗದ್ಗದಃ
ಪ್ರಣಮ್ಯ ದಂಡವದ್ಭೂಮೌ ತುಷ್ಟಾವ ಪರಮೇಶ್ವರಮ್ ||೧೨||

ಬ್ರಹ್ಮೋವಾಚ—

ನಮಸ್ತೇ ಕಾಲಕಾಲಾಯ ನಮಸ್ತೇ ರುದ್ರ ಮನ್ಯವೇ
ನಮಶ್ಶಿವಾಯ [1]ಸ[1]ರ್ವಾಯ ಶಂಕರಾಯ [2]ಹರಾಯ[2] ತೇ ||೧೩||

---

ಎಯ್ದಿ ಆತ್ಮತ್ರಾಣಾಯ = ತನ್ನ ರಕ್ಷಣೆಗೋಸ್ಕರ ಪರಮಕಾರಣಂ = ಪರಮ-ಕಾರಣಿಕನಹಂಥಾ ಶಿವನನು ಕುರಿತು ಶರಣಂ = ಮರೆಹೋಗುಹವನು ಜಗ್ಮುಃ = ಎಯ್ದಿದರು. ||೧೦||

ಮಂದರಸ್ಥಂ = ಮಂದರಪರ್ವತದಲ್ಲಿ ಇದ್ದಂಥಾ ಉಮಯಾ ಸಹ = ಪಾರ್ವತಿಯೊಡನೆ ಕ್ರೀಡಮಾನಂ = ಕ್ರೀಡಿಸುತ್ತಿದ್ದಂಥಾ ಗಣಗಂಧರ್ವೈಃ = ಗಣಂಗಳು ಗಂಧರ್ವರುಗಳಿಂದ ಸಿದ್ಧೈಃ = ಸಿದ್ಧರುಗಳಿಂದ ಅಪ್ಸರಸಾಂ ಗಣೈಃ = ಅಪ್ಸರ[3]ಸಮೂಹಂ[3]ಗಳಿಂದ ಸೇವಿತಂ = ಓಲೈಸಿಕೊಳಲುಪಡುತ್ತಿದ್ದಂಥಾ ಮಹಾದೇವಂ = ಪರಮೇಶ್ವರನನು ಸಂಭೂಯ = ಎಯ್ದಿ, ||೧೧||

ಬ್ರಹ್ಮಾ = ಬ್ರಹ್ಮನು ದೇಪತಾಭಿಃಸಹ = ದೇವರ್ಕಳಿಂದ ಸಹಿತನಾಗಿ ಭೀತಭೀತಃ = ಅಂಜುತಂಜುತವು ಸಗದ್ಗದಃ = ಗದ್ಗದ ಸ್ವರದೊಡನೆ ಕೂಡಿದಾತನಾಗುತ್ತವು ಭೂಮೌ = ಭೂಮಿಯಲ್ಲಿ ದಂಡವತ್ಪ್ರಣಮ್ಯ = ದಂಡದೋಪಾದಿ ಪ್ರಣಾಮವಮಾಡಿ ಪರಮೇಶ್ವರಂ = ಪರಮೇಶ್ವರನನು ತುಷ್ಟಾವ = ಸ್ತೋತ್ರವಮಾಡಿದನು. ||೧೨||

ಕಾಲಕಾಲಾಯ = ಕಾಲಂಗೆ ಕಾಲನಹಂಥಾತನೇ ! ತೇ = ನಿನಗೋಸ್ಕರ ನಮಃ = ನಮಸ್ಕಾರವು. ಭೋ ರುದ್ರ = ಎಲೈ = ಎಲೈ ರುದ್ರನೇ ಮನ್ಯವೇ = ಕೋಪವನುಳ್ಳಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು. ಶಿವಾಯ = ಮಂಗಳಸ್ವರೂಪನಹಂಥಾ ಸರ್ವಾಯ = ವಿಶ್ವಾತ್ಮಕನಹಂಥಾ ಶಂಕರಾಯ = ಸುಖವನು ಮಾಡುತ್ತಿದ್ದಂಥಾ ಹರಾಯ ಸಂಹಾರವನು ಮಾಡುತ್ತಿದ್ದಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು. ||೧೩||

---

1 ಶ (ಗ ಘ) 2 ಶಿವಾಯ (ಘ) (ಕ.ಖ. ಮೂಲಪಾಠಃ) 3 ರು (ಕ)

ಉಗ್ರೋऽಸಿ ಸರ್ವದುಷ್ಟಾನಾಂ ನಿಯಂತಾऽಸಿ ಶಿವೋऽಸಿ ನಃ
ಕಾಲಕೂಟಾದಿವ ಪುರಾ ತ್ರಾಹಿ ನಃ ಶರಣಾಗತಾನ್ ||೧೪||

ಪ್ರಬೋಧಕೋऽಸಿ ಮೇ ವಿಷ್ಣೋರವಲೇಪಹರೋ ಹರ
ಶುಕವತ್ತವ ವಿಶ್ವೇಶ ಕ್ರೀಡಾಯೈ ಕೇವಲಂ ವಯಮ್ ||೧೫||

ತವೋನ್ಮೇಷನಿಮೇಷಾಭ್ಯಾಂ ಅಸ್ಮಾಕಂ ಪ್ರಲಯೋದಯೌ
ಉನ್ಮೀಲಿತೇ ತ್ವಯಿ[1] ಬ್ರಹ್ಮನ್[1] ವಿನಾಶೋ ನಾಸ್ತಿ ನಶ್ಶಿವ ||೧೬||

ಸಂತಪ್ತಾಸ್ಸ್ಮೋ ವಯಂ ದೇವ ಹರಿಣಾऽಮಿತತೇಜಸಾ
ಸರ್ವಲೋಕೋಪಕಾರಾಯ ತಂ ಚ ತ್ವಂ [2]ಹಂತುಮರ್ಹಸಿ[2] ||೧೭||

---

ಸರ್ವದುಷ್ಟಾನಾಂ—ಸಮಸ್ತ ದುಷ್ಟರುಗಳಿಗೆ ಉಗ್ರಃ—ಉಗ್ರನು ಅಸಿ—ಆಗುತ್ತಿಹೆ. ನಿಯಂತಾ=ಶಿಕ್ಷಿಸುವಾತನು ಅಸಿ=ಆಗುತ್ತಿಹೆ. ನಃ=ನಮಗೆ ಶಿವಃ=ಮಂಗಳ ಸ್ವರೂಪನು ಅಸಿ=ಆಗುತ್ತಿಹೆ. ಪುರಾ=ಪೂರ್ವದಲ್ಲಿ ಕಾಲ-ಕೂಟ [3]ವಿಷದ[3] ಭೀತಿಯು ದೆಸೆಯಿಂದಕ್ಕೈ ಎಂಬ ಹಾಂಗೆ ಶರಣಾಗತಾನ್=ಮರೆ-ಹೊಕ್ಕಂಥಾ ನಃ=ನಮ್ಮನು ತ್ರಾಹಿ=ರಕ್ಷಿಸು. ||೧೪||

ಭೋ ಹರ=ಎಲೆ ಸಂಹಾರಕರ್ತೃವಹಂಥಾ ದೇವನೇ ಮೇ=ಎನ್ನ, ವಿಷ್ಣೋಃ =ವಿಷ್ಣುವಿನ ಅವಲೇಪಹರಃ=ಗರ್ವವ ಕೆಡಿಸುವಾತನು. ಪ್ರಬೋಧಕಃ= ಬೋಧಿಸುವಾತನು ಅಸಿ=ಆಗುತ್ತಿಹೆ. ಭೋ ವಿಶ್ವೇಶ=ಎಲೇ ವಿಶ್ವಕ್ಕೊಡೆಯನೇ ವಯಂ=ನಾವು ತವ=ನಿನ್ನ ಕ್ರೀಡಾಯೈ=ಆಟಕ್ಕೋಸ್ಕರ ಕೇವಲಂ= ಬರಿಯ ಶುಕವತ್=ಗಿಣಿಯೋಪಾದಿಯಾದೆವು. ||೧೫||

ಭೋ ಬ್ರಹ್ಮನ್=ಎಲೆ ಪರಬ್ರಹ್ಮಸ್ವರೂಪನೇ ತವ=ನಿನ್ನ ಉನ್ಮೇಷ-ನಿಮೇಷಾಭ್ಯಾಂ=ಕಣ್ಣ ತೆರಹ ಮುಚ್ಚುಹಂಗಳಿಂದ ಅಸ್ಮಾಕಂ=ನಮಗೆ ಪ್ರಳಯೋ-ದಯೌ=ಪ್ರಳಯ ಉತ್ಪತ್ತಿಗಳು. ಭೋ ಶಿವ=ಎಲೈ ಶಿವನೇ ತ್ವಯಿ=ನೀನು ಉನ್ಮೀಲಿತೇ ಸತಿ=ಕಣ್ಣ ತೆರವುತ್ತಂವಿರಲು ನಃ=ನಮಗೆ ವಿನಾಶಃ=ಲಯವು ನಾಸ್ತಿ=ಇಲ್ಲ. ||೧೬||

ಭೋ ದೇವ=ಎಲೆ ದೇವನೇ ಅಮಿತತೇಜಸಾ=ಹೆವಣಿಸಲುಬಾರದೇ ಇದ ತೇಜಸ್ಸನುಳ್ಳಂಥಾ ಹರಿಣಾ=ಹರಿಯಿಂದ ವಯಂ=ನಾವು ಸಂತಪ್ತಾಃ=[4]

---

[1] ಬ್ರಹ್ಮ (ಘ) [2] ಹರ್ತುಮರ್ಹಸಿ (ಕ. ವ್ಯಾಖ್ಯಾನ ಪಾಠ) [4] ವಿಷನೊದಲಾದಂಥಾ(ಕ)

ಏವಮಭ್ಯರ್ಥಿತೋ ದೇವೈಃ ಮತಿಂ ಚಕ್ರೇ ಕೃಪಾಲಯಃ
ತಮಜೋ ನರಸಿಂಹಾಖ್ಯಂ ಸಂಹರ್ತುಂ ಪರಮೇಶ್ವರಃ ||೧೮||

ತದರ್ಥಂ ಸ್ಮೃತವಾನ್ ರುದ್ರೋ ವೀರಭದ್ರಂ ಮಹಾಬಲಮ್
ಆತ್ಮನೋ ಭೈರವಂ ತತ್ತ್ವಂ ಮಹಾಪ್ರಳಯಕಾರಕಮ್ ||೧೯||

ಆಜಗಾಮ ಪುರಃ ಸದ್ಯೋ ಗಣಾನಾಮಗ್ರಣೀರ್ಹಸನ್
ಅಟ್ಟಹಾಸ್ಯೈರ್ಗಣವರ್ಯೈಃ ಉತ್ಪತದ್ಭಿರಿತಸ್ತತಃ ||೨೦||

---

ಬೇಕಾಗಿದ್ದಂಥಾವರುಗಳು ಸ್ಮಃ = ಆಗುತ್ತಿದ್ದೇವು. ಅಸ – ಭುವಿ ಇತಿ ಧಾತುಃ ಲಟ್ ಪರಸ್ಮೈಪದವು. ಸರ್ವಲೋಕೋಪಕಾರಾಯ = ಸಮಸ್ತ ಲೋಕಕ್ಕೆ ಉಪಕಾರವ ಮಾಡಲೋಸ್ಕರ ತಂ ಚ = ಆ ನೃಸಿಂಹನನು ತ್ವಂ = ನೀನು ಹರ್ತುಂ = ಸಂಹರಿಸಲು ಅರ್ಹಸಿ = ಯೋಗ್ಯನಾಗುತ್ತಿಹೆ. ||೭||

ಏವಂ = ಈ ಪ್ರಕಾರದಲ್ಲಿ ದೇವೈಃ = ದೇವರ್ಕಳಿಂದ ಅಭ್ಯರ್ಥಿತಃ = ಬೇಡಿಕೊಳಲುಪಟ್ಟಂಥಾ ಕೃಪಾಲಯಃ = ಕರುಣಕ್ಕೆ ಮನೆಯಹಂಥಾ ಅಜಃ = ಜನನವಿಲ್ಲದೇ ಇದ್ದಂಥಾ ಪರಮೇಶ್ವರಃ = ಪರಮೇಶ್ವರನು ತಂ = ಆ ನರಸಿಂಹಾಖ್ಯಂ = ನರಸಿಂಹನೆಂಬ ಹೆಸರನುಳ್ಳಂಥಾ ಹರಿಯನು ಸಂಹರ್ತುಂ = ಸಂಹರಿಸಲೋಸ್ಕರ ಮತಿಂ = ಬುದ್ಧಿಯನು ಚಕ್ರೇ = ಮಾಡಿದನು. ನೆನದನೆಂಬುದರ್ಥ, ||೧೮||

ರುದ್ರಃ = ಪರಮೇಶ್ವರನು ತದರ್ಥಂ = ಆ ನರಸಿಂಹನ ಸಂಹರಿಸಲೋಸ್ಕರ ಮಹಾಬಲಂ = ಅತ್ಯಂತ ಸತ್ತ್ವವನುಳ್ಳಂಥಾ ಆತ್ಮನಃ = ತನ್ನ ಭೈರವಂ ತತ್ತ್ವಂ ಭಯಂಕರ ಸ್ವರೂಪನಹಂಥಾ ಮಹಾಪ್ರಳಯಕಾರಕಂ = ಮಹಾಪ್ರಳಯವನು ಮಾಡುತ್ತಿದ್ದಂಥಾ ವೀರಭದ್ರಂ = ವೀರಭದ್ರನನು ಸ್ಮೃತವಾನ್ = ನೆನದನು.

ಪುರಃ = ಪರಮೇಶ್ವರನ ಮುಂದೆ ಗಣಾನಾಂ = ಗಣಂಗಳಿಗೆ ಅಗ್ರಣೀಃ = ಅಗ್ರಗಣ್ಯನಹಂಥಾ ವೀರಭದ್ರನು ಅಟ್ಟಹಾಸ್ಯೈಃ = ಗಹಗಹಿಸಿ ನಗುತ್ತಿದ್ದಂಥಾ ಇತಸ್ತತಃ = [3]ಇತ್ತಿಂದತ್ತ[3] ಉತ್ಪತದ್ಭಿಃ = ನೆಗೆದಾಡುತ್ತಿದ್ದಂಥಾ ಗಣವರ್ಯೈಃ = ಗಣಶ್ರೇಷ್ಠರುಗಳೊಡನೆ ಹಸನ್ = ನಗುತ್ತವು ಸದ್ಯಃ = ಆ ಕ್ಷಣದಲ್ಲಿ ಆಜಗಾಮ = ಎಯ್ದಿದನು. ||೨೦||

---

[3] ಇತ್ತಲತ್ತಲು (ಖ)

ನೃಸಿಂಹರೂಪೈರತ್ಯುಗ್ರೈಃ ಕೋಟಿಕೋಟಿಭಿರಾವೃತಃ
ಧಾವದ್ಭಿರಭಿತೋ ವೀರೈಃ ನೃತ್ಯದ್ಭಿಶ್ಚಾಪ್ಯುದಾಯುಧೈಃ ॥೨೦॥

ಕ್ರೀಡದ್ಭಿಶ್ಚ ಮಹಾವೀರೈಃ ಬ್ರಹ್ಮಾಂಡೈಃ ಕಂದುಕೈರಿವ
ಅದೃಷ್ಟಪೂರ್ವೈರನ್ಯೈಶ್ಚ ವೇಷ್ಟಿತೋ ವೀರವಂದಿತಃ ॥೨೧॥

ಕಲ್ಪಾಂತಜ್ವಲನಜ್ವಾಲಾ ವಿಲಸಲ್ಲೋಚನತ್ರಯಃ
ಅಂಸಸ್ರಂಸಿಜಟಾಜೂಟಗಲದ್ಬಾಲೇಂದುಮಂಡಿತಃ ॥೨೩॥

ಬಾಲೇಂದುದ್ವಿತಯಾಕಾರತೀಕ್ಷ್ಣದಂಷ್ಟ್ರಾಂಕುರದ್ವಯಃ
ಆಖಂಡಲಧನುಃಖಂಡಸನ್ನಿಭಭ್ರೂಲತಾಯುಗಃ ॥೨೪॥

---

ನೃಸಿಂಹರೂಪೈಃ = ನರಸಿಂಹನ ರೂಪನುಳ್ಳಂಥಾ ಅತ್ಯುಗ್ರೈಃ = ಅತ್ಯಂತ ಉಗ್ರರಹಂಥಾ ಕೋಟಿಕೋಟಿಭಿಃ = ಕೋಟಾನುಕೋಟಿಯುಹಂಥಾ ಧಾವದ್ಭಿಃ = ಹರಿವುತ್ತಿದ್ದಂಥಾ ನೃತ್ಯದ್ಭಿಃ = ಕುಣಿದಾಡುತ್ತಿದ್ದಂಥಾ ಉದಾಯುಧೈಃ = ಉನ್ನತವಹ ಆಯುಧಂಗಳನುಳ್ಳಂಥಾ ವೀರೈಶ್ಚಾಪಿ = ವೀರರುಗಳಿಂದ ಅಭಿತಃ = ಎಲ್ಲಾ ಕಡೆಯಲೂ ಆವೃತಃ = ಮುಸುಕಲುಪಟ್ಟಂಥಾ, ॥೨೦॥

ಬ್ರಹ್ಮಾಂಡೈಃ ಕಂದುಕೈರಿವ = ಬ್ರಹ್ಮಾಂಡಂಗಳು ಸೆಂಡುಗಳಕ್ಕ್ವ ಎಂಬ ಹಾಂಗಿದ್ದಂಥಾ ಕ್ರೀಡದ್ಭಿಃ = ಆಡುತ್ತಿದ್ದಂಥಾ ಅದೃಷ್ಟಪೂರ್ವೈಃ = ಪೂರ್ವದಲ್ಲಿ ಕಾಣದೇ ಇದ್ದಂಥಾ ಅನ್ಯೈಃ = [1]ಮತ್ತೆ ಕೆಲಬರಹಂಥಾ ಮಹಾವೀರೈಃ = [2]ಮಹಾವೀರರುಗಳಿಂದವೂ[2] ವೇಷ್ಟಿತಃ = ಮುಸುಕಲುಪಟ್ಟಾತನಾಗಿ ವೀರವಂದಿತಃ = ವೀರರುಗಳಿಂದ ನಮಸ್ಕರಿಸಿಕೊಳಲುಪಟ್ಟಂಥಾ ॥೨೧॥

ಕಲ್ಪಾಂತಜ್ವಲನಜ್ವಾಲಾವಿಲಸಲ್ಲೋಚನತ್ರಯಃ = ಪ್ರಳಯ ಕಾಲದಲ್ಲಿಯ ಅಗ್ನಿಜ್ವಾಲೆಯೋಪಾದಿ ಒಪ್ಪುತ್ತಂವಿದ್ದ ಕಣ್ಣುಮೂರನುಳ್ಳಂಥಾ ಅಂಸಸ್ರಂಸಿಜಟಾಜೂಟಗಲದ್ಬಾಲೇಂದುಮಂಡಿತಃ = [3]ಹೆಗಲ ಮೇಲೆ ನೇಲುತ್ತಂವಿದ್ದ ಜಟಾಮುಕುಟದಿಂದ ಜಾರುತ್ತಂವಿದ್ದ ಬಿದಿಗೆಯ ಚಂದ್ರನಿಂದ ಅಲಂಕರಿಸಲುಪಟ್ಟಂಥಾ[3] ॥೨೩॥

ಬಾಲೇಂದು ದ್ವಿತಯಾಕಾರ ತೀಕ್ಷ್ಣದಂಷ್ಟ್ರಾಂಕುರದ್ವಯಃ = ಬಾಲಚಂದ್ರರಿಬ್ಬರೋಪಾದಿ ಆಕಾರವ[4]ನುಳ್ಳ ಕೂರಿತಹ[4] ದಾಡೆಗಳ[5] ಮೊಳೆಯ ಎರಡನುಳ್ಳಂಥಾ ಆಖಂಡಲಧನುಃಖಂಡಸನ್ನಿಭಭ್ರೂಲತಾಯುಗಃ = [6]ಇಂದ್ರಚಾಪದ ತುಂಡುಗಳೆರಡಕ್ಕೆ ಸಮಾನವಹ ಹುಬ್ಬೆರಡನುಳ್ಳಂಥಾ[6] ॥೨೪॥

---

[1] ಅನ್ಯ (ಕ) [2] ಲುಪ್ತ (ಕ) [3] ಲುಪ್ತ (ಕ) [4] ನೊಳಕೊಂಡಿತಹ (ಕ)
[5] ಮೊಳೆಯು ಎ (ಖ) [6] ಲುಪ್ತ (ಕ)

ಮಹಾಪ್ರಚಂಡಹುಂಕಾರಬಧಿರೀಕೃತದಿಙ್ಮುಖಃ
ನೀಲಮೇಘಾಂಜನಾಕಾರಃ ಭೀಷಣಸ್ಸುಬೃಹದ್ಭುಜಃ ||೨೫||

ನಾದಯನ್ ಡಮರುಂ ಘಂಟಾಂ ಭ್ರಾಮಯಂಸ್ತ್ರಿಶಿಖಂ ಮುಹುಃ
ವೀರಭದ್ರೋಽಪಿ ಭಗವಾನ್ ವೀರಶಕ್ತಿವಿಜೃಂಭಿತಃ ||೨೬||

ಸ್ವಯಂ ವಿಜ್ಞಾಪಯಾಮಾಸ ಕಿಂ ಮಮ ಸ್ಮೃತಿಕಾರಣಮ್
ಆಜ್ಞಾಪಯ ಜಗತ್ಸ್ವಾಮಿನ್ ಪ್ರಸಾದಃ ಕ್ರಿಯತಾಂ ಮಯಿ ||೨೭||

ಈಶ್ವರ ಉವಾಚ—

[1] ಅಕಾಲೇ ಭಯಮುತ್ಪನ್ನಂ ದೇವಾನಾಮತಿಭೈರವಮ್
ಜ್ವಲತೋ ನರಸಿಂಹಾಗ್ನೇಃ ಶಮಯೈನಂ ದುರಾಸದಮ್ ||೨೮||

---

ಮಹಾಪ್ರಚಂಡಹುಂಕಾರಬಧಿರೀಕೃತದಿಙ್ಮುಖಃ = ಅತಿಪ್ರಚಂಡವಹ ಹುಂಕಾರ ಧ್ವನಿಯಿಂದ ಕಿವುಡಾಗಿ ಮಾಡಲುಪಟ್ಟ ದಿಕ್ಕುಗಳ ಮುಖವನುಳ್ಳಂಥಾ ನೀಲಮೇಘಾಂಜನಾಕಾರಃ = ನೀಲಮೇಘ ಕಾಡಿಗೆಗಳೋಪಾದಿ ಸ್ವರೂಪವನುಳ್ಳಂಥಾ ಭೀಷಣಃ = ಭಯಂಕರನಹಂಥಾ ಸುಬೃಹದ್ಭುಜಃ = ಅತಿದೊಡ್ಡಿತ್ತಹ ಭುಜಂಗಳನುಳ್ಳಂಥಾ ||೨೫||

ಡಮರುಂ = ಡಮರುಗವನು ಘಂಟಾಂ = ಘಂಟೆಯನು ನಾದಯನ್ = ಧ್ವನಿಗೆಯಿಸುತ್ತಿದ್ದಂಥಾ ತ್ರಿಶಿಖಂ = ತ್ರಿಶೂಲವನು ಮುಹುಃ = ಅಡಿಗಡಿಗೆ ಭ್ರಾಮಯನ್ = ತಿರುಗಿಸುತ್ತವು ವೀರಶಕ್ತಿವಿಜೃಂಭಿತಃ = ವೀರಶಕ್ತಿಯಿಂದ ಹೆಚ್ಚಲು ಪಟ್ಟಂಥಾ ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಹಂಥಾ ವೀರಭದ್ರೋಽಪಿ = = ವೀರಭದ್ರನೂ ||೨೬||

ಸ್ವಯಂ = ತಾನಾಗಿಯೇ ಮಮ = ಎನ್ನ ಸ್ಮೃತಿಕಾರಣಂ ಕಿಂ = ನೆನದ ಕಾರಣವೇನೆಂದು ವಿಜ್ಞಾಪಯಾಮಾಸ = ಬಿನ್ನಹಂ ಮಾಡಿದನು. ಭೋ ಜಗತ್ಸ್ವಾಮಿನ್ = ಎಲೇ ಲೋಕಕ್ಕೆ ಒಡೆಯನೇ ! ಆಜ್ಞಾಪಯ = ಆಜ್ಞಾಪಿಸು ಮಯಿ = ಎನ್ನಲ್ಲಿ ಪ್ರಸಾದಃ = ಪ್ರಸನ್ನತಿಕೆ ಕ್ರಿಯತಾಂ = ಮಾಡಲುಪಡಲಿ.

ಈಶ್ವರ ಉವಾಚ = ಈಶ್ವರನು ನುಡಿಹನು.

ಅಕಾಲೇ = ಅಕಾಲದಲ್ಲಿ ಜ್ವಲತಃ = ಉರಿವುತ್ತಿದ್ದಂಥಾ ನರಸಿಂಹಾಗ್ನೇಃ =

---

1 ಅಕಾರೇ (ಗ)

ಸಾಂಪ್ರತಂ ಬೋಧಯ ಹರಿಂ ತೇನ ಚೇನ್ನೋಪಶಾಮ್ಯತಿ
ತತೋ ಮತ್ಪರಮಂ ಭಾವಂ ಭೈರವಂ ಸಂಪ್ರದರ್ಶಯ ||೨೯||

ಸೂಕ್ಷ್ಮಂ ಸೂಕ್ಷ್ಮೇಣ ಸಂಹೃತ್ಯ ಸ್ಥೂಲಂ ಸ್ಥೂಲೇನ ತೇಜಸಾ
ವಕ್ತ್ರಮಾನಯ ಕೃತ್ತಿಂ ಚ ವೀರಭದ್ರ ಮಮಾಜ್ಞಯಾ ||೩೦||

ಇತ್ಯಾದಿಷ್ಟೋ ಗಣಾಧ್ಯಕ್ಷಃ ಪ್ರಶಾಂತಂ ವಪುರಾಸ್ಥಿತಃ
ಜಗಾಮ ರಂಹಸಾ ತತ್ರ ಯತ್ರಾಸ್ತೇ ನರಕೇಸರೀ ||೩೧||

ತತಸ್ತಂ ಬೋಧಯಾಮಾಸ ವೀರಭದ್ರೋ ಹರೋ ಹರಿಮ್
ವಾಗ್ಭಿರ್ವಾಚಾಮಧೀಶಾನಃ ಪಿತಾ ಪುತ್ರಮಿವೌರಸಮ್ ||೩೨||

---

ನರಸಿಂಹನೆಂಬ ಅಗ್ನಿಯ ದೆಸೆಯಿಂದ ದೇವಾನಾಂ = ದೇವರ್ಕಳಿಗೆ ಅತಿಭೈರವಂ = ಅತಿಭಯಂಕರವಹಂಥಾ ಭಯಂ = ಭೀತಿ ಉತ್ಪನ್ನಂ = ಹುಟ್ಟಿತ್ತು. ದುರಾಸದಂ ಸೈರಿಸಲು ಬಾರದೇ ಇದ್ದಂಥಾ ಏನಂ = ಈ ನರಸಿಂಹನೆಂಬ ಅಗ್ನಿಯನು ಶಮಯ = ತಗ್ಗಿಸು. ||೨೮||

ಸಾಂಪ್ರತಂ = ಈಗ ಹರಿಂ = ಹರಿಯನು ಬೋಧಯ = ಬೋಧಿಸು. ತೇನ = ಆ ಬೋಧೆಯಿಂದ ನೋಪಶಾಮ್ಯತಿ ಚೇತ್ = ಶಾಂತನಾಗದೇ ಇದ್ದ ಪಕ್ಷದಲ್ಲಿ ತತಃ = ಅನಂತರ ಮೇಲೆ ಮತ್ಪರಮಂ = ಎನ್ನ ಉನ್ನತವಹಂಥಾ ಭೈರವಂ = ಭಯಂಕರವಹಂಥಾ ಭಾವಂ = ಅಭಿಪ್ರಾಯನನು ಸಂಪ್ರದರ್ಶಯ = ತೋರಿಸು.

ಸೂಕ್ಷ್ಮಂ = ಸೂಕ್ಷ್ಮವಹಂಥಾ ತೇಜಸ್ಸನು ಸೂಕ್ಷ್ಮೇಣ = ಸೂಕ್ಷ್ಮ ತೇಜಸ್ಸಿನಿಂದ ಸಂಹೃತ್ಯ = ಸಂಹರಿಸಿ ಸ್ಥೂಲಂ = ಸ್ಥೂಲವಹ ತೇಜಸ್ಸನು ಸ್ಥೂಲೇನ = ಬಹಳವಹಂಥಾ ತೇಜಸಾ = ತೇಜಸ್ಸಿನಿಂದ ಸಂಹೃತ್ಯ = ಸಂಹರಿಸಿ ಭೋ ವೀರಭದ್ರ = ಎಲೆ ವೀರಭದ್ರನೇ! ಮಮ = ಎನ್ನ ಆಜ್ಞಯಾ = ಆಜ್ಞೆಯಿಂದ ವಕ್ತ್ರಂ = ಮುಖವನು ಕೃತ್ತಿಂ ಚ = ಚರ್ಮವನು ಆನಯ = ಕೊಂಡುಬಾ.

ಇತಿ = ಈ ಪ್ರಕಾರದಲ್ಲಿ ಆದಿಷ್ಟಃ = ಅಜ್ಞಾಪಿಸಿಕೊಳಲುಪಟ್ಟಂಥಾ ಗಣಾಧ್ಯಕ್ಷಃ = ಗಣಂಗಳಿಗೆ ಒಡೆಯನಹಂಥಾ ವೀರಭದ್ರನು ಪ್ರಶಾಂತಂ = ಅತಿಶಾಂತವಹಂಥಾ ವಪುಃ = ಶರೀರವನು ಆಸ್ಥಿತಃ = ಧರಿಸಿಕೊಂಡಾತನಾಗಿ ಯತ್ರ = ಆವಲ್ಲಿ ನರಕೇಸರೀ = ನರಸಿಂಹನು ಆಸ್ತೇ = ಇರುತ್ತಿದ್ದಾನು ರಂಹಸಾ = ಬೇಗದಿಂದ ತತ್ರ = ಅಲ್ಲಿಗೆ ಜಗಾಮ = ಎಯ್ದಿದನು. ||೩೧||

ತತಃ = ಅನಂತರದಲ್ಲಿ ವಾಚಾಂ = ವಾಕ್ಯಂಗಳಿಗೆ ಅಧೀಶಾನಃ = ಒಡೆಯನ-

ವೀರಭದ್ರ ಉವಾಚ

ಜಗತ್ಸುಖಾಯ ಭಗವನ್ ಅವತೀರ್ಣೋऽಸಿ ಮಾಧವ
ಸ್ಥಿತ್ಯರ್ಥಂ ವಿನಿಯುಕ್ತೋऽಸಿ ಹರೇಣ ಪರಮೇಷ್ಠಿನಾ ||೩೩||

ಜಂತುಚಕ್ರಂ ಭಗವತಾ ರಕ್ಷಿತಂ ಮತ್ಸ್ಯರೂಪಿಣಾ
ಪೃಷ್ಠೇನೈವಂ ಸಮಾಬಧ್ಯ ಭ್ರಮನ್ನೇಕಾರ್ಣವೇ ಪುರಾ ||೩೪||

ಬಿಭರ್ಷಿ ಕೂರ್ಮರೂಪೇಣ ವರಾಹೇಣೋದ್ಧೃತಾಂ ಮಹೀಮ್
ಅನೇನ ಹರಿರೂಪೇಣ ಹಿರಣ್ಯಕಶಿಪುರ್ಹತಃ ||೩೫||

---

ಹಂಥಾ [1] ವೀರಭದ್ರಃ = ವೀರಭದ್ರನೆಂಬಂಥಾ ಹರಃ = ಶಿವನು ವಾಗ್ಭಿಃ = ವಾಕ್ಯಂಗಳಿಂದ ತಂ ಹರಿಂ = ಆ ಹರಿಯನು ಬೋಧಯಮಾಸ = ಬೋಧಿಸಿದನು. ಕಥಮಿವ = ಅದು ಹೇಂಗೆಯಾ ಎಂದಡೆ ಪಿತಾ = ತಂದೆ ಔರಸಂ = ಉರಸ್ಸಿನಿಂದ ಜನಿಸಿದಂಥಾ ಪುತ್ರಮಿವ = ಮಗನೆಹಗಹಗೆ. ಔರಸಪುತ್ರನೆಂದರೆ ಬಸುರಿಂ ಬಂದ ಮಗನೆಂಬುದರ್ಥ.[1] ||೩೨||

ವೀರಭದ್ರ ಉವಾಚ = ವೀರಭದ್ರನ ವಾಕ್ಯವು.

ಭಗವನ್ = ಭಗವಾನ್ನುವಹಂಥಾ ಭೋ ಮಾಧವ = ಎಲೆ ಲಕ್ಷ್ಮೀಪತಿಯು- ಹಂಥಾತನೇ ಜಗತ್ಸುಖಾಯ = ಲೋಕಂಗಳ ಆನಂದಕ್ಕೋಸ್ಕರ ಅವತೀರ್ಣಃ = ಅವತರಿಸಿದಾತನು ಅಸಿ = ಅಹೆ. ಸ್ಥಿತ್ಯರ್ಥಂ = ಜಗತ್ತನು ಪಾಲಿಸಲೋಸ್ಕರ ಪರಮೇಷ್ಠಿನಾ = ಪರಮಪದದಲ್ಲಿ ಇರುತ್ತಿದ್ದಂಥಾ ಹರೇಣ = ಪರಮೇಶ್ವರನಿಂದ ವಿನಿಯುಕ್ತಃ = ನಿಯೋಗಿಸಲುಪಟ್ಟಾತನು ಅಸಿ = ಆಗುತ್ತಿಹೆ. ||೩೩||

ಪುರಾ = ಪೂರ್ವದಲ್ಲಿ ಏಕಾರ್ಣವೇ = ಏಕಾರ್ಣವವಾದಂಥಾ ಪ್ರಳಯಕಾಲದಲ್ಲಿ ಮತ್ಸ್ಯರೂಪಿಣಾ = ಮತ್ಸ್ಯರೂಪವನುಳ್ಳಂಥಾ ಭಗವತಾ = ಭಗವಾನ್ನುವಹಂಥಾ ನಿನ್ನಿಂದ ಜಂತುಚಕ್ರಂ = ಪ್ರಾಣಿಗಳ ಸಮೂಹವು ಪೃಷ್ಠೇನ = ಬೆನ್ನಿಂದ ಸಮಾಬಧ್ಯ = ಕಟ್ಟಿಕೊಂಡು ಭ್ರಮನ್ = ತಿರುಗುತ್ತಾವು ಏವಂ = ಈ ಪ್ರಕಾರದಲ್ಲಿ ರಕ್ಷಿತಂ = ರಕ್ಷಿಸಲುಪಟ್ಟಿತ್ತು. ||೪||

ವರಾಹೇಣ = ಆದಿವರಾಹಸಿಂದ ಉದ್ಧೃತಾಂ = ನೆಗಹಲುಪಟ್ಟಂಥಾ ಮಹೀಂ = ಭೂಮಿಯನು ಕೂರ್ಮರೂಪೇಣ = ಕೂರ್ಮರೂಪಿನಿಂದ ಬಿಭರ್ಷಿ =

---

1 ಈ ಭಾಗ ಲುಪ್ತ (ಖ)

ವಾಮನೇನ ಬಲಿರ್ಬದ್ಧಃ ತ್ವಯಾ ವಿಕ್ರಮತಾ ಪುನಃ
ತ್ವಮೇವ ಸರ್ವಲೋಕಾನಾಂ ಭೂತಾನಾಂ ಪ್ರಭುರಚ್ಯುತಃ ||೩೬||

ಯದಾ ಯದಾ ಹಿ ಲೋಕಸ್ಯ ದುಃಖಂ ಕಿಂಚಿಚ್ಚ ಜಾಯತೇ
ತದಾ ತದಾಽವತೀರ್ಯ ತ್ವಂ ಕರಿಷ್ಯಸಿ ನಿರಾಮಯಮ್ ||೩೭||

ತ್ವಯಾ ಸಮೋ ನಾಸ್ತ್ಯಧಿಕಃ ಕುತಃ ಶಿವಪರಾಯಣಃ
ತ್ವಯಾ ಧರ್ಮಾಶ್ಚ ವೇದಾಶ್ಚ ಸ್ವೇಸ್ವೇ ಮಾರ್ಗೇ ಪ್ರತಿಷ್ಠಿತಾಃ ||೩೮||

ಯದರ್ಥಂ ತ್ವವತಾರೋಽಯಂ ನಿವೃತ್ತಃ ಸೋಽಪಿ ಕೇಶವ

---

ಧರಿಸುತ್ತಿಹೆ. ಅನೇನ ಹರಿರೂಪೇಣ = ಈ ನರಸಿಂಹರೂಪಿನಿಂದ ಹಿರಣ್ಯಕಶಿಪುಃ = ಹಿರಣ್ಯಕಶಿಪುವು ಹತಃ = ಹತನಾದನು. ||೩೫||

ಪುನಃ = ಮರಳಿ ವಿಕ್ರಮತಾ = ಪರಾಕ್ರಮವನುಳ್ಳಂಥಾ ವಾಮನೇನ = ವಾಮನಾವತಾರವನುಳ್ಳಂಥಾ ತ್ವಯಾ = ನಿನ್ನಿಂದ ಬಲಿಃ = ಬಲೀಂದ್ರನು ಬದ್ಧಃ = ಬಂಧನಕ್ಕೊಳಗಾದನು. ತ್ವಮೇವ = ನೀನೇ ಸರ್ವಲೋಕಾನಾಂ = ಸಮಸ್ತ ಲೋಕಂಗಳಿಗೆ ಭೂತಾನಾಂ = ಪ್ರಾಣಿಗಳಿಗೆ ಪ್ರಭುಃ = ಒಡೆಯನು. ಅಚ್ಯುತಃ = ಕೇಡಿಲ್ಲದಾತನು. ||೩೬||

ಯದಾ ಯದಾ = ಆವಾಗಾವಾಗ ಲೋಕಸ್ಯ = ಲೋಕಕ್ಕೆ ಕಿಂಚಿದ್ದುಃಖಂ ಚ = ಒಂದಿಷ್ಟು ದುಃಖವು ಜಾಯತೇ = ಹುಟ್ಟುತ್ತಿಹುದು, ತದಾ ತದಾ = ಆಗಾಗ ತ್ವಂ = ನೀನು ಅವತೀರ್ಯ = ಅವತರಿಸಿ ನಿರಾಮಯಂ = ಕ್ಲೇಶವಿಲ್ಲದಂಥಾದನಾಗಿ ಕರಿಷ್ಯಸಿ ಹಿ = ಮಾಡಿಹೇಯಲಾ. ||೩೭||

ತ್ವಯಾ = ನಿನ್ನೊಡನೆ ಸಮಃ = ಸಮನಹಂಥಾ ಅಧಿಕಃ = ಅಧಿಕನಹಂಥಾ ಶಿವಪರಾಯಣಃ = ಶಿವಭಕ್ತಿಯನುಳ್ಳಾತನು ಕುತಃ = ಎಲ್ಲಿಯೂ ನಾಸ್ತಿ = ಇಲ್ಲ. ತ್ವಯಾ = ನಿನ್ನಿಂದ ಧರ್ಮಾಶ್ಚ = ಧರ್ಮಂಗಳು, ವೇದಾಶ್ಚ = ವೇದಂಗಳು ಸ್ವೇ ಸ್ವೇ ಮಾರ್ಗೇ = ತಮ್ಮ ತಮ್ಮ ಮಾರ್ಗದಲ್ಲಿ ಪ್ರತಿಷ್ಠಿತಾಃ = ಪ್ರತಿಷ್ಠಾಪಿಸಲುಪಟ್ಟವು. ||೩೮||

ಭೋ ಕೇಶವ ! = ಎಲೈ ಕೇಶವನೇ ಯದರ್ಥಂ = ಆವುದಾನೊಂದು ಪ್ರಯೋಜನಕ್ಕೋಸ್ಕರ ಅಯಂ (ತ್ವಂ) = ಈ ನೀನು ಅವತಾರಃ = ಅವತರಿಸಿ-

[1] ಅತೋಽತಿಘೋರಂ [2] ಭಗವನ್ನಾರಸಿಂಹಂ ವಪುಸ್ತವ ||
ಉಪಸಂಹರ ವಿಶ್ವಾತ್ಮನ್ ತ್ವಮೇವ ಮಮ ಸನ್ನಿಧೌ ||೩೯||

ಸೂತ ಉವಾಚ

ಇತ್ಯುಕ್ತೋ ವೀರಭದ್ರೇಣ ನೃಸಿಂಹಃ ಸಾಂಪ್ರತಂ ಗಿರಾ
ತತೋಽಧಿಕಂ ಪ್ರಜಜ್ವಾಲ ಚುಕೋಪ ಚ ಹಸನ್ ಹರಿಃ ||೪೦||

ನೃಸಿಂಹ ಉವಾಚ

ಆಗತೋಽಸಿ [3] ಕುತಸ್ತತ್ರ ಗಚ್ಛ ತಂ ಮಾ ಹಿತಂ ವದ
ಇದಾನೀಂ ಸಂಹರಿಷ್ಯಾಮಿ ಜಗದೇತಚ್ಚರಾಚರಮ್ ||೪೧||

---

ದಾತನು ಸೋಽಪಿ = ಆ ಅವತಾರವು ನಿವೃತ್ತಿಃ = ಬಿಡಲುಪಟ್ಟಿತ್ತು. ಅತಃ = ಆದುಕಾರಣವಾಗಿ ಭಗವನ್ = ಭಗವಾನ್ನುವಹಂಥಾ ವಿಶ್ವಾತ್ಮನ್ = ವಿಶ್ವರೂಪನಹಂಥಾ ಹರಿಯೇ ತ್ವಂ = ನೀನು ಅತಿಘೋರಂ = ಅತಿಭಯಂಕರವಹಂಥಾ ತವ = ನಿನ್ನ ನಾರಸಿಂಹಂ ರೂಪಂ = ನರಸಿಂಹಸಂಬಂಧವಹಂಥಾ ವಪುಃ = ಶರೀರವನ್ನು ಮಮ = ಎನ್ನ ಸನ್ನಿಧಾವೇವ = ಸಮೀಪದಲ್ಲಿಯೇ ಉಪಸಂಹರ = ಬಿಡು. ||೩೯||

ಸೂತ ಉವಾಚ = ಸೂತಮಹಾಮುನಿ ನುಡಿದನು.

ಇತಿ = ಈ ಪ್ರಕಾರದಲ್ಲಿ ವೀರಭದ್ರೇಣ = ವೀರಭದ್ರನಿಂದ ಸಾಂಪ್ರತಂ = ಯುಕ್ತವಾಗಿ ಗಿರಾ = ವಾಕ್ಯದಿಂದ ಉಕ್ತಃ = ನುಡಿಯಲುಪಟ್ಟಂಥಾ ನೃಸಿಂಹಃ = ನರಸಿಂಹನು ತತಃ = ಅಷ್ಟರಮೇಲೆ ಅಧಿಕಂ = ಅತ್ಯಂತವಾಗಿ ಪ್ರಜಜ್ವಾಲ = ಜ್ವಲಿಸಿದನು. ಹರಿಃ = ನರಸಿಂಹನು ಹಸನ್ = ನಗುತವು ಚುಕೋಪ = ಕೋಪಿಸಿದನು. ||೪೦||

ನೃಸಿಂಹ ಉವಾಚ = ನೃಸಿಂಹನು ನುಡಿದನು.

ಕುತಃ = ಎಲ್ಲಿಂದ ಆಗತಃ = ಬಂದಾತನು ಅಸಿ = ಅಹೆ. ತತ್ರ = ಅಲ್ಲಿಗೆ ಗಚ್ಛ = ಹೋಗು. ಹಿತಂ = ಹಿತವಹಂಥಾ ತಂ = ಆ ವಾಕ್ಯವನು ಮಾ ವದ = ನುಡಿಯದಿರು. ಇದಾನೀಂ = ಈಗ ಏತತ್ = ಈ ಚರಾಚರಂ = ಚರಾಚರವಹಂಥಾ ಜಗತ್ = ಲೋಕವನು ಸಂಹರಿಷ್ಯಾಮಿ = ಸಂಹರಿಸುತ್ತೇನೆ. ||೪೧||

---

1 ಅಘೋಃ (ಕರಮೂಲಪಾಠ) 2 ಭಗವಾ (ಘ) 3 ಕುತಸ್ತ್ವತ್ರ ಗಚ್ಛ ತ್ವಂ (ಗಘ)

ಸಂಹರ್ತುರ್ನಹಿ ಸಂಹಾರಸ್ತ್ವತ್ತೋ ವಾ ಪರತೋಽಪಿ ವಾ
ಶಾಸಿತುರ್ಮಮ ಸರ್ವಸ್ಯ ಶಾಸ್ತಾ ಕೋಽಪಿ ನ ವಿದ್ಯತೇ ||೪೨||

ಮತ್ಪ್ರಸಾದೇನ ಸಕಲಂ ಸಮರ್ಯಾದಂ ಪ್ರವರ್ತತೇ
ಅಹಂ ಹಿ ಸರ್ವಶಕ್ತೀನಾಂ ಪ್ರವರ್ತಕನಿವರ್ತಕಃ ||೪೩||

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ
ತತ್ತದ್ವಿದ್ಧಿ ಗಣಾಧ್ಯಕ್ಷ ಮಮ ತೇಜೋವಿಜೃಂಭಿತಮ್ ||೪೪||

ದೇವತಾಃ ಪರಮಾರ್ಥಜ್ಞಾ ಮಾಮೇವ ಪರಮಂ ವಿದುಃ
ಮದಂಶಶಕ್ತಿಸಂಭೂತಾ ಬ್ರಹ್ಮಶಕ್ರಾದಯಸ್ಸುರಾಃ ||೪೫||

---

ಸಂಹರ್ತುಃ = ಸಂಹರಿಸುವಂಥಾ ಎನ್ನ ಸಂಹಾರಃ = ಸಂಹರಿಸುಹವು ತ್ವತ್ತಃ ನಿನ್ನ ದೆಸೆಯಿಂದವು ವಾ = ಅಲ್ಲಾ ಪರತೋಽಪಿವಾ = ಮತ್ತೊಬ್ಬನ ದೆಸೆಯಿಂಸವು ನ ಹಿ = ಇಲ್ಲಲಾ. ಸರ್ವಸ್ಯ = ಸಮಸ್ತ ಲೋಕವ ಶಾಸಿತುಃ = ಶಿಕ್ಷಿಸುತ್ತಿದ್ದಂಥಾ ಮಮ = ಎನ್ನ [1]ಶಾಸ್ತಾ = ಶಿಕ್ಷಿಸುವಾತನು ಕೋಽಪಿ = ಒಬ್ಬಾನೊಬ್ಬನೂ ನ ವಿದ್ಯತೇ = ಇಲ್ಲ.[1] ||೪೨||

ಮತ್ಪ್ರಸಾದೇನ = ಎನ್ನ ಪ್ರಸನ್ನತಿಕೆಯಿಂದ ಸಮರ್ಯಾದಂ = ವರ್ತನೆಯಿಂದ ಸಹಿತವಹಂಥಾ ಸಕಲಂ = ಸಮಸ್ತಲೋಕವು ಪ್ರವರ್ತತೇ — ವರ್ತಿಸಲುಪಡುತ್ತಿಹುದು. ಅಹಂ = ನಾನು ಸರ್ವಶಕ್ತೀನಾಂ = ಸಮಸ್ತ ಶಕ್ತಿಗಳ ಪ್ರವರ್ತಕನಿವರ್ತಕೋ ಹಿ = ಸೃಷ್ಟಿಸುವಾತನು ಸಂಹರಿಸುವಾತನಲಾ. ||೪೩||

[2]ವಿಭೂತಿಮತ್ = ಐಶ್ವರ್ಯವನು[2]ಳ್ಳಂಥಾ ಸತ್ತ್ವಂ = ಸ್ವರೂಪವನುಳ್ಳಂಥಾ ಯತ್ ಯತ್ = ಆವುದಾವುದುಂಟು ಶ್ರೀಮತ್ = ಒಪ್ಪುತ್ತಂವಿದ್ದಂಥಾ ಊರ್ಜಿತಂ = ಉನ್ನತವಹಂಥಾ ತತ್ತದೇವ = ಆ ಆ ಸ್ವರೂಪವೇ ಭೋ ಗಣಾಧ್ಯಕ್ಷ = ಎಲೆ ಗಣಶ್ರೇಷ್ಠನೇ ಮಮ = ಎನ್ನ ವಿಜೃಂಭಿತಂ = ಹೆಚ್ಚುಗೆಯುನುಳ್ಳಂಥಾ ತೇಜೋ ವಾ = ತೇಜಸ್ಸೆಂದೇ ವಿದ್ಧಿ = ಅರಿ. ||೪೪||

ಪರಮಾರ್ಥಜ್ಞಾಃ = ಪರಮಾರ್ಥವನು ಬಲ್ಲಂಥಾ ದೇವತಾಃ — ದೇವರ್ಕಳು ಮಾಮೇವ = ಎನ್ನನೇ ಪರಮಂ = ಉತ್ಕೃಷ್ಟವಹಂಥಾ ದೇವನೆಂದು ವಿದುಃ =

---

[1] ಲುಪ್ತ (ಕ) [2] ಲುಪ್ತ (ಕ)

ಮನ್ನಾಭಿಪಂಕಜಾಜ್ಜಾತಃ ಪುರಾ ಬ್ರಹ್ಮಾ ಚತುರ್ಮುಖಃ
ತಲ್ಲಲಾಟಾತ್ಸಮುತ್ಪನ್ನೋ ಭಗವಾನ್ ವೃಷಭಧ್ವಜಃ ||೪೬||

ರಜಸಾಧಿಷ್ಠಿತಃ ಸ್ರಷ್ಟಾ ರುದ್ರಸ್ತಾಮಸ ಉಚ್ಯತೇ
ಅಹಂ ನಿಯಂತಾ ಸರ್ವಸ್ಯ ಮತ್ಪರಂ ನಾಸ್ತಿ ದೈವತಮ್ ||೪೭||

ವಿಶ್ವಾಧಿಕಃ ಸ್ವತಂತ್ರಶ್ಚ ಕರ್ತಾ ಹರ್ತಾಖಿಲೇಶ್ವರಃ
ಇದಂ ತು ಮತ್ಪರಂ ತೇಜಃ ಕಃ ಪುಮಾನ್ ಸೋಢುಮರ್ಹತಿ ||೪೮||

[1] ಅತೋ[1] ಮಾಂ ಶರಣಂ ಪ್ರಾಪ್ಯ ಗಚ್ಛ ತ್ವಂ ವಿಗತಜ್ವರಃ
ಅವೇಹಿ ಪರಮಂ ಭಾವಂ ಮದುದ್ಭೂತಂ ಮಹೇಶ್ವರಮ್ ||೪೯||

---

ಹೇಳುವರು. ಬ್ರಹ್ಮಶಕ್ರಾದಯಃ= ಬ್ರಹ್ಮ ಇಂದ್ರ ಮೊದಲಾದಂಥಾ ಸುರಾಃ = ದೇವತೆಗಳು ಮದಂಶಶಕ್ತಿಸಂಭೂತಾಃ = ನನ್ನ ಅಂಶದ ಸಾಮರ್ಥ್ಯದಿಂದ ಹುಟ್ಟಿದರು.

ಪುರಾ = ಪೂರ್ವದಲ್ಲಿ ಚತುರ್ಮುಖಃ = ನಾಲ್ಕುಮುಖವನುಳ್ಳಂಥಾ ಬ್ರಹ್ಮಾ=ಬ್ರಹ್ಮನು ಮನ್ನಾಭಿಪಂಕಜಾತ್ = ಎನ್ನ ನಾಭಿಕಮಲದ ದೆಸೆಯಿಂದ ಜಾತಃ—ಹುಟ್ಟಿದನು. ತಲ್ಲಲಾಟಾತ್=ಬ್ರಹ್ಮನ ಲಲಾಟದ ದೆಸೆಯಿಂದ ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಹಂಥಾ ವೃಷಭಧ್ವಜಃ = ವೃಷಭಧ್ವಜನಹಂಥಾ ಶಿವನು ಸಮುತ್ಪನ್ನಃ=ಹುಟ್ಟಿದನು. ||೪೬||

ಸ್ರಷ್ಟಾ—ಬ್ರಹ್ಮನು ರಜಸಾ — ರಜೋಗುಣದೊಡನೆ[2] ಅಧಿಷ್ಠಿತಃ — ಇರಲುಪಟ್ಟನು. ರುದ್ರಃ—ರುದ್ರನು ತಾಮಸಃ — ತಮೋಗುಣಯುಕ್ತನೆಂದು[3] ಉಚ್ಯತೇ—ಹೇಳಲ್ಪಡುತ್ತಿಹುದು. ಅಹಂ—ನಾನು ಸರ್ವಸ್ಯ—ಸಮಸ್ತಲೋಕವ ನಿಯಂತಾ—ಶಿಕ್ಷಿಸುವಾತನು. ಮತ್ಪರಂ—ಎನ್ನಿಂದ ಅಧಿಕವಹಂಥಾ ದೈವತಂ— ದೈವವು ನಾಸ್ತಿ—ಇಲ್ಲ. ||೪೭||

ವಿಶ್ವಾಧಿಕಃ—ವಿಶ್ವಕ್ಕೆ ಅಧಿಕನು. ಸ್ವತಂತ್ರಶ್ಚ—ಸ್ವತಂತ್ರನು. ಕರ್ತಾ— ಕರ್ತನು. ಹರ್ತಾ — ಸಂಹರಿಸುವಾತನು. ಅಖಿಲೇಶ್ವರಃ —[3]ಸಮಸ್ತ ಲೋಕಕ್ಕೆ ಒಡೆಯನು. ಇದಂ—ಈ[3] ಮತ್ಪರಂ — ಎನ್ನ ಉತ್ಕೃಷ್ಟವಹಂಥಾ ತೇಜಸ್ತು— ತೇಜಸ್ಸನು ಸೋಢುಂ—ಸೈರಿಸಲು ಕಃ ಪುಮಾನ್—ಆವ ಪುರುಷನು ಅರ್ಹತಿ —ಯೋಗ್ಯನಾಗುತ್ತಿಹನು ? ||೪೮||

ಅತಃ—ಅದು ಕಾರಣವಾಗಿ ಮಾಂ—ಎನ್ನನು ಶರಣಂ—ಮರೆಯೊಗುಹ

---

1 ಅಥೋ (ಘ. ಮೂಲ) ಅತೋ (ಘ. ಪಾಠಾಂತರ) 2, 3 ಲುಪ್ತ (ಕ)

* ಕಾಲೋಽಸ್ಮ್ಯಹಂ ಕಾಲವಿನಾಶಹೇತು-
ರ್ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ।
ಮೃತ್ಯೋರ್ಮೃತ್ಯುಂ ವಿದ್ಧಿ ಮಾಂ ವೀರಭದ್ರ
ಜೀವಂತ್ಯನ್ಯೇ ಮತ್ಪ್ರಸಾದೇನ ದೇವಾಃ ||೫೦||

ಸೂತ. ಉವಾಚ

ಸಾಹಂಕಾರಮಿದಂ ಶ್ರುತ್ವಾ ಹರೇರಮಿತವಿಕ್ರಮಃ
ವಿಹಸ್ಯೋವಾಚ ವೈ ತಜ್ಞಂ ತಂ ಕೋಪಸ್ಫುರಿತಾಧರಃ ||೫೧||

ಶ್ರೀವೀರಭದ್ರ ಉವಾಚ

---

ವನು ಪ್ರಾಪ್ಯ—ಎಯ್ದಿ ತ್ವಂ — ನೀನು ವಿಗತಜ್ವರಃ — ಹೋಗಲುಪಟ್ಟ ಬಾಧೆಯನುಳ್ಳಾತನಾಗುತವು ಗಚ್ಛ—ಹೋಗು. ಮಹೇಶ್ವರಂ—ಮಹೇಶ್ವರನನು ಮದುದ್ಭೂತಂ—ಎನ್ನಿಂದ ಹುಟ್ಟಿದಂಥಾ ಪರಮಂ—ಅಧಿಕವಹಂಥಾ ಭಾವಂ— ಅಭಿಪ್ರಾಯವನು ಅವೇಹಿ—ಅರಿ. ||೪೯||

ಅಹಂ—ನಾನು ಕಾಲಃ—ಕಾಲನು ಅಸ್ಮಿ—ಆಗುತ್ತಿಹೆನು. ಕಾಲವಿನಾಶ ಹೇತುಃ—ಕಾಲನ ನಾಶವ ಮಾಡುವುದಕ್ಕೆ ಕಾರಣವಹಂಥಾ ಆತನು. ಲೋಕಾನ್ —ಲೋಕಂಗಳನು ಸಮಾಹರ್ತುಂ—ಸಂಹರಿಸಲೋಸ್ಕರ ಇಹ—ಇಲ್ಲಿ ಪ್ರವೃತ್ತಃ —ವರ್ತಿಸಲುಪಟ್ಟಾತನು. ಭೋ ವೀರಭದ್ರ !—ಎಲೇ ವೀರಭದ್ರನೇ ! ಮಾಂ— ಎನ್ನನು ಮೃತ್ಯೋಃ—ಮೃತ್ಯುವಿಗೆ ಮೃತ್ಯುಂ—ಮೃತ್ಯುವಹಂಥಾತನು ಎಂದು ವಿದ್ಧಿ— ಅರಿ. ಮತ್ಪ್ರಸಾದೇನ — ಎನ್ನ ಪ್ರಸನ್ನತಿಕೆಯಿಂದ ಅನ್ಯೇ ದೇವಾಃ — ಉಳಿದ ದೇವರ್ಕಳು ಜೀವಂತಿ—ಬದುಕುತ್ತಿಹರು. ||೫೦||

ಸೂತ ಉವಾಚ—ಸೂತಮುನಿಯು ನುಡಿದನು.

ಹರೇಃ— ನೃಸಿಂಹನ ಸಾಹಂಕಾರಂ — ಅಹಂಕಾರದೊಡನೆ ಕೂಡಿದಂಥಾ ಇದಂ—ಈ ವಾಕ್ಯವನು ಶ್ರುತ್ವಾ — ಕೇಳಿ ಅಮಿತವಿಕ್ರಮಃ — ಹವಣಿಸಲು ಬಾರದೇ ಇದ್ದ ಪರಾಕ್ರಮವನುಳ್ಳಂಥಾ ವೀರಭದ್ರನು, ಕೋಪಸ್ಫುರಿತಾಧರಃ — ಕೋಪದಿಂದ ನಡುಗಲುಪಟ್ಟ ತುಟಿಗಳನುಳ್ಳಾತನಾಗಿ ವಿಹಸ್ಯ—ನಕ್ಕು ಅಜ್ಞಂ— ಅರಿಯದೇ ಇದ್ದಂಥಾ ತಂ ತು—ಆ ನರಸಿಂಹನನು ಕುರಿತು ಉವಾಚ—ನುಡಿದನು

ಶ್ರೀ ವೀರಭದ್ರ ಉವಾಚ—ಶ್ರೀವೀರಭದ್ರನು ನುಡಿದನು.

---

* ಇಂದ್ರವಜ್ರಾವೃತ್ತಂ

ಕಿಂ ನ ಜಾನಾಸಿ ವಿಶ್ವೇಶಂ ಸಂಹರ್ತಾರಂ ಪಿನಾಕಿನಮ್
' ಅಸದ್ವಾದೋಽತಿವಾದಶ್ಚ ವಿನಾಶಾಯ ಹಿ ಕೇವಲಮ್ ' ||೫೨||

ತವಾನ್ಯಾನ್ಯವತಾರಾಣಿ ಕಥಾಶೇಷಾಣಿ ಸಾಂಪ್ರತಮ್
ಕೃತಾನಿ ಯೇನ ತೇನೈತತ್ಕಥಾಶೇಷಂ ಭವಿಷ್ಯತಿ ||೫೩||

ದೋಷೋಽತ್ರ ತಸ್ಯ ಯೇನ ತ್ವಮವಸ್ಥಾಮೀದೃಶೀಂ ಗತಃ
ತೇನ ಸಂಹಾರದಕ್ಷೇಣ ಕ್ಷಣಾತ್ತ್ವಂ ಕ್ಷಯಮೇಷ್ಯಸಿ ||೫೪||

ಪ್ರಕೃತಿಸ್ತ್ವಂ ಪುಮಾನ್ ರುದ್ರಃ ತ್ವಯಿ ತದ್ವೀರ್ಯಮಾಹಿತಮ್
ತ್ವನ್ನಾಭಿಪಂಕಜಾಜ್ಜಾತಃ ಪಂಚವಕ್ತ್ರಃ ಪ್ರಜಾಪತಿಃ ||೫೫||

ವಿಶ್ವೇಶಂ—ವಿಶ್ವಕ್ಕೊಡೆಯನಹಂಥಾ ಸಂಹರ್ತಾರಂ—ಸಂಹಾರವ ಮಾಡುತ್ತಿದ್ದಂಥಾ ಪಿನಾಕಿನಂ—ಪರಮೇಶ್ವರನನು ಕಿಂ—ಏನು ಕಾರಣ ನ ಜಾನಾಸಿ—ಅರಿಯದೇ ಇದ್ದಿ ? ಅಸದ್ವಾದಃ—ಒಳಿತಲ್ಲದ ವಾದವು ಅತಿವಾದಶ್ಚ — ಅತ್ಯಂತ ವಾದಿಸುಹವು ಕೇವಲಂ—ಬರಿಯ ವಿನಾಶಾಯ ಹಿ—ಕೇಡಿಂಗೋಸ್ಕರವಲಾ.

ಯೇನ — ಆವನಾನೊಬ್ಬ ಪರಮೇಶ್ವರನಿಂದ ತವ — ನಿನ್ನ ಅನ್ಯಾನಿ ಅವತಾರಾಣಿ—ಉಳಿದ ಅವತಾರಂಗಳು ಸಾಂಪ್ರತಂ — ಈಗ ಕಥಾಶೇಷಾಣಿ — ಕಥೆಗಳೇ ಉಳಿದಂಥಾವಾಗಿ ಕೃತಾನಿ—ಮಾಡಲುಪಟ್ಟವು. ತೇನ — ಆ ಶಿವನಿಂದ ಏತತ್—ಈ ಅವತಾರವು ಕಥಾಶೇಷಂ—ಕಥೆಯೇ ಉಳಿದಂಥಾದ್ದು ಭವಿಷ್ಯತಿ—[1]ಆದೀತು.[1] ||೫೩||

ಅತ್ರ—ಈ ನಿನ್ನಲ್ಲಿ ತಸ್ಯ—ಆ ಈಶ್ವರನನರಿಯದ ದೋಷಃ — ದೋಷವುಂಟು. ಯೇನ—ಆವುದಾನೊಂದು ದೋಷದಿಂದ ತ್ವಂ—ನೀನು ಈದೃಶೀಂ — ಈ ಪ್ರಕಾರವಹಂಥಾ ಅವಸ್ಥಾಂ — ವಿಕಟರೂಪಿನ ಕ್ಲೇಶವನು ಗತಃ — ಎಯ್ದಿದಾತನು ಸಂಹಾರದಕ್ಷೇಣ—ಸಂಹಾರಕ್ಕೆ ಸಮರ್ಥನಹಂಥಾ ತೇನ—ಆ ಶಿವನಿಂದ ತ್ವಂ—ನೀನು ಕ್ಷಣಾತ್— ಕ್ಷಣಮಾತ್ರದ ದೆಸೆಯಿಂದ ಕ್ಷಯಂ — ಲಯವನು ಏಷ್ಯಸಿ—ಎಯ್ದುವಿ. ||೫೪||

ತ್ವಂ—ನೀನು ಪ್ರಕೃತಿಃ—ಶಕ್ತಿ. ರುದ್ರಃ — ರುದ್ರನು ಪುಮಾನ್ — ಪುರುಷನು. ತ್ವಯಿ — ನಿನ್ನಲ್ಲಿ ತದ್ವೀರ್ಯಂ — ಆ ರುದ್ರನ ಇಂದ್ರಿಯವು

[1] ಆಪೂದು (ಖ)

ಮಯಿ ತ್ವಯಿ ಬ್ರಹ್ಮಣಿ ಚ ಸ್ಥಿತಃ ಸರ್ವತ್ರ ಶಂಕರಃ ||೩೬||

ಸೃಷ್ಟ್ಯರ್ಥಂ ಜಗತಃ ಪೂರ್ವಂ ಶಂಕರಂ ನೀಲಲೋಹಿತಮ್
ಲಲಾಟೇಽಚಿಂತಯದ್ಬ್ರಹ್ಮಾ ತಪಸ್ಯುಗ್ರೇ ವ್ಯವಸ್ಥಿತಃ ||೩೭||

ತಲ್ಲಲಾಟಾದಭೂಚ್ಛಂಭುಃ ಸೃಷ್ಟ್ಯರ್ಥಂ ತನ್ನ ದೂಷಣಮ್
ಅಂಶೋಽಹಂ ದೇವದೇವಸ್ಯ ಮಹಾಭೈರವರೂಪಿಣಃ ||
ತ್ವತ್ಸಂಹೃತೌ ನಿಯುಕ್ತೋಽಸ್ಮಿ ವಿನಯೇನ ಬಲೇನ ಚ ||೩೮||

ಏಕಂ ರಕ್ಷೋ ವಿದಾರ್ಯೋರ್ಜ ತ್ವಂ ತಚ್ಛಕ್ತಿಕಲಯಾ ಯುತಃ
ಅಹಂಕಾರಾವಲೇಪೇನ ಗರ್ಜಸಿ ತ್ವಮಯಂತ್ರಿತಃ ||೩೯||

---

ಆಹಿತಂ—ಇಡಲುಪಟ್ಟಿತ್ತು. ತ್ವನ್ನಾಭಿಪಂಕಜಾತ್—ನಿನ್ನ ನಾಭಿಕಮಲದ ದೆಸೆ-ಯಿಂದ ಪಂಚವಕ್ತ್ರಃ — ಐದು ಮುಖವನುಳ್ಳಂಥಾ ಪ್ರಜಾಪತಿಃ — ಬ್ರಹ್ಮನು ಜಾತಃ—ಹುಟ್ಟಿದನು. ||೩೫||

ಮಯಿ—ನನ್ನಲ್ಲಿ ತ್ವಯಿ — ನಿನ್ನಲ್ಲಿ ಬ್ರಹ್ಮಣಿ ಚ — ಬ್ರಹ್ಮನಲ್ಲಿಯು ಸರ್ವತ್ರ—ಎಲ್ಲಿಯು ಶಂಕರಃ—ಪರಮೇಶ್ವರನು ಸ್ಥಿತಃ—ಇಹನು. ||೩೬||

ಪೂರ್ವಂ— ಪೂರ್ವದಲ್ಲಿ ಜಗತಃ — ಲೋಕದ ಸೃಷ್ಟ್ಯರ್ಥಂ — ಸೃಷ್ಟಿಗೋಸ್ಕರ ಬ್ರಹ್ಮಾ—ಬ್ರಹ್ಮನು ಉಗ್ರೇ ತಪಸಿ— ಉಗ್ರ ತಪಸ್ಸಿನಲ್ಲಿ ವ್ಯವಸ್ಥಿತಃ —ಇದ್ದಾತನಾಗಿ ನೀಲಲೋಹಿತಂ—ನೀಲಲೋಹಿತನಹಂಥಾ ಶಂಕರಂ—ಶಿವನನು ಲಲಾಟೇ—ಲಲಾಟದ ಲಕ್ಷ್ಯದಲ್ಲಿ ಅಚಿಂತಯತ್—ಧ್ಯಾನಿಸಿದನು. ೩೭

ತಲ್ಲಲಾಟಾತ್—ಆ ಬ್ರಹ್ಮನ ಲಲಾಟದ ದೆಸೆಯಿಂದ ಶಂಭುಃ—ಪರಮೇಶ್ವರನು ಸೃಷ್ಟ್ಯರ್ಥಂ — ಸೃಷ್ಟಿಗೋಸ್ಕರ ಅಭೂತ್ — ಆದನು. ತತ್ — ಅದು ನ ದೂಷಣಂ—ನಿಂದೆಯಿಲ್ಲದಂಥಾದ್ದು. ಅಹಂ—ನಾನು ಮಹಾಭೈರವರೂಪಿಣಃ— ಮಹಾಭಯಂಕರ ಸ್ವರೂಪನಹಂಥಾ ದೇವದೇವಸ್ಯ— ಪರಮೇಶ್ವರನ ಅಂಶಃ— ಅಂಶವು. ವಿನಯೇನ — ವಿನಯದಿಂದವು ಬಲೇನ ಚ — ಸತ್ತ್ವದಿಂದವು ತ್ವತ್ಸಂಹೃತೌ—ನಿನ್ನ ಸಂಹರಿಸುವಲ್ಲಿ ನಿಯುಕ್ತಃ — ಪ್ರಯೋಗಿಸಲುಪಟ್ಟಾತನು ಅಸ್ಮಿ—ಆಗುತ್ತಿದ್ದೇನು. ||೩೮||

ತ್ವಂ—ನೀನು ತಚ್ಛಕ್ತಿಕಲಯಾ —ಆ ಪರಮೇಶ್ವರನ ಸಾಮರ್ಥ್ಯದ ಒಂದು ಕಲಾಮಾತ್ರದಿಂದ ಯುತಃ — ಕೂಡಲುಪಟ್ಟಾತನಾಗಿ ಏಕಂ ರಕ್ಷಃ — ಒಬ್ಬ

'ಉಪಕಾರೋಽಪ್ಯಸಾಧೂನಾಮುಪಕಾರಾಯ ಕೇವಲಮ್'
ಯನ್ನಿಂದಸಿ ಮಹೇಶಾನಂ ತ್ವಾಂ ಪುನರ್ಬಹು ಮನ್ಯಸೇ ||೬೦||

ನ ತ್ವಂ ಸ್ರಷ್ಟಾ ನ ಸಂಹರ್ತಾ ನ ಸ್ವತಂತ್ರೋಽಸಿ ಕುತ್ರಚಿತ್
ಕುಲಾಲಚಕ್ರವಚ್ಛಕ್ತ್ಯಾ ಪ್ರೇರಿತೋಽಸಿ ಪಿನಾಕಿನಃ ||೬೧||

ಅದ್ಯಾಪಿ ತವ ಪಶ್ಯ ತ್ವಂ ಕಪಾಲಂ ಕೂರ್ಮರೂಪಿಣಃ
ಹರಹಾರಲತಾಮಧ್ಯೇ ಮುಗ್ಧ ಕಸ್ಮಾನ್ನ ಬುಧ್ಯಸೇ ||೬೨||

ವಿಸ್ಮೃತಂ ತತ್ತದಂಶೇನ ದಂಷ್ಟ್ರೋತ್ಪಾಟನಪೀಡಿತಃ
ವರಾಹವಿಗ್ರಹಸ್ತೇಽದ್ಯ ಸಾಕ್ರೋಶಸ್ತಾರಕಾರಿಣಾ ||೬೩||

---

ರಾಕ್ಷಸನನು ವಿದಾರ್ಯ — ಸೀಳಿ ತ್ವಂ — ನೀನು ಅಹಂಕಾರಾವಲೇಪೇನ— ಅಹಂಕಾರದ ಮದದಿಂದ ಅಯಂತ್ರಿತಃ — ಪ್ರಯತ್ನವಿಲ್ಲದಾತನಾಗಿ ಗರ್ಜಸಿ — ಗರ್ಜಿಸುತ್ತಿದ್ದಿ. ||೫೯||

ಅಸಾಧೂನಾಂ — ದುರ್ಜನರುಗಳಿಗೆ ಉಪಕಾರೋಽಪಿ — ಉಪಕಾರವ ಮಾಡುಹವೂ ಕೇವಲಂ — ಬರಿಯ ಅಪಕಾರಾಯ — ಅಪಕಾರಕ್ಕೋಸ್ಕರವು. ಯತ್ — ಆವುದಾನೊಂದು ಕಾರಣವಾಗಿ ಮಹೇಶಾನಂ — ಪರಮೇಶ್ವರನನು ನಿಂದಸಿ—ನಿಂದಿಸುತ್ತಿದ್ದಿ. ತ್ವಾಂ=ನಿನ್ನನು ಪುನಃ — ಮರಳಿ ಬಹು—ಬಹಳವಾಗಿ ಮನ್ಯಸೇ—ಪತಿಕರಿಸುತ್ತಿದ್ದೆ. ||೬೦||

ತ್ವಂ — ನೀನು ಸ್ರಷ್ಟಾ — ಸೃಷ್ಟಿಯ ಮಾಡುವಾತನು ನ — ಅಲ್ಲ. ಸಂಹರ್ತಾ—ಸಂಹರಿಸುವಾತನು ನ—ಅಲ್ಲ. ಕುತ್ರಚಿತ್—ಎಲ್ಲಿಯೂ ಸ್ವತಂತ್ರಃ —ಸ್ವತಂತ್ರನು ನಾಸಿ—ಆಗುತ್ತಿರೆ. ಪಿನಾಕಿನಃ—ಪರಮೇಶ್ವರನ ಶಕ್ತ್ಯಾ— ಸಾಮರ್ಥ್ಯದಿಂದ ಕುಲಾಲಚಕ್ರವತ್ — ಕುಂಬಾರನ ತಿಗುರಿಯೋಪಾದಿಯಲ್ಲಿ ಪ್ರೇರಿತಂ—ತಿರಿಗಿಸಿಕೊಳಲ್ಪಟ್ಟಾತನು ಅಸಿ—ಆಗುತ್ತಿಹೆ. ||೬೧||

ಕೂರ್ಮರೂಪಿಣಃ—ಕೂರ್ಮರೂಪನುಳ್ಳಂಥಾ ತವ—ನಿನ್ನ ಕಪಾಲಂ— ಕಪಾಲವು ಹರಹಾರಲತಾಮಧ್ಯೇ—ಪರಮೇಶ್ವರನ ಹಾರವೆಂಬ ಲತೆಯ ಮಧ್ಯದಲ್ಲಿ ಅದ್ಯಾಪಿ—ಇಂದೂ ತ್ವಂ—ನೀನು ಪಶ್ಯ — ನೋಡು. ಭೋ ಮುಗ್ಧ !—ಎಲೆ ಮುಗ್ಧನೇ ಕಸ್ಮಾತ್—ಆವಕಾರಣದ ದೆಸೆಯಿಂದ ನ ಬುಧ್ಯಸೇ—ಅರಿಯದಿದ್ದೆ.

ತದಂಶೇನ—ಆ ಪರಮೇಶ್ವರನ ಅಂಶವಹಂಥಾ ತಾರಕಾರಿಣಾ — ಸ್ವಾಮಿ-ಕಾರ್ತಿಕನಿಂದ ದಂಷ್ಟ್ರೋತ್ಪಾಟನಪೀಡಿತಃ—ದಾಡೆಯ ಕೀಳುವುದರಿಂದ ತೇ—ನಿನ್ನ

ಭೃಗುಣಾ ಶಪಿತಂ ಪೂರ್ವಂ ವಿಸ್ಮೃತಂ ತವ ದುರ್ಮತೇ
ಶಂಕುಕರ್ಣ[1]ಗಣೇನಾಪಿ[1] ಛಿನ್ನಂ ತೇ ಕೇಶಸಂಚಯಮ್ ||೬೪||

ದಗ್ಧೋಽಸಿ ಯಸ್ಯ ಶೂಲಾಗ್ರೇ ವಿಷ್ವಕ್ಸೇನಚ್ಛಲಾದ್ಭವಾನ್
ದಕ್ಷಯಜ್ಞೇ ಶಿರಶ್ಛಿನ್ನಂ ಮಯಾ ತೇ ಯಜ್ಞರೂಪಿಣಃ ||೬೫||

ಅದ್ಯಾಪಿ ತವ ಪುತ್ರಸ್ಯ ಬ್ರಹ್ಮಣಃ ಪಂಚಮಂ ಶಿರಃ
ಛಿನ್ನಮೇವ ನ ಕೇನಾಪಿ ಸಂಧಿತಂ ಪಶ್ಯ ತೇ ಬಲಮ್ ||೬೬||

ಹರನೇತ್ರಾನಲೇನೈವ ದಗ್ಧೋಽಭೂನ್ಮನ್ಮಥಃ ಕ್ಷಣಾತ್
ಸಮರ್ಥಶ್ಚೇದಹೋ ತ್ವಂ ಹಿ ತಸ್ಯಾಂಗಂ ಕಿಂ ನ ಭಾವಯೇಃ ||೬೭||

---

ವರಾಹವಿಗ್ರಹಃ—ವರಾಹಶರೀರವು . ಸಾಕ್ರೋಶಃ—ಮೊರೆಯಿಡುವದರಿಂದ ಸಹಿತವ ಹಂಥಾದ್ದು ಅದ್ಯ—ಈಗ ತತ್—ಅದು ವಿಸ್ಮೃತಂ —ಮರೆಯಲುಪಟ್ಟಿತ್ತು.

ಭೋ ದುರ್ಮತೇ—ಎಲೇ ದುರ್ಮತಿಯುಹಂಥಾತನೇ ಪೂರ್ವಂ — ಪೂರ್ವದಲ್ಲಿ ಭೃಗುಣಾ—ಭೃಗುಮಹಾಋಷಿಯಿಂದ ತವ—ನಿನ್ನ ಶಪಿತಂ — ಶಪಿಸಿದಂಥಾದ್ದು ವಿಸ್ಮೃತಂ—ಮರೆಯಲುಪಟ್ಟಿತ್ತು. ಶಂಕುಕರ್ಣಗಣೇನಾಪಿ—ಶಂಕುಕರ್ಣಗಣೇಶ್ವರನಿಂದವೂ ತೇ—ನಿನ್ನ ಕೇಶಸಂಚಯಂ—ಕೂದಲುಗಳ ಮೊತ್ತವು ಛಿನ್ನಂ—ಕೀಳಲುಪಟ್ಟಂಥಾ ವಿಸ್ಮೃತಂ—ಮರೆಯಲುಪಟ್ಟಿತ್ತು. ||೬೪||

ಭವಾನ್—ನೀನು ಯಸ್ಯ— ಆವನಾನೊಬ್ಬ ಪರಮೇಶ್ವರನ ಶೂಲಾಗ್ರೇ— ತ್ರಿಶೂಲದ ತುದಿಯಲ್ಲಿ ವಿಷ್ವಕ್ಸೇನಚ್ಛಲಾತ್—ವಿಷ್ವಕ್ಸೇನನೆಂಬ ನೆವದ ದೆಸೆಯಿಂದ ದಗ್ಧಃ—ಬೇವುತ್ತಿದ್ದಾತನು ಅಸಿ—ಆಗುತ್ತಿಹೆ. ದಕ್ಷಯಜ್ಞೇ—ದಕ್ಷನ ಯಾಗದಲ್ಲಿ ಯಜ್ಞರೂಪಿಣಃ—ಯಜ್ಞರೂಪನುಳ್ಳಂಥಾ ತೇ—ನಿನ್ನ ಶಿರಃ—ಶಿರಸ್ಸು ಮಯಾ —ಎನ್ನಿಂದ ಛಿನ್ನಂ— ಭೇದಿಸಲುಪಟ್ಟಿತ್ತು. ||೬೫||

ತವ—ನಿನ್ನ ಪುತ್ರಸ್ಯ—ಪುತ್ರನಹಂಥಾ ಬ್ರಹ್ಮಣಃ—ಬ್ರಹ್ಮನ ಪಂಚಮಂ ಶಿರಃ—ಐದನೆಯ ಶಿರಸ್ಸು ಛಿನ್ನಮೇವ—ಭೇದಿಸಲುಪಟ್ಟಿತ್ತು. ಕೇನಾಪಿ—ಆವಾತನಿಂದವೂ ಅದ್ಯಾಪಿ—ಈಗವೂ ನ ಸಂಧಿತಂ— ಸಂದುಗೂಡಲುಪಡದು. ತೇ— ನಿನ್ನ ಬಲಂ—ಸತ್ತ್ವವನು ಪಶ್ಯ—ನೋಡು. ||೬೬||

ಹರನೇತ್ರಾನಲೇನೈವ—ಪರಮೇಶ್ವರನ ದೃಷ್ಟಿಯ ಅಗ್ನಿಯಿಂದವೇ ಮನ್ಮಥಃ

---

[1] ಗಣೇಶೇನ (ಘ)

ನಿರ್ಜಿತಸ್ತ್ವಂ ದಧೀಚೇನ ಸಂಗ್ರಾಮೇ ಸಮರುದ್ಗಣಃ
ಕಂಡೂಯಮಾನಃ ಶಿರಸಿ ಕಥಂ ತದ್ವಿಸ್ಮೃತಂ ತ್ವಯಾ ||೧೮||

ಚಕ್ರಂ ವಿಕ್ರಮಸಾಹಾಯ್ಯಂ ಚಕ್ರಪಾಣೇ ತವ ಪ್ರಿಯಮ್
ಕುತಃ ಪ್ರಾಪ್ತಂ ಕೃತಂ ಕೇನ ತ್ವಯಾ ತದಪಿ ವಿಸ್ಮೃತಮ್ ||೧೯||

ಯತ್ತಾಮಸಕಲಾಲೇಶಗೃಹೀತಸ್ತ್ವಂ ಪಯೋನಿಧೌ
ನಿದ್ರಾಪರವಶಶ್ಶೇಷೇ ಸ ಕಥಂ ಸಾತ್ತ್ವಿಕೋ ಭವಾನ್ ||೨೦||

---

—ಕಾಮನು ಕ್ಷಣಾತ್ — ಕ್ಷಣಮಾತ್ರದ ಡೆಸೆಯಿಂದ ದಗ್ಧಃ — ದಹಿಸಲು ಪಟ್ಟಾತನು ಅಭೂದ್ಧಿ—ಆದನಲಾ. ತ್ವಂ—ನೀನು ಸಮರ್ಥಶ್ಚೇತ್—ಸಮರ್ಥ ನಾದ ಪಕ್ಷೇ ತಸ್ಯ—ಆ ಕಾಮನ ಅಂಗಂ—ಶರೀರವನು ಕಿಂ — ಏನು ಕಾರಣ ನ ಭಾವಯೇಃ — ಭಾವಿಸುತ್ತಂವಿರೆ. ಸೃಷ್ಟಿಸುತ್ತಿರೆಯೆಂಬುದರ್ಥ. ಅಹೋ — ಆಶ್ಚರ್ಯವು. ||೧೭||

ತ್ವಂ—ನೀನು ಸಂಗ್ರಾಮೇ—ಕಾಳಗದಲ್ಲಿ ಸಮರುದ್ಗಣಃ—ತ್ರಯಸ್ತ್ರಿಂಶ-ತ್ಕೋಟಿದೇವಗಣಂಗಳಿಂದ ಸಹಿತನಾಗಿ ದಧೀಚೇನ — ದಧೀಚಿಮಹಾಋಷಿಯಿಂದ ಶಿರಸಿ—ಮಸ್ತಕದಲ್ಲಿ ಕಂಡೂಯಮಾನಃ — ತಿನಿಸಿಕೊಳಲುಪಟ್ಟಾತನಾಗಿ ನಿರ್ಜಿತಃ ಸೋತವನು. ತತ್—ಅದು ತ್ವಯಾ—ನಿನ್ನಿಂದ ಕಥಂ—ಹೇಂಗೆ ವಿಸ್ಮೃತಂ —ಮರೆಯಲುಪಟ್ಟಿತ್ತು. ||೧೮||

ಭೋ ಚಕ್ರಪಾಣೇ!—ಎಲೆ ಚಕ್ರಪಾಣಿಯಹಂಥಾ ಹರಿಯೇ! ತವ—ನಿನಗೆ ಪ್ರಿಯಂ= ಪ್ರಿಯವಹಂಥಾ ವಿಕ್ರಮಸಾಹಾಯ್ಯಂ — ಪರಾಕ್ರಮಕ್ಕೆ ಸಹಾಯ್ಯ-ವಹಂಥಾ ಚಕ್ರಂ—ಚಕ್ರವು ಕುತಃ—ಎಲ್ಲಿಂದ ಪ್ರಾಪ್ತಂ—ಬಂದಿತು? ಕೇನ —ಆವಾತನಿಂದ ಕೃತಂ—ಮಾಡಲುಪಟ್ಟಿತ್ತು? ತ್ವಯಾ—ನಿನ್ನಿಂದ ತದಪಿ— ಅದೂ ವಿಸ್ಮೃತಂ—ಮರೆಯಲುಪಟ್ಟಿತ್ತು. ||೧೯||

ಯತ್—ಆವುದಾನೊಂದು ಕಾರಣವಾಗಿ ತ್ವಂ —ನೀನು ತಾಮಸಕಲಾ-ಲೇಶಗೃಹೀತಃ — ತಾಮಸಕಳೆಯ ಅಣುಮಾತ್ರವನು ಗ್ರಹಿಸಲುಪಟ್ಟಾತನಾಗಿ ಪಯೋನಿಧೌ—ಕ್ಷೀರಾಬ್ಧಿಯಲ್ಲಿ ನಿದ್ರಾಪರವಶಃ—ನಿದ್ರೆಯಲ್ಲಿ ಪರವಶನಾಗುತವು ಶೇಷೇ—ಶಯನವ ಮಾಡುತ್ತಿಹೆ ಸಃ—ಆ ಭವಾನ್ — ನೀನು ಕಥಂ — ಹೇಂಗೆ ಸಾತ್ತ್ವಿಕಃ—ಸಾತ್ವಿಕ ಗುಣವನುಳ್ಳಾತನು? ||೨೦||

ತ್ವದಾದಿಸ್ತಂಬಪರ್ಯಂತಂ ರುದ್ರಶಕ್ತ್ಯಾ ವಿಜೃಂಭಿತಮ್
ಶಕ್ತಿಮಾನ್ಪರಮೋ ದೇವಸ್ತಯೈವ ತ್ವಂ ವಿಮೋಹಿತಃ ||೭೧||

ತ್ವಚ್ಚೇತಸೋಽಪಿ ಮಾಹಾತ್ಮ್ಯಂ ಯುವಾಂ ದ್ರಷ್ಟುಂ ನ ಹಿ ಕ್ಷಮೌ
ಸೂರಯೋ ಯತ್ಪ್ರಪಶ್ಯಂತಿ ತದ್ವಿಷ್ಣೋಃ ಪರಮಂ ಪದಮ್ ||೭೨||

ದ್ಯಾವಾಪೃಥಿವ್ಯೋರಿಂದ್ರಾಗ್ನ್ಯೋರ್ಧಿಯಾಂ ತವ ಯಮಸ್ಯ ಚ
ವರುಣಸ್ಯ ಶಶಾಂಕಸ್ಯ ಜನಿತಾ ಪರಮೇಶ್ವರಃ ||೭೩||

ಕಾಲೋಽಸಿ ತ್ವಂ ಮಹಾಕಾಲಃ ಕಾಲಕಾಲೋ ಮಹೇಶ್ವರಃ
ಅತಸ್ತದ್ರುದ್ರಕಲಯಾ ಭೃತ್ಯೋ ಮೃತ್ಯುರ್ಭವಾನಸಿ ||೭೪||

---

ತ್ವದಾದಿ — ನೀ ಮೊದಲಾಗಿ ಸ್ತಂಬಪರ್ಯಂತಂ — ಹುಲ್ಲುಕಡೆಯಾಗಿ ರುದ್ರಶಕ್ತ್ಯಾ — ಪರಮೇಶ್ವರನ ಮಾಯೆಯಿಂದ ವಿಜೃಂಭಿತಂ — ಮುಸುಕಲು-ಪಟ್ಟಿತ್ತು. ಪರಮಃ—ಉತ್ಕೃಷ್ಟವಹಂಥಾ ದೇವಃ—ಶಿವನು ಶಕ್ತಿಮಾನ್—ಶಕ್ತಿಯನುಳ್ಳಾತನು. ತಯೈವ — ಆ ಮಾಯೆಯಿಂದವೇ ತ್ವಂ—ನೀನು ವಿಮೋಹಿತಃ—ಮೋಹಿಸಲುಪಟ್ಟಾತನು. ||೭೧||

ಮಾಹಾತ್ಮ್ಯಂ—ಶಿವನ ಮಹಿಮೆಯನು ದ್ರಷ್ಟುಂ—ಕಾಣಲು ಯುವಾಂ —ಬ್ರಹ್ಮನು ನೀನೂ ಇಬ್ಬರೂ ಕ್ಷಮೌ — ಸಮರ್ಥರುಗಳು ನ ಹಿ—ಅಲ್ಲಲಾ. ವಿಷ್ಣೋಃ—ವಿಷ್ಣುವಿಂಗೆಯೂ ಪರಮಂ— ಉತ್ಕೃಷ್ಟವಹಂಥಾ ಪದಂ — ಪದವು ಯತ್—ಅವುದಾನೊಂದುಂಟು. ತತ್ — ಆ ಶಿವತತ್ತ್ವವನು ಸೂರಯಃ — ಸನಕಾದಿವಿದ್ವಾಂಸುಗಳು ಪ್ರಪಶ್ಯಂತಿ—ಕಾಣುತ್ತಿಹರು. ತ್ವಚ್ಚೇತಸೋಽಪಿ—ನಿನ್ನ ಚಿತ್ತಕ್ಕೆಯೂ ನ—ಅರಿಯಬಾರದು. ||೭೨||

ಪರಮೇಶ್ವರಶ್ಚ— ಪರಮೇಶ್ವರ[ನಾದರೋ] ದ್ಯಾವಾಪೃಥಿವ್ಯೋಃ— ಆಕಾಶ ಭೂಮಿಗಳ ಇಂದ್ರಾಗ್ನ್ಯೋಃ — ಇಂದ್ರ ಅಗ್ನಿಗಳ ಧಿಯಾಂ — ಬುದ್ಧಿಯಾದಿ ಇಂದ್ರಿಯಂಗಳ ತವ—ನಿನ್ನ ಯಮಸ್ಯ—ಯಮನ ವರುಣಸ್ಯ — ವರುಣನ ಶಶಾಂಕಸ್ಯ—ಚಂದ್ರನ ಜನಿತಾ—ಹುಟ್ಟಿಸಿದನು. ||೭೩||

ತ್ವಂ—ನೀನು ಕಾಲಃ—ಕಾಲನು ಅಸಿ— ಆಗುತ್ತಿಹೆ. ಮಹೇಶ್ವರಃ — ಶಿವನು ಕಾಲಕಾಲಃ—ಕಾಲಂಗೆ ಕಾಲನಹಂಥಾ ಮಹಾಕಾಲಃ—ಮಹಾಕಾಲನು ಅತಃ—ಅದು ಕಾರಣವಾಗಿ ತದ್ರುದ್ರಕಲಯಾ—ಆ ರುದ್ರಕಳೆಯಿಂದ ಭವಾನ್—

ಸ್ಥಿರಧನ್ವಾ ಕ್ಷಯದ್ವೀರೋ ರುದ್ರೋ ವಿಶ್ವಾಧಿಕಃ ಪ್ರಭುಃ
ಉಪಹರ್ತುಂ ಯುವಾಂ ಭೀಮೌ ಮೃಗಪಕ್ಷೀ ಹಿರಣ್ಮಯಃ ||೭೫||

ಶಾಸ್ತಾಽಶೇಷಸ್ಯ ಜಗತೋ ನ ತ್ವಂ ನೈವ ಚತುರ್ಮುಖಃ
ಇತ್ಥಂ ಸರ್ವಂ ಸಮಾಲೋಕ್ಯ ಸಂಹರಾತ್ಮಾನಮಾತ್ಮನಾ ||೭೬||

ನೋ ಚೇದಿದಾನೀಂ ಕ್ರುದ್ಧಸ್ಯ ಮಹಾಭೈರವರೂಪಿಣಃ
ವಜ್ರಾಶನಿರಿವ ಸ್ಥಾಣೌ ತ್ವಯಿ ಮನ್ಯುಃ ಪತಿಷ್ಯತಿ ||೭೭||

ಸೂತ ಉವಾಚ

ಇತ್ಯುಕ್ತೋ ವೀರಭದ್ರೇಣ ನೃಸಿಂಹಃ ಕ್ರೋಧವಿಹ್ವಲಃ
ನನರ್ದೋತ್ಪ್ಲುತ್ಯ ವೇಗೇನ ತಂ ಗೃಹೀತುಂ ಪ್ರಚಕ್ರಮೇ ||೭೮||

---

ನೀನು ಭೃತ್ಯಃ — ಸೇವಕನಹಂಥಾ ಮೃತ್ಯುಃ — ಮೃತ್ಯುರೂಪನು ಅಸಿ — ಆಗುತ್ತೀಹೆ. ||೭೪||

ರುದ್ರಃ—ಪರಮೇಶ್ವರನು ಸ್ಥಿರಧನ್ವಾ—ಸ್ಥಿರವಹ ಚಾಪವನುಳ್ಳಾತನು. ಕ್ಷಯದ್ವೀರಃ—ಕ್ಷಯವ ಮಾಡಲುಪಟ್ಟ ವೀರರುಗಳನುಳ್ಳಾತನು. ವಿಶ್ವಾಧಿಕಃ — ವಿಶ್ವಕ್ಕೆ ಅಧಿಕನು. ಪ್ರಭುಃ — ಒಡೆಯನು. ಹಿರಣ್ಮಯಃ — ಸುವರ್ಣಮಯವ ಹಾಘಾತನು. ಯುವಾಂ — ಬ್ರಹ್ಮನು ನೀನೂ ಇಬ್ಬರು ಭೀಮೌ— ಭಯಂಕರವಹಂಥಾ ಮೃಗಪಕ್ಷೀ—ಮೃಗಪಕ್ಷಿಗಳಾದಿರಿ. ||೭೫||

ಅಶೇಷಸ್ಯ—ಸಮಸ್ತವಹಂಥಾ ಜಗತಃ—ಲೋಕವ ಶಾಸ್ತಾ — ಶಿಕ್ಷಿಸುವಾತನು ತ್ವಂ—ನೀನು ನ—ಅಲ್ಲ. ಚತುರ್ಮುಖಃ — ಬ್ರಹ್ಮನು ನೈವ — ಅಲ್ಲ. ಇತ್ಥಂ—ಈ ಪ್ರಕಾರದಲ್ಲಿ ಸರ್ವಂ—ಎಲ್ಲವನು ಸಮಾಲೋಕ್ಯ—ನೋಡಿ ಆತ್ಮನಾ—ನಿನ್ನಿಂದ ಆತ್ಮಾನಂ—ನೃಸಿಂಹಶರೀರವನು ಸಂಹರ—ಬಿಡು. ||೭೬||

ನೋ ಚೇತ್—ನೃಸಿಂಹಶರೀರವ ಬಿಡದೇ ಇದ್ದ ಪಕ್ಷೇ, ಇದಾನೀಂ—ಈಗಳು ಕ್ರುದ್ಧಸ್ಯ—ಕೋಪಿಸಿದಂಥಾ ಮಹಾಭೈರವರೂಪಿಣಃ — ಮಹಾಭಯಂಕರವಹ ರೂಪುವುಳ್ಳಂಥಾ ಶಿವನ ಮನ್ಯುಃ—ಕೋಪವು ತ್ವಯಿ — ನಿನ್ನಲ್ಲಿ ಪತಿಷ್ಯತಿ —ಬೀಳುವುದು. ಕಥಮಿವ—ಅದು ಹೇಂಗೆಯೂ ಎಂದಡೆ ವಜ್ರಾಶನಿಃ—ಇಂದ್ರನ ವಜ್ರವು [ಸಿಡಿಲು] ಸ್ಥಾಣೌ ಇವ—ಕೊರಡಿನಲ್ಲಿ ಎಹಗಹಗೆ. ||೭೭||

ವೀರಭದ್ರೇಣ—ವೀರಭದ್ರನಿಂದ ಇತ್ಯುಕ್ತಃ—ಈ ಪ್ರಕಾರವಲ್ಲಿ ನುಡಿಯಲು

ಅತ್ರಾಂತರೇ ಮಹಾಘೋರಂ ವಿಪಕ್ಷಕ್ಷಯಕಾರಕಮ್
ಗಗನವ್ಯಾಪಿ ದುರ್ದರ್ಶಂ ಶಾರ್ವಂ ತೇಜಸ್ಸಮುದ್ಬಭೌ ||
ವೀರಭದ್ರಸ್ತು ತದ್ರೂಪಃ ಕ್ಷಣಾದ್ದೇವೈರದೃಶ್ಯತ ||೭೯||

ನ ತದ್ಧಿರಣ್ಮಯಂ ರೌಪ್ಯಂ ನ ಸೌರಂ ನಾಗ್ನಿಸನ್ನಿಭಮ್
ನ ತಟಿಚ್ಚಂದ್ರಸದೃಶಮಭೂತೋಪಮಮೈಶ್ವರಮ್ ||
ತದಾ ತೇಜಾಂಸಿ ಸರ್ವಾಣಿ ತಸ್ಮಿನ್ ಲೀನಾನಿ ಶಾಂಕರೇ ||೮೦||

ನೃಸಿಂಹವಕ್ತ್ರನೇತ್ರಾಭ್ಯಾಂ ಸೂಕ್ಷ್ಮಂ ತೇಜೋ ವಿನಿರ್ಗತಮ್
ರಕ್ತೋ ಹುತಾಶನೇ ಚೈವ ಕ್ಷಣಾಲ್ಲೀನಂ ಶಿವಾತ್ಮಕೇ ||೮೧||

---

ಪಟ್ಟಂಥಾ ನೃಸಿಂಹಃ—ನರಸಿಂಹನು ಕ್ರೋಧವಿಹ್ವಲಃ—ಕ್ರೋಧದಿಂದ ಮುಂದು ಗೆಟ್ಟಾತನಾಗಿ ನನರ್ದ—ಗರ್ಜಿಸಿ ಉತ್ಪ್ಲುತ್ಯ—ಹಾರಿ ವೇಗೇನ—ವೇಗದಿಂದ ತಂ—ಆ ವೀರಭದ್ರನನು ಗೃಹೀತುಂ—ಹಿಡಿಯಲು ಪ್ರಚಕ್ರಮೇ—ಉದ್ಯೋಗಿಸಿದನು. ||೭೮||

ಅತ್ರಾಂತರೇ—ಈ ಅನಂತರದಲ್ಲಿ ಮಹಾಘೋರಂ—ಅತಿಭಯಂಕರವಹಂಥಾ ವಿಪಕ್ಷಕ್ಷಯಕಾರಕಂ — ಶತ್ರುಕ್ಷಯುವ ಮಾಡುವಂಥಾ ಗಗನವ್ಯಾಪಿ— ಆಕಾಶ ವ್ಯಾಪಿಸಿದಂಥಾ ದುರ್ದರ್ಶಂ — ನೋಡಬಾರದಿದ್ದಂಥಾ ಶಾರ್ವಂ — ಶಿವನ ಸಂಬಂಧವಹಂಥಾ ತೇಜಃ—ತೇಜಸ್ಸು ಸಮುದ್ಬಭೌ—ಒಪ್ಪಿತ್ತು. ವೀರಭದ್ರಸ್ತು —ವೀರಭದ್ರನು ತದ್ರೂಪಃ—ಆ ಭಯಂಕರ ರೂಪನುಳ್ಳಾತನಾಗಿ ಕ್ಷಣಾತ್— ಕ್ಷಣಮಾತ್ರದ ದೆಸೆಯಿಂದ ದೇವೈಃ—ದೇವರ್ಕಳಿಂದ ಅದೃಶ್ಯತ—ಕಾಣಲುಪಟ್ಟನು.

ತತ್—ಆ ತೇಜಸ್ಸು ಹಿರಣ್ಮಯಂ — ಸುವರ್ಣಮಯವು ನ — ಅಲ್ಲ. ರೌಪ್ಯಂ—ಬೆಳ್ಳಿಯ ವರ್ಣವು ನ—ಅಲ್ಲ. ಅಗ್ನಿಸನ್ನಿಭಂ — ಅಗ್ನಿಗೆ ಸಮಾನವ ಹಂಥಾದು ನ—ಅಲ್ಲ. ತಟಿಚ್ಚಂದ್ರಸದೃಶಂ—ಮಿಂಚುಚಂದ್ರರುಗಳಿಗೆ ಸಮಾನ ವಹಂಥಾದು ನ—ಅಲ್ಲ. ಐಶ್ವರಂ — ಈಶ್ವರನ ಸಂಬಂಧವಹಂಥಾ ತೇಜಸ್ಸು ಅಭೂತೋಪಮಂ — ಹುಟ್ಟಲುಪಡದೇ ಇದ್ದ ಉಪಮಾನವನುಳ್ಳಂಥಾದಾಯಿತು-ತದಾ—ಆಗ ಸರ್ವಾಣಿ ತೇಜಾಂಸಿ—ಸಮಸ್ತ ತೇಜಸ್ಸುಗಳು ಶಾಂಕರೇ—ಶಿವ-ಸಂಬಂಧವಹಂಥಾ ತಸ್ಮಿನ್—ಆ ತೇಜಸ್ಸಿನಲ್ಲಿ ಲೀನಾನಿ—ಅಡಗಿದವು. ||೮೦||

ನೃಸಿಂಹವಕ್ತ್ರನೇತ್ರಾಭ್ಯಾಂ—ನರಸಿಂಹನ ಮುಖನಯನಂಗಳಿಂದ ವಿನಿರ್ಗತಂ —ಹೊರವಂಟಂಥಾ ತೇಜಃ — ತೇಜಸ್ಸು ಸೂಕ್ಷ್ಮವಹಂಥಾದಾಗಿ ಶಿವಾತ್ಮಕೇ —ಶಿವಸ್ವರೂಪವಹಂಥಾ ತೇಜಸ್ಸಿನಲ್ಲಿ ಕ್ಷಣಾಚ್ಚ — ಕ್ಷಣಮಾತ್ರದ ದೆಸೆಯಿಂದ

ತದವ್ಯಕ್ತಂ ಮಹತ್ತೇಜೋ ವ್ಯಕ್ತಂ ಸಮಭವತ್ತತಃ
ರುದ್ರಸಾಧಾರಣೈಶ್ಚಿಹ್ನೈಃ ಚಿಹ್ನಿತಂ ವಿಕೃತಾಕೃತಿ ॥೮೨॥

ತತಶ್ಶರಭರೂಪೇಣ ಸುವ್ಯಕ್ತಃ ಪರಮೇಶ್ವರಃ
ಪಶ್ಯತಾಂ ಸರ್ವದೇವಾನಾಂ ಜಯಶಬ್ದಾದಿಮಂಗಳೈಃ ॥೮೩॥

ಸಹಸ್ರಬಾಹುರ್ಜಟಿಲಃ ಚಂದ್ರಾರ್ಧಕೃತಶೇಖರಃ
ಮೃಗಸ್ತ್ವರ್ಧಶರೀರೇಣ ಪಕ್ಷಾಭ್ಯಾಂ ಚಂಚುನಾ ದ್ವಿಜಃ ॥೮೪॥

ಅತಿತೀಕ್ಷ್ಣಮಹಾದಂಷ್ಟ್ರೋ ವಜ್ರತುಲ್ಯನಖಾಯುಧಃ
ಕಂಠೇ ಕಾಲೋ ಮಹಾಪುಚ್ಛಃ ಚತುಷ್ಪಾದ್ವಹ್ನಿಸನ್ನಿಭಃ ॥೮೫॥

---

ಲೀನಂ—ಅಡಗಿತ್ತು. ಕಥಮಿವ — ಅದು ಹೇಂಗೆಯೆಂದಡೆ ಹುತಾಶನೇ — ಯಜ್ಞಪುರುಷನಲ್ಲಿ ರಕ್ತ ಇವ—ರಕ್ತವರ್ಣವೆಹಗಹಗೆ. ॥೮೧॥

ಅವ್ಯಕ್ತಂ — ಅರಿಯಬಾರದೇ ಇದ್ದಂಥಾ ಮಹತ್ — ಉತ್ಕೃಷ್ಟವಹಂಥಾ ತತ್ತೇಜಃ—ಆ ತೇಜಸ್ಸು ತತಃ—ಅಷ್ಟರಮೇಲೆ ರುದ್ರಸಾಧಾರಣೈಃ — ರುದ್ರಂಗೆ ಸಮಾನವಹಂಥಾ ಚಿಹ್ನೈಃ—ಕುರುಹುಗಳಿಂದ ಚಿಹ್ನಿತಂ— ಅಂಕಿಸಲುಪಟ್ಟಂಥಾ ವಿಕೃತಾಕೃತಿ—ಭಯಂಕರವಹ ಆಕಾರವನುಳ್ಳಂಥಾದಾಗಿ ವ್ಯಕ್ತಂ — ಅರಿಯಬಹಂಥಾದು ಸಮಭವತ್—ಆಯಿತ್ತು. ॥೮೨॥

ತತಃ—ಅಷ್ಟರ ಮೇಲೆ ಪರಮೇಶ್ವರಃ — ಪರಮೇಶ್ವರನು ಪಶ್ಯತಾಂ — ನೋಡುತ್ತಿದ್ದಂಥಾ ಸರ್ವದೇವಾನಾಂ — ಸಮಸ್ತದೇವರ್ಕಳ ಜಯಶಬ್ದಾದಿ-ಮಂಗಳೈಃ—ಜಯಜಯ ಎಂಬ ಶಬ್ದ ಮೊದಲಾದಂಥಾ ಮಂಗಳಂಗಳೊಡನೆ ಶರಭರೂಪೇಣ—ಶರಭರೂಪಿಂದ ಸುವ್ಯಕ್ತಃ—ಲೇಸಾಗಿ ಕಾಣಲುಪಟ್ಟನು. ॥೮೩॥

ಸಹಸ್ರಬಾಹುಃ—ಸಾವಿರಭುಜಂಗಳನುಳ್ಳಂಥಾ ಜಟಿಲಃ — ಜಟಾಮುಕುಟವನುಳ್ಳಂಥಾ ಚಂದ್ರಾರ್ಧಕೃತಶೇಖರಃ—ಅರ್ಧಚಂದ್ರನಿಂದ ಮಾಡಲುಪಟ್ಟ ಚೂಡಾಮಣಿಯನುಳ್ಳಂಥಾ ಅರ್ಧಶರೀರೇಣ—ಅರ್ಧದೇಹದಿಂದ ಮೃಗಃ—ಮೃಗವಹಂಥಾ ಪಕ್ಷಾಭ್ಯಾಂ—ಪಖ್ಖಂ [ಪಕ್ಷಂ]ಗಳಿಂದ ಚಂಚುನಾ — ಚಂಚುಪುಟದಿಂದ ದ್ವಿಜಃ —ಪಕ್ಷಿಯಹಂಥಾ, ॥೮೪॥

ಅತಿತೀಕ್ಷ್ಣ ಮಹಾದಂಷ್ಟ್ರಃ = ಅತಿ ಹರಿತವಹ ದೊಡ್ಡಿಹ ದಾಡೆಗಳನುಳ್ಳಂಥಾ ವಜ್ರ ತುಲ್ಯನಖಾಯುಧಃ—ವಜ್ರಕ್ಕೆ ಸಮಾನವಹ ಉಗುರುಗಳೇ ಆಯುಧಂಗಳಾಗಿ ಉಳ್ಳಂಥಾ ಕಂಠೇ—ಕೊರಳಿನಲ್ಲಿ ಕಾಲಃ — ಕಪ್ಪುವರ್ಣವನುಳ್ಳಂಥಾ ಮಹಾ-

ಅಧೋಗತಚತುಷ್ಪಾದಃ ಉಪರಿಷ್ಟಾಚ್ಚತುಷ್ಪದಃ
ಯುಗಾಂತೋದ್ಯತಜೀಮೂತಭೀಮಗಂಭೀರನಿಸ್ವನಃ

ಸಮಸತ್ತ್ವಪ್ರವೃತ್ತಾಗ್ನಿವ್ಯಾವೃತ್ತನಯನತ್ರಯಃ
ಸ್ಪಷ್ಟದಂಷ್ಟ್ರಾಧರೋಷ್ಠಶ್ಚ ಹುಂಕಾರಮುಖರೋ ಹರಃ ||೮೭||

ಹರಿಸ್ತದ್ದರ್ಶನಾದೇವ ವಿನಷ್ಟಬಲವಿಕ್ರಮಃ
ಬಭೂವೋದ್ಯತ್ಸಹಸ್ರಾಂಶುಹತಖದ್ಯೋತವದ್ಭೃಶಮ್ ||೮೮||

ಅಥ ಪ್ರಹೃತ್ಯ ಪಕ್ಷಾಭ್ಯಾಂ ನಾಭಿಂ ಪದ್ಭ್ಯಾಂ ವ್ಯದಾರಯತ್
ಪಾದಾವಾಬಧ್ಯ ಪುಚ್ಛೇನ ಬಾಹುಭಿರ್ಬಾಹುಮಂಡಲಮ್ ||೮೯||

---

ಪುಚ್ಛಃ—ದೊಡ್ಡಿಹ ಬಾಲವನುಳ್ಳಂಥಾ ವಹ್ನಿಸನ್ನಿಭಃ—ಅಗ್ನಿಗೆ ಸಮಾನವಹಂಥಾ ಚತುಷ್ಪಾತ್—ನಾಲ್ಕು ಕಾಲುಗಳನುಳ್ಳಂಥಾ ||೮೬||

ಅಧೋಗತಚತುಷ್ಪಾದಃ—ಕೆಳಗೆ ಎಯ್ದಲುಪಟ್ಟ ನಾಲ್ಕು ಪಾದಂಗಳನುಳ್ಳಂಥಾ ಉಪರಿಷ್ಟಾತ್ — ಮೇಲೆ ಚತುಷ್ಪಾದಃ — ನಾಲ್ಕು ಕಾಲುಗಳನುಳ್ಳಂಥಾ ಯುಗಾಂತೋದ್ಯತಜೀಮೂತಭೀಮಗಂಭೀರನಿಸ್ವನಃ— ಯುಗದ ಕಡೆಯಲ್ಲಿ ಉದ್ಯೋಗವನುಳ್ಳ ಮೇಘದೋಪಾದಿ ಭಯಂಕವಹ ಗಂಭೀರಧ್ವನಿಯನುಳ್ಳಂಥಾ,

ಸಮಸತ್ತ್ವಪ್ರವೃತ್ತಾಗ್ನಿವ್ಯಾವೃತ್ತನಯನತ್ರಯಃ—[1]ಸಮಾನವಹ ಸತ್ತ್ವದ[1] ವರ್ತನೆಯನುಳ್ಳ ಅಗ್ನಿಯೋಪಾದಿ ತಿರುಗಲುಪಟ್ಟ ಕಣ್ಣುಗಳು ಮೂರನುಳ್ಳಂಥಾ ಸ್ಪಷ್ಟದಂಷ್ಟ್ರಾಧರೋಷ್ಠಃ—ವ್ಯಕ್ತವಹ ದಾಡೆ ಅಧರ ಓಷ್ಠಂಗಳನ್ನುಳ್ಳಂಥಾ ಹರಶ್ಚ—ಶರಭರೂಪನುಳ್ಳಂಥಾ ಶಿವನು ಹುಂಕಾರಮುಖರಃ — ಹುಂಕಾರದಿಂದ ನಿಷ್ಠುರವ ಹಂಥಾತನಾದನು. ||೮೭||

ಹರಿಃ—ನರಸಿಂಹನು ತದ್ದರ್ಶನಾದೇವ—ಆ ಶರಭನ ಕಂಡುದರ ದೆಸೆಯಿಂದವೇ ವಿನಷ್ಟಬಲವಿಕ್ರಮಃ—ಕೆಡಲುಪಟ್ಟ ಸತ್ತ್ವಪರಾಕ್ರಮವನುಳ್ಳಾತನಾಗಿ ಭೃಶಂ— ಅತ್ಯಂತ ಉದ್ಯತ್ಸಹಸ್ರಾಂಶುಹತಖದ್ಯೋತವತ್—ಉದಯವಾಗುತ್ತಿದ್ದ ಸಹಸ್ರ ಕಿರಣನಹ ಸೂರ್ಯನಿಂದ ಕೆಡಲುಪಟ್ಟ ಮಿಂಚುಬುಳುವಿನೋಪಾದಿ ಬಭೂವ — ಆದನು. ||೮೮||

[2]ಅಥ—ಅನಂತರದಲ್ಲಿ ಪಕ್ಷಾಭ್ಯಾಂ—ಪಕ್ಷಂಗಳಿಂದ ಪ್ರಹೃತ್ಯ—ಹೊಡದು ಪದ್ಭ್ಯಾಂ—ಕಾಲುಗಳಿಂದ[2] ನಾಭಿಂ—ಹೊಕ್ಕಳನು ವ್ಯದಾರಯತ್—ಒಡ್ದನು.

---

[1] ಸಮಸತ್ತ್ವದ (ಕ) [2] ಲುಪ್ತ (ಕ)

ಭಿಂದನ್ನುರಶ್ಚ ಬಾಹುಭ್ಯಾಂ ತಂ ಜಗ್ರಾಹ ಹರೋ ಹರಿಮ್
ತತೋ ಜಗಾಮ ಗಗನಂ ಸಹ ದೇವೈಸ್ಸಹರ್ಷಿಭಿಃ ||
ಸಹಸೈವ ಹರನ್ವಿಷ್ಣುಂ ಹರಶ್ಶ್ಯೇನ ಇವೋರಗಮ್ ||೯೦||

ಉತ್ಕ್ಷಿಪ್ಯೋತ್ಕ್ಷಿಪ್ಯ ತಂ ಗೃಹ್ಯ ನಿಪಾತ್ಯ ಚ ನಿಪಾತ್ಯ ಚ
ಉಡ್ಡೀಯೋಡ್ಡೀಯ ಭಗವಾನ್ ಪಕ್ಷಘಾತವಿಮೋಹಿತಮ್ ||೯೧||

ಬಿಭೇದ ಪದ್ಭ್ಯಾಮಾಕ್ರಮ್ಯ ಹೃದಯಂ ಸಖರೈಃ ಖರೈಃ
ಹರಿಂ ಹರಂತಂ ಶರಭಂ ವಿಶ್ವಸ್ಯೇಶಾನಮೀಶ್ವರಮ್
ಅಸುಂಯಾಂತಿ ಸುರಾಸ್ಸರ್ವೇ ನಮೋವಾಕ್ಯೈಸ್ಸಹ ದ್ರುತಮ್ ||೯೨||

ಪುಚ್ಛೇನ—ಬಾಲದಿಂದ ಪಾದೌ—ಕಾಲುಗಳೆರಡನು ಆಬಧ್ಯ—ಕಟ್ಟಿ ಬಾಹುಭಿಃ—ಭುಜಂಗಳಿಂದ ಬಾಹುಮಂಡಲಂ — ಭುಜಂಗಳ ಸಮೂಹವನು ಆಬಧ್ಯ—ಬಿಗಿದು, ||೮೯||

ಬಾಹುಭ್ಯಾಂ—ಕೈಗಳಿಂದ ಉರಶ್ಚ—ಎದೆಯನು ಭಿಂದನ್ —ಶಿವಿವುತವು ಹರಃ—ಶರಭ ರೂಪವನುಳ್ಳ ಶಿವನು ತಂ ಹರಿಂ—ಆ ನರಸಿಂಹನನು ಜಗ್ರಾಹ—ಹಿಡಿದನು. ತತಃ—ಅಷ್ಟರಮೇಲೆ ಹರಃ—ಶಿವನು ವಿಷ್ಣುಂ—ವಿಷ್ಣುವನು ಹರನ್—ಕೊಲ್ಲುತ್ತವು ಸಹಸೈವ — ಬೇಗದಿಂದವೇ ದೇವೈಸ್ಸಹ — ದೇವರ್ಕಳೊಡನೆ ಋಷಿಭಿಸ್ಸಹ—ಋಷಿಗಳೊಡನೆ ಗಗನಂ—ಆಕಾಶವನು ಜಗಾಮ—ಎಯ್ದಿದನು ಕಥಮಿವ—ಅದು ಹೇಂಗೆಯೆಂದಡೆ ಶ್ಯೇನಃ—ಹದ್ದು ಉರಗಂ ಇವ—ಸರ್ಪವ ನೆಹಗಹಗೆ. ||೯೦||

ಭಗವಾನ್ — ಷಡ್ಗುಣೈಶ್ವರ್ಯವನುಳ್ಳಂಥಾ ಶರಭೇಶ್ವರನು ಪಕ್ಷಘಾತ-ವಿಮೋಹಿತಂ—ಪಕ್ಕದ ಹೊಯಿಲಿನಿಂದ ಮೂರ್ಛಿತನಾದಂಥಾ ತಂ—ಆ ನರಸಿಂಹನನು ಉತ್ಕ್ಷಿಪ್ಯ ಉತ್ಕ್ಷಿಪ್ಯ — [3]ಮೇಲಕ್ಕೆ[3] [4]ಹಾಕಿಹಾಕಿ[4], ಗೃಹ್ಯ — ಹಿಡಿದು ನಿಪಾತ್ಯ ಚ ನಿಪಾತ್ಯ ಚ — ಕೆಡಹಿ ಕೆಡಹಿಯೂ ಉಡ್ಡೀಯ ಉಡ್ಡೀಯ — ಹಾರಿ ಹಾರಿ. ||೯೧||

ಪದ್ಭ್ಯಾಂ—ಕಾಲುಗಳಿಂದ ಆಕ್ರಮ್ಯ—ಅಪ್ಪಚಿಕೊಂಡು ಖರೈಃ—ಕರ್ಕಶವಹಂಥಾ ಸಖರೈಃ— ಉಗುರುಗಳಿಂದ ಹೃದಯಂ — ಎದೆಯನು ಬಿಭೇದ—ಬಗಿದನು. ಹರಿಂ—ನರಸಿಂಹನನು ಹರಂತಂ—ಸಂಹರಿಸುತ್ತಿದ್ದಂಥಾ ವಿಶ್ವಸ್ಯ—

[3] ನೆಲಕ್ಕೆ (ಕ) [4] ಹಾಯಿಕ್ಕಿ ಹಾಯಿಕ್ಕಿ (ಖ)

ನೀಯಮಾನಃ ಪರವಶೋ ದೀನವಕ್ತ್ರಃ ಕೃತಾಂಜಲಿಃ
ತುಷ್ಟಾವ ಪರಮೇಶಾನಂ ಹರಿಸ್ತಂ ಲುಠಿತಾಕ್ಷರಮ್ ||೯೩||

ನೃಸಿಂಹ ಉವಾಚ

ನಮೋ ರುದ್ರಾಯ ರೌದ್ರಾಯ ಮಹಾಗ್ರಾಸಾಯ ಜಿಷ್ಣವೇ
ನಮ ಉಗ್ರಾಯ ಭೀಮಾಯ ನಮಃ ಕ್ರುದ್ಧಾಯ ಮನ್ಯವೇ ||೯೪||

ನಮೋ ಭವಾಯ ಶರ್ವಾಯ ಶಂಕರಾಯ ಶಿವಾಯ ತೇ
ಕಾಲಾಯ ಕಾಲಕಾಲಾಯ ಮಹಾಕಾಲಾಯ ಮೃತ್ಯವೇ ||೯೫||

---

ಸಮಸ್ತ ಲೋಕಕ್ಕೆ ಈಶಾನಂ — ಒಡೆಯನಹಂಥಾ ಈಶ್ವರಂ — ಪರಮೇಶ್ವರನ ಹಂಥಾ ಶರಭಂ — ಶರಭಮೂರ್ತಿಯನು ಕುರಿತು ಸರ್ವೇ ಸುರಾಃ — ಸಮಸ್ತ ದೇವತೆಗಳುಗಳು ನಮೋವಾಕ್ಯೈಸ್ಸಹ—ನಮೋ ನಮಃ ಎಂಬ ವಾಕ್ಯಂಗಳಿಂದ ಸಹಿತ ವಾಗಿ ದ್ರುತಂ—ಬೇಗ ಅನುಯಾಂತಿ—ಬಳಿವಿಡಿದೆಯ್ದುತ್ತಿದ್ದರು. ||೯೨||

ಪರವಶಃ—ಪರವಶನಾಗಿ ನೀಯಮಾನಃ— ಎಯ್ದುತ್ತಿದ್ದಂಥಾ ಹರಿಃ — ನರಸಿಂಹನು ದೀನವಕ್ತ್ರಃ—ದೈನ್ಯವಹ ಮುಖವನುಳ್ಳಾತನಾಗಿ ಕೃತಾಂಜಲಿಃ — ಕೈಮುಗಿದುಕೊಂಡಾತನಾಗುತ್ತವು ಪರಮೇಶಾನಂ— ಆ ಪರಮೇಶ್ವರನನು ಕುರಿತು ಲುಠಿತಾಕ್ಷರಂ—ಗದ್ಗದಾಕ್ಷರವೆಹಗಹುದಹಗೆ ತುಷ್ಟಾವ—ಸ್ತೋತ್ರವ ಮಾಡಿದನು

ನೃಸಿಂಹಉವಾಚ—ನೃಸಿಂಹನ ವಾಕ್ಯವು

ರುದ್ರಾಯ—ದುಃಖವನು ಕೆಡಿಸುತ್ತಿದ್ದಂಥಾ ರೌದ್ರಾಯ — ರೌದ್ರರೂಪ ನಹಂಥಾ ಮಹಾಗ್ರಾಸಾಯ — ಬಹಳವಹ ಗ್ರಾಸವನುಳ್ಳಂಥಾ ಜಿಷ್ಣವೇ — ಜಯಶೀಲನಹಂಥಾ ಶಿವಂಗೋಸ್ಕರ ನಮಃ — ನಮಸ್ಕಾರವು. ಕ್ರುದ್ಧಾಯ — ಕ್ರೋಧಿಸುವಂಥಾ ಮನ್ಯವೇ— ಕೋಪವನುಳ್ಳಂಥಾ ನಿನಗೋಸ್ಕರ ನಮಃ— ನಮಸ್ಕಾರವು. ||೯೪||

ಭವಾಯ—ಸೃಷ್ಟಿಯನು ಮಾಡುತ್ತಿದ್ದಂಥಾ ಶರ್ವಾಯ — ಸಂಹಾರವನು ಮಾಡುತ್ತಿದ್ದಂಥಾ ಶಂಕರಾಯ — ಸುಖವನು ಮಾಡುತ್ತಿದ್ದಂಥಾ ಶಿವಾಯ— ಮಂಗಳಸ್ವರೂಪನಹಂಥಾ ಕಾಲಾಯ—ಕಾಲರೂಪನಹಂಥಾ ಕಾಲಕಾಲಾಯ— ಕಾಲಂಗೆ ಕಾಲನಹಂಥಾ ಮಹಾಕಾಲಾಯ — ಮಹಾಕಾಲನಹಂಥಾ ಮೃತ್ಯವೇ — ಮೃತ್ಯುರೂಪನಹಂಥಾ ತೇ — ನಿನಗೋಸ್ಕರ ನಮಃ — ನಮಸ್ಕಾರವು. 'ಶೃಣಾತಿ ಸರ್ವಮಿತಿ ಶರ್ವಃ' ಸರ್ವಂ—ಸಮಸ್ತಲೋಕವನು ಶೃಣಾತಿ—ಸಂಹರಿಸು ತ್ತಿಹನು ಇತಿ—ಹಿಂಗೆಂಬ ಅರ್ಥದಲ್ಲಿ ಶರ್ವನಾಮವು ವರ್ತಿಸಲುಪಟ್ಟಿತ್ತು. ಶೃ-ಹಿಂಸಾಯಾಂ ಎಂಬ ಧಾತು. ಈ ನಿರ್ವಚನ 'ಲಿಂಗಾಭಟ್ಟೀಯಲ್ಲಿ' ಹೇಳಿ ಇದ್ದೂದು.

ವೀರಾಯ ವೀರಭದ್ರಾಯ ಕ್ಷಯದ್ವೀರಾಯ ಶೂಲಿನೇ
ಮಹಾದೇವಾಯ ಮಹತೇ ಪಶೂನಾಂ ಪತಯೇ ನಮಃ ||೯೬||

ಏಕಾಯ ನೀಲಕಂಠಾಯ ಶ್ರೀಕಂಠಾಯ ಪಿನಾಕಿನೇ
ನಮೋಽನಂತಾಯ ಸೂಕ್ಷ್ಮಾಯ ನಮಸ್ತೇ ಮೃತ್ಯುಮೃತ್ಯವೇ ||೯೭||

ಪರಾಯ ಪರಮೇಶಾಯ ಪರಾತ್ಪರತರಾಯ ತೇ
ಪರಾಪರಾಯ ವಿಶ್ವಾಯ ನಮಸ್ತೇ ವಿಶ್ವಮೂರ್ತಯೇ ||೯೮||

ನಮೋ ವಿಷ್ಣುಕಲತ್ರಾಯ ವಿಷ್ಣುಕ್ಷೇತ್ರಾಯ ಭಾನವೇ
ಕೈವರ್ತಾಯ ಕಿರಾತಾಯ ಮಹಾವ್ಯಾಧಾಯ ತೇ ನಮಃ ||೯೯||

---

ವೀರಾಯ—ವೀರನಹಂಥಾ ವೀರಭದ್ರಾಯ—ವೀರದಿಂದ ಒಪ್ಪುತ್ತಂವಿದ್ದಂಥಾ ಕ್ಷಯದ್ವೀರಾಯ—ಸಂಹರಿಸಲಂಪಟ್ಟ ವೀರರುಗಳನುಳ್ಳಂಥಾ ಶೂಲಿನೇ—ತ್ರಿಶೂಲವನುಳ್ಳಂಥಾ ಮಹಾದೇವಾಯ—ಅಧಿಕವಹ ದೇವನಹಂಥಾ ಮಹತೇ—ಮಹತ್ತ್ವವನುಳ್ಳಂಥಾ ಪಶೂನಾಂ—ಪಶುಗಳಿಗೆ ಪತಯೇ—ಒಡೆಯನಹಂಥಾ ನಿನಗೋಸ್ಕರ ನಮಃ—ನಮಸ್ಕಾರವು. ||೯೬||

ಏಕಾಯ — ಏಕಮೂರ್ತಿಯಹಂಥಾ ನೀಲಕಂಠಾಯ — ನೀಲವರ್ಣವಹ ಕೊರಳನುಳ್ಳಂಥಾ ಶ್ರೀಕಂಠಾಯ—ಒಪ್ಪುತ್ತಂವಿದ್ದ ಕಂಠವನುಳ್ಳಂಥಾ ಪಿನಾಕಿನೇ — ಪಿನಾಕವೆಂಬ ಬಿಲ್ಲನುಳ್ಳಂಥಾ ಅನಂತಾಯ — ಕಡೆಯಿಲ್ಲದೇ ಇದ್ದಂಥಾ ನಿನಗೋಸ್ಕರ ನಮಃ—ನಮಸ್ಕಾರವು. ಸೂಕ್ಷ್ಮಾಯ — ಸೂಕ್ಷ್ಮರೂಪನಹಂಥಾ ಮೃತ್ಯುಮೃತ್ಯವೇ—ಮೃತ್ಯುವಿಂಗೆ ಮೃತ್ಯುವಹಂಥಾ ತೇ—ನಿನಗೋಸ್ಕರ ನಮಃ —ನಮಸ್ಕಾರವು. ||೯೭||

ಪರಾಯ—ಉತ್ಕೃಷ್ಟನಹಂಥಾ ಪರಾತ್—ಪ್ರಕೃತಿಯ ದೆಸೆಯಿಂದ ಪರತರಾಯ —ಅತ್ಯಂತ ಮೇಲಹಂಥಾ ಪರಮೇಶಾಯ — ಪರಮೇಶ್ವರನಹಂಥಾ ತೇ— ನಿನಗೋಸ್ಕರ ನಮಃ — ನಮಸ್ಕಾರವು. ಪರಾಪರಾಯ — ಪರಾಪರನಹಂಥಾ ವಿಶ್ವಾಯ—ವಿಶ್ವನಹಂಥಾ ವಿಶ್ವಮೂರ್ತಯೇ— ವಿಶ್ವಮೂರ್ತಿಯಾಗಿ ಉಳ್ಳಂಥಾ ತೇ—ನಿನಗೋಸ್ಕರ ನಮಃ—ನಮಸ್ಕಾರವು. ||೯೮||

ವಿಷ್ಣುಕಳತ್ರಾಯ—ವಿಷ್ಣುವೇ ಸ್ತ್ರೀಯಾಗಿ ಉಳ್ಳಂಥಾ ವಿಷ್ಣುಕ್ಷೇತ್ರಾಯ— ವಿಷ್ಣುವೇ ಶರೀರವಾಗಿ ಉಳ್ಳಂಥಾ ಭಾನವೇ — ಪ್ರಕಾಶರೂಪನಹಂಥಾ ತೇ — ನಿನಗೋಸ್ಕರ ನಮಃ — ನಮಸ್ಕಾರವು. ಕೈವರ್ತಾಯ — ಮತ್ಸ್ಯಾವತಾರವ

ಭೈರವಾಯ ಶರಣ್ಯಾಯ ಮಹಾಭೈರವರೂಪಿಣೇ
ನಮೋ ನೃಸಿಂಹಸಂಹರ್ತ್ರೇ ಕಾಲಕಾಲ! ಪುರಾರಯೇ ||೧೦೦||

ನಮಃ ಪಾಶೌಘಸಂಹರ್ತ್ರೇ ವಿಷ್ಣುಮಾಯಾಂತಕಾರಿಣೇ
ತ್ರ್ಯಂಬಕಾಯ ತ್ರಿಯಕ್ಷಾಯ ಶಿಪಿವಿಷ್ಟಾಯ ಮೀಢುಷೇ ||೧೦೧||

ಮೃತ್ಯುಂಜಯಾಯ ಸರ್ವಾಯ ಸರ್ವಜ್ಞಾಯ ಮಖಾರಯೇ
ಖ [ಶೋ]¹ಲ್ಕಾಯ ವರೇಣ್ಯಾಯ ನಮಸ್ತೇ ವಹ್ನಿರೇತಸೇ ||೧೦೨||

ಸಂಹರಿಸುವಲ್ಲಿ ಜಾಲಗಾರನಾದಂಥಾ ಕಿರಾತಾಯ — ಯುಗಯುಗಂಗಳಲ್ಲಿ ಅರ್ಜುನಗೆ ವರವ ಕೊಡುವ ನಿಮಿತ್ತ ಕಿರಾತವೇಷವನಳ್ಳಂಥಾ ಮಹಾವ್ಯಾಧಾಯ —ನಿಜಪುತ್ರಿಯ ರಮಿಸುವ ಇಚ್ಛೆಯಿಂದ ಮೃಗರೂಪವಾದ ಬ್ರಹ್ಮನನು ಸಂಹರಿಸುವಲ್ಲಿ ಮಹಾವ್ಯಾಧನಾದಂಥಾ ತೇ—ನಿನಗೋಸ್ಕರ ನಮಃ — ನಮಸ್ಕಾರವು. ಕ್ಷೇತ್ರ ಶಬ್ದ ಶರೀರದಲ್ಲಿ ವರ್ತಿಸೂದು. ಅದು ಹೇಂಗೆಯೆಂದೊಡೆ² "ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ" ಇದು ಮಹಾಭಾರತದಲ್ಲಿ ಭಗವದ್ಗೀತೆಯಲ್ಲಿ ಕೃಷ್ಣನು ಅರ್ಜುನನಿಗೆ ಬೋಧಿಸಿದ ವಾಕ್ಯವು. ||೯೯||

ಭೋಃ ಕಾಲಕಾಲ!—ಎಲೆ ಕಾಲಂಗೆ ಕಾಲನಹಂಥಾ ಶಿವನೇ! ಭೈರವಾಯ —ಭಯಂಕರನಹಂಥಾ ಶರಣ್ಯಾಯ — ಮರೆಹೊಗಿಸಿಕೊಳ್ಳಲು ಯೋಗ್ಯನಹಂಥಾ ಮಹಾಭೈರವರೂಪಿಣೇ— ಮಹಾಭೈರವರೂಪನುಳ್ಳಂಥಾ ನೃಸಿಂಹಸಂಹರ್ತ್ರೇ — ನರಸಿಂಹನ ಸಂಹರಿಸಿದಂಥಾ ಪುರಾರಯೇ — ತ್ರಿಪುರವೈರಿಯಹಂಥಾ ನಿನಗೋಸ್ಕರ ನಮಃ—ನಮಸ್ಕಾರವು. ||೧೦೦||

ಪಾಶೌಘಸಂಹರ್ತ್ರೇ — ಮಾಯಾಪಾಶಂಗಳ ಸಮೂಹವ ಸಂಹರಿಸುವಂಥಾ ವಿಷ್ಣುಮಾಯಾಂತಕಾರಿಣೇ — ವಿಷ್ಣುಮಾಯೆಯನು ನಾಶವನು ಮಾಡುತ್ತಿದ್ದಂಥಾ ತ್ರ್ಯಂಬಕಾಯ—ತ್ರಿಗುಣ ತ್ರಿವೇದ ತ್ರಿಲೋಕ ತ್ರಿಮೂರ್ತಿ ಮೊದಲಾದಂಥಾವಕ್ಕೆ ತಂದೆಯಹಂಥಾ ತ್ರಿಯಕ್ಷಾಯ—ಮೂರು ನಯನಂಗಳನುಳ್ಳಂಥಾ ಶಿಪಿವಿಷ್ಟಾಯ —ಪ್ರಾಣಿಗಳಲ್ಲಿ ಪ್ರವೇಶಿಸಿ ಅಂತರ್ಯಾಮಿಯಾಗಿದ್ದಂಥಾ ಮೀಢುಷೇ—ಸ್ತೋತ್ರವ ಮಾಡಿಸಿಕೊಳಲುಪಟ್ಟಂಥಾ ನಿನಗೋಸ್ಕರ ನಮಃ — ನಮಸ್ಕಾರವು. ಮೀಡುಷೇ ಎಂಬ ಶಬ್ದವು* ಮೀಡ+ಸ್ತುತೌ ಎಂಬ ಧಾತುವಿನಲ್ಲಿ ಹುಟ್ಟಿದ ಪದವು. 'ಶಿಪಿಷು ಪ್ರಾಣಿಷು ವಿಶತೀತಿ ಶಿಪಿವಿಷ್ಟಃ'—ಇದು ಶಿಪಿವಿಷ್ಟಪದ ಶಬ್ದಕ್ಕೆ ನಿರ್ವಚನವು. ||೧೦೧||

ಮೃತ್ಯುಂಜಯಾಯ—ಮೃತ್ಯುವನು ಗೆದ್ದಂಥಾ ಸರ್ವಾಯ — ಸರ್ವರೂಪ

¹ ಷೋಃ (ಕ.ಖ.ಗ.ಘ) ² ಎಂದರೆ (ಕ).

* 'ಈಡಸ್ತುತೌ' ಎಂಬ ಧಾತುಪಾಠ ಪ್ರಸಿದ್ಧವಾಗಿದೆ (ಸಂ)

ಮಹಾಪ್ರಾಣಾಯ ಜೀವಾಯ ಪ್ರಾಣಾಪಾನಪ್ರವರ್ತಿನೇ
ತ್ರಿಗುಣಾಯ ತ್ರಿಶೂಲಾಯ ಗುಣಾತೀತಾಯ ಯೋಗಿನೇ ||೧೦೩||

ಸಂಸಾರಯಂತ್ರವಾಹಾಯ ಮಹಾಯಂತ್ರಪ್ರವರ್ತಿನೇ
ಚಿದ್ವ್ಯೋಮಸೂರ್ಯಾಯ ಮೂರ್ತಿವೈಚಿತ್ರ್ಯಹೇತವೇ ||೧೦೪||

ವರದಾಯ ವಿಕಾರಾಯ ಸರ್ವಕಾರಣಹೇತವೇ
ಕಪಾಲಿನೇ ಕರಾಲಾಯ ಪತಯೇ ಪುಣ್ಯ[1]ಕೀರ್ತಯೇ ||೧೦೫||

---

ನುಳ್ಳಂಥಾ ಸರ್ವಜ್ಞಾಯ—ಸರ್ವವನು ಬಲ್ಲಂಥಾ ಮಖಾರಯೇ—ದಕ್ಷನ ಯಾಗ ವೈರಿಯು ಹಂಥಾ ಖಷೋಲ್ಕಾಯ — ಗಗನದಲ್ಲಿಯ ಉಳುಕಿನೋಪಾದಿಯ ರೂಪ ನುಳ್ಳಂಥಾ ವರೇಣ್ಯಾಯ—ಶ್ರೇಷ್ಠನಹಂಥಾ ವಹ್ನಿರೇತಸೇ—ಅಗ್ನಿಯೇ ರೇತಸ್ಸಾಗಿ ಉಳ್ಳಂಥಾ ತೇ—ನಿನಗೋಸ್ಕರ ನಮಃ—ನಮಸ್ಕಾರವು. ||೧೦೨||

ಮಹಾಪ್ರಾಣಾಯ = ಮಹಾಪ್ರಾಣರೂಪನಹಂಥಾ ಜೀವಾಯ = ಜೀವ ರೂಪನಹಂಥಾ ಪ್ರಾಣಾಪಾನಪ್ರವರ್ತಿನೇ= ಪ್ರಾಣಾಪಾನವಾಯುಗಳ ವರ್ತಿಸುವ ಶೀಲವನುಳ್ಳಂಥಾ ತ್ರಿಗುಣಾಯ = ಸತ್ತ್ವರಜಸ್ತಮೋಗುಣಂಗಳನುಳ್ಳಂಥಾ ತ್ರಿಶೂಲಾಯ = ತ್ರಿಶೂಲವನುಳ್ಳಂಥಾ ಗುಣಾತೀತಾಯ = ಗುಣತ್ರಯಂಗಳ ಮೀರಿದಂಥಾ ಯೋಗಿನೇ = ಯೋಗಿಯಹಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೧೦೩||

ಸಂಸಾರಯಂತ್ರವಾಹಾಯ = ಸಂಸಾರವೆಂಬ ಸೂತ್ರವ ಧರಿಸಿದಂಥಾ ಮಹಾ ಯಂತ್ರಪ್ರವರ್ತಿನೇ = ಸಂಸಾರವೆಂಬ ಮಹಾಯಂತ್ರವನು ಮಾಡಿದಂಥಾ ಚಿದ್ವ್ಯೋಮಸೂರ್ಯಾಯ = ಚಿದ್ಗಗನಕ್ಕೆ ಸೂರ್ಯನಹಂಥಾ ಮೂರ್ತಿವೈಚಿತ್ರ್ಯ-ಹೇತವೇ = ಮೂರ್ತಿಗಳ ವಿಚಿತ್ರಕ್ಕೆ ಕಾರಣನಹಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೧೦೪||

ವರದಾಯ = ವರವ ಕೊಡುತ್ತಿದ್ದಂಥಾ ವಿಕಾರಾಯ = ವಿಕಾರರೂಪನಹಂಥಾ ಸರ್ವಕಾರಣಹೇತವೇ = ಸಮಸ್ತ ಕಾರಣಕ್ಕೆ ಕಾರಣನಹಂಥಾ ಕಪಾಲಿನೇ = ಕಪಾಲ ವನುಳ್ಳಂಥಾ ಕರಾಳಾಯ = ಭಯಂಕರವಹಂಥಾ ಪುಣ್ಯಕೀರ್ತಯೇ = ಪುಣ್ಯವಹ ಕೀರ್ತಿಯನುಳ್ಳಂಥಾ ಪತಯೇ = ಒಡೆಯನಹಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೧೦೫||

---

1 ಕ (ಮೂಲಪಾಠ)

[1] ಅಘೋಘಾ[1]ಯಾಗ್ನಿನೇತ್ರಾಯ ಅಕುಲೀಶಾಯ ಶಂಭವೇ
ಭಿಷಕ್ತಮಾಯ ಚಂಡಾಯ ದಂಡಿನೇ ಘೋರರೂಪಿಣೇ ||೧೦೬||

ಮೇಘವಾಹಾಯ ದೇವಾಯ ಪಾರ್ವತೀಪತಯೇ ನಮಃ
ಅವ್ಯಕ್ತಾಯ ವಿಶೋಕಾಯ ಸ್ಥಿರಾಯ ಸ್ಥಿರಧನ್ವನೇ ||೧೦೬||

ಸ್ಥಾಣವೇ ಕೃತ್ತಿವಾಸಾಯ ನಮಃ ಪಂಚಾರ್ಥಹೇತವೇ
ವಿರಜಾಯೈಕಪಾದಾಯ ನಮಶ್ಚಂದ್ರಾರ್ಧಮೌಲಯೇ ||೧೦೭||

ನಮಸ್ತೇऽಧ್ವರರಾಜಾಯ ವಚಸಾಂ ಪತಯೇ ನಮಃ
ಯೋಗೀಶ್ವರಾಯ ಸತ್ಯಾಯ ನಿತ್ಯಾಯ ಪರಮಾತ್ಮನೇ ||೧೦೮||

---

ಅಘೋಘಾಯ = [2]ಸಾಮರ್ಥ್ಯವನುಳ್ಳಂಥಾ[2] ಅಗ್ನಿನೇತ್ರಾಯ = ಅಗ್ನಿಯೇ ನಯನವಾಗಿ ಉಳ್ಳಂಥಾ ಅಕುಲೀಶಾಯ = ಕುಲರಹಿತರಹ ಯೋಗೀಶ್ವರರಿಗೊಡೆಯನಹಂಥಾ ಶಂಭವೇ = ಸುಖವನು ಹುಟ್ಟಿಸುತ್ತಿದ್ದಂಥಾ ಭಿಷಕ್ತಮಾಯ = ಸಂಸಾರಕ್ಕೆ ಉತ್ಕೃಷ್ಟನಹ ವೈದ್ಯನಹಂಥಾ ಚಂಡಾಯ = ಪ್ರಚಂಡನಹಂಥಾ ದಂಡಿನೇ = ದಂಡಾಯುಧವನುಳ್ಳಂಥಾ ಘೋರರೂಪಿಣೇ = ಭಯಂಕರವಹ ರೂಪವುಳ್ಳಂಥಾ ಮೇಘವಾಹಾಯ = ಮೇಘವಾಹನನಹಂಥಾ ದೇವಾಯ = ಪ್ರಕಾಶಸ್ವರೂಪ (ದೇವ) ನಹಂಥಾ ಪಾರ್ವತೀಪತಯೇ = ಪಾರ್ವತೀವಲ್ಲಭನಹಂಥಾ ಅವ್ಯಕ್ತಾಯ = ಅರಿಯಬಾರದೇ ಇದ್ದಂಥಾ ವಿಶೋಕಾಯ = ದುಃಖರಹಿತನಹಂಥಾ ಸ್ಥಿರಾಯ = ಸ್ಥಿರನಹಂಥಾ ಸ್ಥಿರಧನ್ವನೇ = ನಿತ್ಯವಹ ಬಿಲ್ಲನುಳ್ಳಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೧೦೬||

[3]ಸ್ಥಾಣವೇ = ತ್ರೈಲೋಕ್ಯವೆಂಬ ಪಟ್ಟಣಕ್ಕೆ ಮೂಲಸ್ತಂಭವಹಂಥಾ ಕೃತ್ತಿವಾಸಾಯ = ಚರ್ಮಾಂಬರನಹಂಥಾ[3] ಪಂಚಾರ್ಥಹೇತವೇ = [4]ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ[4]ಅನುಗ್ರಹವೆಂಬ ಪಂಚಾರ್ಥಂಗಳಿಗೆ ಕಾರಣನಹಂಥಾ ನಿನಗೋಸ್ಕರ ನಮಃ = ನಮಸ್ಕಾರವು. ವಿರಜಾಯ = ರಜೋಗುಣವಿಲ್ಲದೇ ಇದ್ದಂಥಾ ಏಕಪಾದಾಯ = ಒಂದೇ ಪಾದವನುಳ್ಳಂಥಾ ಚಂದ್ರಾರ್ಧಮೌಳಯೇ = ಚಂದ್ರಾರ್ಧಮೌಳಿಯುಳ್ಳಂಥಾ ನಿನಗೋಸ್ಕರ ನಮಃ = ನಮಸ್ಕಾರವು. ||೧೦೭||

ಅಧ್ವರರಾಜಾಯ = ಯಾಗಕ್ಕೆ ಒಡೆಯನಹಂಥಾ ವಚಸಾಂ ಪತಯೇ = [5]ವಾಕ್ಯಂಗಳಿಗೆ ಒಡೆಯನಹಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು. ಯೋಗೀಶ್ವರಾಯ = ಯೋಗಿಗಳಿಗೆ ಒಡೆಯ[5]ನಹಂಥಾ ಸತ್ಯಾಯ = ಸತ್ಯರೂಪನ

---

[1] ಅಘೋರಾ (ಘ) [2,3] ಲುಪ್ತ (ಕ) [4] ರೋಭಾವಾ (ಖ) [5] ಲುಪ್ತ (ಕ)

ಸರ್ವಾತ್ಮನೇ ನಮಸ್ತುಭ್ಯಂ ನಮಸ್ಸರ್ವೇಶ್ವರಾಯ ತೇ
ಏಕದ್ವಿತ್ರಿಚತುಃಪಂಚಕೃತ್ವಸ್ತೇ ಚ ನಮೋ ನಮಃ ||೧೧೦||

ದಶಕೃತ್ವಃ ಶತಕೃತ್ವ ಆಸಹಸ್ರಂ ನಮೋ ನಮಃ
ನಮೋಽಪರಿಮಿತಕೃತ್ವೋಽನಂತಕೃತ್ವೋ ನಮೋ ನಮಃ ||೧೧೧||

ನಮೋ ನಮೋ ನಮೋ ಭೂಯಃ ಪುನರ್ಭೂಯೋ ನಮೋ ನಮಃ ||

ಸೂತ ಉವಾಚ
ನಾಮಾಷ್ಟಕಶತೇನೈವಂ ಸ್ತುತ್ವಾಽಮೃತಮಯೇನ ತು
ಪುನಸ್ತಂ ಪ್ರಾರ್ಥಯಾಮಾಸ ನೃಸಿಂಹಶ್ಶರಭೇಶ್ವರಮ್ ||೧೧೩||

---

ಹಂಥಾ ನಿತ್ಯಾಯ = ನಿತ್ಯನಹಂಥಾ ಪರಮಾತ್ಮನೇ = ಪರಮಾತ್ಮನಹಂಥಾ ನಿನಗೋಸ್ಕರ ನಮಃ = ನಮಸ್ಕಾರವು ||೧೦೯||

ಸರ್ವಾತ್ಮನೇ = ವಿಶ್ವರೂಪನಹಂಥಾ ತುಭ್ಯಂ = ನಿನಗೋಸ್ಕರ ನಮಃ = ನಮಸ್ಕಾರವು. ಸರ್ವೇಶ್ವರಾಯ = ಸರ್ವಕ್ಕೆ ಒಡೆಯನಹಂಥಾ ತೇ = ನಿನಗೋಸ್ಕರ ನಮಃ = ನಮಸ್ಕಾರವು. ಏಕದ್ವಿತ್ರಿಚತುಃಪಂಚಕೃತ್ವಃ = ಒಂದೆರಡು ಮೂರು ನಾಲ್ಕೈದೆಂದು ಸಂಖ್ಯೆಯನು ಮಾಡಿದಂಥಾ ತೇ ಚ = ನಿನಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. ||೧೧೦||

ದಶಕೃತ್ವಃ = ದಶಸಂಖ್ಯೆಯ ಮಾಡಿದಂಥಾ ಶತಕೃತ್ವಃ = ಶತಸಂಖ್ಯೆಯ ಮಾಡಿದಂಥಾ ಆಸಹಸ್ರಂ = ಸಹಸ್ರಸಂಖ್ಯೆ ಪರಿಯಂತರ ಮಾಡಿದಂಥಾ ನಿನಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು. ಅಪರಿಮಿತಕೃತ್ವಃ = ಲೆಕ್ಕವಿಲ್ಲದ್ದ ಮಾಡಿದಂಥಾ ನಿನಗೋಸ್ಕರ ನಮಃ = ನಮಸ್ಕಾರವು. ಅನಂತಕೃತ್ವಃ = ತಡೆಯಿಲ್ಲದಂಥಾದ ಮಾಡಿದ ನಿನಗೋಸ್ಕರ ನಮೋ ನಮಃ = ನಮಸ್ಕಾರವು ನಮಸ್ಕಾರವು.

ನಮಃ = ನಮಃ ನಮಃ = ನಮಸ್ಕಾರವು ಭೂಯಃ = ಮರಳಿಯೂ ನಮಃ = ನಮಸ್ಕಾರವು. ಪುನರ್ಭೂಯಃ = ಮತ್ತೆ ಮರಳಿಯೂ ನಮಃ = ನಮಸ್ಕಾರವು. ನಮಃ = ನಮಸ್ಕಾರವು. ಕೃತ್ವಶಬ್ದವು ಭೂಯಶ್ಶಬ್ದವೂ ಅವ್ಯಯವಾದ ನಿಮಿತ್ತವಾಗಿ ಉಚಿತಾರ್ಥವ ನುಡಿದುಕೊಂಬುದು. ||೧೧೨||

ಸೂತ ಉವಾಚ = ಸೂತಮಹಾ[1]ಋಷಿ[2]ಯ ವಾಕ್ಯವು.

ಏವಂ = ಈ ಪ್ರಕಾರದಲ್ಲಿ ಅಮೃತಮಯೇನ = ಅಮೃತಮಯವಹಂಥಾ

---

[1] ತಂ (ಖ.ಗ.ಘ) [2] ಮುನಿ (ಖ)

ನೃಸಿಂಹ ಉವಾಚ

ಯದಾ ಯದಾ ಮಮಾಜ್ಞಾನಮತ್ಯಹಂಕಾರದೂಷಿತಮ್
ತದಾ ತದಾಪನೋತ್ತವ್ಯಂ ತ್ವಯೈವ ಪರಮೇಶ್ವರ ||೧೧೪||

ಏವಂ ವಿಜ್ಞಾಪ್ಯ[2] ಸವ್ರೀಲಃ[2] ಶಂಕರಂ ನರಕೇಸರೀ
ತತಸ್ಸಂತ್ಯಕ್ತವಾನ್ ವಿಷ್ಣುಃ ಜೀವಿತಂ ಸ್ವಾಪರಾಧತಃ ||೧೧೫||

ತದ್ವಕ್ತ್ರಶೇಷಂ ತದ್ಗಾತ್ರಂ ಹೃತ್ವಾ ಶರಭವಿಗ್ರಹಃ
ಅತೀಂದ್ರಿಯತ್ವಮಗಮತ್ ವೀರಭದ್ರಃ ಕ್ಷಣಾತ್ತತಃ ||೧೧೬||

---

ನಾಮಾಷ್ಟಕಶತೇನ ತು = ಅಷ್ಟೋತ್ತರ ಶತನಾಮದಿಂದವು ಸ್ತುತ್ವಾ = ಸ್ತೋತ್ರವ ಮಾಡಿ ನೃಸಿಂಹಃ — ನರಸಿಂಹನು ತಂ = ಆ ಶರಭೇಶ್ವರಂ = ಶರಭೇಶ್ವರನನು ಕುರಿತು ಪುನಃ = ಮತ್ತೆಯೂ ಪ್ರಾರ್ಥಯಾಮಾಸ = ಬೇಡಿಕೊಂಡನು.||೧೧೩||
ನೃಸಿಂಹೆ ಉವಾಚ = ನೃಸಿಂಹನು ಬಿನ್ನಹ ಮಾಡುತ್ತಿದ್ದಾನು.

ಯದಾ ಯದಾ = ಆವಾಗ ಆವಾಗ ಮಮ = ಎನಗೆ ಅತ್ಯಹಂಕಾರ ದೂಷಿತಮ್ = ಅತ್ಯಂತ ಅಹಂಕಾರವಿಂದ ನಿಂದಿತವಹಂಥಾ ಅಜ್ಞಾನಂ = ಅಜ್ಞಾನವಾಗುತ್ತಿಹುದು. ತದಾ ತದಾ = ಆಗಾಗ ಭೋ ಪರಮೇಶ್ವರನೇ! ತ್ವಯೈವ = ನಿನ್ನಿಂದವೇ ಆಪನೋತ್ತವ್ಯಂ = ತೊಲಗಿಸಲು ಬೇಕಾದುದು. ||೧೧೪||

ಏವಂ = ಈ ಪ್ರಕಾರದಲ್ಲಿ ಸವ್ರೀಳಃ = ನಾಚಿಕೆಯಿಂದ ಸಹಿತನಹಂಥಾ ನರಕೇಸರೀ = ನರಸಿಂಹನು ಶಂಕರಂ = ಪರಮೇಶ್ವರನನು ಕುರಿತು ವಿಜ್ಞಾಪ್ಯ = ಬಿನ್ನಹಂ ಮಾಡಿ ತತಃ = ಅಷ್ಟರಮೇಲೆ ವಿಷ್ಣುಃ = ಮಹಾವಿಷ್ಣು ಸ್ವಾಪರಾಧತಃ = ತನ್ನ ಅಪರಾಧದ ದೆಸೆಯಿಂದ ಜೀವಿತಂ = ಪ್ರಾಣವನು ಸಂತ್ಯಕ್ತವಾನ್ = ಬಿಟ್ಟನು. ||೧೧೫||

ತತಃ — ಅಷ್ಟರ ಮೇಲೆ ಶರಭವಿಗ್ರಹಃ = ಶರಭಮೂರ್ತಿಯನುಳ್ಳಂಥಾ ವೀರಭದ್ರಃ = ವೀರಭದ್ರನು ತದ್ವಕ್ತ್ರಶೇಷಂ = ಆ ನರಸಿಂಹನ ಮುಖದ ಶೇಷವನ್ನು ತದ್ಗಾತ್ರಂ — ಆ ಶರೀರವನು ಹೃತ್ವಾ = ತೊಲಗಿಸಿ ಕ್ಷಣಾತ್ = ಕ್ಷಣಮಾತ್ರದ ದೆಸೆಯಿಂದ ಅತೀಂದ್ರಿಯತ್ವಂ = ನಯನ ಮೊದಲಾದ ಇಂದ್ರಿಯಗಳ ಮೀರುವ ತನವನು ಆಗಮತ್ = ಎಯ್ದಿದನು. ||೧೧೬||

---

[2] ಸವ್ರೀಡಃ (ಘ)

ದೇವಾ ಊಚುಃ
ಅದ್ಯ ಬ್ರಹ್ಮಾದಯಸ್ಸರ್ವೇ ವೀರಭದ್ರ! [1]ತ್ವದೋಜಸಾ[1]
ಜೀವಿತಾಃ ಸ್ಮೋ ವಯಂ ದೇವ ಪರ್ಜನ್ಯೇನೇವ ಪಾದಪಾಃ ||೧೧೭||

ಯಸ್ಮಾದ್ಭೀಷಾ ದಹತ್ಯಗ್ನಿರುದೇತಿ ಚ ರವಿಶ್ಶಶೀ
ವಾತೋ ವಾತಿ ತು ಸೋಽಸಿ ತ್ವಂ ಮೃತ್ಯುರ್ಧಾವತಿ ಪಂಚಮಃ ||

ಯದವ್ಯಕ್ತಂ ಪರಂ ವ್ಯೋಮ ಕಾಲಾತೀತಂ ಸದಾ ಶಿವಮ್
ಭವಂತಮೇವ ಭಗವನ್ ವದಂತಿ ಬ್ರಹ್ಮವಾದಿನಃ ||೧೧೯||

ದೇವಾ ಊಚುಃ = ದೇವರ್ಕಳು ನುಡಿವುತ್ತಿದ್ದಾರು.

ದೇವ = ದೇವನಹಂಥಾ ಭೋ ವೀರಭದ್ರ = ಎಲೇ ವೀರಭದ್ರನೇ ಅದ್ಯ = ಇಂದು ಬ್ರಹ್ಮಾದಯಃ = ಬ್ರಹ್ಮ ಮೊದಲಾದಂಥಾ ವಯಂ ಸರ್ವೇ = ನಾವೆಲ್ಲರು ತ್ವದೋಜಸಾ = ನಿನ್ನ ಸಾಮರ್ಥ್ಯದಿಂದ ಜೀವಿತಾಃ = ಬದುಕಿದವರುಗಳು ಸ್ಮಃ = ಆದೆವು. ಅಸ + ಭುವಿ ಎಂಬ ಧಾತು. ಬಹುವಚನವು. ಕಥಮಿವ = ಅದು ಹೇಂಗೆಯಾ ಎಂದಡೆ ಪಾದಪಾಃ = ವೃಕ್ಷಂಗಳು ಪರ್ಜನ್ಯೇನೇವ = ಮೇಘದಿಂದ ವೆಹಗಹಗೆ, ||೧೧೭||

ಯಸ್ಮಾತ್ = ಆವನಾನೊಬ್ಬ ದೇವನ ದೆಸೆಯಿಂದ ಭೀಷಾ = ಭೀತಿಯಿಂದ ಅಗ್ನಿಃ = ಅಗ್ನಿಯು ದಹತಿ = ಸುಡುತ್ತಿಹನು ರವಿಃ = ಸೂರ್ಯನು ಉದೇತಿ = ಉದಯವಾಗುತ್ತಿಹನು ಶಶೀ ಚ = ಚಂದ್ರನು ಉದೇತಿ = ಉದಯವಾಗುತ್ತಿಹನು ವಾತಸ್ತು = ವಾಯು ವಾತಿ = ಬೀಸುತ್ತಿಹನು. ಪಂಚಮಃ = ಐದನೆಯದಹಂಥಾ ಮೃತ್ಯುಃ = ಮೃತ್ಯು ಧಾವತಿ = ಎಯ್ದುತ್ತಿಹುದು, ಆ ದೇವನು ತ್ವಂ = ನೀನು ಅಸಿ = ಅಹೆ. ||೧೧೮||

ಭೋ ಭಗವನ್ = ಎಲೆ ಷಡ್ಗುಣೈಶ್ವರ್ಯಸಂಪನ್ನನಹಂಥಾ ದೇವನೇ ಸದಾ ಶಿವಂ = ಎಲ್ಲಾಗಳೂ ಮಂಗಳ ಸ್ವರೂಪನಹಂಥಾ ಭವಂತಮೇವ = ನಿನ್ನನೇ ಬ್ರಹ್ಮವಾದಿನಃ = ಬ್ರಹ್ಮವ ನುಡಿವಂಥಾ ವೇದಾಂತಿಗಳು ಅವ್ಯಕ್ತಂ = ಅರಿಯಬಾರದೆ ಇದ್ದಂಥಾ ವ್ಯೋಮಕಾಲಾತೀತಂ = ಆಕಾಶವನೂ ಕಾಲವನೂ ಮೀರಿದಂಥಾ ಯತ್ ಪರಂ = ಆವುದಾನೊಂದು ಪರಂಬ್ರಹ್ಮವೆಂದು ವದಂತಿ = ಹೇಳುತ್ತಿಹರು ||೧೧೯||

[1] ತ್ವದಾಜಸಃ (ಖ)

ಕೇ ವಯಂ ತವ ಮಾಹಾತ್ಮ್ಯವೇದನೇ [1]ಪರಮೇಶ್ವರ।
ನಾಧಿಕ್ರಿಯೇರನ್ ಜಾತ್ಯಂಧಾ ರೂಪಲಾವಣ್ಯವರ್ಣನೇ ||೧೨೦||

ಉಪಸರ್ಗೇಷು ಸರ್ವೇಷು ತ್ರಾತುಮಸ್ಮಾನ್ ಗಣಾಧಿಪ
ಏಕಾದಶಾತ್ಮಾ ಭಗವನ್ ! ವರ್ತಸೇ ಕೃಪಯಾ [2]ಹರ। ||೧೨೧||

ಈದೃಶಾನ್ಯವತಾರಾಣಿ ದೃಷ್ಟ್ವಾಽಪಿ ಬಹುಶಸ್ತವ
ಕದಾಚಿತ್ತ್ವಾಂ ನ ಜಾನೀಮೋ ವಞ್ಚಿತಾಸ್ತವ ಮಾಯಯಾ ||

ಗುಞ್ಜಾಭಿರಿವ ರತ್ನಾನಿ ತವ ರೂಪಾಣಿ ಸರ್ವದಾ
ಅಸ್ಮಾಭಿಸ್ಸಹ ಗಣ್ಯಂತೇ ತತ್ಕ್ಷಂತವ್ಯಂ ಪರಾತ್ಪರ ||೧೨೩||

---

ಭೋ ಪರಮೇಶ್ವರ = ಎಲೇ ಪರಮೇಶ್ವರನೇ ತವ = ನಿನ್ನ ಮಾಹಾತ್ಮ್ಯ-ವೇದನೇ = ಮಹಿಮೆಯನರಿವಲ್ಲಿ ವಯಂ = ನಾವು ಕೇ = ಏತರವರು ? ಜಾಂತ್ಯಧಾಃ = ಹುಟ್ಟುಗುರುಡರು ರೂಪಲಾವಣ್ಯವರ್ಣನೇ = ರೂಪು ಶೃಂಗಾರಂಗಳ ವರ್ಣಿಸುವಲ್ಲಿ ಅಧಿಕ್ರಿಯೇರನ್ ನ = ಅಧಿಕಾರಿಗಳಲ್ಲಾ. ಸಮರ್ಥರಲ್ಲವೆಂಬುದರ್ಥ.

ಭೋ ಭಗವನ್ = ಎಲೈ ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಗಣಾಧಿಪ = ಗಣೇಶ್ವರನಹಂಥಾ ಹರ = ಎಲೆ ಪರಮೇಶ್ವರನೇ ಸರ್ವೇಷು ಉಪಸರ್ಗೇಷು = ಸಮಸ್ತ ಸೃಷ್ಟಿಗಳಲ್ಲಿ ಅಸ್ಮಾನ್ = ನಮ್ಮನು ತ್ರಾತುಂ — ರಕ್ಷಿಸಲೋಸ್ಕರ ಕೃಪಯಾ = ಕರುಣದಿಂದ ಏಕಾದಶಾತ್ಮಾ = ಏಕಾದಶರುದ್ರಸ್ವರೂಪನಾಗಿ ವರ್ತಸೇ = ವರ್ತಿಸುತ್ತಿಹೆ. ೧೨೧||

ತವ = ನಿನ್ನ ಈದೃಶಾನಿ = ಈಪ್ರಕಾ[3]ರಂಗಳ[3]ಹಂಥಾ ಅವತಾರಾಣಿ = ಅವತಾರಂಗಳನು ಬಹುಶಃ = ಹಲವನು ದೃಷ್ಟ್ವಾಽಪಿ = ಕಂಡೂ ತವ = ನಿನ್ನ ಮಾಯಯಾ = ಮಾಯೆಯಿಂದ ವಂಚಿತಾಃ = ಮರೆಯಲುಪಟ್ಟವರುಗಳಾಗಿ ಕದಾಚಿತ್ = ಒಮ್ಮೆಯೂ ತ್ವಾಂ = ನಿನ್ನನು ನ ಜಾನೀಮಃ = ಅರಿಯೆವು. ೧೨೨

ಪರಾತ್ = ಪ್ರಕೃತಿಯ ದೆಸೆಯಿಂದವೂ ಪರ = ಮೇಲೆ ಇಹಂಥಾ ದೇವನೇ ! ತವ = ನಿನ್ನ ರೂಪಾಣಿ = ರೂಪುಗಳು ಸರ್ವದಾ = ಎಲ್ಲಾಗಳೂ ಅಸ್ಮಾಭಿಃ ಸಹ = ನಮ್ಮೊಡನೆ ಗಣ್ಯಂತೇ = ಲೆಕ್ಕಿಸಲು ಪಡುತ್ತಿಹವು. ಕಥಮಿವ = ಅದು

---

[1] ಪರಮೇಶ್ವರೇ (ಗ) [2] ಹರಂ (ಗ) [3] ರವ (ಖ)

ದ್ವೇ ತನೂ ತವ ರೂಪಸ್ಯ ವೇದಜ್ಞಾ ಬ್ರಾಹ್ಮಣಾ ವಿದುಃ
ಘೋರಾऽನ್ಯಾऽಪ್ಯನ್ಯಾ ಶಿವಾऽಪ್ಯನ್ಯಾ [1]ತೇ ಪ್ರತ್ಯೇಕಮನೇಕಧಾ ॥೧೨೪॥

ಘೋರಾ ತನೂಸ್ತವ ಬ್ರಹ್ಮಾ ಸೂರ್ಯೋ ವಿಷ್ಣುರ್ಹುತಾಶನಃ
ತಥೇತರಾ ತನುಃ ಶಂಭೋ ಆಪೋ ಧರ್ಮಶ್ಚ ಚಂದ್ರಮಾಃ ॥೧೨೫॥

ಉಭಾಭ್ಯಾಂ ಪಾಹಿ ಭಗವನ್ ಭೀತಿಭ್ಯೋऽಸ್ಮಾನ್ ಮಹಾಬಲ !
ಭವತಾ ಹಿ ಜಗತ್ಸರ್ವಂ ವ್ಯಾಪ್ತಂ ಸ್ವೇನೈವ ತೇಜಸಾ ॥೧೨೬॥

ಬ್ರಹ್ಮವಿಷ್ಣ್ವರ್ಕಶಕ್ರಾಗ್ನಿಜಲಧರ್ಮಪುರೋಗಮಾಃ
ಸುರಾಸುರಾಸ್ಸಂಪ್ರಸೂತಾಃ ತ್ವತ್ತಸ್ಸರ್ವೇ ಮಹೇಶ್ವರ ॥೧೨೭॥

---

ಹೇಂಗೆಯಾ ಎಂದೊಡೆ ರತ್ನಾನಿ = ರತ್ನಂಗಳು ಗುಂಜಾಭಿರಿವ = ಗುರುಗುಂಜಿಗಳೊಡನೆಹಗಹಗೆ. ತತ್ = ಅದು ಕ್ಷಂತವ್ಯಂ = ಸೈರಿಸಲು ಯೋಗ್ಯವು. ॥೧೨೩॥

ವೇದಜ್ಞಾಃ = ವೇದಂಗಳನು ಬಲ್ಲಂಥಾ ಬ್ರಾಹ್ಮಣಾಃ = ಬ್ರಾಹ್ಮಣರುಗಳು ತವ = ನಿನ್ನ ರೂಪಸ್ಯ = ರೂಪಿಂಗೆ ದ್ವೇ ತನೂ = ಎರಡು ಮೂರ್ತಿಗಳೆಂದು ವಿದುಃ = ಹೇಳುವರು. ಅನ್ಯಾ = ಒಂದು ಮೂರ್ತಿ ಘೋರಾऽಪಿ = ಭಯಂಕರವಹಂಥಾದು. ಅನ್ಯಾऽಪಿ = ಮತ್ತೊಂದು ಮೂರ್ತಿ ಶಿವಾ = ಮಂಗಳವಹಂಥಾದು ತೇ = ಆ ಎರಡು ಮೂರ್ತಿಗಳು ಪ್ರತ್ಯೇಕಂ = ಬೇರೆ ಬೇರೆ ಅನೇಕಧಾ = ಹಲವು ಪ್ರಕಾರಗಳಾಡವು. ॥೧೨೪॥

ಬ್ರಹ್ಮಾ = ಬ್ರಹ್ಮನು ಸೂರ್ಯಃ = ಸೂರ್ಯನು ವಿಷ್ಣುಃ = ಹರಿ ಹುತಾಶನಃ = ಅಗ್ನಿ ತವ = ನಿನ್ನ ಘೋರಾ = ಭಯಂಕರವಹಂಥಾ ತನೂಃ = ಮೂರ್ತಿಯು. ಭೋ ಶಂಭೋ = ಎಲೆ ಪರಮೇಶ್ವರನೇ ಆಪಃ = ಉದಕಂಗಳು ಧರ್ಮಶ್ಚ = ಧರ್ಮವೂ ಚಂದ್ರಮಾಃ = ಚಂದ್ರನು ತಥೇತರಾ = ಆ ಭಯಂಕರಕ್ಕೆ ಬೇರಾಗುತ್ತಂ-ವಿದ್ದ ಶಾಂತವಹಂಥಾ ತನುಃ = ಸ್ವರೂಪವು. ॥೧೨೫॥

ಭಗವನ್ = ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಮಹಾಬಲ — ಅತಿಸತ್ತ್ವವನ್ನುಳ್ಳಂಥಾ ದೇವನೇ ! ಸರ್ವಂ ಜಗತ್ = ಸಮಸ್ತ ಲೋಕವು ಸ್ವೇನ = ನಿನ್ನ ಸಂಬಂಧವಹಂಥಾ ತೇಜಸಾ ಏವ — ತೇಜಸ್ಸಿಂದವು ಭವತಾ = ನಿನ್ನಿಂದವು ವ್ಯಾಪ್ತಂ ಹಿ — ವ್ಯಾಪಿಸಲುಪಟ್ಟುದಲಾ. ಉಭಾಭ್ಯಾಂ = ಎರಡು ಮೂರ್ತಿಗಳಿಂದ ಅಸ್ಮಾನ್ = ನಮ್ಮನು ಭೀತಿಭ್ಯಃ = ಭೀತಿಗಳ ದೆಸೆಯಿಂದ ಪಾಹಿ = ರಕ್ಷಿಸು.

ಭೋ ಮಹೇಶ್ವರ = ಎಲೆ ಶಿವನೇ ! ಬ್ರಹ್ಮವಿಷ್ಣ್ವರ್ಕಶಕ್ರಾಗ್ನಿಜಲಧರ್ಮ-

---

1 ಸ್ಯಾऽನ್ಯಾ ಶಿವಾಸ್ಯಾऽನ್ಯಾ (ಗ)

ಬ್ರಹ್ಮಾಣಮಿಂದ್ರಂ ವಿಷ್ಣುಂ ಚ ಯಮಮನ್ಯಾನ್ಸುರಾಸುರಾನ್
ಯತೋ ನಿಗೃಹ್ಯ ಹರಸಿ ಹರ ಇತ್ಯುಚ್ಯಸೇ ತತಃ ||೧೨೮||

ಯತೋ ಬಿಭರ್ಷಿ ಸಕಲಂ ವಿಭಜ್ಯ ತನುಮಷ್ಟಧಾ
ಅತೋಽಸ್ಮಾನ್ ಪಾಹಿ ಭಗವನ್ ಪ್ರಸೀದ ಚ ಪುನಃ ಪುನಃ ||೧೨೯||

ಸೂತ ಉವಾಚ

ಇತಿ ಸ್ತುತೋ ಮಹಾದೇವಃ ಪ್ರಸನ್ನೋ[1]ಭಕ್ತಿ[1]ವತ್ಸಲಃ
ಸುರಾನಾಹ್ಲಾದಯಾಮಾಸ ವರದಾನೈರಭೀಪ್ಸಿತೈಃ ||೧೩೦||

---

ಪುರೋಗಮಾಃ=ಬ್ರಹ್ಮ ವಿಷ್ಣು ಸೂರ್ಯ ಇಂದ್ರ ಅಗ್ನಿ ಜಲಧರ್ಮ ಮೊದಲಾದಂಥಾ ಸುರಾಸುರಾಃ= ದೇವಾಸುರರುಗಳು ಸರ್ವೇ = ಸಮಸ್ತರೂ ತ್ವತ್ತಃ = ನಿನ್ನ ದೆಸೆಯಿಂದ ಸಂಪ್ರಸೂತಾಃ=ಹುಟ್ಟಿದರು. ||೧೨೭||

ಬ್ರಹ್ಮಾಣಂ=ಬ್ರಹ್ಮನನು ಇಂದ್ರಂ=ಇಂದ್ರನನು ವಿಷ್ಣುಂ ಚ=ವಿಷ್ಣುವನು ಯಮಂ = ಯಮನನು ಸುರಾಸುರಾನ್ = ದೇವರ್ಕಳನು ರಾಕ್ಷಸರುಗಳನು ಅನ್ಯಾನ್ = ಉಳಿದಂಥಾವರುಗಳನು ಯತಃ = ಆವುದಾನೊಂದು ಕಾರಣವಾಗಿ ನಿಗೃಹ್ಯ—ನಿಗ್ರಹಿಸಿ ಹರಸಿ=ಸಂಹರಿಸುತ್ತಿಹೆ. ತತಃ=ಅದು ಕಾರಣವಾಗಿ ಹರ ಇತಿ=ಹರನೆಂದು ಹೀಗೆ ಉಚ್ಯಸೇ=ಹೇಳಲುಪಡುತ್ತಿಹೆ. ||೧೨೮||

ಭೋ ಭಗವನ್= ಎಲೇ ಷಡ್ಗುಣೈಶ್ವರ್ಯಸಂಪನ್ನನಹಂಥಾ ಪರಮೇಶ್ವರನೇ ಯತಃ=ಆವುದಾನೊಂದು ಕಾರಣವಾಗಿ ತನುಂ=ಶರೀವನು ಅಷ್ಟಧಾ=ಎಂಟು ಪ್ರಕಾರವಾಗಿ ವಿಭಜ್ಯ=ವಿಭಾಗಿಸಿ ಸಕಲಂ=ಸಮಸ್ತ ಲೋಕವನು ಬಿಭರ್ಷಿ =ಧರಿಸುತ್ತಿಹೆ. ಅತಃ=ಅದುಕಾರಣವಾಗಿ ಅಸ್ಮಾನ್=ನಮ್ಮನು ಪಾಹಿ=ರಕ್ಷಿಸು ಪುನಃಪುನಶ್ಚ=ಅಡಿಗಡಿಗೆಯೂ ಪ್ರಸೀದ=ಪ್ರಸನ್ನನಾಗು. ||೧೨೯||

ಸೂತಋುವಾಚ=ಸೂತಮುನಿಯ ವಾಕ್ಯವು.

ಇತಿ=ಈ ಪ್ರಕಾರದಿಂದ ಸ್ತುತಃ=ಸ್ತೋತ್ರವ ಮಾಡಿಸಿಕೊಳಲುಪಟ್ಟಂಥಾ ಭಕ್ತಿವತ್ಸಲಃ=ಭಕ್ತಿಯಲ್ಲಿ ಎರಕವನುಳ್ಳಂಥಾ ಪರಮೇಶ್ವರನು ಪ್ರಸನ್ನಃ=ಪ್ರಸನ್ನನಾಗಿ ಅಭೀಪ್ಸಿತೈಃ=ಬಯಸಿದಂಥಾ ವರದಾನೈಃ = ವರವ ಕೊಡುಹಂಗಳಿಂದ ಸುರಾನ್=ದೇವತೆಗಳನು ಆಹ್ಲಾದಯಾಮಾಸ=ಸಂತೋಷಿಸಿದನು. ||೧೩೦||

---

[1] ಭಕ್ತ (ಘ)

ಉವಾಚ ಸ ಸುರಾನ್ ದೇವೋ ಮಹರ್ಷೀಂಶ್ಚ ಸನಾತನಃ
ಏಷ ವಿಷ್ಣುರ್ನೃಸಿಂಹಾಖ್ಯಃ ಸದರ್ಪಶ್ಚ ಮಹಾಬಲಃ ||೧೩೧||

ಜಗತ್ಸಂಹಾರ[2]ಕಾರೇಣ[2] ಪ್ರವೃತ್ತೋ ಲೋಕಭೀಷಣಃ
ಸಂಹೃತಃ ಶಂಕರಾಂಶೇನ ರುದ್ರೇಣ ಶರಭಾತ್ಮನಾ ||
ವೀರಭದ್ರೇಣ ಜಗತಾಂ ಹಿತಾರ್ಥಂ ನಾಪರೇಣ ಚ ||೧೩೨||

ಏತಾವದುಕ್ತ್ವಾ ಭಗವಾನ್ ವೀರಭದ್ರೋ ಮಹಾಬಲಃ
ಪಶ್ಯತಾಂ ಸರ್ವದೇವಾನಾಂ ತತ್ರೈವಾಂತರಧೀಯತ ||೧೩೩||

ನೃಸಿಂಹಕೃತ್ತಿವಸನಸ್ತದಾಪ್ರಭೃತಿ ಶಂಕರಃ
ವಕ್ತ್ರಂ ತಸ್ಮುಂಡಮಾಲಾಯಾಂ ನಾಯಕತ್ವೇನ ಕಲ್ಪಿತಮ್ ||೧೩೪||

---

ಸನಾತನಃ = ನಿತ್ಯನಹಂಥಾ ದೇವಃ = ದೇವನಹಂಥಾ ಸಃ = ಆ ಪರಮೇಶ್ವರನು ಸುರಾನ್ = ದೇವರ್ಕಳನು ಮಹರ್ಷೀಂಶ್ಚ = ಮಹಾಋಷಿಗಳನು ಕುರಿತು ಉವಾಚ = ನುಡಿದನು. ಸದರ್ಪಶ್ಚ = ದರ್ಪಸಹಿತನಹಂಥಾ ಮಹಾಬಲಃ = ಮಹಾಪರಾಕ್ರಮ ವನುಳ್ಳಂಥಾ ನೃಸಿಂಹಾಖ್ಯಃ = ನೃಸಿಂಹನೆಂಬ ಹೆಸರನುಳ್ಳಂಥಾ ಏಷ ವಿಷ್ಣುಃ = ಈ ವಿಷ್ಣು, ||೧೩೧||

ಲೋಕಭೀಷಣಃ = ಲೋಕಕ್ಕೆ ಭಯಂಕರ[3]ಮೂರ್ತಿ[3]ಯಾಗಿ ಪ್ರವೃತ್ತಃ = ವರ್ತಿಸಲುಪಟ್ಟನು.[3] ಜಗತ್ಸಂಹಾರಕಾರೇಣ = ಲೋಕವ ಸಂಹರಿಸುವುದಕ್ಕೆ ಕಾರಣ ವಹಂಥಾ ಶಂಕರಾಂಶೇನ = ಪರಮೇಶ್ವರನ ಅಂಶವಹಂಥಾ ಶರಭಾತ್ಮನಾ = ಶರಭ ರೂಪನುಳ್ಳಂಥಾ ವೀರಭದ್ರೇಣ = ವೀರಭದ್ರನೆಂಬ ರುದ್ರನಿಂದ ಜಗತಾಂ = ಲೋಕಂಗಳ ಹಿತಾರ್ಥಂ = ಹಿತಕ್ಕೋಸ್ಕರ ಸಂಹೃತಃ = ಸಂಹರಿಸಲುಪಟ್ಟನು. ಅಪರೇಣ ಚ = ಮತ್ತೊಬ್ಬ ದೇವನಿಂದವು ನ ಸಂಹೃತಃ = ಸಂಹರಿಸಲುಪಟ್ಟುದಿಲ್ಲ.

[4]ಏತಾವತ್ = ಇಷ್ಟನು[4] ಉಕ್ತ್ವಾ = ನುಡಿದು ಭಗವಾನ್ = ಭಗವಾನ್ನು ವಹಂಥಾ ಮಹಾಬಲಃ = ಮಹಾಪರಾಕ್ರಮಿಯುಹಂಥಾ ವೀರಭದ್ರಃ = ವೀರಭದ್ರನು ಪಶ್ಯತಾಂ = ನೋಡುತ್ತಿದ್ದಂಥಾ ಸರ್ವದೇವಾನಾಂ = ಸಮಸ್ತದೇವರ್ಕಳ ತತ್ರೈವ ಆ ಮಧ್ಯದಲ್ಲಿಯೇ ಅಂತರಧೀಯತ = ಅದೃಶ್ಯವಾದನು. ||೧೩೩||

[5]ಶಂಕರಃ = ಪರಮೇಶ್ವರನು ತದಾಪ್ರಭೃತಿ = ಅಂದು ಮೊದಲಾಗಿ ನೃಸಿಂಹ-ಕೃತ್ತಿವಸನಃ = ನರಸಿಂಹನ ಚರ್ಮಾಂಬರನಾದನು. ತದ್ವಕ್ತ್ರಂ = ಆ ನರಸಿಂಹನ

---

[2] ಕರಣೇ (ಘ) [3] ಲುಪ್ತ (ಕ) [4] ಲುಕ್ತ (ಕ) [5] ಲುಪ್ತ (ಕ)

ತತೋ ದೇವಾ ನಿರಾತಂಕಾಃ ಕೀರ್ತಯಂತಃ ಕಥಾಮಿಮಾಮ್
ವಿಸ್ಮಯೋತ್ಫುಲ್ಲವದನಾ ಜಗ್ಮುಸ್ಸರ್ವೇ ಯಥಾಕ್ರಮಮ್ ||೧೩೫||

ಸೂತ ಉವಾಚ

* ಶೂಲಾಯುಧಾಯ ಸುರವೃಂದಕಮೌಲಿಮಾಲಾ-
ಲೀಲಾಯಮಾನಚರಣಾಂಬುಜಪಲ್ಲವಾಯ ।
ಹೇಲಾವಲೇಪಪರಿಭೂಷ್ಣುನೃಸಿಂಹರಂಹೋ-
ಲೀಲಾಪಹಾರಶರಭಾಕೃತಯೇ ನಮೋಽಸ್ತು ||೧೩೬||

ಇದಂ ತು ಶರಭಾಖ್ಯಾನಂ ನ ಪ್ರಕಾಶ್ಯಂ ಯತಸ್ತತಃ
ಪ್ರಕಾಶ್ಯಂ ಶಿವಭಕ್ತೇಷು ಧೀರೇಷು ನಿಯತೇಷು ಚ ||೧೩೭||

---

ಮುಖವು ಮುಂಡಮಾಲಾಯಾಂ = ರುಂಡಮಾಲೆಯಲ್ಲಿ ನಾಯಕತ್ವೇನ = [1]ಶ್ರೇಷ್ಠವಹಾತನದಿಂದ ಕಲ್ಪಿತಂ = ಮಾಡಲುಪಟ್ಟಿತ್ತು. ||೧೩೪||

ತತಃ = ಅಷ್ಟರಮೇಲೆ ಸರ್ವೇ ದೇವಾಃ = ಸಮಸ್ತದೇವರ್ಕಳು ನಿರಾತಂಕಾಃ = ನಿರ್ಭೀತರುಗಳಾಗಿ [2]ಇಮಾಂ ಕಥಾಂ = ಈ ಕಥೆಯನು ಕೀರ್ತಯಂತಃ = ಕೊಂಡಾಡುತಂವಿದ್ದವರುಗಳಾಗಿ[2] ವಿಸ್ಮಯೋತ್ಫುಲ್ಲವದನಾಃ = ಆಶ್ಚರ್ಯದಿಂದ ವಿಕಸಿತವಾದ ಮುಖವನುಳ್ಳಂಥಾವರುಗಳಾಗುತವು ಯಥಾಕ್ರಮಂ = ಕ್ರಮತಪ್ಪದೆ ಜಗ್ಮುಃ = ಎಯ್ದಿದರು. ||೧೩೫||

ಸೂತ ಉವಾಚ = ಸೂತಮುನಿ ನುಡಿವುತ್ತಿದ್ದಾನು.

[3] ಶೂಲಾಯುಧಾಯ = ತ್ರಿಶೂಲಾಯುಧವನುಳ್ಳಂಥಾ[3] ಸುರವೃಂದಕಮೌಳಿಮಾಲಾಲೀಲಾಯಮಾನಚರಣಾಂಬುಜಪಲ್ಲವಾಯ = ದೇವರ್ಕಳ ಸಮೂಹದ ಮುಕುಟಂಗಳ ಪಂಙ್ತಿಯಲ್ಲಿ ಒಪ್ಪುತ್ತಂವಿದ್ದ ಚರಣಕಮಲವೆಂಬ ಎಳೆದಳಿರನುಳ್ಳಂಥಾ ಹೇಲಾವಲೇಪಪರಿಭೂಷ್ಣುನೃಸಿಂಹರಂಹೋಲೀಲಾಪಹಾರಶರಭಾಕೃತಯೇ = ವಿಲಾಸವಹ ಗರ್ವದಿಂದ ಹೆಚ್ಚಿದ ನೃಸಿಂಹನ, ಬೇಗದಲ್ಲಿ ಲೀಲೆಯಿಂದ ಅಪಹರಿಸಲುಪಟ್ಟ ಶರಭಮೂರ್ತಿಯನುಳ್ಳಂಥಾ ಪರಮೇಶ್ವರಂಗೋಸ್ಕರ ನಮಃ = ನಮಸ್ಕಾರವು ಅಸ್ತು = [4]ಇರಲಿ.[4] ||೧೩೬||

ಇದಂ = ಈ ಶರಭಾಖ್ಯಾನಂ ತು = ಶರಭಾಧ್ಯಾಯವು ಯತಸ್ತತಃ = ಅತ್ತಿತ್ತಲು ನ ಪ್ರಕಾಶ್ಯಂ = ಪ್ರಕಾಶಿಸಲಾಗದು. ಹೇಳಲಾಗದೆಂಬುದರ್ಥ. ಧೀರೇಷು = ವಿದ್ವಾನ್ನುಗಳಹಂಥಾ ನಿಯತೇಷು = ಶುದ್ಧರುಗಳಹಂಥಾ ಶಿವಭಕ್ತೇಷು = ಶಿವಭಕ್ತರುಗಳಲ್ಲಿಯು ಪ್ರಕಾಶ್ಯಂ = ಪ್ರಕಾಶಿಸಲು ಯೋಗ್ಯವು. ||೧೩೭||

---

* ವಸಂತತಿಲಕವೃತ್ತಂ [1] ಶ್ರೇಷ್ಠ (ಕ) [2,3] ಲುಪ್ತ (ಕ) [4] ಆಗಲಿ (ಖ)

ತ್ಯೈರೇವ ಪಠಿತವ್ಯಂ ಚ ಶ್ರೋತವ್ಯಂ ಚ ಶಿವಾತ್ಮಭಿಃ
ಇದಂ ತು ಶರಭಾಖ್ಯಾನಂ ಪುಣ್ಯಂ ವೇದೈಶ್ಚ ಸಮ್ಮತಮ್ ||೧೩೮||
ಪಠತಾಂ ಶೃಣ್ವತಾಂ ಚೈವ ಸರ್ವದುಃಖವಿನಾಶನಮ್
ಶಿವಲೋಕಸ್ಯ ಸೋಪಾನಂ ವಾಂಛಿತಾರ್ಥೈಕಸಾಧನಮ್ ||೧೩೯||
ಮಂಗಳಾರ್ಥಂ ಪಠೇದ್ವಿದ್ವಾನ್ ಶಿವಭಕ್ತೋ ದೃಢವ್ರತಃ ||೧೪೦||
ಇತಿ ಸೂತಾತ್ಸಮಾಕರ್ಣ್ಯ ಮುನಯಶ್ಶಂಸಿತವ್ರತಾಃ
ಪ್ರಣಮ್ಯ ಹೃಷ್ಟಮನಸಃ ಪ್ರಯಯುಸ್ಸ್ವಂ ಸ್ವಮಾಶ್ರಮಮ್ ||

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ- ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ- ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ ಶಿವಾಧಿಕ್ಯಕಥನೇ 'ಶರಭಲೀಲಾನಾಮ' ಸಪ್ತದಶೋಽಧ್ಯಾಯಃ

---

ಶಿವಾತ್ಮಭಿಃ = ಶಿವಸ್ವರೂಪರಹಂಥಾ ತ್ಯೈರೇವ = ಆ ಶಿವಭಕ್ತರುಗಳಿಂದವೇ ವೇದೈಃ = ವೇದಂಗಳೊಡನೆ ಸಮ್ಮತಂ = ಸಮ್ಮತವಹಂಥಾ ಇದಂ = ಈ ಪುಣ್ಯಂ ಪುಣ್ಯವಹಂಥಾ ಶರಭಾಖ್ಯಾನಂ ತು = ಶರಭಾಧ್ಯಾಯವು ಪಠಿತವ್ಯಂ = ಪಠಿಸಲು ಯೋಗ್ಯವು. ಶ್ರೋತವ್ಯಂ ಚ = ಕೇಳಲು ಯೋಗ್ಯವು. ||೧೩೮||

ಪಠತಾಂ = ಪಠಿಸಿದವರುಗಳಿಗೆ ಶೃಣ್ವತಾಂ ಚೈವ = ಕೇಳಿದವರುಗಳಿಗೆಯೂ ಸರ್ವದುಃಖವಿನಾಶನಂ = ಸಮಸ್ತದುಃಖ ಕೆಡುವುದು. ಶಿವಲೋಕಸ್ಯ = ಶಿವಲೋಕಕ್ಕೆ ಸೋಪಾನಂ = ಸೋಪಾನವಹುದು. ವಾಂಛಿತಾರ್ಥೈಕಸಾಧನಂ = ಇಷ್ಟಾರ್ಥಕ್ಕೆ ಇದೊಂದೇ ಸಾಧನವಹಂಥಾದ್ದು. ||೧೩೯||

ವಿದ್ವಾನ್ = ವಿದ್ವಾಂಸನುವಹಂಥಾ ಶಿವಭಕ್ತಃ = [2]ಶಿವನಲ್ಲಿ[2] ಭಕ್ತಿಯು- ಳ್ಳಂಥಾ ದೃಢವ್ರತಃ = ದೃಢವಹಂಥಾ ವ್ರತವನುಳ್ಳಾತನು ಮಂಗಳಾರ್ಥಂ = ಶುಭನಿಮಿತ್ತವಾಗಿ ಪಠೇತ್ = ಪಠಿಸೂದು. ||೧೪೦||

ಇತಿ = ಈ ಪ್ರಕಾರದಲ್ಲಿ ಸೂತಾತ್ = ಸೂತಮುನೀಶ್ವರನ ದೆಸೆಯಿಂದ ಸಮಾಕರ್ಣ್ಯ = ಲೇಸಾಗಿ ಕೇಳಿ ಶಂಸಿತವ್ರತಾಃ = ಕೊಂಡಾಡಿಸಿಕೊಳಲುಪಟ್ಟ ವ್ರತವನುಳ್ಳಂಥಾ ಮುನಯಃ = ಸಮಸ್ತ ಋಷಿಗಳು ಹೃಷ್ಟಮನಸಃ = ಸಂತೋಷಿಸಲುಪಟ್ಟ ಮನಸ್ಸನುಳ್ಳಂಥಾವರುಗಳಾಗಿ ಪ್ರಣಮ್ಯ = ನಮಸ್ಕರಿಸಿ ಸ್ವಂ ಸ್ವಂ ಆಶ್ರಮಂ = ತಮ್ಮ ತಮ್ಮ ಆಶ್ರಮವನು ಪ್ರಯಯುಃ = ಎಯ್ದಿದರು. ||೧೪೧||

---

2 ಶಿವಭಕ್ತನಲ್ಲಿ (ಖ)

# ಅಥಾಷ್ಟಾದಶೋಽಧ್ಯಾಯಃ

## ( ಕಾಮದಹನಲೀಲಾ )

ಆದಿತ್ಯಪುರಾಣೇ
ಋಷಯ ಊಚುಃ

ಶ್ರುತಮಸ್ಮಾಭಿರಖಿಲಂ ಜ್ಞಾನಂ ಮಾಹೇಶ್ವರಂ ಮಹತ್
ಇದಾನೀಂ ಶ್ರೋತುಮಿಚ್ಛಾಮೋ ವಿವಾಹಂ ಗಿರಿಜಾಪತೇಃ ॥೧॥

ಸೂತ ಉವಾಚ

ಯದುವಾಚ ಪುರಾ ದೇವಃ ಪೃಷ್ಟೋ ಮಾರ್ತಂಡಸೂನುನಾ
ತದಹಂ ಸಂಪ್ರವಕ್ಷ್ಯಾಮಿ ಶೃಣುಧ್ವಂ ಮುನಿಸತ್ತಮಾಃ ॥೨॥

---

ಆದಿತ್ಯಪುರಾಣೇ = ಆದಿತ್ಯ ಪುರಾಣದಲ್ಲಿ ಹೇಳುತ್ತಿದ್ದುದು.

ಋಷಯ ಊಚುಃ = [1]ನೈಮಿಷಾರಣ್ಯವಾಸಿಗಳಹಂಥ[1] ಋಷಿಗಳು ನುಡಿವುತ್ತಿದ್ದಾರು.

ಮಾಹೇಶ್ವರಂ = ಶಿವನ ಸಂಬಂಧವಹಂಥಾ ಮಹತ್ = ಉತ್ಕೃಷ್ಟವಹಂಥಾ ಅಖಿಲಂ ಜ್ಞಾನಂ = ಸಮಸ್ತ ಜ್ಞಾನವು ಅಸ್ಮಾಭಿಃ = ನಮ್ಮಿಂದ ಶ್ರುತಂ = ಕೇಳಲು ಪಟ್ಟಿತ್ತು. ಇದಾನೀಂ = ಈಗಳು ಗಿರಿಜಾಪತೇಃ = ಪಾರ್ವತೀಪತಿಯಹಂಥಾ ಶಿವನ ವಿವಾಹಂ = ವಿವಾಹವನು ಶ್ರೋತುಂ = ಕೇಳಲು ಇಚ್ಛಾಮಃ = ಇಚ್ಛೈಸುತ್ತಿದ್ದೇವು.

ಸೂತ ಉವಾಚ = ಸೂತಮುನಿಯು ನುಡಿದನು.

ಪುರಾ = ಪೂರ್ವದಲ್ಲಿ ಮಾರ್ತಂಡಸೂನುನಾ = ಸೂರ್ಯಪುತ್ರನಿಂದೆ [ಯಮನಿಂದ] ದೇವಃ = ಶಿವನು ಪೃಷ್ಟಃ = ಬೆಸಗೊಳಲುಪಟ್ಟಾತನಾಗಿ ಯತ್ = ಆವುದಾನೊಂದು ವಿವಾಹವನು ಉವಾಚ = ನುಡಿದನು. ತತ್ = ಅದನು ಅಹಂ = ನಾನು ಸಂಪ್ರವಕ್ಷ್ಯಾಮಿ = ಹೇಳಿಹೆನು. ಭೋ ಮುನಿಸತ್ತಮಾಃ = ಎಲೈ ಮುನಿಶ್ರೇಷ್ಠರುಗಳಿರಾ ಶೃಣುಧ್ವಂ = ಕೇಳಿ. ॥೨॥

---

[1] (ಖ) ಪಾಠ.

ಆಸೀದ್ದಕ್ಷಸುತಾ ದೇವೀ ಸತೀ ತ್ರೈಲೋಕ್ಯಪೂಜಿತಾ
ತ್ಯಕ್ತ್ವಾ ದಾಕ್ಷಂ ಶರೀರಂ ಚ ಬಭೂವಾಚಲಕನ್ಯಕಾ ||೩||

ನಾಮ್ನಾ ಕಾಲೀತಿ ವಿಖ್ಯಾತಾ ವಿಶ್ವರೂಪಾ ಮಹೇಶ್ವರೀ
ಜಗಚ್ಚೈತನ್ಯರೂಪಾ ಯಾ ಜಗಚ್ಚೈತನ್ಯಬೋಧಿನೀ ||೪||

ಅಧಿಷ್ಠಿತಸ್ತಯಾ ಕಾಲ್ಯಾ ಹಿಮವಾನ್ಪರ್ವತೋತ್ತಮಃ
ಪುಣ್ಯಸ್ಥಾನಮಭೂದ್ವಿಪ್ರಾ ಮೋಕ್ಷದಃ ಸರ್ವದೇಹಿನಾಮ್ ||೫||

ಸಿದ್ಧಾನಾಂ ಚ ಮುನೀನಾಂ ಚ ಗಂಧರ್ವಾಣಾಂ ದಿವೌಕಸಾಮ್
ಆವಾಸಃ ಕಿನ್ನರಾಣಾಂ ಚ ಸ್ಮರಣಾತ್ ಪುಣ್ಯದೋ ನೃಣಾಮ್ ||೬||

---

ದಕ್ಷಸುತಾ = ದಕ್ಷನ ಕುಮಾರಿಯುಹಂಥಾ ಸತೀ ದೇವೀ = ಸತೀದೇವಿ ತ್ರೈಲೋಕ್ಯಪೂಜಿತಾ = ಮೂರುಲೋಕದಿಂದಪೂಜಿಸಿಕೊಳಲ್ಪಟ್ಟಾಯಕನು ಆಸೀತ್ = ಆದಳು. ದಾಕ್ಷಂ = ದಕ್ಷನ ಸಂಬಂಧವಹಂಥಾ ಶರೀರಂ ಚ = ದೇಹವನು ತ್ಯಕ್ತ್ವಾ = ಬಿಟ್ಟು ಅಚಲಕನ್ಯಕಾ = ಗಿರಿರಾಜನ ಮಗಳು ಬಭೂವ = ಆದಳು.

ಜಗಚ್ಚೈತನ್ಯಬೋಧಿನೀ = ಲೋಕಕ್ಕೆ ಜ್ಞಾನವನು ಬೋಧಿಸುವಂಥಾ ಜಗಚ್ಚೈತನ್ಯರೂಪಾ = ಲೋಕದ ಚೈತನ್ಯರೂಪಿಯುಹಂಥಾ ವಿಶ್ವರೂಪಾ = ವಿಶ್ವ-ರೂಪಿಯುಹಂಥಾ ಯಾ = ಅವಳಾಳೊಬ್ಬಳು ಮಹೇಶ್ವರೀ = ಸಾಕ್ಷಾತ್ಪರಮೇಶ್ವರಿ ನಾಮ್ನಾ-ಹೆಸರಿನಿಂದ ಕಾಳೀತಿ = ಕಾಳಿಯೆಂದು ಹೀಂಗೆ ವಿಖ್ಯಾತಾ = ಪ್ರಖ್ಯಾತೆಯಾದಳು. ||೪||

ಭೋ ವಿಪ್ರಾಃ—ಎಲೆ ಬ್ರಾಹ್ಮಣೋತ್ತಮರುಗಳಿರಾ ! ತಯಾ ಕಾಲ್ಯಾ = ಆ ಕಾಳಿಯಿಂದ ಅಧಿಷ್ಠಿತಃ = ಇರಲುಪಟ್ಟಂಥಾ ಪರ್ವತೋತ್ತಮಃ = ಗಿರಿಗಳಿಗೆ ಉತ್ತಮನಹಂಥಾ ಹಿಮವಾನ್ = ಹಿಮವತ್ಪರ್ವತನು ಸರ್ವದೇಹಿನಾಂ = ಸಮಸ್ತ ಪ್ರಾಣಿಗಳಿಗೆ ಮೋಕ್ಷದಃ = ಮೋಕ್ಷವ ಕೊಡುವಾತನಾದನು. ಪುಣ್ಯಸ್ಥಾನಂ = ಪುಣ್ಯಕ್ಷೇತ್ರವು (ಪುಣ್ಯಕ್ಕೆ ಸ್ಥಾನವು) ಅಭೂತ್ = ಆದನು. ||೫||

ಸಿದ್ಧಾನಾಂ ಚ = ಸಿದ್ಧರುಗಳಿಗೆಯು ಮುನೀನಾಂ ಚ = ಮುನಿ (ಋಷಿ) ಗಳಿಗೆಯು ಗಂಧರ್ವಾಣಾಂ = ಗಂಧರ್ವರುಗಳಿಗೆ ದಿವೌಕಸಾಂ = ದೇವರ್ಕಳಿಗೆ ಕಿನ್ನರಾಣಾಂ ಚ = ಕಿನ್ನರರುಗಳಿಗೆಯೂ ನೃಣಾಂ = ಮನುಷ್ಯರುಗಳಿಗೆ ಆವಾಸಃ = ಸ್ಥಾನವಾದನು. ಸ್ಮರಣಾತ್ = ನೆನೆದ ಮಾತ್ರದ ದೆಸೆಯಿಂದ ಪುಣ್ಯದಃ = ಪುಣ್ಯವನು ಕೊಡುವಾತನಾದನು. ||೬||

ಶಿವಂ ಭರ್ತಾರಮಿಚ್ಛಂತೀ ತಸ್ಮಿನ್ ಗಿರಿವರೋತ್ತಮೇ
ತಪಸ್ತೇಪೇ ಶಿವಾ ಕಾಲೀ ಮಾತಾಪಿತ್ರೋರನುಜ್ಞಯಾ ||೭||

ಅಥಾಸ್ಮಿನ್ನಂತರೇ ದೈತ್ಯಸ್ತಾರಕೋ ಲೋಕಕಂಟಕಃ
ಜಾತೋ ದೈತ್ಯಕುಲೇ ಬಾಲೋ ಮೃತ್ಯುರೂಪೋ ದಿವೌಕಸಾಮ್ ||

ಬ್ರಹ್ಮಾಣಂ ತಪಸಾ ತೋಷ್ಯ ವರಂ ತಸ್ಮಾದವಾಪ್ಯ ಚ
ದೇವಾಃ ಪಲಾಯಿತಾಸ್ತೇನ ತಾರಕೇಣ ಬಲೀಯಸಾ ||೯||

ದೇವಾನಾಂ ಯೋಷಿತೋ ಯಾಶ್ಚ ಬಲಾದಪಹೃತಾಶ್ಚ ತಾಃ
ದುಃಖಾಗ್ನಿನಾ ಸುಸಂತಪ್ತಾಃ ಶಕ್ರಾದ್ಯಾಃ ಪ್ರಥಿತೌಜಸಃ ||೧೦||

---

ಶಿವಾ = ಮಂಗಳಸ್ವರೂಪಿಯಹಂಥಾ ಕಾಳೀ = ಪಾರ್ವತೀದೇವಿ ಶಿವಂ = ಪರಮೇಶ್ವರನನು ಭರ್ತಾರಂ = ಗಂಡನನ್ನಾಗಿ ಇಚ್ಛಂತೀ = ಬಯಸುತ್ತಿದ್ದಾಯಕನಾಗಿ [ಬಯುಸುತ್ತಿದ್ದಾತಳಾಗಿ] ಮಾತಾಪಿತ್ರೋಃ = ತಾಯಿತಂದೆಗಳ ಅನುಜ್ಞಯಾ = ಅನುಜ್ಞೆಯಿಂದ ಗಿರಿವರೋತ್ತಮೇ = ಗಿರಿಗಳಿಗೆ ಅತ್ಯಂತ ಉತ್ತಮವಹಂಥಾ ತಸ್ಮಿನ್ = ಆ ಹಿಮವತ್ಪರ್ವತದಲ್ಲಿ ತಪಃ = ತಪಸ್ಸನು ತೇಪೇ = ತಪಿಸಿದಳು. [1]ಮಾಡಿದಳೆಂಬುದರ್ಥ[1] ತಪ + ಸಂತಾಪೇ ಎಂಬ ಧಾತು. ಲಿಟ್ ಆತ್ಮನೇಪದ ಪ್ರಥಮಪುರುಷೈಕವಚನ. ||೭||

ಅಥ = ಅನಂತರದಲ್ಲಿ ಅಸ್ಮಿನ್ನಂತರೇ = ದೇವಿ ತಪಸ್ಸನು ಮಾಡುವ ಈ ವೇಳೆಯಲ್ಲಿ ದೈತ್ಯಕುಲೇ = ರಾಕ್ಷಸರ ಕುಲದಲ್ಲಿ ಜಾತಃ = ಹುಟ್ಟಿದಂಥಾ ಬಾಲಃ = ಚಿಕ್ಕವನಹಂಥಾ ಲೋಕಕಂಟಕಃ = ಲೋಕಕ್ಕೆ ಕಂಟಕನಹಂಥಾ ದೈತ್ಯಃ = ರಾಕ್ಷಸನಹಂಥಾ ತಾರಕಃ = ತಾರಕನು ದಿವೌಕಸಾಂ = ದೇವರ್ಕಳಿಗೆ ಮೃತ್ಯುರೂಪಃ ಮೃತ್ಯುರೂಪನಾದನು. ||೮||

ತಪಸಾ = ತಪಸ್ಸಿನಿಂದ ಬ್ರಹ್ಮಾಣಂ = ಬ್ರಹ್ಮನನು ತೋಷ್ಯ = ಮೆಚ್ಚಿಸಿ ತಸ್ಮಾತ್ = ಆ ಬ್ರಹ್ಮನ ದೆಸೆಯಿಂದ ವರಂ = ವರವನು ಅವಾಪ್ಯ ಚ = ಪಡದೂ ಬಲೀಯಸಾ = ಬಲಿಷ್ಠನಹಂಥಾ ತೇನ ತಾರಕೇಣ = ಆ ತಾರಕಾಸುರನಿಂದ ದೇವಾಃ = ದೇವರ್ಕಳು ಪಲಾಯಿತಾಃ = ಓಡಿದರು. ||೯||

ದೇವಾನಾಂ = [2]ದೇವರ್ಕಳ[2] ಯಾಃ = [3]ಆರು ಕೆಲಬರು[3] ಯೋಷಿತಃ = [4]ಸ್ತ್ರೀಯರುಗಳುಂಟು[4] ತಾಶ್ಚ = ಆ ದೇವಸ್ತ್ರೀಯರುಗಳು ಬಲಾತ್ = ಬಲುಮೆಯು

---

[1] (ಖ) ಪಾಠಃ. [2], [3], [4], (ಕ) ಲುಪ್ತ.

ಗತಾ ದೇವಾಃ ಶರಣ್ಯಂ ಚ ಬ್ರಹ್ಮಾಣಂ ತ್ರಿದಶೇಶ್ವರಮ್
ಆಗತಾಂಶ್ಚ ಸುರಾನ್ ದೃಷ್ಟ್ವಾ ತತಃ ಪ್ರೋವಾಚ ಪದ್ಮಜಃ ||೧೧||

ಬ್ರಹ್ಮೋವಾಚ

ಕಸ್ಮಾತ್ತ್ರಸ್ತಾ ಸುರಾ ಯೂಯಮಾಗತಾ ವೈ ಮಮಾಂತಿಕಮ್
ಬ್ರೂತ ತತ್ಸಕಲಂ ದೇವಾ ಉಪಾಯಂ ವಚ್ಮಿ ತತ್ಸ್ಫುಟಮ್ ||೧೨||

ದೇವಾ [ ಊಚುಃ ]

ತಾರಕಾದ್ಭಯಸಂತ್ರಸ್ತಾಃ ಶರಣಂ ವಯಮಾಗತಾಃ
ಯಥಾ ಮೃತ್ಯೋರ್ಭಯಂ ದೇವ ತಸ್ಮಾನ್ನಸ್ತ್ರಾತುಮರ್ಹಸಿ ||೧೩||

---

ದೆಸೆಯಿಂದ ಅಪಹೃತಾಶ್ಚ = ಸೆರೆಯಾಗಲುಪಟ್ಟರು. ಪ್ರಥಿತೌಜಸಃ = ಬಹಳ ಪರಾಕ್ರಮವನುಳ್ಳಂಥಾ ಶಕ್ರಾದ್ಯಾಃ = ಇಂದ್ರ ಮೊದಲಾದಂಥಾ ದೇವರ್ಕಳು ದುಃಖಾಗ್ನಿನಾ = ದುಃಖವೆಂಬ ಕಿಚ್ಚಿನಿಂದ ಸುಸಂತಪ್ತಾಃ = ಅತ್ಯಂತ ಬೇವುತ್ತಿದ್ದರು

[1]ತತಃ = ಅಷ್ಟರ ಮೇಲೆ[1] ದೇವಾಃ = ದೇವರ್ಕಳು ಶರಣ್ಯಂ = ಮರೆ ಹೊಗಿಸಿಕೊಳ್ಳಲು ಯೋಗ್ಯನಹಂಥಾ ತ್ರಿದಶೇಶ್ವರಂ = ದೇವರ್ಕಳಿಗೆ ಒಡೆಯನಹಂಥಾ ಬ್ರಹ್ಮಾಣಂ ಚ = ಬ್ರಹ್ಮನನು ಕುರಿತು ಗತಾಃ = ಎಯ್ದಿದರು. ಆಗತಾನ್ = ಬಂದಂಥಾ ಸುರಾಂಶ್ಚ = ದೇವರ್ಕಳನು ದೃಷ್ಟ್ವಾ = ಕಂಡು ಪದ್ಮಜಃ = ಬ್ರಹ್ಮನು ಪ್ರೋವಾಚ = ನುಡಿದನು. ||೧೧||

ಬ್ರಹ್ಮೋವಾಚ = ಬ್ರಹ್ಮನ ವಾಕ್ಯವು

ಭೋ ಸುರಾಃ = ಎಲೆ ದೇವತೆಗಳಿರಾ ಯೂಯಂ = ನೀವು ಕಸ್ಮಾತ್ = ಆವಾತನ ದೆಸೆಯಿಂದ ತ್ರಸ್ತಾಃ = ಅಂಜಿದವರುಗಳಾಗಿ ಮಮ = ಎನ್ನ ಅಂತಿಕಂ = ಸಮೀಪವನು ಆಗತಾ ವೈ = ಎಯ್ದಿದವರುಗಳು. ಭೋ ದೇವಾಃ = ಎಲೆ ದೇವರ್ಕಳಿರಾ! ತತ್ಸಕಲಂ = ಅದೆಲ್ಲವನು ಬ್ರೂತ = ಹೇಳಿ. ತತ್ = ಆ ಉಪಾಯಂ = ಉಪಾಯವನು ಸ್ಫುಟಂ = ವ್ಯಕ್ತವಾಗಿ ವಚ್ಮಿ = ಹೇಳುತ್ತಿದ್ದೇನು. ವಚ + ಪರಿಭಾಷಣೇ ಎಂಬ ಧಾತು. ||೧೨||

ದೇವಾ [ಊಚುಃ] = ದೇವರ್ಕಳ ವಾಕ್ಯವು.

ಮೃತ್ಯೋಃ = ಮೃತ್ಯುವಿನ ದೆಸೆಯಿಂದ ಭಯಂ ಯಥಾ = ಭೀತಿಯೆಂಹಗ ಹಗೆ ತಾರಕಾತ್ = ತಾರಕಾಸುರನ ದೆಸೆಯಿಂದ ಭಯಸಂತ್ರಸ್ತಾಃ = ಭೀತಿಯಿಂದ

---

[1] (ಖ) ಪಾಠ

ಅಪಿ ಕ್ಷಣಂ ಸುರಶ್ರೇಷ್ಠ ನ ಲಭಾಮೋ ವಯಂ ಸುಖಮ್
ವಿಂಶದ್ವರ್ಷಸಹಸ್ರಾಣಿ ಹರಿತಾರಕಯೋಸ್ತದಾ ||೧೪||

ಅಹರ್ನಿಶಮನುವಿಶ್ರಾಂತಂ ಯುದ್ಧಮಾಸೀತ್ಸುದಾರುಣಮ್
ತಥಾಪಿ ನ ಜಿತಸ್ತೇನ ದೇವದೇವೇನ ಚಕ್ರಿಣಾ ||೧೫||

ಅವಧ್ಯೋಽಯಮಿತಿ ಜ್ಞಾತ್ವಾ ಯಯೌ ತ್ಯಕ್ತ್ವಾ ಮಹೋದಧಿಮ್
ಭ್ರಾಂತಚಿತ್ತಸ್ತದಾ ಶಂಖೀ ಗತಸ್ತೂರ್ಣಂ ಮಹಾಬಲಃ ||೧೬||

---

ನಡುಗುತ್ತಿದ್ದವರುಗಳಾಗಿ ವಯಂ = ನಾವು ಶರಣಂ = ಮರೆಹೋಗುಹೆಸನು ಆಗತಾಃ = ಎಯ್ದಿದವರುಗಳು. ಭೋಃ ದೇವ = ಎಲೆ ದೇವನೇ ತಸ್ಮಾತ್ = ಆ [1]ತಾರಕಾಸುರನ[1]ದೆಸೆಯಿಂದ ನಃ = ನಮ್ಮನು ತ್ರಾತುಂ = ರಕ್ಷಿಸಲು ಅರ್ಹಸಿ = [2]ಯೋಗ್ಯನಾಗುತಿಹೆ.[2] ||೧೩||

ಭೋಃ ಸುರಶ್ರೇಷ್ಠ = ಎಲೆ ದೇವಶ್ರೇಷ್ಠನಹಂಥಾ ಬ್ರಹ್ಮನೇ ! ವಯಮಪಿ = ನಾವು ಕ್ಷಣಂ = ಒಂದು ಕ್ಷಣವೂ ಸುಖಂ = ಸುಖವನು ನ ಲಭಾಮಃ = ಪಡೆವು ತ್ತಿರೆವು. ತದಾ = ಆಗ ಹರಿತಾರಕಯೋಃ = ವಿಷ್ಣು ತಾರ[3]ಕರಿಬ್ಬರಿಗೂ[3] ವಿಂಶದ್ವರ್ಷ-ಸಹಸ್ರಾಣಿ = [4]ಇಪ್ಪತ್ತುಸಾವಿರ ವರ್ಷಂಗಳು ಅಹರ್ನಿಶಂ = ಹಗಲಿರುಳು[4] ಅವಿಶ್ರಾಂತಂ = ಆವಾಗಪೂ ಸುದಾರುಣಂ = ಅತಿ ಭಯಂಕರವಹಂಥಾ ಯುದ್ಧಂ = ಕಾಳಗವು ಆಸೀತ್ = ಆಯಿತ್ತು. ತಥಾಪಿ = ಹಾಂಗಾಯಿತ್ತಾದರೂ ದೇವದೇವೇನ = ದೇವರ್ಕಳಿಗೊಡೆಯನಹಂಥಾ ತೇನ ಚಕ್ರಿಣಾ = ಆ ಪುರುಷೋತ್ತಮನಿಂದ ನ ಜಿತಃ = ಗೆಲ್ಲಲ್ಪಟ್ಟುದಿಲ್ಲ. ||೧೪-೧೫||

ತದಾ = ಆವಾಗ ಮಹಾಬಲಃ = ಮಹಾಪರಾಕ್ರಮಿಯಹಂಥಾ ಶಂಖೀ = ಶಂಖಧಾರಿಯಹಂಥಾ ವಿಷ್ಣುವು ಅಯಂ = ಈ ತಾರಕಾಸುರನು ಅವಧ್ಯಃ = ಸಾಯನು ಇತಿ = ಹೀಂಗೆಂದು ಜ್ಞಾತ್ವಾ = ಅರಿದು ತ್ಯಕ್ತ್ವಾ = ಯುದ್ಧವನು ಬಿಟ್ಟು ಭ್ರಾಂತಚಿತ್ತಃ = ಭ್ರಾಂತಿಯಹಂಥಾ ಚಿತ್ತವನುಳ್ಳಾತನಾಗುತವು ತೂರ್ಣಂ = ಬೇಗ ಗತಃ = ಹೋದಾತನಾಗಿ ಮಹೋದಧಿಂ = ಕ್ಷೀರಸಮುದ್ರವನು ಯಯೌ = ಎಯ್ದಿದನು. ||೧೬||

---

[1] ಕಾರಣದ (ಖ) [2] ಅರ್ಹನಾಗಿರುತ್ತಿ (ಕ)

[3] ಕಾಸುರ ಇಬ್ಬರಿಗೆ(ಖ) [4] ಲುಪ್ತ (ಕ)

ವಯಮಪ್ಯೇವಮೇವಂ ಹಿ ಭೀತಾಸ್ತ್ವಾಂ ಶರಣಂ ಪ್ರಭೋ
ಆಗತಾಸ್ತ್ರಾಹಿ ನಸ್ತಸ್ಮಾತ್ ಸುಖದೋ ಭವ ಪದ್ಮಜ ॥೧೭॥

ಬ್ರಹ್ಮೋವಾಚ
ಶೃಣುಧ್ವಮಮರಾಸ್ಸರ್ವೇ ಯುಷ್ಮಾಕಂ ಸುಖದಂ ಮಹತ್
ಯೋಽಸೌ ದೃಪ್ತಸ್ತಾರಕಾಖ್ಯಸ್ತತಾಪ ಪರಮಂ ತಪಃ ॥೧೮॥

ತಸ್ಯ ದೈತ್ಯಸ್ಯ ತಪಸಾ ದಹ್ಯಮಾನಂ ಚರಾಚರಮ್
ದೃಷ್ಟ್ವಾ ತದ್ವರದಾನಾರ್ಥಂ ಗತೋಽಹಂ ತಾರಕಾಂತಿಕಮ್ ॥೧೯॥

ಉಕ್ತಂ ಮಯಾ ವರಂ ವತ್ಸ ವರಯೇತಿ ಮಹಾಸುರಮ್
ಅಬ್ರವೀದ್ದೈತ್ಯರಾಜೋ ಮಾಮಭಿವಂದ್ಯ ಕೃತಾಂಜಲಿಃ ॥೨೦॥

ಭೋಃ ಪ್ರಭೋ=ಎಲೆ ಒಡೆಯನೆ[1]! ವಯಮಪಿ=ನಾವೂ ಏವಮೇವಂ =ಈ ಪ್ರಕಾರದಲ್ಲಿ ಭೀತಾಃ=ಅಂಜಿದವರುಗಳಾಗಿ [1]ತ್ವಾಂ=ನಿನ್ನನ್ನು ಕುರಿತು ಶರಣಂ=ಮರೆಹೋಗುಹ ವನ ಆಗತಾ ಹಿ=ಎಯ್ದಿದವರುಗಳಲಾ. ಭೋ ಪದ್ಮಜ =ಎಲೆ ಕಮಲಭವನೇ! ತಸ್ಮಾತ್ = ಆ ತಾರಕಾಸುರನ ದೆಸೆಯಿಂದ ನಃ = ನಮ್ಮನು ತ್ರಾಹಿ=ರಕ್ಷಿಸು. ಸುಖದಃ = ಸುಖವ ಕೊಡುವಾತನು ಭವ = ಆಗು. ॥೧೭॥

ಬ್ರಹ್ಮೋವಾಚ=ಬ್ರಹ್ಮನವಾಕ್ಯವು.

ಭೋಃ ಸರ್ವೇ ಅಮರಾಃ = ಎಲೆ ಸಮಸ್ತ ದೇವರ್ಕಳಿರಾ ಯುಷ್ಮಾಕಂ= ನಿಮಗೆ ಮಹತ್=ಅಧಿಕವಹಂಥಾ ಸುಖದಂ=ಸುಖವ ಕೊಡುವಂಥಾ ಉಪಾಯ ವನು ಶೃಣುಧ್ವಂ=ಕೇಳಿ. ದೃಪ್ತಃ=ಕೊಬ್ಬಿದಂಥಾ ಯಃ = ಆವನಾನೊಬ್ಬ ಅಸೌ=ಈ ತಾರಕಾಖ್ಯಃ= ತಾರಕನೆಂಬ ಹೆಸರನುಳ್ಳ ರಾಕ್ಷಸನು ಪರಮಂ = ಉನ್ನತವಹಂಥಾ ತಪಃ=ತಪಸ್ಸನು ತತಾಪ=ತಪಿಸಿದನು. ಮಾಡಿದನೆಂಬುದರ್ಥ.

ತಸ್ಯ ದೈತ್ಯಸ್ಯ=ಆ ರಾಕ್ಷಸನ ತಪಸಾ = ತಪಸ್ಸಿಂದ ದಹ್ಯಮಾನಂ = ಬೇಯಲುಪಟ್ಟಂಥಾ ಚರಾಚರಂ = ಸಚರಾಚರವನು ದೃಷ್ಟ್ವಾ = ಕಂಡು ತದ್ವರದಾನಾರ್ಥಂ=ಆ ತಾರಕಾಸುರಂಗೆ ವರವಕೊಡಲೋಸ್ಕರ ತಾರಕಾಂತಿಕಂ = ತಾರಕನ ಸಮೀಪವನು ಅಹಂ=ನಾನು ಗತಃ=ಎಯ್ದಿದಾತನು. ॥೧೯॥

ಭೋ ವತ್ಸ=ಎಲೆ ಮಗನೆ ವರಂ=ವರವನು ವರಯ=ಬೇಡು. ಇತಿ

[1] ಲುಪ್ತ (ಕ)

ತಾರಕ ಉವಾಚ

ಅವಧ್ಯೋ ಹಿ ಸುರೈಸ್ಸರ್ವೈಃ ವಿಷ್ಣ್ವಾದ್ಯೈಃ ಪದ್ಮಸಂಭವ
ಭವಾಮ್ಯಹಂ ಯಥಾ ದೇವ ತಥಾ ತ್ವಂ ದೇಹಿ ಮೇ ವರಮ್ ||೨೦||

ಬ್ರಹ್ಮೋವಾಚ

ಏವಮಸ್ತ್ವಿತ್ಯಹಂ ತಸ್ಮೈ ವರಂ ದತ್ವಾ ಸುರೋತ್ತಮಾಃ
ಅನ್ಯಚ್ಚೋಕ್ತಂ ಹಿತಾರ್ಥಂ ವಃ ಕಸ್ಮಾದ್ವಧ್ಯೋಽಸಿ ತಂ ವದ ||೨೨||

ತಾರಕ ಉವಾಚ

---

= ಹೀಗೆಂದು ಮಹಾಸುರಃ = ಮಹಾದೈತ್ಯನನು ಕುರಿತು ಮಯಾ = ಎನ್ನಿಂದ ಉಕ್ತಂ = ನುಡಿಯಲುಪಟ್ಟಿತ್ತು. ದೈತ್ಯರಾಜಃ = ರಾಕ್ಷಸರಿಗೆ ರಾಯನಹಂಥಾ ತಾರಕನು ಮಾಂ = ಎನ್ನನು ಅಭಿವಂದ್ಯ = ನಮಸ್ಕರಿಸಿ ಕೃತಾಂಜಲಿಃ = ಕೈಮುಗಿದುಕೊಂಡು ಅಬ್ರವೀತ್ = ನುಡಿದನು. ||೨೦||

ತಾರಕ ಉವಾಚ = [1]ತಾರಕಾಸುರನ ವಾಕ್ಯವು.[1]

ಭೋಃ ಪದ್ಮಸಂಭವ = ಎಲೇ ಕಮಲಭವನೇ ಹಿ = ಆವುದಾನೊಂದು ಕಾರಣವಾಗಿ ವಿಷ್ಣ್ವಾದ್ಯೈಃ = ವಿಷ್ಣು ಮೊದಲಾದಂಥಾ ಸರ್ವೈಸ್ಸುರೈಃ = ಸಮಸ್ತ ದೇವರ್ಕಳಿಂದ ಅಹಂ = ನಾನು ಅವಧ್ಯಃ = ಕೊಲಿಸಿಕೊಳದಾತನು, ಯಥಾ = ಹೇಂಗೆ ಭವಾಮಿ = ಆಗುತ್ತಿಹೆನು ತಥಾ = ಹಾಂಗೆ ಭೋ ದೇವ = ಎಲೆ ದೇವನೇ ತ್ವಂ = ನೀನು ಮೇ = ಎನಗೆ ವರಂ = ವರವನು ದೇಹಿ = ಕೊಡು. ||೨||

ಬ್ರಹ್ಮೋವಾಚ = ಬ್ರಹ್ಮನು ನುಡಿದನು.

ಏವಂ = ಈ ಪ್ರಕಾರದಲ್ಲಿ ಅಸ್ತು = ಆಗಲಿ ಇತಿ = ಹೀಂಗೆಂದು ಅಹಂ = ನಾನು ತಸ್ಮೈ = ಆ ತಾರಕಂಗೋಸ್ಕರ ವರಂ = ವರವನು ದತ್ವಾ = ಕೊಟ್ಟು ಭೋ ಸುರೋತ್ತಮಾಃ = ಎಲೇ ದೇವಶ್ರೇಷ್ಠರುಗಳಿರಾ ವಃ = ನಿಮ್ಮ ಹಿತಾರ್ಥಂ = ಹಿತಕ್ಕೋಸ್ಕರ ಕಸ್ಮಾತ್ = ಆವಾತನ ದೆಸೆಯಿಂದ ವಧ್ಯಃ = ವಧಿಸಿಕೊಳ್ಳಲು ಯೋಗ್ಯನು ಅಸಿ = ಆಗುತ್ತಿಹೆ. ತಂ = ಅದನು ವದ = ಹೇಳು. ಎಂದು ಅನ್ಯಚ್ಚ = ಮತ್ತೊಂದು ವಾಕ್ಯವು ಉಕ್ತಂ = ನುಡಿಯಲುಪಟ್ಟಿತ್ತು. ||೨೨||

ತಾರಕ ಉವಾಚ = ತಾರಕಾಸುರನು[2] ನುಡಿದನು.[2]

---

[1] (ಖ) ಪಾಠ (ಕ) ಇಲ್ಲ [2] ನ ವಾಕ್ಯವು (ಖ)

ಯೋಽಯಂ ದೇವಾದಿದೇವೇಶಃ ಕಪರ್ದೀ ನೀಲಲೋಹಿತಃ
ತಸ್ಯ ರೇತಃ ಸುರಾಃ ಪೀತ್ವಾ ಸಗರ್ಭಾ ವಿಷ್ಣುನಾ ಸಹ ||೨೩||

ಭವಿಷ್ಯಂತಿ ತತೋ ಜಾತಾನ್ಮೃತ್ಯುರಿಷ್ಟಂ ನ ಚಾನ್ಯತಃ
ತಥಾಽಸ್ತ್ವಿತಿ ತತಶ್ಚೋಕ್ತ್ವಾ ಗತೋಽಹಂ ಮೇರುಮೂರ್ಧನಿ ||೨೪||

ಗಚ್ಛಧ್ವಂ ಶರಣಂ ತಸ್ಮಾಚ್ಛರಣ್ಯಂ ಸರ್ವದೇಹಿನಾಮ್
ವಿಶ್ವೇಶ್ವರಮುಮಾಕಾಂತಂ ಶಂಕರಂ ಲೋಕಶಂಕರಮ್ ||೨೫||

ಮುಕ್ತ್ವಾ ಹರಾತ್ಮಜಂ ದೇವಂ ತ್ರೈಲೋಕ್ಯೇ ಸಚರಾಚರೇ
ತಂ ನ ಪಶ್ಯಾಮಿ ಭೋ ದೇವಾಃ ತಾರಕಂ ಯೋ ವಧಿಷ್ಯತಿ ||೨೬||

---

ದೇವಾಧಿದೇವೇಶಃ = ದೇವಶ್ರೇಷ್ಠರುಗಳಿಗೊಡೆಯನಹಂಥಾ ಕಪರ್ದೀ = ಜಟಾಜೂಟವನುಳ್ಳಂಥಾ ಯಃ = ಆವನಾನೊಬ್ಬ ಅಯಂ = ಈ ನೀಲಲೋಹಿತಃ = ಪರಮೇಶ್ವರನಿದ್ದಾನು ತಸ್ಯ = ಆ ಶಿವನ ರೇತಃ = ಇಂದ್ರಿಯವನು ಸುರಾಃ = ಸಮಸ್ತ ದೇವರ್ಕಳು ವಿಷ್ಣುನಾ ಸಹ = ವಿಷ್ಣುವಿನೊಡನೆ ಪೀತ್ವಾ = ಪಾನವಮಾಡಿ ಸಗರ್ಭಾಃ = ಗರ್ಭದೊಡನೆ ಕೂಡಿದಂಥಾವರುಗಳು ಭವಿಷ್ಯಂತಿ = ಆದಾರು. ತತಃ = ಆ ಇಂದ್ರಿಯದ ದೆಸೆಯಿಂದ ಜಾತಾತ್ = ಹುಟ್ಟಿದಾತನ ದೆಸೆಯಿಂದ ಮೃತ್ಯುಃ = ಮರಣವು ಇಷ್ಟಂ = ಬಯಕೆ. ಅನ್ಯತಃ = ಮತ್ತೊಬ್ಬನ ದೆಸೆಯಿಂದ ನ = ಬಯಕೆಯಿಲ್ಲ. ತಥಾಽಸ್ತು = ಹಾಂಗಾಗಲಿ ಇತಿ = ಹೀಂಗೆಂದು ಉಕ್ತ್ವಾ = ನುಡಿದು ತತಃ = ಅಷ್ಟರಮೇಲೆ ಅಹಂ ತು = ನಾನು ಮೇರುಮೂರ್ಧನಿ = ಮೇರುಪರ್ವತದ ಶಿಖರದಲ್ಲಿ ಗತಃ = ಎಯ್ದಿದಾತನು. ||೨೪||

ತಸ್ಮಾತ್ = ಅದು ಕಾರಣವಾಗಿ ಸರ್ವದೇವಾನಾಂ = ಸಮಸ್ತ ಪ್ರಾಣಿಗಳ ಶರಣ್ಯಂ = ಮರೆಹೋಗಿಸಿಕೊಳಲು ಯೋಗ್ಯನಹಂಥಾ ವಿಶ್ವೇಶ್ವರಂ = ವಿಶ್ವಕ್ಕೊಡೆಯನಹಂಥಾ ಉಮಾಕಾಂತಂ = ಪಾರ್ವತಿಯ ವಲ್ಲಭನಹಂಥಾ ಲೋಕಶಂಕರಂ = ಲೋಕಕ್ಕೆ ಸುಖವನು ಮಾಡುವಂಥಾ ಶಂಕರಂ = ಪರಮೇಶ್ವರನನು ಕುರಿತು ಶರಣಂ = ಮರೆಹೋಗುಹವನು ಗಚ್ಛಧ್ವಂ = ಎಯ್ದಿ. ||೨೫||

ಭೋ ದೇವಾಃ = ಎಲೆ ದೇವರ್ಕಳಿರಾ! ದೇವಂ = ಪ್ರಕಾಶಸ್ವರೂಪನಹಂಥಾ ಹರಾತ್ಮಜಂ = ಶಿವನ ಕುಮಾರನನು ಮುಕ್ತ್ವಾ = ಬಿಟ್ಟು ಸಚರಾಚರೇ = ಚರಾಚರದೊಡನೆ ಕೂಡಿದಂಥಾ ತ್ರೈಲೋಕ್ಯೇ = ಮೂರು ಲೋಕದಲ್ಲಿ ಯಃ = ಆವನಾನೊಬ್ಬನು ತಾರಕಂ = ತಾರಕಾಸುರನನು ವಧಿಷ್ಯತಿ = ಕೊಂದಾನು ತಂ = ಆ ವಧಿಸುವಾತನನು ನ ಪಶ್ಯಾಮಿ = ಕಾಣೆನು. ||೨೬||

ಬ್ರಹ್ಮಣೋ ವಚನಂ ಶ್ರುತ್ವಾ ಸಹಸ್ರಾಕ್ಷಶ್ಶಚೀಪತಿಃ
ಕಥಂ ಭವಿಷ್ಯತೀತ್ಯೇವಮಾಲೋಚ್ಯ ಮನಸಾ ದ್ವಿಜಾಃ ||೨೭||

ಗುರುಣಾ ದೈವತೈಸ್ಸಾರ್ಧಂ ಪುನರೇವ ಸ ದೇವರಾಟ್
ಹರಸ್ಯೈವ ಸುತೋತ್ಪತ್ತೌ ಉಪಾಯಶ್ಚಿಂತ್ಯತಾಂ ಸುರಾಃ ||೨೮||

ಇತ್ಯುಕ್ತ್ವಾ ಪ್ರಯಯುರ್ದೇವಾಃ ಶಕ್ರಾದ್ಯಾ ಬ್ರಹ್ಮಣಾ ಸಹ
ಮೇರೋರುತ್ತರತಃ ಶೃಂಗಂ ಯತ್ರ ತಿಷ್ಠತಿ ಮಾಧವಃ ||೨೯||

ಗುಪ್ತೋ ಭೀತಸ್ಸ ವಿಶ್ವಾತ್ಮಾ ತಾರಕಸ್ಯ ಭಯಾದ್ದ್ವಿಜಾಃ
ಸಬ್ರಹ್ಮಕಾನ್ಸುರಾನ್ ದೃಷ್ಟ್ವಾ ಹೃಷ್ಟಃ ಪ್ರೋವಾಚ ಮಾಧವಃ ||೩೦||

---

ಭೋ ದ್ವಿಜಾಃ = ಎಲೈ ನೈಮಿಷಾರಣ್ಯವಾಸಿಗಳಾದಂಥಾ ಬ್ರಾಹ್ಮರುಗಳಿರಾ ಶಚೀಪತಿಃ = ಶಚೀವಲ್ಲಭನಹಂಥಾ ಸಹಸ್ರಾಕ್ಷಃ = ಇಂದ್ರನು ಬ್ರಹ್ಮಣಃ = ಬ್ರಹ್ಮನ ವಚನಂ = ವಾಕ್ಯವನು ಶ್ರುತ್ವಾ = ಕೇಳಿ ಕಥಂ = ಹೇಂಗೆ ಭವಿಷ್ಯತಿ ಇತಿ = ಆದೀತೋ (ಆದುದೋ) ಎಂದು ಹೀಂಗೆ ಏವಂ = ಈ ಪ್ರಕಾರದಲ್ಲಿ ಮನಸಾ = ಮನಸ್ಸಿನಿಂದ ಆಲೋಚ್ಯ = ಆಲೋಚನೆಯು ಮಾಡಿ; ||೨೭||

ಸಃ ದೇವರಾಟ್ = ಆ ಇಂದ್ರನು ಗುರುಣಾ = ಬೃಹಸ್ಪತಿಯೊಡನೆ ದೈವತೈ-ಸ್ಸಾರ್ಧಂ = ದೇವರ್ಕಳೊಡನೆ ಪುನರೇವ = ಮರಳಿ ಆಲೋಚನೆಯು ಮಾಡಿ ಭೋ ಸುರಾಃ = ಎಲೇ ದೇವತೆಗಳಿರಾ ಹರಸ್ಯ = ಶಿವನ ಸುತೋತ್ಪತ್ತಾವೇವ = ಪುತ್ರನ ಉತ್ಪತ್ತಿಯಲ್ಲಿಯೇ ಉಪಾಯಃ = ಉಪಾಯವು ಚಿಂತ್ಯತಾಂ = ಚಿಂತಿಸಲುಪಡಲಿ.

ಇತಿ = ಹೀಂಗೆಂದು ಉಕ್ತ್ವಾ = ನುಡಿದು ಶಕ್ರಾದ್ಯಾಃ = ಇಂದ್ರ ಮೊದಲಾದಂಥಾ ದೇವಾಃ = ದೇವರ್ಕಳು ಬ್ರಹ್ಮಣಾ ಸಹ = ಬ್ರಹ್ಮನಿಂದ ಸಹಿತವಾದವರಾಗಿ ಯತ್ರ = ಯಾವುದಾನೊಂದು ಸ್ಥಾನದಲ್ಲಿ ಮಾಧವಃ = ಮಹಾವಿಷ್ಣು ತಿಷ್ಠತಿ = ಇರುತ್ತಿದ್ದಾನು. ತತ್ರ = ಆ ಠಾವಿನಲ್ಲಿಯೇ ಮೇರೋಃ = ಮೇರು ಪರ್ವತದ ಉತ್ತರತಃ = ಉತ್ತರದಿಕ್ಕಿನಲ್ಲಿಯ ಶೃಂಗಂ = ಶಿಖರವನು ಪ್ರಯಯುಃ = ಎಯ್ದಿದರು. ||೨೯||

ಭೋ ದ್ವಿಜಾಃ = ಎಲೈ [1]ಬ್ರಾಹ್ಮಣ[1]ರುಗಳಿರಾ ತಾರಕಸ್ಯ ಭಯಾತ್ = [2]ತಾರಕಾಸುರನ ಭೀತಿಯ ದೆಸೆಯಿಂ[2]ದ ಭೀತಃ = ಅಂಜುತ್ತಿದ್ದಂಥಾ ಗುಪ್ತಃ =

---

[1] ದ್ವಿಜ (ಕ) [2] ಲುಪ್ತ (ಕ)

ಉಪಾಯಶ್ಚಿಂತಿತಃ ಕೋವಾ ವಧಾರ್ಥಂ ತಾರಕಸ್ಯ ಹಿ
ಅಸ್ತಿ ಚೇದುಚ್ಯತಾಂ ದೇವಾಃ ಶರ್ಮ ನೋ ಜಾಯತೇ ಯಥಾ ||೩೧||

ಸೂತ ಉವಾಚ

ಏವಂ ವಿಷ್ಣೋರ್ವಚಶ್ಶ್ರುತ್ವಾ ಬ್ರಹ್ಮಾದ್ಯಾಸ್ಸುರಸತ್ತಮಾಃ
ಯಥೋಕ್ತಂ ಬ್ರಹ್ಮಣಾ ತಸ್ಮೈ ತಥೋಕ್ತಂ ವಿಷ್ಣವೇ ಸುರೈಃ ||೩೨||

ಕಿಮಿದಾನೀಂ ಚ ಕರ್ತವ್ಯಮಿತಿ ಸಂಚಿಂತ್ಯ ದೇವರಾಟ್
ಸಸ್ಮಾರ ಮನಸಾ ಕಾಮಮಜೇಯಂ ಸಸುರಾಸುರೈಃ ||೩೩||

---

ಅಡಗಿದ್ದಂಥಾ ವಿಶ್ವಾತ್ಮಾ=ವಿಶ್ವರೂಪನಹಂಥಾ ಮಾಧವಃ = ಲಕ್ಷ್ಮೀವಲ್ಲಭನ ಹಂಥಾ ಸಃ=ಆ ವಿಷ್ಣು ಸಬ್ರಹ್ಮಕಾನ್=ಬ್ರಹ್ಮನಿಂದ ಸಹಿತರಹಂಥಾ ಸುರಾನ್ = ದೇವತೆಗಳನು ದೃಷ್ಟ್ವಾ = ಕಂಡು ಹೃಷ್ಟಃ = ಸಂತೋಷಿಸಿದಾತನಾಗಿ ಪ್ರೋವಾಚ=ನುಡಿದನು. ||೩೦||

[1]ಭೋ ದೇವಾಃ=ಎಲೆ ದೇವರ್ಕಳಿರಾ![1] ಹಿ=ಆವುದಾನೊಂದು ಕಾರಣವಾಗಿ ತಾರಕಸ್ಯ=ತಾರಕಾಸುರನ ವಧಾರ್ಥಂ=ವಧೆಗೋಸ್ಕರ ಕಃ ಉಪಾಯಃ=ಆವ ಉಪಾಯವು ಚಿಂತಿತಃ = ನೆನೆಯಲುಪಟ್ಟಿತ್ತು. ಅಸ್ತಿ ಚೇದ್ವಾ = ಉಂಟಾದ ಪಕ್ಷೇ ನಃ=ನಮಗೆ ಶರ್ಮ=ಸುಖವು ಯಥಾ = [2]ಎಹೆಂಗೆ[2] ಜಾಯತೇ = ಹುಟ್ಟುತ್ತಿಹುದು ತಥಾ=ಹಾಂಗೆ ಉಚ್ಯತಾಂ=ನುಡಿಯಲುಪಡಲಿ. ||೩೧||

ಸೂತ ಉವಾಚ—[3]ಸೂತಮುನಿಯ ವಾಕ್ಯವು.[3]

ಬ್ರಹ್ಮಾದ್ಯಾಃ=ಬ್ರಹ್ಮ ಮೊದಲಾದಂಥಾ ಸುರಸತ್ತಮಾಃ=ದೇವಶ್ರೇಷ್ಠರುಗಳು ಏವಂ=ಈ ಪ್ರಕಾರದಲ್ಲಿ ವಿಷ್ಣೋಃ=ಮಹಾವಿಷ್ಣುವಿನ ವಚಃ=ವಾಕ್ಯವನು ಶ್ರುತ್ವಾ=ಕೇಳಿ ಬ್ರಹ್ಮಣಾ=ಬ್ರಹ್ಮನಿಂದ ಯಥಾ= ಹೇಂಗೆ ಉಕ್ತಂ =ನುಡಿಯಲುಪಟ್ಟಿತ್ತು ತಥಾ= ಹಾಂಗೆ ಸುರೈಃ — ದೇವರ್ಕಳಿಂದ ತಸ್ಮೈ ವಿಷ್ಣವೇ—ಆ ವಿಷ್ಣುವಿಂಗೆ ಉಕ್ತಂ—ಹೇಳಲುಪಟ್ಟಿತ್ತು. ||೩೨||

ಇದಾನೀಂ—ಈಗಳು ಕರ್ತವ್ಯಂ—ಮಾಡಬೇಕಾದಂಥಾದ್ದು ಕಿಂ ಚ—ಏನು? ಇತಿ—ಹೀಂಗೆಂದು ಸಂಚಿಂತ್ಯ — ನೆನೆದು ದೇವರಾಟ್ — ದೇವರಾಯನಹಂಥಾ

---

[1] ಲುಪ್ತ (ಕ) [2] ಹೆಂಗೆ (ಖ) [3] (ಖ) ಪಾಠ

ಶಕ್ರಸ್ಯ ಚಿಂತಿತಂ ಜ್ಞಾತ್ವಾ ಕಾಮೋ ರತಿಪತಿಃ ಸ್ವಯಮ್
ಶಚೀಪತಿಂ ಸಮಾಗತ್ಯ ಪ್ರಾಹ ಪುಷ್ಪಧನುರ್ಧರಃ ||೩೪||

ಕಾಮ ಉವಾಚ

ಕಿಂ ಕಾರ್ಯಂ ತ್ರಿದಶಶ್ರೇಷ್ಠ ಕರ್ತವ್ಯಂ ಕಿಂ ಮಯಾ ವಿಭೋ
ತೀವ್ರೇಣ ತಪಸಾ ಕೋ ಹಿ ಸ್ಥಾನಮೀಹತಿ ತಾವಕಮ್ ||೩೫||

ಕಿಂ ವಾ ಕಾಚಿತ್ತವಾದೇಶಂ ಕರ್ತುಂ ನೇಚ್ಛತಿ ಚಾಂಗನಾ
ತಾಂ ಕಾಮಿನೀಂ ಕರೋಮ್ಯದ್ಯ ತವ ಧ್ಯಾನಪರಾಯಣಾಮ್ ||೩೬||

---

ಇಂದ್ರನು ಸಸುರಾಸುರೈಃ — ದೇವಾಸುರರುಗಳಿಂದ ಸಹಿತವಾಗಿ ಅಜೇಯಂ — ಗೆಲಲುಬಾರದೇ ಇದ್ದಂಥಾ ಕಾಮಂ—[2]ಮನ್ಮಥನನು[2] ಮನಸಾ— ಮನಸ್ಸಿನಿಂದ ಸಸ್ಮಾರ—ನೆನೆದನು. [3]ಸ್ಮೃ+ಆಧ್ಯಾನೇ[3] ಇತಿ ಧಾತುಃ. ||೩೩||

ಶಕ್ರಸ್ಯ ಇಂದ್ರನ ಚಿಂತಿತಂ—ನೆನಹನು ಜ್ಞಾತ್ವಾ —ಅರಿದು ರತಿಪತಿಃ— ರತಿದೇವಿಯ—ಪುರುಷನಹಂಥಾ ಕಾಮಃ—ಪುಷ್ಪಾಯುಧನು ಸ್ವಯಂ — ತಾನೇ ಶಚೀಪತಿಂ — ಶಚೀವಲ್ಲಭನಹಂಥಾ ಇಂದ್ರನನು ಸಮಾಗತ್ಯ — ಎದ್ದು ಪುಷ್ಪ-ಧನುರ್ಧರಃ—ಪುಷ್ಪಚಾಪವ ಧರಿಸಿದಂಥಾ ಮನ್ಮಥನು ಪ್ರಾಹ—ನುಡಿದನು. ೩೪
ಕಾಮ ಉವಾಚ.—[4]ಕಾಮನ ವಾಕ್ಯವು [4]

ತ್ರಿದಶಶ್ರೇಷ್ಠ—ದೇವಶ್ರೇಷ್ಠನಹಂಥಾ ಭೋ ವಿಭೋ — ಎಲೇ ಒಡೆಯನೇ ಕಿಂ ಕಾರ್ಯಂ—ಏನು ಕಾರ್ಯವು ? ಮಯಾ—ಎನ್ನಿಂದ ಕರ್ತವ್ಯಂ—ಮಾಡ ಬೇಕಾದಂಥಾದು ಕಿಂ—ಏನು? ಕಃ = ಆವಾತನು ಹಿ — ಆವುದಾನೊಂದು ಕಾರಣವಾಗಿ ತೀವ್ರೇಣ ತಪಸಾ—ಉಗ್ರತಪಸ್ಸಿನಿಂದ ತಾವಕಂ — ನಿನ್ನ ಸಂಬಂಧ ವಹಂಥಾ ಸ್ಥಾನಂ—ಸ್ಥಾನವನು ಈ ಹತಿ—ಇಚ್ಛೈಸುತ್ತಿದ್ದಾನು.

ಕಿಂವಾ—ಅಲ್ಲಾ ಕಾಚಿದಂಗನಾ ಚ—ಒಬ್ಬಾಳೊಬ್ಬ ಸ್ತ್ರೀಯೂ ತವ— ನಿನ್ನ ಆದೇಶಂ—ಆಜ್ಞೆಯನು ಕರ್ತುಂ—ಮಾಡಲು ನೇಚ್ಛತಿ — ಇಚ್ಛಯಿಸ್ಸ್ರ ತ್ತಿರಳು, ತಾಂ ಕಾಮಿನೀಂ—ಆ ಸ್ತ್ರೀಯನು ಅದ್ಯ—ಈಗ ತವ—ನಿನ್ನ ಧ್ಯಾನ ಪರಾಯಣಾಂ — ನೆನಹಿನಲ್ಲಿ ತಾತ್ಪರ್ಯವನುಳ್ಳಾಯಕನಾಗಿ [ನುಳ್ಳಾತಳನ್ನಾಗಿ] ಕರೋಮಿ—ಮಾಡುವೆನು. ||೩೬||

---

[2] ಪಂಚಶರನನು (ಖ) [3] ಸ್ಮೃಜ್+ಧ್ಯಾನೇ (ಖ) (ಕ) ಲುಪ್ತ
[4] (ಕ.ಖ) ಪಾಠ. [5] ಇಚ್ಛಯಿಸು (ಕ) •

ನ ಕಶ್ಚಿದಸ್ತಿ ಮೇ ಶೂರೋ ನ ಮಾನೀ ನ ಚ ಪಂಡಿತಃ
ಚ್ಯಾವಯಾಮಿ ಜಗತ್ಕೃತ್ಸ್ನಂ ಬ್ರಹ್ಮಾದ್ಯಂ ಭವಗೋಚರಮ್ ||೩೭||

ಅಥ ಕಿಂ ಬಹುನೋಕ್ತೇನ ದುರ್ವಾಸಾಶ್ಚ ಮಹಾಮುನಿಃ
ಯೋಽಸೌ ಪಿನಾಕೀ ವಿಶ್ವೇಶಸ್ತಮಪಿ ಚ್ಯಾವಯಾಮ್ಯಹಮ್ ||೩೮||

ಇಂದ್ರ ಉವಾಚ

ಜಾನಾಮ್ಯಹಂ [1]ರತೀನಾಥ[1] ಸಾಮರ್ಥ್ಯಂ ಪುಷ್ಪಧನ್ವನಃ
ನೂನಂ ಹಿ ಸರ್ವಕಾರ್ಯಾಣಿ ತ್ವತ್ತಃ ಸಿದ್ಧ್ಯಂತಿ [2]ನಾನ್ಯತಃ[2] ||೩೯||

ಮೇ—ಎನಗೆ ಕಶ್ಚಿತ್—ಒಬ್ಬಾನೊಬ್ಬ ಶೂರಃ—ವೀರನು ನಾಸ್ತಿ—ಇಲ್ಲ. ಮೇ—ಎನಗೆ ಮಾನೀ— ಗರ್ವಿಯಹಂಥಾತನು ನ—ಇಲ್ಲ. ಮೇ —ಎನಗೆ ಪಂಡಿತೋಽಪಿ—ಬಲ್ಲವನು ನ—ಇಲ್ಲ. ಬ್ರಹ್ಮಾದ್ಯಂ—ಬ್ರಹ್ಮ ಮೊದಲಾದಂಥಾ ಭವಗೋಚರಂ—ಪರಮೇಶ್ವರನೊಡನೆ ಕಾಣಬಹಂಥಾ ಕೃತ್ಸ್ನಂ ಜಗತ್—ಸಮಸ್ತ ಲೋಕವನು ಚ್ಯಾವಯಾಮಿ — ಭಂಗಿಸುವೆನು. [3]ಚ್ಯುತಿರ್ — ರಕ್ಷಣೇ ? ಎಂಬ ಧಾತು. ಚ್ಯು ಸಹನೇ ಹಸನೇ ಚ ಇತ್ಯೇಕೇ।[3] ||೩೭||

ಅಥ—ಅನಂತರದಲ್ಲಿ ಬಹುನಾ ಉಕ್ತೇನ—ಹಲವ ನುಡಿದುದರಿಂದ ಕಿಂ—ಏನು ಪ್ರಯೋಜನವು ? ಮಹಾಮುನಿಃ—ಮಹಾಋಷಿಯಹಂಥಾ ದುರ್ವಾಸಾಶ್ಚ —ದುರ್ವಾಸನಿದ್ದಾನು, ವಿಶ್ವೇಶಃ—ವಿಶ್ವೇಶ್ವರನಹಂಥಾ ಯಃ—ಆವನಾನೊಬ್ಬ ಅಸೌ—ಈ ಪಿನಾಕೀ — ಪರಮೇಶ್ವರನಿದ್ದಾನು, ತಮಪಿ — ಆತ [ನ]ನಾಯಿತ್ತಾದರೂ ಅಹಂ—ನಾನು ಚ್ಯಾವಯಾಮಿ—ಭಂಗಿಸುವೆನು. ||೩೮||

ಇಂದ್ರ ಉವಾಚ—ಇಂದ್ರನ ವಾಕ್ಯವು.

ಭೋ ರತೀನಾಥ — ಎಲೆ ರತಿದೇವಿಯ ವಲ್ಲಭನೆ ಪುಷ್ಪಧನ್ವನಃ —[4][ಪುಷ್ಪ ಚಾಪವನುಳ್ಳ ನಿನ್ನ][4] ಸಾಮರ್ಥ್ಯವನು ಅಹಂ—ನಾನು ಜಾನಾಮಿ—ಬಲ್ಲೆನು. ಸರ್ವಕಾರ್ಯಾಣಿ—ಸಮಸ್ತಕಾರ್ಯಂಗಳು ತ್ವತ್ತಃ—ನಿನ್ನಿಂದ ನೂನಂ—ಅತ್ಯಂತ ಸಿದ್ಧ್ಯಂತಿ ಹಿ—ಸಿದ್ಧಿಸುತ್ತಿಹವಲಾ. ಅನ್ಯತಃ—ಮತ್ತೊಬ್ಬನ ದೆಸೆಯಿಂದ ನ—ಸಿದ್ಧಿಸುತ್ತಿರವು. ||೩೯||

1 ಪುರಾಣಪಾಠಾತ್ ಸಾಧುತ್ವಂ 2 ನಾನ್ಯಥಾ (ಘ)
3 ಚ್ಯುತಿ+ಕ್ಷಣೇ ಎಂಬ ಧಾತು (ಕ) ಚ್ಯುತಿ+ರಕ್ಷಣೇ ಎಂಬ ಧಾತು (ಖ)
ಅರ್ಥದೃಷ್ಟ್ಯಾ ಚ್ಯುಙ್+ಗತೌ ಇತಿ ಧಾತೋಃ ಣಿಜಂತಸ್ಯ ರೂಪಮಿದಮಿದಮಿತಿ ವಕ್ತುಂ ಯುಕ್ತಮ್ 4 ಪುಷ್ಪಚಾಪದ (ಕ. ಖ. ವ್ಯಾ.)

ಯತ್ರಾಸ್ತೇ ಭಗವಾಂಚ್ಛಂಭುಃ ಧ್ಯಾನದೃಷ್ಟ್ಯಾ ಸಮಾಹಿತಃ
ಗಚ್ಛ ಪಾರ್ಶ್ವಂ ಮಹೇಶಸ್ಯ ಸುರಾಣಾಂ ಹಿತಕಾಮ್ಯಯಾ ||೪೦||

ಚಿತ್ತಂ ಹರಸ್ಯ ಸಂಕ್ಷೋಭ್ಯ ಪಾರ್ವತ್ಯಾ ಸಂಗಮಂ ಕುರು
ಏತದೇವ ಹಿ ಮತ್ಕಾರ್ಯಮೇಷ ಏವ ಮನೋರಥಃ ||೪೧||

ಏತಸ್ಮಾತ್ಕಾರಣಾತ್ತ್ವಂ ಹಿ ಸ್ಮೃತಃ ಪುಷ್ಪಧನುರ್ಧರ
ಏವಂ ಶಕ್ರವಚಃ ಶ್ರುತ್ವಾ ಬಲವಾನ್ ಮಕರಧ್ವಜಃ ||೪೨||

ಮಧೋಸ್ಸಖಾ *ರತೀಯುಕ್ತಃ* ಪಂಚಬಾಣೋ ಮನೋಭವಃ
ಯತ್ರಾಸ್ತೇ ಭಗವಾಂಚ್ಛಂಭುಃ ಧ್ಯಾನದೃಷ್ಟ್ಯಾ ಸಮಾಹಿತಃ ||೪೩||

ಧ್ಯಾನದೃಷ್ಟ್ಯಾ — ಧ್ಯಾನದೃಷ್ಟಿಯಿಂದ ಸಮಾಹಿತಃ — ಇರುತ್ತಿದ್ದಂಥಾ ಭಗವಾನ್ — ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಶಂಭುಃ — ಪರಮೇಶ್ವರನು ಯತ್ರ—ಆವುದಾನೊಂದು ಸ್ಥಾನದಲ್ಲಿ ಆಸ್ತೇ—ಇರುತ್ತಿದ್ದಾನು ತತ್ರ—ಅಲ್ಲಿ ಸುರಾಣಾಂ—ದೇವರ್ಕಳಿಗೆ ಹಿತಕಾಮ್ಯಯಾ—ಹಿತವ ಬಯಸುವುದರಿಂದ ಮಹೇಶಸ್ಯ —ಪರಮೇಶ್ವರನ ಪಾರ್ಶ್ವಂ—ಸಮೀಪವನು ಗಚ್ಛ—ಎಯ್ದು. ||೪೦||

ಹರಸ್ಯ—ಶಿವನ ಚಿತ್ತಂ—ಚಿತ್ತವನು ಸಂಕ್ಷೋಭ್ಯ— ಸಂಚಲವ ಮಾಡಿ ಪಾರ್ವತ್ಯಾ—ಪಾರ್ವತಿಯೊಡನೆ ಸಂಗಮಂ— ಕೂಟವನು ಕುರು — ಮಾಡು. ಏತದೇವ—ಇದೇ ಮತ್ಕಾರ್ಯಂ ಹಿ—ಎನ್ನ ಕಾರ್ಯವಲಾ. ಏಷ ಏವ—ಇದೇ ಮನೋರಥಃ—ಮನಸ್ಸಿನ ಬಯಕೆ. ||೪೧||

ಭೋ ಪುಷ್ಪಧನುರ್ಧರ !—ಎಲೆ ಪುಷ್ಪಚಾಪವ ಧರಿಸಿದಾತನೇ ! ತ್ವಂ — ನೀನು ಏತಸ್ಮಾತ್ ಕಾರಣಾತ್—ಇದು ಕಾರಣದ ದೆಸೆಯಿಂದ ಸ್ಮೃತೋ ಹಿ— ನೆನೆಯಲುಪಟ್ಟಾತನಲಾ. ಏವಂ — ಈ ಪ್ರಕಾರದಲ್ಲಿ ಶಕ್ರವಚಃ — ಇಂದ್ರನ ವಾಕ್ಯವನು ಬಲವಾನ್ — ಸತ್ತ್ವವನುಳ್ಳಂಥಾ ಮಕರಧ್ವಜಃ — ಕಾಮನು ಶ್ರುತ್ವಾ= ಕೇಳಿ. ||೪೨||

ಮಧೋಃ—ವಸಂತನ ಸಖಾ — ಸಂಗಡಿಗನಹಂಥಾ ಪಂಚಬಾಣಃ — ಅಯ್ದು ಬಾಣಂಗಳನುಳ್ಳಂಥಾ ಮನೋಭವಃ — ಮನಸ್ಸಿನಲ್ಲಿ ಹುಟ್ಟಿದಂಥಾ ಮಕರಧ್ವಜಃ— ಕಾಮನು ರತೀಯುಕ್ತಃ — ರತಿದೇವಿಯಿಂದ ಕೂಡಿದಾತನಾಗಿ,

* ಪುರಾಣಪಾಠವಾದ್ದರಿಂದ ಸಾಧು

ನಿಷ್ಕಂಪಶ್ಚಾತ್ಮನಾಽಽತ್ಮಾನಂ ಚಿಂತ್ಯಮಾನೋ ಮಹೇಶ್ವರಃ
ಪ್ರಾಪ್ಯ ಶಂಭೋಃರಾಯತನಮಪಶ್ಯನ್ಮಕರಧ್ವಜಃ ||೪೪||

ಶೈಲಾದಿಂ ದ್ವಾರದೇಶೇ ತು ಮೇರುಶೃಂಗಮಿವೋನ್ನತಮ್
ಸರ್ವಾಭರಣಸಂಯುಕ್ತಂ ಸಹಸ್ರಾದಿತ್ಯವರ್ಚಸಮ್ ||೪೫||

ಶೂಲಹಸ್ತಂ ತ್ರಿಣೇತ್ರಂ ಚ ಚಂದ್ರಾವಯವ ಭೂಷಣಮ್[1]
ವಜ್ರಪಾಣಿಂ ಚತುರ್ಬಾಹುಂ ದ್ವಿತೀಯಮಿವ ಶಂಕರಮ್ ||೪೬||

ತಂ ದೃಷ್ಟ್ವಾ ಮದನೋ ವಿಪ್ರಾಃ ಚಿಂತಾಕ್ರಾಂತಸ್ತದಾಽಭವತ್
ಕಥಂ ಪ್ರವಿಶ್ಯ ದ್ರಕ್ಷ್ಯಾಮಿ ಶಂಭುಂ ತ್ರಿದಶವಂದಿತಮ್ ||೪೭||

ಧ್ಯಾನದೃಷ್ಟ್ಯಾ—ಧ್ಯಾನದೃಷ್ಟಿಯಿಂದ ಸಮಾಹಿತಃ—ಇರಲುಪಟ್ಟಂಥಾ ಭಗವಾನ್—ಸಾಮರ್ಥ್ಯವನುಳ್ಳಂಥಾ ಶಂಭುಃ—ಸುಖವನು ಹುಟ್ಟಿಸುವಂಥಾ ಮಹೇಶ್ವರಃ—ಪರಮೇಶ್ವರನು ನಿಷ್ಕಂಪಃ — ಚಲನೆಯಿಲ್ಲದಾತನಾಗಿ ಆತ್ಮನಾ — ತನ್ನಿಂದ ಆತ್ಮಾನಂ—ತನ್ನನು ಚಿಂತ್ಯಮಾನಃ—ಧ್ಯಾನಿಸುತ್ತಿದ್ದಾತನಾಗುತವು ಯತ್ರ — ಆವ ಠಾವಿನಲ್ಲಿ ಆಸ್ತೇ—ಇರುತ್ತಿದ್ದಾನು, ತತ್ರ — ಅಲ್ಲಿ ಪ್ರಾಪ್ಯ — ಎಯ್ದಿ ಶಂಭೋಃ—ಪರಮೇಶ್ವರನ ಆಯತನಂ ಚ—ಸ್ಥಾನವನು ಅಪಶ್ಯತ್—ಕಂಡನು.

ದ್ವಾರದೇಶೇ ತು—ಬಾಗಿಲ ಸ್ಥಾನದಲ್ಲಿ ಮೇರುಶೃಂಗಮಿವ—ಮೇರುಪರ್ವತದ ಶಿಖರವಕ್ಕೆಯೆಂಬ ಹಾಂಗೆ ಇದ್ದಂಥಾ ಉನ್ನತಂ—ಉನ್ನತನಹಂಥಾ ಸರ್ವಾಭರಣ ಸಂಯುಕ್ತಂ—ಸಮಸ್ತ ಆಭರಣಂಗಳೊಡನೆ ಕೂಡಿದಂಥಾ ಸಹಸ್ರಾದಿತ್ಯವರ್ಚಸಂ—ಸಾವಿರ ಸೂರ್ಯರ ತೇಜಸ್ಸನುಳ್ಳಂಥಾ ಶೂಲಹಸ್ತಂ — ತ್ರಿಶೂಲಹಸ್ತನಹಂಥಾ ತ್ರಿಣೇತ್ರಂ—ಮೂರು ಕಣ್ಣುಗಳನುಳ್ಳಂಥಾ ಚಂದ್ರಾವಯವಭೂಷಣಂ—ಚಂದ್ರನ ಶರೀರವೇ ಅಲಂಕಾರವಾಗಿ ಉಳ್ಳಂಥಾ ವಜ್ರಪಾಣಿಂ — ವಜ್ರಹಸ್ತನಹಂಥಾ ಚತುರ್ಬಾಹುಂ — ನಾಲ್ಕು ಭುಜಂಗಳನುಳ್ಳಂಥಾ ದ್ವಿತೀಯಂ ಶಂಕರಮಿವ — ಎರಡನೆಯ ಶಿವನು ಅಕ್ಕೆಯೆಂಬ ಹಾಂಗೆ ಇದ್ದಂಥಾ ಶೈಲಾದಿಂ—ಶಿಲಾದ ಮುನಿಯ ಪುತ್ರನ ಹಂಥಾ, ||೪೬||

ತಂ—ಆ ನಂದಿಕೇಶ್ವರನನು ಮದನಃ— ಕಾಮನು ದೃಷ್ಟ್ವಾ—ಕಂಡು, ಭೋ ವಿಪ್ರಾಃ—ಎಲೆ ಬ್ರಾಹ್ಮಣರುಗಳಿರಾ ! ತದಾ—ಆಗ ಚಿಂತಾಕ್ರಾಂತಃ — ಚಿಂತೆಯಿಂದ ಮುಸುಕಲ್ಪಟ್ಟಂಥಾತನು[2] ಅಭವತ್—ಆದನು. ಕಥಂ—ಹೇಂಗೆ

[1] ಭೂಷಣಂ (ಖ.ಘ ಮೂಲ) ಭೂಷಿತಂ (ಖ.ಗ) [2] ಒಟ್ಟಾತನು (ಕ)

ಕಥಂ ಕಾರ್ಯಂ ಕರಿಷ್ಯಾಮಿ ಸುರಾಣಾಂ ಪ್ರೀತಿಕಾರಣಮ್
ಚಿಂತಯಿತ್ವಾ ತು ಬಹುಧಾ ವಂಚನಾರ್ಥಾಯ ನಂದಿನಃ ||೪೮||

ವಾಯುರೂಪಂ ತತಃ ಕೃತ್ವಾ ಸುಗಂಧಮೃದುಶೀತಳಮ್
ಪ್ರವಿಶ್ಯ ಚ ತದಾ ಕಾಮೋ ದಕ್ಷಿಣಾಂ ದಿಶಮಾಶ್ರಯತ್ ||೪೯||

ತೇನ ಯಾಮ್ಯಾಂ ದಿಶಂ ಯೋ ಹಿ ವಾಯುರ್ವಾತಿ ಸುಖಾವಹಃ
ಅದ್ಯಾಪಿ ಕಾರಣಾತ್ಸೋಽಪಿ ಸುಗಂಧೋ ಮೃದುಶೀತಲಃ ||೫೦||

ಅಪಶ್ಯತ್ತತ್ರ ಮದನಃ ಸೂರ್ಯಕೋಟಿಮಿವೋದಿತಮ್
ಸಹಸ್ರನಯನಂ ದೇವಂ ಸಹಸ್ರತನುಮೀಶ್ವರಮ್ ||೫೧||

---

ಪ್ರವಿಶ್ಯ—ಪ್ರವೇಶಿಸಿ ತ್ರಿದಶವಂದಿತಂ — ದೇವರ್ಕಳಿಂದ ವಂದಿಸಿಕೊಳಲುಪಟ್ಟಂಥಾ ಶಂಭುಂ—ಪರಮೇಶ್ವರನನು ದ್ರಕ್ಷ್ಯಾಮಿ—ಕಂಡೇನು ? ||೪೭||

ಸುರಾಣಾಂ—ದೇವರ್ಕಳಿಗೆ ಪ್ರೀತಿಕಾರಣಂ — ಸಂತೋಷವ ಮಾಡುವಂಥಾ ಕಾರ್ಯಂ—ಕಾರ್ಯವನು ಕಥಂ—ಹೇಂಗೆ ಕರಿಷ್ಯಾಮಿ—ಮಾಡೇನು ? ನಂದಿನಃ —ನಂದಿಕೇಶ್ವರನ ವಂಚನಾರ್ಥಾಯ— ಠಕ್ಕಿಸಲೋಸ್ಕರ ಬಹುಧಾ — ಹಲವು ಪ್ರಕಾರದಿಂದ ಚಿಂತಯಿತ್ವಾ ತು—ಚಿಂತಿಸಿ, ||೪೮||

ತತಃ—ಅಸ್ವರಮೇಲೆ ಕಾಮಃ—ಕಾಮನು ತದಾ—ಆಗ ಸುಗಂಧಮೃದು-ಶೀತಳಂ—ಸೌರಭ್ಯ ಮಾಂದ್ಯ ಶೈತ್ಯವನುಳ್ಳಂಥಾ ವಾಯುರೂಪಂ — ವಾಯುವಿನ ರೂಪವನು ಕೃತ್ವಾ—ಮಾಡಿಕೊಂಡು ಪ್ರವಿಶ್ಯ—ಪ್ರವೇಶಿಸಿ ದಕ್ಷಿಣಾಂ ದಿಶಂ ಚ —ತೆಂಕಣ ದಿಕ್ಕನು ಆಶ್ರಯತ್—ಆಶ್ರೈಸಿದನು. ||೪೯||

ಯಃ—ಆವನಾನೊಬ್ಬ ವಾಯು ತೇನ—ಅದು ಕಾರಣದಿಂದ ಸುಖಾವಹಃ ಸೊಗಸ ಧರಿಸಿದಾತನಾಗಿ ಯಾಮ್ಯಾಂ ದಿಶಂ — ತೆಂಕಣದಿಕ್ಕನು ವಾತಿ ಹಿ— ಎಯ್ದುತ್ತಿಹನಲಾ. ವಾ+ ಗತಿಗಂಧನಯೋಃ ಇತಿ ಧಾತುಃ. ಅದ್ಯಾಪಿ—ಈಗವೂ ಕಾರಣಾತ್—ಅದು ಕಾರಣದ ದೆಸೆಯಿಂದ ಸೋಽಪಿ — ಆ ವಾಯು ಸುಗಂಧಃ —ಸುವಾಸನೆಯನುಳ್ಳಾತನಾದನು. ಮೃದುಶೀತಲಃ — ಮಾಂದ್ಯಶೈತ್ಯವನುಳ್ಳಾತ ನಾದನು. ||೫೦||

ತತ್ರ—ಆ ಠಾವಿನಲ್ಲಿ ಮದನಃ—ಕಾಮನು ಉದಿತಂ — ಉದಯವಾಗುತ್ತಿದ್ದಂಥಾ ಸೂರ್ಯಕೋಟಿಮಿವ—ಸೂರ್ಯಕೋಟಿಯಕ್ಕೈಯೆಂಬ ಹಾಂಗಿದ್ದಂಥಾ ಸಹಸ್ರನಯನಂ—ಸಾವಿರಕಣ್ಣುಗಳನುಳ್ಳಂಥಾ ದೇವಂ— ಪ್ರಕಾಶಸ್ವರೂಪನಹಂಥಾ

ನೀಲಕಂಠಂ ಸುಧಾಭಾಸಂ ಶುಭ್ರಖಂಡೇಂದುಧಾರಿಣಮ್
ಜಗದುತ್ಪತ್ತಿಸಂಹಾರ ಸ್ಥಿತ್ಯನುಗ್ರಹಕಾರಣಮ್ ||೫೨||

ಶುದ್ಧಸ್ಫಟಿಕಸಂಕಾಶಂ ವಿಧೂಮಮಿವ ಪಾವಕಮ್
ಉಡುಮಾಲಾಂಚಿತಂ ದೇವಂ ಸೂರ್ಯಮಾಲಾವಿಭೂಷಿತಮ್ ||೫೩||

ಅನೌಪಮ್ಯಮಸಾದೃಶ್ಯಮಪ್ರಮೇಯಮನಾಕುಲಮ್
ಜಗಚ್ಚಕ್ಷುರ್ಜಗದ್ಬಾಹುಂ ಜಗಚ್ಛೀರ್ಷಂ ಜಗನ್ಮಯಮ್ ||೫೪||

ಜಗತ್ಪಾದಂ ಜಗಚ್ಛ್ರೋತ್ರಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಮ್
ರುದ್ರಂ ಪಶುಪತಿಂ ಘೋರಂ ಭೀಮಂ ಶರ್ವಂ ಭವಂ ದ್ವಿಜಾಃ ||೫೫||

---

ಸಹಸ್ರತನುಂ — ಸಹಸ್ರಮೂರ್ತಿಯನುಳ್ಳಂಥಾ ಈಶ್ವರಂ — ಪರಮೇಶ್ವರನನು ಅಪಶ್ಯತ್—ಕಂಡನು. ||೫೧||

ನೀಲಕಂಠಂ — ನೀಲಕಂಠನಹಂಥಾ ಸುಧಾಭಾಸಂ — ಅಮೃತದೋಪಾದಿ ಶುಭ್ರವಹ ಕಾಂತಿಯನುಳ್ಳಂಥಾ ಶುಭ್ರಖಂಡೇಂದುಧಾರಿಣಂ—ಒಪ್ಪುತ್ತಿಂವಿದ್ದ ಅರ್ಧ ಚಂದ್ರನ ಧರಿಸಿದಂಥಾ ಜಗದುತ್ಪತ್ತಿಸಂಹಾರಸ್ಥಿತ್ಯನುಗ್ರಹಕಾರಣಂ — ಲೋಕದ ಸೃಷ್ಟಿ ಸ್ಥಿತಿಸಂಹಾರ ಪಾಲನೆ ಅನುಗ್ರಹಂಗಳಿಗೆ ಕಾರಣನಹಂಥಾ, ||೫೨||

ಶುದ್ಧಸ್ಫಟಿಕಸಂಕಾಶಂ—ನಿರ್ಮಲವಹ ಸ್ಫಟಿಕದೋಪಾದಿ ಕಾಂತಿಯನುಳ್ಳಂಥಾ ವಿಧೂಮಂ—ಹೊಗೆಯಿಲ್ಲದೇ ಇದ್ದಂಥಾ ಪಾವಕಂ ಇವ—ಅಗ್ನಿ[1]ಯೋಪಾದಿಯಲ್ಲಿರ ತಕ್ಕಂಥಾ[1] ಉಡುಮಾಲಾಂಚಿತಂ—ನಕ್ಷತ್ರಮಾಲೆಗಳನು ಧರಿಸಿದಂಥಾ ಸೂರ್ಯ ಮಾಲಾವಿಭೂಷಿತಂ—ಸೂರ್ಯಮಾಲೆಯಿಂದ ಅಲಂಕರಿಸಲುಪಟ್ಟಂಥಾ ದೇವಂ — ದೇವನಹಂಥಾ, ||೫೩||

ಅನೌಪಮ್ಯಂ—ಉಪಮಾನರಹಿತನಹಂಥಾ ಅಸಾದೃಶ್ಯಂ—ಸಮಾನವಿಲ್ಲದೇ ಯಿದ್ದಂಥಾ ಅಪ್ರಮೇಯಂ — [2]ಊಹಿಸಲು ಬಾರದೇಯಿದ್ದಂಥಾ[2] ಅನಾಕುಲಂ —[3] ಚಂಚಲವಿಲ್ಲದೇಯಿದ್ದಂಥಾ[3] ಜಗಚ್ಚಕ್ಷುಃ — ಲೋಕಂಗಳೇ ದೃಷ್ಟಿಗಳಾಗಿ ಉಳ್ಳಂಥಾ ಜಗದ್ಬಾಹುಂ—ಲೋಕಂಗಳೇ ಭುಜಂಗಳಾಗಿ ಉಳ್ಳಂಥಾ ಜಗಚ್ಛೀರ್ಷಂ —ಲೋಕಂಗಳೇ ಶಿರಸ್ಸುಗಳಾಗಿ ಉಳ್ಳಂಥಾ ಜಗನ್ಮಯಂ — ಲೋಕವೇ ಮೂರ್ತಿ ಯಾಗಿ ಉಳ್ಳಂಥಾ, ||೫೪||

ಭೋ ದ್ವಿಜಾಃ—ಎಲೆ ಋಷಿಗಳಿರಾ ಜಗತ್ಪಾದಂ — ಲೋಕಂಗಳೇ ಪಾದಂ

---

1 ಯಕ್ಕೈಯೆಂಬ ಹಾಂಗೆಯಿದ್ದಂಥಾ (ಕ) 2,3 ಲುಪ್ತ (ಕ)

ಮಹಾದೇವಂ ಮಹೇಶಾನಮಷ್ಟಮೂರ್ತಿಂ ಜಗತ್ಪತಿಮ್
ವ್ಯಕ್ತಾವ್ಯಕ್ತಂ ತ್ರಿಲೋಕೇಶಂ ಪೂಜಿತಂ [3]ಸ[3]ಸುರಾಸುರೈಃ ||೫೬||

ಅಥ ದೃಷ್ಟ್ವಾ ಮಹಾದೇವಂ ಪ್ರಹೃಷ್ಟೋ ಮಕರಧ್ವಜಃ
ನಿಷ್ಕೃಷ್ಯ ಚಾಪಮಾಪೂರ್ಯ ಸ್ಥಿತಃ ಪಶ್ಯನ್ ಭವೋದ್ಭವಮ್||೫೭||

ಏವಂ ಸ್ಥಿತಸ್ಯ ಕಾಮಸ್ಯ ಸಹಸ್ರಾಣ್ಯಯುತಾನಿ ಷಟ್
ಗತಾನಿ ತಸ್ಯ ವರ್ಷಾಣಿ ಮುನೀಂದ್ರಾಶ್ಚಿತ್ತಜನ್ಮನಃ ||೫೮||

---

ಗಳಾಗಿ ಉಳ್ಳಂಥಾ ಜಗಚ್ಛ್ರೋತ್ರಂ—ಲೋಕಂಗಳೇ ಕಿವಿಯಾಗಿ ಉಳ್ಳಂಥಾ ಸ್ಥೂಲಂ—ಸ್ಥೂಲರೂಪನಹಂಥಾ ಸೂಕ್ಷ್ಮಂ—ಸೂಕ್ಷ್ಮರೂಪನಹಂಥಾ ಪರಾತ್ಪರಂ—ಪ್ರಕೃತಿಯ ದೆಸೆಯಿಂದವು ಮೇಲೆ ಇಹಂಥಾ ರುದ್ರಂ—ದುಃಖವನು ಕೆಡಿಸುವಂಥಾ ಪಶುಪತಿಂ ಚ—ಬ್ರಹ್ಮಾದಿಪಶುಗಳಿಗೆ ಒಡೆಯನಹಂಥಾ ಉಗ್ರಂ — ಉಗ್ರಮೂರ್ತಿಯಹಂಥಾ ಶರ್ವಂ—ಸಂಹಾರವ ಮಾಡುತ್ತಿದ್ದಂಥಾ ಭವಂ—ಸೃಷ್ಟಿಯನು ಮಾಡುತ್ತಿದ್ದಂಥಾ,

ಮಹಾದೇವಂ—ಅಧಿಕನಹ ದೇವನಹಂಥಾ ಮಹೇಶಾನಂ —ಮಹದೈಶ್ವರ್ಯವನುಳ್ಳಂಥಾ ಅಷ್ಟಮೂರ್ತಿಂ—ಅಷ್ಟಮೂರ್ತಿಯಹಂಥಾ ಜಗತ್ಪತಿಂ—ಲೋಕಂಗಳಿಗೆ ಒಡೆಯನಹಂಥಾ ವ್ಯಕ್ತಾವ್ಯಕ್ತಂ—ಕಾಣಬಹಂಥಾ ಕಾಣಬಾರದೇ ಇದ್ದಂಥಾ ತ್ರಿಲೋಕೇಶಂ—ಮೂರು ಲೋಕಕ್ಕೆ ಅಧಿಪತಿಯಹಂಥಾ ಸಸುರಾಸುರೈಃ—ದೇವಾಸುರರುಗಳಿಂದ ಸಹಿತವಾಗಿ ಪೂಜಿತಂ—ಅರ್ಚಿಸಿಕೊಳಲುಪಟ್ಟಂಥಾ, ||೫೬||

ಮಹಾದೇವಂ—ಪರಮೇಶ್ವರನನು ದೃಷ್ಟ್ವಾ —ಕಂಡು ಮಕರಧ್ವಜಃ—ಕಾಮನು ಪ್ರಹೃಷ್ಟಃ= ಸಂತೋಷಿಸಿದಾತನಾಗಿ ಅಥ = ಅನಂತರದಲ್ಲಿ ಚಾಪಂ =ಬಿಲ್ಲನು ಆಪೂರ್ಯ= ಏರಿಸಿ ನಿಷ್ಕೃಷ್ಯ =ಸೆಳೆದು ಭವೋದ್ಭವಂ = ಸಂಸಾರವ ಹುಟ್ಟಿಸಿದಂಥಾ ಶಿವನನು ಪಶ್ಯನ್ = ನೋಡುತವು ಸ್ಥಿತಃ = ಇದ್ದನು. ||೫೭||

ಭೋಃ ಮುನೀಂದ್ರಾಃ =ಎಲೆ ಮುನೀಶ್ವರರುಗಳಿರಾ ! ಏವಂ = ಈ ಪ್ರಕಾರದಲ್ಲಿ ಸ್ಥಿತಸ್ಯ = ಇರುತ್ತಿದ್ದಂಥಾ ಚಿತ್ತಜನ್ಮನಃ = ಚಿತ್ತದಲ್ಲಿ ಉತ್ಪತ್ತಿಯನುಳ್ಳಂಥಾ ತಸ್ಯ ಕಾಮಸ್ಯ = ಆ ಕಾಮಂಗೆ ಷಟ್ ಅಯುತಾನಿ ಸಹಸ್ರಾಣಿ ವರ್ಷಾಣಿ = ಅರುವತ್ತು ಸಾವಿರ ವರ್ಷಂಗಳು ಗತಾನಿ = ಹೋದವು. ಅರುವತ್ತು ಸಾವಿರವರ್ಷಪರ್ಯಂತರ ಕಾಮನು ವೇಳೆಯ ನೋಡುತ್ತಿದ್ದನೆಂಬುದರ್ಥ. ||೫೮||

---

[3] ಚ (ಘ)

ತತಸ್ಸ ಭಗವಾನ್ದೇವೋ ನೇತ್ರೇ ಉನ್ಮೀಲ್ಯ ಶಂಕರಃ
ಅಪಶ್ಯದ್ಗಿರಿಜಾಂ ದೇವೀಮಗ್ರೇ ವಿಶ್ವೇಶ್ವರಃ ಶಿವಃ ||೫೯||

§ ಗಿರೀಂದ್ರಪುತ್ರೀಂ ತಪಸಿ ಪ್ರಸಕ್ತಾಂ
ಲಜ್ಜಾನ್ವಿತಾಂ ಪೂಷರದಾಂತಕಾರೀ।
ದೃಷ್ಟ್ವಾ ಕಿಮತ್ರೇತಿ ವಿಕಲ್ಪಬುದ್ಧ್ಯಾ
ಕಾಮೋಽಯಮತ್ರೇತಿ ವಿಚಿಂತ್ಯ ಶರ್ವಃ ||೬೦||

ಜ್ಞಾತ್ವಾವಲೋಕ್ಯ ಪ್ರತಿಕೃಷ್ಟಚಾಪಂ
ನೇತ್ರಾಗ್ನಿನಾಽಸೌ ಮದನೋಽಪಿ ದಗ್ಧಃ ||೬೧||

ಸೂತ ಉವಾಚ

---

ತತಃ = ಅಪ್ಪರ ಮೇಲೆ ಭಗವಾನ್ = ಭಗವಾನ್ನುವಹಂಥಾ ದೇವಃ = ದೇವನಹಂಥಾ ಶಂಕರಃ = ಸುಖವನು ಮಾಡುವಂಥಾ ವಿಶ್ವೇಶ್ವರಃ = ವಿಶ್ವಕ್ಕೊಡೆಯನಹಂಥಾ ಸಃ ಶಿವಃ = ಆ ಶಿವನು ನೇತ್ರೇ = ಎರಡು ಕಣ್ಣುಗಳನು ಉನ್ಮೀಲ್ಯ = ತೆರದು ಅಗ್ರೇ = ಇದಿರಲ್ಲಿ ಗಿರಿಜಾಂ ದೇವೀಂ = ಪಾರ್ವತೀದೇವಿಯನು ಅಪಶ್ಯತ್ = ಕಂಡನು. ||೫೯||

ಪೂಷರದಾಂತಕಾರೀ = ಪೂಷನ ದಂತವನು ನಾಶವ ಮಾಡಿದಂಥಾ ಶರ್ವಃ = ಪರಮೇಶ್ವರನು ತಪಸಿ = ತಪಸ್ಸಿನಲ್ಲಿ ಪ್ರಸಕ್ತಾಂ = ತಾತ್ಪರ್ಯವನುಳ್ಳಂಥಾ ಲಜ್ಜಾನ್ವಿತಾಂ = ಲಜ್ಜೆಯೊಡನೆ ಕೂಡಿದಂಥಾ ಗಿರೀಂದ್ರಪುತ್ರೀಂ = ಪಾರ್ವತೀದೇವಿಯನು ದೃಷ್ಟ್ವಾ = ಕಂಡು ಅತ್ರ = ಇಲ್ಲಿ ಕಿಮಿತಿ = ಏನು ನಿಮಿತ್ತವಿದ್ದಾ[1]ಳೋ ಅತ್ರ = ಇಲ್ಲಿ ಅಯಂ ಕಾಮಃ = ಈ ಕಾಮನು ಕಿಮಿತಿ = ಏನು ಕಾರಣವಿದ್ದಾನೋ ಎಂದು ಹೀಂಗೆ ವಿಕಲ್ಪಬುದ್ಧ್ಯಾ = ವಿಕಲ್ಪಬುದ್ಧಿಯಿಂದೆ ವಿಚಿಂತ್ಯ = ಚಿಂತಿಸಿ, ಜ್ಞಾತ್ವಾ = ಅರಿದು, ಪ್ರತಿಕೃಷ್ಟಚಾಪಂ = ಸೆಳೆಯಲುಪಟ್ಟ ಬಿಲ್ಲನುಳ್ಳಂಥಾ ಕಾಮನನು ಅವಲೋಕ್ಯ = ನೋಡಲಾಗಿ ನೇತ್ರಾಗ್ನಿನಾ = ನೊಸಲಕಣ್ಣ ಅಗ್ನಿಯಿಂದ ಅಸೌ ಮದನೋಽಪಿ = ಈ ಕಾಮನೂ ದಗ್ಧಃ = ಬೇಯಲುಪಟ್ಟನು. ||೬೧||

ಸೂತ ಉವಾಚ = ಸೂತಮುನೀಯು ನುಡಿದನು.[2]

---

§ ಉಪೇಂದ್ರ ವಜ್ರವೃತ್ತ

[1] ದ್ದ (ಖ) [2] ಯ ವಾಕ್ಯವು (ಖ)

ದಗ್ಧೇ ರತಿಪತೌ ಶಂಭುರುವಾಚಾಚಲಕನ್ಯಕಾಮ್
ಕಿಮಹಂ ತವ ದೇವೇಶಿ ಕರೋಮಿ ಮನಸಿ ಸ್ಥಿತಮ್ ||೬೨||

ವರಂ ಬ್ರೂಹಿ ಮಹಾದೇವಿ ದಾಸ್ಯಾಮ್ಯದ್ಯ ಸುರೇಶ್ವರಿ
ಮಯಿ ಪ್ರಸನ್ನೇ ದೇವೇಶಿ ಕಿಂ ದುರ್ಲಭಮಿಹಾಸ್ತಿ ತೇ ||೬೩||

ಪಾರ್ವತ್ಯುವಾಚ—

[1] ಹತೇ ತು ಕಾಮೇ ವದ ನೀಲಕಂಠ
ವರೇಣ ಕಿಂ ದೇವ ಕರೋಮಿ ತೇಽದ್ಯ ।
ವಿನೈವ ಕಾಮೇನ ನ ಚಾಸ್ತಿ ಭಾವಃ
ಸ್ತ್ರೀಪುಂಸಯೋರ್ಭಾಸ್ಕರಕೋಟಿಕಲ್ಪ ||೬೪||

---

ರತಿಪತೌ = ಕಾಮನು ದಗ್ಧೇ ಸತಿ = ಬೇವುತ್ತಂ ಇರಲಾಗಿ ಶಂಭುಃ = ಪರಮೇಶ್ವರನು ಅಚಲಕನ್ಯಕಾಂ = ಹಿಮವತ್ಪರ್ವತನ ಕುಮಾರಿಯುಹಂಥಾ ಪಾರ್ವತೀ ದೇವಿಯನು ಕುರಿತು ಉವಾಚ = ನುಡಿದನು. ಭೋ ದೇವೇಶಿ ! = ಎಲೆ ದೇವರ್ಕಳಿಗೆ ಒಡತಿಯುಹಂಥಾಯುಕನೇ ತವ = ನಿನ್ನ ಮನಸಿ = ಮನಸ್ಸಿನಲ್ಲಿ ಸ್ಥಿತಂ ಕಿಂ = ಇದ್ದಂಥಾದೇನು ? ಅಹಂ = ನಾನು ಕರೋಮಿ = ಮಾಡುವೆನು. ||೬೨||

ಸುರೇಶ್ವರಿ = ದೇವತೆಗಳಿಗೆ ಒಡೆತಿಯುಹಂಥಾ ಭೋ ಮಹಾದೇವಿ = ಎಲೆ ಪಾರ್ವತೀದೇವಿ ! ವರಂ = ವರವನು ಬ್ರೂಹಿ = ಹೇಳು. ಅದ್ಯ = ಈಗ ದಾಸ್ಯಾಮಿ = ಕೊಟ್ಟೇನು. ಭೋ ದೇವೇಶಿ = ಎಲೆ ದೇವರ್ಕಳಿಗೆ ಒಡತಿಯುಹಂಥಾ ಯುಕನೆ ! ಮಯಿ ಪ್ರಸನ್ನೇ ಸತಿ = ನಾನು ಪ್ರಸನ್ನವಾಗುತ್ತಿರಲು ತೇ = ನಿನಗೆ ಇಹ = ಇಲ್ಲಿ ದುರ್ಲಭಂ = ಹಡೆಯಲು ಬಾರದೇ ಇದ್ದಂಥಾದ್ದು ಕಿಮಸ್ತಿ = ಏನುಂಟು ? ||೬೩||

ಪಾರ್ವತ್ಯುವಾಚ = ಪಾರ್ವತೀದೇವಿಯು ನುಡಿದಳು.

ನೀಲಕಂಠ = ಕರೆಕೊರಳನಹಂಥಾ ಭೋ ದೇವ = ಎಲೆ ದೇವನೇ ! ಕಾಮೇ ತು = ಕಾಮನು ಹತೇ ಸತಿ = ಹತವಾಗುತ್ತಿರಲು ಅದ್ಯ = ಈಗ, ತೇ = ನಿನ್ನ ವರೇಣ = ವರದಿಂದ ಕಿಂ = ಏನು ಕರೋಮಿ = ಮಾಡುವೆನು. ವದ = ಹೇಳು. ಭಾಸ್ಕರಕೋಟಿಕಲ್ಪ = ಸೂರ್ಯಕೋಟಿಪ್ರಭೆಗೆ ಸಮಾನವಹಂಥಾ ಶಿವನೇ ! ಕಾಮೇನ ವಿನೈವ = ಕಾಮನಿಲ್ಲದೆ ಸ್ತ್ರೀಪುಂಸಯೋಃ = ಸ್ತ್ರೀಪುರುಷರುಗಳ ಭಾವಶ್ಚ = ವ್ಯಾಪಾರವು ನಾಸ್ತಿ = ಇಲ್ಲ. ||೬೪||

---

[1] ಉಪಜಾತಿ ವೃತ್ತ

* ಭಾವಸ್ಯ ಹೀನೇ ಸುಖಸನ್ನಿಕರ್ಷಃ
ಕಥಂ ಭವೇದ್ಬ್ರೂಹಿ ಸುರೇಶವಂದ್ಯ।
ಉವಾಚ ಭೂಯೋ ಮದನಾಂತಕಾರೀ
ದೇಹೇ ನ ಚಾಹಂ ಮದನಂ ಸುನೇತ್ರೇ ||೬೫||

ನೇತ್ರಸ್ಯ ದೇವಿ ಜ್ವಲನಾತ್ಮಕಸ್ಯ
ಸ್ವಭಾವಮೇತದ್ವದ ಕಿಂ ಕರೋಮಿ ||೬೬||

ದೇವ್ಯುವಾಚ—

* ಬಾಲೇತಿ ಮತ್ವಾ ಭವ ಭೂತನಾಥ
ವ್ಯಾಮೋಹಸೇ ಕಿಂ ತ್ವಮನಿಂದ್ಯವರ್ಣ।
ಸ್ವತಂತ್ರಶಕ್ತಿರ್ಯದಿ ಚಕ್ಷುಷಸ್ತೇ
ತದಾ ದಹೇನ್ಮಾಮಪಿ ನಾಗ್ರಸಂಸ್ಥಾಮ್ ||೬೭||

ಭಾವಸ್ಯ = ವ್ಯಾಪಾರದ ಹೀನೇ = ಹೀನದಲ್ಲಿ ಸುಖಸನ್ನಿಕರ್ಷಃ = ಸುಖದ ಅತಿಶಯವು ಕಥಂ = ಹೇಂಗೆ ಭವೇತ್ = ಅಹುದು ? ಭೋಃ ಸುರೇಶವಂದ್ಯ = ಎಲೆ ಇಂದ್ರನಿಂದ ವಂದಿಸಿಕೊಳಲುಪಟ್ಟಾತನೆ ಬ್ರೂಹಿ = ಹೇಳು. ಮದನಾಂತಕಾರೀ = ಕಾಮನ ನಾಶನ ಮಾಡಿದಂಥಾ ಶಿವನು ಭೂಯಃ = ಮರಳಿ ಉವಾಚ = ನುಡಿದನು. ಭೋಃ ಸುನೇತ್ರೇ = ಎಲೆ ಒಪ್ಪುತ್ತಂವಿದ್ದಂಥಾ ನಯನಂಗಳನುಳ್ಳಾಯಕನೇ [ಳ್ಳಾತಳೇ] ಅಹಂ ಚ = ನಾನು ದೇಹೇ = ಶರೀರದಲ್ಲಿ ಮದನಂ = ಕಾಮನನು ನ = ಸಂಹರಿಸಿದುದಿಲ್ಲ. ಭೋ ದೇವಿ = ಎಲೆ ದೇವಿ ! ಜ್ವಲನಾತ್ಮಕಸ್ಯ = ಅಗ್ನಿಸ್ವರೂಪವನುಳ್ಳಂಥಾ ನೇತ್ರಸ್ಯ = ನಯನಕ್ಕೆ ಏತತ್ = ಇದು ಸ್ವಭಾವಂ = ಸ್ವಭಾವವು. ಕಿಂ ಕರೋಮಿ ? = ಏನ ಮಾಡುವೆನು ? ವದ = ಹೇಳು. ||೬೬||

ದೇವ್ಯುವಾಚ—ಪಾರ್ವತೀದೇವಿಯ ವಾಕ್ಯವು.

ಭೂತನಾಥ ! = ಭೂತಂಗಳಿಗೆ ಒಡೆಯನಹಂಥಾ ಅನಿಂದ್ಯವರ್ಣ = ನಿಂದೆಯಿಲ್ಲದ ವರ್ಣವನುಳ್ಳಂಥಾ ಭೋ ಭವ = ಎಲೆ ಪರಮೇಶ್ವರನೆ ತ್ವಂ = ನೀನು ಬಾಲೇತಿ = ಚಿಕ್ಕವಳೆಂದೀ ಪ್ರಕಾರದಲ್ಲಿ ಮತ್ವಾ = ಅರಿದು ಕಿಂ = ಏನು ಕಾರಣ ವ್ಯಾಮೋಹಸೇ = ಮರುಳು ಮಾಡುತ್ತಿದ್ದಿ. ಯದಿ = ಎತ್ತಲಾನು ತೇ = ನಿನ್ನ ಚಕ್ಷುಷಃ = ದೃಷ್ಟಿಗೆ ಸ್ವತಂತ್ರಶಕ್ತಿಶ್ಚೇತ್ = ಸ್ವತಂತ್ರಶಕ್ತಿ ಉಂಟಾದ ಪಕ್ಷೇ ತದಾ = ಆಗ ಅಗ್ರಸಂಸ್ಥಾಂ = ಇದಿರಲ್ಲಿ ಇದ್ದಂಥಾ ಮಾಮಪಿ = ಎನ್ನನೂ[1] [ಕಿಂ]ನ ದಹೇತ್ ? = ಏಕೆ ದಹಿಸದು ? [ದಹಿಸದಿರುವುದೇಕೆ ?][1] ||೬೭

* ಉಪಜಾತಿ ವೃತ್ತ 1 ನ ದಹೇತ್—ದಹಿಸದು ?

ಯದಿ ವಿಶ್ವೇಶ್ವರೋ ದೇವೋ ಬ್ರಹ್ಮಾದೀನಾಂ ವರಃ ಶಿವಃ
ಪ್ರತಾರಣೇ ಪ್ರವೃತ್ತಶ್ಚೇತ್ ಕೋ ವಿಚಾರಯಿತುಂ ಕ್ಷಮಃ ||೬೮||

ನಾಹಂ ಪ್ರತಾರ್ಯಾ ಭಗವನ್ ತ್ವಾಮೇವ ಶರಣಂ ಗತಾ
ಗತಿರ್ನಾನ್ಯಾಽಸ್ತಿ ಮೇ ದೇವ ತಸ್ಮಾನ್ಮಾಂ ತ್ರಾತುಮರ್ಹಸಿ ||೬೯||

ತ್ವಮೇವ ಚಕ್ಷುರ್ಜಗತಃ ತ್ವಮೇವ ವಚಸಾಂ ಪತಿಃ
ತ್ವಮೇವ ಧಾತಾ ಜಗತೋ ವಿಧಾತಾ ವಿಶ್ವತೋಮುಖಃ ||೭೦||

‡ ನಮಾಮ್ಯಹಂ ದೇವಮಜಂ ಪುರಾಣ-
ಮುಪೇಂದ್ರವೇಧಾಮರರಾಜಜುಷ್ಟಮ್ ।

---

ವಿಶ್ವೇಶ್ವರಃ = ವಿಶ್ವಕ್ಕೆ ಒಡೆಯ ಹಂಥಾ ದೇವಃ = ಪ್ರಕಾಶನಹಂಥಾ ಬ್ರಹ್ಮಾ ಬ್ರಹ್ಮಾದೀನಾಂ = ಬ್ರಹ್ಮನೊದಲಾದಂಥಾವರುಗಳಿಗೆ ವರಃ = ಶ್ರೇಷ್ಠನಹಂಥಾ ಶಿವಃ = ಶಿವನು ಯದಿ = ಎತ್ತಲಾನು ಪ್ರತಾರಣೇ = ಲೋಕಸ್ಥಿತಿಯ ಮೀರುವಲ್ಲಿ ಪ್ರವೃತ್ತಶ್ಚೇತ್ = ವರ್ತಿಸುತ್ತಿದ್ದಾತನಾದ ಪಕ್ಷೇ ವಿಚಾರಯಿತುಂ = ವಿಚಾರಿಸಲು ಕ್ಷಮಃ = ಸಮರ್ಥನು ಕಃ = ಆವಾತನು ? ||೬೮||

ಭೋ ಭಗವನ್ = ಎಲೆ ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಪರಮೇಶ್ವರನೇ! ಅಹಂ = ನಾನು ಪ್ರತಾರ್ಯಾ = ಆತಿಶಯವಾಗಿ ಮಾಡಲು [ಪ್ರತಾರಣ ಅರ್ಥಾತ್ ವಂಚಿಸಲು, ಅಥವಾ ಮೋಸಮಾಡಲು] ಯೋಗ್ಯಳಹಂಥಾ [ತಳು] ಯಕಳು ನ = ಅಲ್ಲ. ತ್ವಾಮೇವ = ನಿನ್ನನೇ ಶರಣಂ = ಮರೆಹೊಗುಹವನು ಗತಾ = ಎಯ್ದಿದಾ[ತಳು]ಯುಕನು. ಮೇ[1] = ಎನಗೆ[1] ಅನ್ಯಾಗತಿಃ = ಮತ್ತೊಂದುಗತಿ ನಾಸ್ತಿ = ಇಲ್ಲ. ಭೋ ದೇವ = ಎಲೆ ದೇವನೇ ! ತಸ್ಮಾತ್ = ಅದು ಕಾರಣವಾಗಿ ಮಾಂ = ಎನನು ತ್ರಾತುಂ = ರಕ್ಷಿಸಲು ಅರ್ಹಸಿ = ಯೋಗ್ಯ[2]ನಾ[2]ಗುತ್ತಿಹೆ. ||೬೯||

ತ್ವಮೇವ — ನೀನೇ ಜಗತಃ — ಲೋಕಕ್ಕೆ ಚಕ್ಷುಃ — ನಯನವು. ತ್ವಮೇವ — ನೀನೇ ವಚಸಾಂ — ವಾಕ್ಯಂಗಳಿಗೆ ಪತಿಃ — ಒಡೆಯನು. ತ್ವಮೇವ — ನೀನೇ ಜಗತಃ — ಲೋಕಕ್ಕೆ ಧಾತಾ — ಸೃಷ್ಟಿಕರ್ತನು. ವಿಧಾತಾ — ಒಡೆಯನು. ವಿಶ್ವತೋಮುಖಃ — ವಿಶ್ವತೋಮುಖನು. ||೭೦||

ಅಜಂ — ಜನ್ಮವಿಲ್ಲದೇ ಇದ್ದಂಥಾ ಪುರಾಣಂ — ಚಿರಕಾಲದಾತನಹಂಥಾ ಉಪೇಂದ್ರವೇಧಾಮರರಾಜಜುಷ್ಟಂ — ವಿಷ್ಣು ಬ್ರಹ್ಮ ದೇವೇಂದ್ರರುಗಳಿಂದ ಓಲೈಸಿ

---

‡ ಉಪಜಾತಿ ವೃತ್ತ [1] ನನಗೆ (ಖ) [2] ವಾ (ಕ)

ಶಶಾಂಕಸೂರ್ಯಾಗ್ನಿಮಯತ್ರಿಲೋಚನಂ
ಧ್ಯಾನಾಧಿಗಮ್ಯಂ ಜಗತಃ ಪ್ರಕಾಶಮ್ ||೨೦||

*ತ್ವಾಂ ವಾಙ್ಮಯಾಧಾರಮನಂತವೀರ್ಯಂ
ಜ್ಞಾನಾರ್ಣವಂ ಚೈವ ಗುಣಾರ್ಣವಂ ಚ |
ಪರಾಪರಂ ಧಾಮನಿಧಿಂ ಸುಸೂಕ್ಷ್ಮ-
ಮನಾದಿಮಧ್ಯಾಂತವಿಹೀನರೂಪಮ್ ||೨೨||

† ಹಿರಣ್ಯಗರ್ಭಂ ಜಗತಃ ಪ್ರಸೂತಿಂ
ನಮಾಮಿ ದೇವಂ ಹರಿಣಾಂಕಚಿಹ್ನಮ್ |
ಪಿನಾಕಪಾಶಾಂಕುಶಶೂಲಹಸ್ತಂ
ಕಪರ್ದಿನಂ ಮೇಘಸಹಸ್ರಘೋಷಮ್ ||೨೩||

ಕೊಳಲುಪಟ್ಟಂಥಾ ಶಶಾಂಕಸೂರ್ಯಾಗ್ನಿಮಯತ್ರಿಲೋಚನಂ — ಚಂದ್ರ ಸೂರ್ಯಾಗ್ನಿಸ್ವರೂಪನನು ತ್ರಿಲೋಚನಂಗಳನುಳ್ಳಂಥಾ ಧ್ಯಾನಾಧಿಗಮ್ಯಂ—ಧ್ಯಾನ ದಿಂದ ಎಯ್ದಲು ಯೋಗ್ಯನಹಂಥಾ ಜಗತಃ — ಲೋಕಕ್ಕೆ ಪ್ರಕಾಶಂ — ಪ್ರಕಾಶ ಸ್ವರೂಪನಹಂಥಾ ದೇವಂ—ದೇವನಹಂಥಾ ನಿನ್ನನು ಅಹಂ—ನಾನು ನಮಾಮಿ —ನಮಸ್ಕರಿಸುತ್ತಿದ್ದೇನು. ||೨೧||

ಅನಂತವೀರ್ಯಂ — ಬಹಳ ಪರಾಕ್ರಮವನುಳ್ಳಂಥಾ ಜ್ಞಾನಾರ್ಣವಂ = ಜ್ಞಾನಕ್ಕೆ ಸಮುದ್ರನಹಂಥಾ ವಾಙ್ಮಯಾಧಾರಂ= ವಾಕ್ಯಂಗಳಿಗೆ ಆಶ್ರಯನಹಂಥಾ ಗುಣಾರ್ಣವಂ ಚ= ಗುಣಂಗಳಿಗೆ ಸಮುದ್ರನಹಂಥಾ ಪರಾಪರಂ= ಪರಾಪರನಹಂಥಾ ಧಾಮನಿಧಿಂ= ತೇಜೋನಿಧಿಯಹಂಥಾ ಸುಸೂಕ್ಷ್ಮಂ— ಅತ್ಯಂತ ಸೂಕ್ಷ್ಮನಹಂಥಾ ಅನಾದಿಮಧ್ಯಾಂತವಿಹೀನರೂಪಂ = ಅನಾದಿ ಮಧ್ಯ ಅವಸಾನವಿಲ್ಲದೆ ಇದ್ದ ರೂಪನನು ಳ್ಳಂಥಾ ತ್ವಾಂ ಚೈವ= ನಿನ್ನನೇ ನಮಾಮಿ= ನಮಸ್ಕರಿಸುತ್ತಿದ್ದೇನು. ||೨೨||

ಜಗತಃ = ಲೋಕವ ಪ್ರಸೂತಿಂ = ಸೃಷ್ಟಿಸುವಂಥಾ ಹಿರಣ್ಯಗರ್ಭಂ = ಬ್ರಹ್ಮನ ರೂಪನಹಂಥಾ ಹರಿಣಾಂಕಚಿಹ್ನಂ = ಚಂದ್ರಕಳೆಯ ಅಂಕಿತವನುಳ್ಳಂಥಾ ಪಿನಾಕಪಾಶಾಂಕುಶಶೂಲಹಸ್ತಂ= ಪಿನಾಕ, ಪಾಶ, ಅಂಕುಶ, ತ್ರಿಶೂಲಹಸ್ತನಹಂಥಾ ಕಪರ್ದಿನಂ= ಜಟಾಮಕುಟವನುಳ್ಳಂಥಾ ಮೇಘಸಹಸ್ರಘೋಷಂ= ಮೇಘ ಸಹಸ್ರ ದೋಪಾದಿ ಧ್ವನಿಯನುಳ್ಳಂಥಾ ದೇವಂ= ದೇವನಹಂಥಾ ನಿನ್ನನು ನಮಾಮಿ= ನಮಸ್ಕರಿಸುತ್ತಿದ್ದೇನು. ||೨೩||

* ಉಪಜಾತಿವೃತ್ತಂ † ಉಪೇಂದ್ರ ವಜ್ರವೃತ್ತಂ

ತಮಾಲಕಂಠಂ ಸ್ಫಟಿಕಾವಭಾಸಂ
ನಮಾಮಿ ಶಂಭುಂ ಭುವನೈಕಸಿಂಹಮ್ ।
ವಿಭುಂ ಪುರಾಣಂ ಪುರುಷಂ ಮಹಾಂತಂ
ಶುಭಾವಹಂ ಭಾಸ್ಕರಕೋಟಿಭಾಸಮ್ ॥೭೪॥

§ ಸುರಭಿಂ ಸುವರ್ತಿತರಥಂ। ದಶಾರ್ಧವಕ್ತ್ರಂ ಸಸಾಯಕಂ ಧ್ವಜಿನಮ್
ನರಸಿಂಹದಾರಣಂ ತ್ವಾಂ। ನಮಾಮಿ ತಂ ಶರಭರೂಪಧರಮ್ ॥೭೫॥

ಉರಗೇಂದ್ರರಾಜಹಾರಂ [1]ಚಲದ್ವಲಯಭೂಷಣಂ[1] ಹರಂ ವರದಮ್ ।
ವಿಬುಧಮುಕುಟಾರ್ಚಿತಾಂಘ್ರಿಂ ನಮಾಮಿ ಹರಿಚರ್ಮವಸನಂ ತ್ವಾಮ್ ॥೭೬॥

ತಮಾಲಕಂಠಂ = ಕದ್ದಾಳವೃಕ್ಷದೋಪಾದಿ ಕಪ್ಪಹ ಕೊರಳನುಳ್ಳಂಥಾ ಸ್ಫಟಿಕಾವಭಾಸಂ = ಸ್ಫಟಿಕದೋಪಾದಿ ಕಾಂತಿಯನುಳ್ಳಂಥಾ ಭುವನೈಕಸಿಂಹಂ = ಲೋಕಕ್ಕೆ ಒಬ್ಬನೇ ಸಿಂಹವಹಂಥಾ ಶಂಭುಂ = ಸುಖವನು ಮಾಡುತ್ತಿದ್ದಂಥಾ ವಿಭುಂ ಪರಿಪೂರ್ಣನಹಂಥಾ ಮಹಾಂತಂ = ಮಹಾತ್ಮನಹಂಥಾ ಶುಭಾವಹಂ = ಮಂಗಳವನು ಧರಿಸಿದಂಥಾ ಭಾಸ್ಕರಕೋಟಿವಿಭಾಸಂ = ಸೂರ್ಯಕೋಟಿತೇಜವನುಳ್ಳಂಥಾ ನಿನ್ನನೂ ನಮಾಮಿ = ನಮಸ್ಕರಿಸುತ್ತಿದ್ದೇನು. ॥೭೪॥

ಸುರಭಿಂ = ಪರಿಮಳಂಗಳನುಳ್ಳಂಥಾ ಸುವರ್ತಿತರಥಂ = ಅತ್ಯಂತ ವರ್ತಿಸತ್ತಿದ್ದ ರಥವನುಳ್ಳಂಥಾ ಧ್ವಜಿನಂ = ಧ್ವಜವನುಳ್ಳಂಥಾ ಸಸಾಯಕಂ = ಬಾಣಂಗಳಿಂದ ಸಹಿತನಹಂಥಾ ದಶಾರ್ಧವಕ್ತ್ರಂ = ಪಂಚಮುಖನಹಂಥಾ ನರಸಿಂಹದಾರಣಂ = ನರಸಿಂಹನ ವಿದಾರಿಸಿದಂಥಾ ಶರಭರೂಪಧರಂ = ಶರಭಮೂರ್ತಿಯಧರಿಸಿದಂಥಾ ತಂ ತ್ವಾಂ = ಆ ನಿನ್ನನೂ ನಮಾಮಿ = ನಮಸ್ಕರಿಸುತ್ತಿದ್ದೇನು. ॥೭೫॥

ಉರಗೇಂದ್ರರಾಜಹಾರಂ = ಸರ್ಪಶ್ರೇಷ್ಠರುಗಳಿಗೆ ರಾಯನಹಂಥಾ ವಾಸುಕಿ ನಾಗನೇ ಹಾರವಾಗಿ ಉಳ್ಳಂಥಾ ಚಲದ್ವಲಯಭೂಷಣಂ = ಚಲಿಸುತ್ತಂವಿದ್ದ ಸರ್ಪಕಂಕಣಗಳ ಆಭರಣವನುಳ್ಳಂಥಾ ವರದಂ = ವರವ ಕೊಡುತ್ತಿದ್ದಂಥಾ ವಿಬುಧ

§ ಆರ್ಯಾವೃತ್ತ     1 ಚರಣಪ್ಪಯ ಭೂಷಣಂ (ಘ)

‡ ಯದಕ್ಷರಂ ನಿರ್ಗುಣಮಪ್ರಮೇಯಂ
ಯಂ ಜ್ಯೋತಿರೇಕಂ ಪ್ರವದಂತಿ ಸಂತಃ ।
ದೂರಂಗಮಂ ದೇವಮನಂತಮೂರ್ತಿಂ
ನಮಾಮಿ ಸೂಕ್ಷ್ಮಂ ಪರಮಂ ಪವಿತ್ರಮ್ ॥೭೭॥

ನಮಾಮಿ ರುದ್ರಂ ಪ್ರಮಥಾಧಿನಾಥಂ
ಧರ್ಮಾಸನಸ್ಥಂ ಪ್ರಕೃತಿದ್ವಯಂ ಚ ।
ತೇಜೋನಿಧಿಂ ಬಾಲಶಶಾಂಕಮೌಲಿಂ
ಕಾಲಾರ್ದನಂ ವಹ್ನಿರವೀಂದುನೇತ್ರಮ್ ॥೭೮॥

ಮಕುಟಾರ್ಚಿತಾಂಘ್ರಿಂ = ದೇವರ್ಕಳ ಮಕುಟಂಗಳಿಂದ ಪೂಜಿಸಿಕೊಳಲಪಟ್ಟಂಥಾ ಚರಣಂಗಳನುಳ್ಳಂಥಾ ಹರಿಚರ್ಮವಸನಂ—ನರಸಿಂಹನ ಚರ್ಮಾಂಬರವನುಳ್ಳಂಥಾ ಹರಂ = ಸಂಹಾರ ಮೂರ್ತಿಯಹಂಥಾ ವರದಂ = ವರವನ್ನು ಕೊಡತಕ್ಕಂಥಾ ತ್ವಾಂ = ನಿನ್ನನು ನಮಾಮಿ = ನಮಸ್ಕರಿಸುತ್ತಿದ್ದೇನು. ॥೭೬॥

ಏಕಂ = ಅದ್ವಿತೀಯನಹಂಥಾ ಯಂ = ಆವನಾನೊಬ್ಬ ನಿನ್ನನು ಸಂತಃ = ಸತ್ಪುರುಷರುಗಳು ಅಕ್ಷರಂ = ಕೇಡಿಲ್ಲದೇ ಇದ್ದಂಥಾ ನಿರ್ಗುಣಂ = ಸತ್ತ್ವ ರಜಸ್ತಮೋಗುಣಂಗಳಿಲ್ಲದೇ ಇದ್ದಂಥಾ ಅಪ್ರಮೇಯಂ = ಊಹಿಸಲು ಬಾರದೇ ಇದ್ದಂಥಾ ಯತ್ = ಆವುದಾನೊಂದು ಜ್ಯೋತಿಃ = ಪರಂಜ್ಯೋತಿಯೆಂದು ಪ್ರವದಂತಿ = ಹೇಳುತ್ತಿಹರು. ದೂರಂಗಮಂ = ದೂರವನೆಯ್ದಿದಂಥಾ ದೇವಂ = ಪ್ರಕಾಶನಹಂಥಾ ಅನಂತಮೂರ್ತಿಂ = ವಿಶ್ವಮೂರ್ತಿಯಹಂಥಾ ಸೂಕ್ಷ್ಮಂ = ಸೂಕ್ಷ್ಮನಹಂಥಾ ಪರಮಂ = ಉತ್ಕೃಷ್ಟನಹಂಥಾ ಪವಿತ್ರಂ — ಪಾವನಸ್ವರೂಪನಹಂಥಾ ನಿನ್ನನು ನಮಾಮಿ—ನಮಸ್ಕರಿಸುತ್ತಿದ್ದೇನು. ॥೭೭॥

ರುದ್ರಂ—ದುಃಖವ ಓಡಿಸುವಂಥಾ ಪ್ರಮಥಾಧಿನಾಥಂ = ಪ್ರಮಥರುಗಳಿಗೆ ಒಡೆಯನಹಂಥಾ ಧರ್ಮಾಸನಸ್ಥಂ — ಧರ್ಮವೆಂಬ ಗದ್ದುಗೆಯಲ್ಲಿ ಕುಳ್ಳಿರ್ದಂಥಾ ಪ್ರಕೃತಿದ್ವಯಂ — ಮಾಯೆಯಿಂದ ಎರಡಾದಂಥಾ ತೇಜೋನಿಧಿಂ — ತೇಜಸ್ಸಿಂಗೆ ಸ್ಥಾನವಾಗುತ್ತಿಹಂಥಾ ಬಾಲಶಶಾಂಕಮೌಳಿಂ — ಬಾಲಚಂದ್ರಮೌಳಿಯಹಂಥಾ ವಹ್ನಿರವೀಂದುನೇತ್ರಂ — ಅಗ್ನಿ ಸೂರ್ಯ ಚಂದ್ರರುಗಳೇ ನಯನಂಗಳಾಗಿ ಉಳ್ಳಂಥಾ ಕಾಲಾರ್ದನಂ— ಕಾಲನ ಸಂಹರಿಸಿದಂಥಾ ನಿನ್ನನೂ ನಮಾಮಿ — ನಮಸ್ಕರಿಸುತ್ತಿದ್ದೇನು. ॥೭೮॥

‡ ಉಪೇಂದ್ರ ವಜ್ರವೃತ್ತ

ಸೂತ ಉವಾಚ

ಪ್ರಸನ್ನೋऽಥಾಬ್ರವೀದ್ದೇವಿಂ ಕಾಲೀಂ ತ್ರಿಪುರಹಾ ಹರಃ
ವರಯಸ್ವ ವರಂ ದೇವಿ ದದಾಮ್ಯಹಂ ತವ ಸುವ್ರತೇ ||೭೯||

ದೇವ್ಯುವಾಚ

ಜೀವತ್ವಯಂ ಮಹಾದೇವ ಕಾಮೋ ಲೋಕಪ್ರತಾಪನಃ
ವಿನಾ ಕಾಮೇನ ಭಗವನ್ನಹಂ ಯಾಚೇ ಕಥಂ ವರಮ್ ||೮೦||

ಈಶ್ವರ ಉವಾಚ

ಭವತ್ವನಂಗೋ ಮದನಃ ಪ್ರೀತ್ಯರ್ಥಂ ತೇ ಸುಲೋಚನೇ
ತೇನ ರೂಪೇಣ ಲೋಕಸ್ಯ ಶೋಭನಾಯ ಭವತ್ವಲಮ್ ||೮೧||

---

ಸೂತ ಉವಾಚ—ಸೂತಮುನೀಶ್ವರನ ವಾಕ್ಯವು.

ಅಥ— ಅನಂತರದಲ್ಲಿ ತ್ರಿಪುರಹಾ— ತ್ರಿಪುರವ ಸಂಹರಿಸಿದಂಥಾ ಹರಃ— ಶಿವನು ಪ್ರಸನ್ನಃ— ಪ್ರಸನ್ನನಾಗಿ ಕಾಳೀಂ — ಪಾರ್ವತೀದೇವಿಯನು ಕುರಿತು ಅಬ್ರವೀತ್—ನುಡಿದನು. ಸುವ್ರತೇ—ಒಪ್ಪುತ್ತಂವಿದ್ದ ವ್ರತವನುಳ್ಳಂಥಾ ಭೋ ದೇವಿ—ಎಲೆ ಪಾರ್ವತೀದೇವಿ! ವರಂ—ವರವನು ವರಯಸ್ವ—ಬೇಡು. ಅಹಂ —ನಾನು ತವ—ನಿನಗೆ ದದ್ಮಿ—ಕೊಡುವೆನು. ||೭೯||

ದೇವ್ಯುವಾಚ—ಪಾರ್ವತೀದೇವಿಯ ವಾಕ್ಯವು

ಭೋ ಮಹಾದೇವ—ಎಲೆ ಪರಮೇಶ್ವರನೇ ಲೋಕಪ್ರತಾಪನಃ—ಲೋಕವ ಸಂತಾಪಿಸುವಂಥಾ ಅಯಂ ಕಾಮಃ—ಈ ಕಾಮನು ಜೀವತು—ಬದುಕಲಿ. ಭೋ ಭಗವನ್—ಎಲೆ ಷಡ್ಗುಣೈಶ್ವರ್ಯಸಂಪನ್ನನಹಂಥಾ ಶಿವನೆ! ಕಾಮೇನ ವಿನಾ — ಕಾಮನಿಲ್ಲವೇ ಅಹಂ — ನಾನು ವರಂ — ವರವನು ಕಥಂ — ಹೇಂಗೆ ಯಾಚೇ—ಬೇಡುವೆನು. ||೮೦||

ಈಶ್ವರ ಉವಾಚ—ಪರಮೇಶ್ವರನ ವಾಕ್ಯವು.

ಭೋಃ ಸುಲೋಚನೇ! — ಎಲೆ ಒಪ್ಪುತ್ತಂವಿದ್ದ ನಯನಂಗಳನುಳ್ಳಂಥಾ ಪಾರ್ವತೀದೇವಿ! ತೇ— ನಿನ್ನ ಪ್ರೀತ್ಯರ್ಥಂ — ಪ್ರೀತಿಗೋಸ್ಕರ ಮದನಃ— ಕಾಮನು ಅನಂಗಃ—ಶರೀರವಿಲ್ಲದಾತನು ಭವತು—ಆಗಲಿ. ತೇನ ರೂಪೇಣ— ಆ ಅನಂಗನ ರೂಪಿಂದ ಲೋಕಸ್ಯ—ಲೋಕದ ಶೋಭನಾಯ—ಮಂಗಳಕ್ಕೋಸ್ಕರ ಅಲಂ—ಲೇಸಾಗಿ ಭವತು—ಆಗಲಿ. ||೮೧||

* ತತೋತ್ಥಿತೋ ವಾಯುರಿವಾಪ್ರಮೇಯ
ಸ್ತ್ವನಂಗರೂಪೋ ಮಕರಧ್ವಜಸ್ಸಃ ।
ಹರಸ್ಯ ವಾಕ್ಯಾದುಮಯೇರಿತಸ್ಯ
ಸಚಾಪಬಾಣಸ್ಸರತಿರ್ಬಭೂವ ॥೭೨॥

ಇತಿ ಪ್ರೀತ್ಯಾ ಮಹೇಶಾನ್ಯಾ ವರಂ ದತ್ವಾ ಹರಸ್ಸ್ವಯಮ್
ಸ್ಮರಸ್ಯ ಪಂಚಬಾಣಸ್ಯ ತತ್ರೈವಾಂತರಧೀಯತ ॥೭೩॥

ಇತಿ ಶ್ರೀನೀಲಕಂಠನಾಗನಾಥಾಚಾರ್ಯವರ್ಯವಿರಚಿತೇ
ಶ್ರೀಮದ್ವೀರಮಾಹೇಶ್ವರಾಚಾರಸಂಗ್ರಹೇ ವೀರಶೈವಾಗಮಸುಧಾರ್ಣವ-
ಪೂರ್ಣಚಂದ್ರಸ್ಯ ಗೊರಗೋಡಪುರವರಾಧೀಶ್ವರಮಲ್ಲಿಕಾರ್ಜುನಾ-
ಚಾರ್ಯಸ್ಯಾನುಜ್ಞಯಾ ಶ್ರೀಧರಾಂಕಪ್ರಣೀತೇ ಕರ್ಣಾಟಭಾಷಾವಿವರಣೇ
ಶಿವಾಧಿಕ್ಯಕಥನೇ 'ಕಾಮದಹನಂ ನಾಮ'
ಅಷ್ಟಾದಶೋಽಧ್ಯಾಯಃ

---

ತತಃ—ಅನಂತರದಲ್ಲಿ ಉಮಯಾ—ಪಾರ್ವತೀದೇವಿಯಿಂದ ಈರಿತಸ್ಯ—ಬಿನ್ನೈಸಿಕೊಳಲುಪಟ್ಟಂಥಾ ಹರಸ್ಯ— ಪರಮೇಶ್ವರನ ವಾಕ್ಯಾತ್ — ವಾಕ್ಯದ ದೆಸೆಯಿಂದ ಮಕರಧ್ವಜಃ— ಕಾಮನು ಅಪ್ರಮೇಯಃ — ಊಹಿಸಲುಬಾರದೇ ಇದ್ದಂಥಾ ವಾಯುರಿವ—ಗಾಳಿಯುಕ್ಕೈಯೆಂಬ ಹಾಂಗೆ ಅನಂಗರೂಪಃ—ಶರೀರ ವಿಲ್ಲದೇ ಇದ್ದ ಸ್ವರೂಪವನುಳ್ಳಾತನಾಗಿ ಉತ್ಥಿತಃ — ಹುಟ್ಟಿದನು. ಸಃ—ಆ ಕಾಮನು ಸಚಾಪಬಾಣಃ—ಬಿಲ್ಲುಬಾಣಂಗಳಿಂದ ಸಹಿತನಾಗಿ ಸುರತಿಃ—ರತಿದೇವಿ ಯೊಡನೆ ಕೂಡಿದಾತನು ಬಭೂವ—ಆದನು. ॥೭೨॥

ಇತಿ—ಈ ಪ್ರಕಾರದಲ್ಲಿ ಹರಃ ಸ್ವಯಂ—ಶಿವ ತಾನೇ ಪ್ರೀತ್ಯಾ—ಸಂತೊಷ ದಿಂದ ಮಹೇಶಾನ್ಯಾಃ—ಪಾರ್ವತೀದೇವಿಗೆ ವರಂ—ವರವನು ದತ್ವಾ—ಕೊಟ್ಟು ಪಂಚಬಾಣಸ್ಯ — ಉನ್ಮದನ, ಮದನಮೋಹನ, ವಶೀಕರಣ, ಸಂತಾಪನ, ಸಂಮೂರ್ಚ್ಛನವೆಂಬ ಐಯ್ದು ಬಾಣಂಗಳನುಳ್ಳಂಥಾ ಸ್ಮರಸ್ಯ—ಕಾಮಂಗೆ ವರಂ— ವರವನು ದತ್ವಾ — ಕೊಟ್ಟು ತತ್ರೈವ — ಅಲ್ಲಿಯೇ ಅಂತರಧೀಯತ — ಅದೃಶ್ಯವಾದನು. ॥೭೩॥

---

* ಉಪೇಂದ್ರ ವಜ್ರವೃತ್ತಂ

# ಅಥೈಕೋನವಿಂಶೋಽ ಧ್ಯಾಯಃ

## [ ಗಿರಿಜಾವಿವಾಹವಿಸ್ತಾರಃ ]

**ಸೂತ ಉವಾಚ—**

**ಶಂಕರಾಚ್ಚ ವರಂ ಲಬ್ಧ್ವಾ ದೇವೀ ತ್ರೈಲೋಕ್ಯಪೂಜಿತಾ**
**ಉಮಾ ಭಗವತೀ ಕಾಲೀ ಸಂಪ್ರಾಪ್ತಾ ಪಿತೃಮಂದಿರಮ್ ॥೧॥**

**ಅಪಶ್ಯದ್ಗಿರಿರಾಜಸ್ತಾಂ ಚಂದ್ರಕೋಟಿನಿಭಾನನಾಮ್**
**ದೀಪಯಂತೀಂ ಜಗತ್ಸರ್ವಂ ವಿದ್ಯುತ್ಪುಂಜನಿಭಪ್ರಭಾಮ್ ॥೨॥**

**ಅಂಕೇ ಕಾಲೀಂ ಸಮಾಧಾಯ ಶಿರಸ್ಯಾಘ್ರಾಯ ಚ ದ್ವಿಜಾಃ**
**ಉವಾಚ [1]ಪರಯಾ[1] ಪ್ರೀತ್ಯಾ ವಿಶ್ವೇಶೀಂ ಪರ್ವತೇಶ್ವರಃ ॥೩॥**

---

ಸೂತ ಉವಾಚ—[2]ಸೂತಮುನಿಯು ನುಡಿದನು.[2]

ಶಂಕರಾತ್—ಪರಮೇಶ್ವರನ ದೆಸೆಯಿಂದ ವರಂ—ವರವನು ಲಬ್ಧ್ವಾ—ಪಡದು ತ್ರೈಲೋಕ್ಯಪೂಜಿತಾ—ಮೂರುಲೋಕದಿಂದ ಪೂಜಿಸಿಕೊಳ್ಳಲುಪಟ್ಟಂಥಾ ಭಗವತೀ—ಷಡ್ಗುಣೈಶ್ವರ್ಯಸಂಪನ್ನೆಯಹಂಥಾ ಕಾಲೀ — ಕೃಷ್ಣವರ್ಣೆಯಹಂಥಾ ಉಮಾದೇವೀ — ಪಾರ್ವತೀದೇವಿಯು ಪಿತೃಮಂದಿರಂ — ತಂದೆಯ ಮನೆಯನು ಸಂಪ್ರಾಪ್ತಾ—ಎಯ್ದಿದಳು. ॥೧॥

ಗಿರಿರಾಜಃ — ಹಿಮವತ್ಪರ್ವತನು ಚಂದ್ರಕೋಟಿನಿಭಾನನಾಂ — ಚಂದ್ರಂಗೆ ಸಮಾನವಹ ಮುಖವನುಳ್ಳಂಥಾ ವಿದ್ಯುತ್ಪುಂಜನಿಭಪ್ರಭಾಂ—ಮಿಂಚಿನ ಮೊತ್ತಕ್ಕೆ ಸಮಾನವಹ ಕಾಂತಿಯನುಳ್ಳಂಥಾ ಸರ್ವಂ ಜಗತ್—ಸಮಸ್ತಲೋಕವನು ದೀಪಯಂತೀಂ—ಪ್ರಕಾಶಿಸುತ್ತಿದ್ದಂಥಾ ತಾಂ — ಆ ಪಾರ್ವತೀದೇವಿಯನು ಅಪಶ್ಯತ್ ಕಂಡನು. ॥೨॥

ಭೋ ದ್ವಿಜಾಃ—ಎಲೆ ಋಷಿಗಳಿರಾ ಪರ್ವತೇಶ್ವರಃ—ಗಿರಿರಾಜನು ಅಂಕೇ —ತೊಡೆಯಲ್ಲಿ ಕಾಲೀಂ — ಪಾರ್ವತೀದೇವಿಯನು ಸಮಾಧಾಯ — ಕುಳ್ಳಿರಿಸಿ

---

[1] ಪರಮ (ಘ) [2] ಸೂತಮುನೀಶ್ವರನ ವಾಕ್ಯವು (ಖ)

ಗಿರಿರಾಜ ಉವಾಚ—

ತಪಸಾ ತೋಷಿತಶ್ಶಂಭುರನೋಽಯಾತ್ಮಾ ಸನಾತನಃ
ಕೀದೃಶಶ್ಚ ವರೋ ಲಬ್ಧಃ ತ್ವಯಾ ದೇವಾನ್ಮಹೇಶ್ವರಾತ್ ||೪||

ದೇವ್ಯುವಾಚ—

ತಪಸಾಽಽರಾಧ್ಯ ವಿಶ್ವೇಶಂ ಗೋಽಪತಿಂ ಶೂಲಪಾಣಿನಮ್
ತಮೇವೇಶಂ ಪತಿಂ ಲಬ್ಧ್ವಾ ಕೃತಾರ್ಥಾಽಸ್ಮೀತಿ ಮೇ ವರಃ ||೫||

[1] ಭೇದೋಽಸ್ತಿ ತತ್ತ್ವತೋ[1] ರಾಜನ್ ಮಮ ದೇವಾನ್ಮಹೇಶ್ವರಾತ್
ಸಿದ್ಧಮೇವಾವಯೋರೈಕ್ಯಂ ವೇದಾಂತಾರ್ಥವಿಚಾರಣಾತ್ ||೬||

---

ಕೊಂಡು ಶಿರಸಿ—ಮಸ್ತಕದಲ್ಲಿ ಆಘ್ರಾಯ ಚ — ಮುದ್ದುಕೊಟ್ಟು ಪರಯಾ ಪ್ರೀತ್ಯಾ—ಪರಮ ಸಂತೋಷದಿಂದ ವಿಶ್ವೇಶೀಂ — ವಿಶ್ವಕ್ಕೆ ಒಡತಿಯಹಂಥಾ ದೇವಿಯನು ಕುರಿತು ಉವಾಚ—ನುಡಿದನು. ||೩||

ಗಿರಿರಾಜ ಉವಾಚ—ಗಿರಿರಾಜನು ನುಡಿದನು.

ಅನೋಽಯಾತ್ಮಾ—ಊಹಿಸಲು ಬಾರದೇ ಇದ್ದ ಸ್ವರೂಪವನುಳ್ಳಂಥಾ ಸನಾತನಃ —ನಿತ್ಯನಹಾಥಾ ಶಂಭುಃ—ಪರಮೇಶ್ವರನು ತಪಸಾ—ತಪಸ್ಸಿಂದ ತೋಷಿತಃ — ಸಂತೋಷಿಸಲ್ಪಟ್ಟನು. ದೇವಾತ್ — ದೇವನಹಂಥಾ ಮಹೇಶ್ವರಾತ್ — ಪರಮೇಶ್ವರನ ದೆಸೆಯಿಂದ ಕೀದೃಶಃ—ಎಂಥಾ ವರಶ್ಚ—ವರವು ತ್ವಯಾ — ನಿನ್ನಿಂದ ಲಬ್ಧಃ—ಹಡೆಯಲುಪಟ್ಟಿತ್ತು? ||೪||

ದೇವ್ಯುವಾಚ—ಪಾರ್ವತೀದೇವಿ[3]ಯು ನುಡಿದಳು.[3]

ಗೋಽಪತಿಂ—ಪಶುಪತಿಯಹಂಥಾ ಶೂಲಪಾಣಿನಂ—ತ್ರಿಶೂಲಪಾಣಿಯಹಂಥಾ ವಿಶ್ವೇಶಂ — ವಿಶ್ವನಾಥನಹಂಥಾ ಶಿವನನು ತಪಸಾ — ತಪಸ್ಸಿಂದ ಆರಾಧ್ಯ — ಆರಾಧಿಸಿ ತಂ ಈಶಮೇವ—ಆ ಪರಮೇಶ್ವರನನೇ ಪತಿಂ—ಪತಿಯನ್ನಾಗಿ ಲಬ್ಧ್ವಾ —ಪಡದು ಕೃತಾರ್ಥಾ—ಕೃತಾರ್ಥೆ ಅಸ್ಮಿ—ಆದೆನು. ಇತಿ—ಇದು ಮೇ— ಎನಗೆ ವರಃ—ವರವು. ||೫||

ಭೋರಾಜನ್—ಎಲೆ ರಾಯನೇ! ದೇವಾತ್—ದೇವನಹಂಥಾ ಮಹೇಶ್ವರಾತ್ —ಪರಮೇಶ್ವರನ ದೆಸೆಯಿಂದ ಮಮ—ಎನಗೆ ಭೇದಃ — ಭೇದವು ಅಸ್ತಿ —

---

[1] ಭೇದೋ ನಾಸ್ತಿ ತತೋ ರಾಜನ್ (ಘ) [3] ಯ ವಾಕ್ಯವು (ಖ)

ಯದೇತದೈಶ್ವರಂ ತೇಜಃ ತನ್ಮಾಂ ವಿದ್ಧಿ ಮಹೇಶ್ವರಮ್
ಅಹಂ ಸರ್ವಾಂತರಾ ಶಕ್ತಿರ್ಮಾಯಾ ಮಾಯೀ ಮಹೇಶ್ವರಃ ||೭||

ಅಹಮೇವ ಪರಾಶಕ್ತಿಃ ಏಕ ಏವ ಮಹೇಶ್ವರಃ
ಆವಯೋರ್ವಿದ್ಯತೇ ರಾಜನ್ ಭೇದೋ ನ ಪರಮಾರ್ಥತಃ ||೮||

ಏಕಾಽಹಂ ಸರ್ವಗಾಽನಂತಾ ವಿಶ್ವರೂಪಾ ಪುರಾತನೀ
ಪಿನಾಕಪಾಣೇರ್ದಯಿತಾ ನಿತ್ಯಂ ಗಿರಿವರೋತ್ತಮ ||೯||

ಜ್ಞಾತುಂ ನ ಶಕ್ತಾ ಬ್ರಹ್ಮಾದ್ಯಾ ಮತ್ಸ್ವರೂಪಂ ಹಿ ತತ್ತ್ವತಃ
ವಿಚ್ಛಾಶಕ್ತಿರಹಂ ತಾತ ಜ್ಞಾನಶಕ್ತಿರಹಂ ಪುನಃ ||
ಕ್ರಿಯಾಶಕ್ತಿಃ ಪ್ರಾಣಶಕ್ತಿಃ ಶಕ್ತಿಮಾನ್ ಭಗನೇತ್ರಹಾ ||೧೦||

---

ಉುಟು. ವೇದಾಂತಾರ್ಥವಿಚಾರಣಾತ್ — ವೇದಾಂತದ ಅರ್ಥವ ವಿಚಾರಿಸುವುದರ ದೆಸೆಯಿಂದ ಆವಯೋಃ—ನಮ್ಮಿಬ್ಬರಿಗೆ ತತ್ತ್ವತಃ—ನಿಶ್ಚಯದಿಂದ ಐಕ್ಯಮೇವ —ಏಕತ್ವವೇ ಸಿದ್ಧಂ—ಸಿದ್ಧಾಂತವು. || ||

ಯತ್—ಆವುದಾನೊಂದು ಏತತ್ — ಈ ಜಗತ್ತು ಐಶ್ವರಂ — ಈಶ್ವರ ಸಂಬಂಧವಹಂಥಾ ತತ್ತೇಜಃ—ಆ ತೇಜಸ್ಸು ಮಾಂ—ಎನ್ನನು ಮಹೇಶ್ವರಂ— ಶಿವನನು ವಿದ್ಧಿ—ಅರಿ. ಅಹಂ— ನಾನು ಸರ್ವಾಂತರಾ — ವಿಶ್ವದೊಳಗಿಹಂಥಾ ಮಾಯಾಶಕ್ತಿಃ—ಮಾಯಾಶಕ್ತಿ. ಮಹೇಶ್ವರಃ—ಶಿವನು ಮಾಯೀ—ಮಾಯೆ ಯನುಳ್ಳಾತನು. || ||

ಮಹೇಶ್ವರಃ— ಶಿವನು ಏಕ ಏವ — ಒಬ್ಬನೇ. ಅಹಮೇವ — ನಾನೇ ಪರಾಶಕ್ತಿಃ—ಪರಾಶಕ್ತಿ. ಭೋ ರಾಜನ್— ಎಲೈ ಅರಸೇ ! ಪರಮಾರ್ಥತಃ — ಪರಮಾರ್ಥದ ದೆಸೆಯಿಂದ ಆವಯೋಃ—ನಮ್ಮಿಬ್ಬರಿಗೆ ಭೇದಃ—ಭೇದವು ನ ವಿದ್ಯತೇ—ಇಲ್ಲ. ||೮||

ಭೋ ಗಿರಿವರೋತ್ತಮ!— ಎಲೆ ಗಿರಿಶ್ರೇಷ್ಠರುಗಳಿಗೆ ಉತ್ತಮನಹಂಥಾತನೇ ಸರ್ವಗಾ—ಸರ್ವಗತೆಯಹಂಥಾ ಅನಂತಾ—ಕಡೆಯಿಲ್ಲದೇ ಇದ್ದಂಥಾ ವಿಶ್ವರೂಪಾ —ವಿಶ್ವರೂಪೆಯಹಂಥಾ ಪುರಾತನೀ — ಚಿರಕಾಲದಾಯಕನಹಂಥಾ ಅಹಂ — ನಾನು ಏಕಾ—ಒಬ್ಬಳೇ ಪಿನಾಕಪಾಣೇಃ—ಪರಮೇಶಂಗೆ ನಿತ್ಯಂ—ಆವಾಗವು ದಯಿತಾ—ಸ್ತ್ರೀಯುಂಥಾಯಕನು. ||೯||

ಬ್ರಹ್ಮಾದ್ಯಾಃ =ಬ್ರಹ್ಮ ಮೊದಲಾದುಂಥಾವರುಗಳು ಮತ್ಸ್ವರೂಪಂ— ನನ್ನ

ಕೂಟಸ್ಥಮಚಲಂ ಸೂಕ್ಷ್ಮಂ ಸತ್ಯಂ ನಿರ್ಗುಣಮವ್ಯಯಮ್
ಆನಂದಮಕ್ಷರಂ ಬ್ರಹ್ಮ ತಾತ ಜಾನೀಹಿ ತತ್ಪದಮ್ ||೧೧||

ಶಿವಸ್ಯ ಪರಮಾ ಮೂರ್ತಿರ್ನಿತ್ಯಾನಂದಮಯೀ ಹ್ಯಹಮ್
ಬ್ರಹ್ಮಣೋ ವಚನಾದ್ರಾಜನ್ನಭವಂ ದಕ್ಷಕನ್ಯಕಾ ||೧೨||

ಶೂಲಿನೋ ದೇವದೇವಸ್ಯ ನಿಂದಕಂ ಪರಮೇಷ್ಠಿನಃ
ವಿನಿಂದ್ಯ ಪಿತರಂ ದಕ್ಷಂ ಜಾತಾಽಸ್ಮಿ ತವ ಕನ್ಯಕಾ ||೧೩||

ಸ್ವರೂಪವನು ತತ್ತ್ವತಃ—ನಿಶ್ಚಯದಿಂದ ಜ್ಞಾತುಂ—ಅರಿಯಲು ನ ಶಕ್ತಾ ಹಿ—ಸಮರ್ಥರುಗಳಲ್ಲವಲಾ. ಭೋಃ ತಾತ—ಎಲೆ ತಂದೆ ಅಹಂ—ನಾನು ಇಚ್ಛಾಶಕ್ತಿಃ—ಇಚ್ಛಾಶಕ್ತಿ. ಪುನಃ—ಮರಳಿ ಅಹಂ — ನಾನು ಜ್ಞಾನ ಶಕ್ತಿಃ — ಜ್ಞಾನಶಕ್ತಿ. ಕ್ರಿಯಾಶಕ್ತಿಃ — ಕ್ರಿಯಾಶಕ್ತಿ. ಪ್ರಾಣಶಕ್ತಿಃ — ಪ್ರಾಣಶಕ್ತಿ. ಭಗನೇತ್ರಹಾ—ಭಗಾದಿತ್ಯನ ನೇತ್ರವ ಮೀಟಿದಂಥಾ ಶಿವನು ಶಕ್ತಿಮಾನ್—ಶಕ್ತಿಯನುಳ್ಳಾತನು. ||೧೦||

ಭೋಃ ತಾತ!—ಎಲೆ ತಂದೆ! ಕೂಟಸ್ಥಂ — ಇಪ್ಪತ್ತನಾಲ್ಕು ತತ್ತ್ವಂಗಳ ಕೂಟನಲ್ಲಿ ಇದ್ದಂಥಾ ಅಚಲಃ—ಚಲನೆಯಿಲ್ಲದೇಇದ್ದಂಥಾ ಸೂಕ್ಷ್ಮಂ—ಸೂಕ್ಷ್ಮವಹಂಥಾ ಸತ್ಯಂ—ಸತ್ಯರೂಪವಹಂಥಾ ನಿರ್ಗುಣಂ—ಸತ್ತ್ವರಜಸ್ತಮೋಗುಣಂಗಳಿಲ್ಲದಿದ್ದಂಥಾ ಅವ್ಯಯಂ—ಅನಿತ್ಯನಲ್ಲದೇ ಇದ್ದಂಥಾ ಆನಂದಂ—ಆನಂದಸ್ವರೂಪನಹಂಥಾ ಅಕ್ಷರಂ—ಕೇಡಿಲ್ಲದೇ ಇದ್ದಂಥಾ ಬ್ರಹ್ಮ—ಪರಬ್ರಹ್ಮವು ತತ್ಪದಂ— ಆ ಶಿವನ ನೆಲೆಯೆಂದೇ ಜ್ಞಾನೀಹಿ—ಅರಿ. ||೧೧||

ಭೋಃ ರಾಜನ್—ಎಲೆ ರಾಜನೇ ಅಹಂ—ನಾನು ನಿತ್ಯಾನಂದಮಯೀ—ಆವಾಗವೂ ಆನಂದಸ್ವರೂಪಿಯಹಂಥಾ ಆಯಕನು. ಶಿವಸ್ಯ — ಶಿವನ ಪರಮಾ ಮೂರ್ತಿಃ— ಪರಮಮೂರ್ತಿಯಹಂಥಾ ಆಯಕನು. ಬ್ರಹ್ಮಣಃ ವಚನಾತ್ — ಬ್ರಹ್ಮನ[1]ವಾಕ್ಯದ[1]ದೆಸೆಯಿಂದ ದಕ್ಷಕನ್ಯಕಾ—ದಕ್ಷನ ಕುಮಾರಿ ಅಭವಂ—ಆದೆನು.

ಪರಮೇಷ್ಠಿನಃ — ಪರಮಪದದಲ್ಲಿ ಇದ್ದಂಥಾ ಶೂಲಿನಃ — ತ್ರಿಶೂಲವನುಳ್ಳಂಥಾ ದೇವದೇವಸ್ಯ — ದೇವದೇವನಹಂಥಾ ಪರಮೇಶ್ವರನ ನಿಂದಕಂ — ನಿಂದಿಸಿದಂಥಾ ಪಿತರಂ—ತಂದೆಯಹಂಥಾ ದಕ್ಷಂ—ದಕ್ಷನನು ವಿನಿಂದ್ಯ—ಜರಿದು

[1] ವಾಕ್ಯದ ? (ಕ)

ಸ್ವೇಚ್ಛಯೈವಾವತಾರೋ ಮೇ ನೈವ ಚಾನ್ಯವಶಾತ್ಪಿತಃ
ತಸ್ಮಾನ್ಮಾಂ [2]ಪರಮಾಂ ಶಕ್ತಿಮಿತಿ[2] ಜ್ಞಾತ್ವಾ ಸುಖೀ ಭವ ||೧೪||

ನಾಶಯಾಮಿ ತವಾಜ್ಞಾನಂ ಭವಬಂಧನಕಾರಣಮ್
ದಿವ್ಯಂ ದದಾಮಿ ತೇ ಜ್ಞಾನಂ ದುಃಖತ್ರಯವಿನಾಶನಮ್ ||೧೫||

ಏವಂ ದೇವ್ಯಾಃ ಪ್ರಸಾದೇನ ಹಿಮವಾನ್ ಪರ್ವತೇಶ್ವರಃ
ಲಬ್ಧ್ವಾ ಮಾಹೇಶ್ವರಂ ಜ್ಞಾನಂ ಜೀವನ್ಮುಕ್ತಸ್ತದಾಽಭವತ್ ||೧೬||

ಆಸ್ಥಾಯ ಪರಮಾಂ ಭಕ್ತಿಂ ಶಿವಯೋಃ ಪಾದಪಂಕಜೇ
ಪಿತ್ರೋರ್ಹಿರಣ್ಯಗರ್ಭಸ್ಯ ಶಾರ್ಙ್ಗಿಣಶ್ಚಾಪಿ ಸುವ್ರತಾಃ ||೧೭||

---

ತವ—ನಿನ್ನ ಕನ್ಯಕಾ — ಮಗಳಾಗಿ ಜಾತಾ — ಹುಟ್ಟಿದಾಯಕನು ಅಸ್ಮಿ— ಆದೆನು. ||೧೩||

ಭೋಃ ಪಿತಃ—ಎಲೇ ತಂದೆ ಸ್ವೇಚ್ಛಯೈವ—ಎನ್ನಿಚ್ಛೆಯಿಂದವೇ ಮೇ— ಎನಗೆ ಅವತಾರಃ—ಅವತಾರವು. ಅನ್ಯವಶಾತ್— ಮತ್ತೊಬ್ಬರ ಅಧೀನದ ದೆಸೆಯಿಂದ ನೈವ ಚ—ಇಲ್ಲವು. ತಸ್ಮಾತ್—ಅದು ಕಾರಣವಾಗಿ ಮಾಂ—ಎನ್ನನು ಪರಮಾ—ಪರಮವಹಂಥಾ ಶಕ್ತಿಂ—ಶಕ್ತಿಯನು ಎಂದು ಇತಿ—ಈ ಪ್ರಕಾರದಲ್ಲಿ ಜ್ಞಾತಾ—ಅರಿದು ಸುಖೀಃ—ಸುಖಿಯಹಂಥಾ ಆತನು ಭವ—ಆಗು. ||೧೪||

ತವ — ನಿನ್ನ ಭವಬಂಧನಕಾರಣಂ — ಸಂಸಾರಬಂಧನಕ್ಕೆ ಕಾರಣವಹಂಥಾ ಅಜ್ಞಾನಂ—ಅಜ್ಞಾನವನು ನಾಶಯಾಮಿ—ಕೆಡಿಸುವೆನು. ತೇ—ನಿನಗೆ ದುಃಖತ್ರಯವಿನಾಶನಂ— ಆಧ್ಯಾತ್ಮಿಕ ಆಧಿದೈವಿಕ ಆಧಿಭೌತಿಕವೆಂಬ ದುಃಖತ್ರಯಂಗಳ ಕೆಡಿಸುತ್ತಿದ್ದಂಥಾ ದಿವ್ಯಜ್ಞಾನಂ — ದಿವ್ಯಜ್ಞಾನವನು ದದಾಮಿ—ಕೊಡುವೆನು.

ಏವಂ—ಈ ಪ್ರಕಾರದಲ್ಲಿ ದೇವ್ಯಾಃ —ಪಾರ್ವತೀದೇವಿಯ ಪ್ರಸಾದೇನ— ಪ್ರಸನ್ನತಿಕೆಯಿಂದ ಪರ್ವತೇಶ್ವರಃ — ಪರ್ವತಂಗಳಿಗೆ ಒಡೆಯನಹಂಥಾ ಹಿಮವಾನ್ — ಹಿಮವತ್ಪರ್ವತನು ಮಾಹೇಶ್ವರಂ— ಶಿವಸಂಬಂಧವಹಂಥಾ ಜ್ಞಾನಂ — ಜ್ಞಾನವನು ಲಬ್ಧ್ವಾ—ಪಡದು ತದಾ—ಆಗ ಜೀವನ್ಮುಕ್ತಃ = ಜೀವನ್ಮುಕ್ತನು ಅಭವತ್ = ಆದನು. ||೧೬||

ಭೋಃ ಸುವ್ರತಾಃ — ಎಲೆ[3]ಒಪ್ಪುತ್ತಿದ್ದ[3]ವ್ರತವನುಳ್ಳಂಥಾ ಋಷಿಗಳಿರಾ ! ಹಿರಣ್ಯಗರ್ಭಸ್ಯ — ಬ್ರಹ್ಮಂಗೆ ಶಾರ್ಙ್ಗಿಣಶ್ಚಾಪಿ —ಪುರುಷೋತ್ತಮಂಗೆಯೂ

---

[2] ಪರಮಾ ಶಕ್ತಿರಿತಿ ? (ಖ. ಗ) [3] ಒಪ್ಪುತಂವಿದ್ದ (ಖ)

ಅಪಶ್ಯದಖಿಲಂ ವಿಶ್ವಮುಮಾಮಾಹೇಶ್ವರಾತ್ಮಕಮ್
ಆಜ್ಞಾಪಯತ್ತತೋ ವಿಶ್ವಕರ್ಮಾಣಂ ಪರ್ವತೇಶ್ವರಃ ||೧೮||

ವಿವಾಹಮಂಟಪಂ ಕರ್ತುಂ ನಾನಾಶ್ಚರ್ಯವಿಭೂಷಿತಮ್
ತೇನಾಹೂತಸ್ತತಶ್ಶೀಘ್ರಂ ವಿಶ್ವಕರ್ಮಾ ಮಹಾಮತಿಃ ||೧೯||

ಪಾರ್ಶ್ವಂ ಯಯೌ ಹಿಮವತಃ ಕುಶಲೋ ವಿಶ್ವಕರ್ಮಣಿ
ದೃಷ್ಟ್ವಾ ತಂ ವಿಶ್ವಕರ್ಮಾಣಂ ಹೃಷ್ಟಃ ಪರ್ವತರಾಟ್ ಸ್ವಯಮ್ ||

ಸ್ವಾಗತಾಸನಪಾದ್ಯಾದ್ಯೈಃ ಸಾದರಂ ತಮಪೂಜಯತ್
ವಿಧಿವತ್ಪೂಜಯಿತ್ವಾ ತು ವಿಶ್ವಕರ್ಮಾಣಮಬ್ರವೀತ್ ||೨೦||

ಪಿತ್ರೋಃ—ತಾಯಿತಂದೆಗಳಹಂಥಾ ಶಿವಯೋಃ—ಪಾರ್ವತೀಪರಮೇಶ್ವರರಿಬ್ಬರ ಪಾದಪಂಕಜೇ — ಚರಣಕಮಲದಲ್ಲಿ ಪರಮಾಂ ಭಕ್ತಿಂ — ಪರಮ ಭಕ್ತಿಯನು ಆಸ್ಥಾಯ—ಮಾಡಿಕೊಂಡು ಅಖಿಲಂ—ಎಲ್ಲವನು ವಿಶ್ವಂ—[4]ಸರ್ವ[4]ಲೋಕವನು ಉಮಾಮಾಹೇಶ್ವರಾತ್ಮಕಂ—ಉಮಾಮಹೇಶ್ವರಸ್ವರೂಪಮಹಂಥಾದನಾಗಿ ಅಪಶ್ಯತ್ —ಕಂಡನು. ತತಃ—ಅನಂತರದಲ್ಲಿ ಪರ್ವತೇಶ್ವರಃ—ಗಿರಿರಾಜನು ವಿಶ್ವಕರ್ಮಾಣಂ —ವಿಶ್ವಕರ್ಮನನು ಆಜ್ಞಾಪಯತ್—ಆಜ್ಞಾಪಿಸಿದನು. ||೧೭–೧೮||

ತತಃ—ಅಷ್ಟರಮೇಲೆ ನಾನಾಶ್ಚರ್ಯವಿಭೂಷಿತಮ್—ನಾನಾ ಪ್ರಕಾರವಹ ಆಶ್ಚರ್ಯದಿಂದ ಅಲಂಕರಿಸಲುಪಟ್ಟಂಥಾ ವಿವಾಹಮಂಟಪವನು ಕರ್ತುಂ — ಮಾಡಲೋಸ್ಕರ ಮಹಾಮತಿಃ— ಮಹಾಮತಿಯನುಳ್ಳಂಥಾ ವಿಶ್ವಕರ್ಮಾ — ವಿಶ್ವಕರ್ಮನು ತೇನ—ಆ ಹಿಮವತ್ಪರ್ವತನಿಂದ ಶೀಘ್ರಂ — ಬೇಗ ಆಹೂತಃ —ಕರೆಯಲುಪಟ್ಟನು. ||೧೯||

ವಿಶ್ವಕರ್ಮಣಿ—ವಿಶ್ವವ ನಿರ್ಮಿಸುವಲ್ಲಿ ಕುಶಲಃ — ಕುಶಲನಹಂಥಾ ವಿಶ್ವಕರ್ಮನು ಹಿಮವತಃ—ಹಿಮವತ್ಪರ್ವತನ ಪಾರ್ಶ್ವಂ—ಸಮೀಪವನು ಯಯೌ —ಎಯ್ದಿದನು. ತಂ—ಆ ವಿಶ್ವಕರ್ಮಾಣಂ — ವಿಶ್ವಕರ್ಮನನು ದೃಷ್ಟ್ವಾ— ಕಂಡು ಪರ್ವತರಾಟ್—ಗಿರಿರಾಜನು ಹೃಷ್ಟಃ—ಸಂತೋಷಿಸಿದಾತನಾಗಿ ಸ್ವಯಂ ತಾನೇ, ||೨೦||

ಸ್ವಾಗತಾಸನಪಾದ್ಯಾದ್ಯೈಃ — ಕ್ಷೇಮವ ಬೆಸಗೊಳುಹ, ಕುಳ್ಳಿರಕೊಡುಹ,

[4] ಸಮಸ್ತ

[1]ಗಿರಿರಾಜ[1] ಉವಾಚ—

ವಿಶ್ವಕರ್ಮನ್ ಮಹಾಪ್ರಾಜ್ಞ ಸರ್ವಶಾಸ್ತ್ರವಿಶಾರದ
ಯತ್ಕಾರಣಮಿಹಾಹೂತೋ ಮಯಾ ತ್ವಂ ತದ್ಬ್ರವೀಮ್ಯಹಮ್ ||

ವಿಶ್ವೇಶ್ವರೋ ಮಹಾದೇವೋ ಭಗವನ್ನೀಲಲೋಹಿತಃ
ಆಗಮಿಷ್ಯತಿ ವಿಶ್ವೇಶೀಂ ಪರಿಣೇತುಂ ಶಿವಸ್ಸ್ವಯಮ್ ||೨೩||

ಮಂಟಪಂ ತತ್ರ ಕರ್ತವ್ಯಂ ಯಜ್ಞಾರ್ಥಂ ತದ್ಧಿರಣ್ಮಯಮ್
ಯೋಜನಾಯುತವಿಸ್ತೀರ್ಣಮನೇಕಾಶ್ಚರ್ಯಸಂಯುತಮ್ ||೨೪||

---

ಪಾದಪ್ರಕ್ಷಾಲನೆ, ಮೊದಲಾದಂಥಾ ಉಪಚಾರಂಗಳಿಂದ ಸಾದರಃ— ಆದರಣೆಯಿಂದ ಸಹಿತನಾಗಿ ತಂ = ಆ ವಿಶ್ವಕರ್ಮನನು ಆಪೂಜಯತ್ = ಪೂಜಿಸಿದನು. ವಿಧಿವತ್ = ವಿಧಾನೋಕ್ತವಾಗಿ ಪೂಜಯಿತ್ವಾ ತು = ಪೂಜಿಸಿ ವಿಶ್ವಕರ್ಮಾಣಂ = ವಿಶ್ವಕರ್ಮನನು ಕುರಿತು ಅಬ್ರವೀತ್ = ನುಡಿದನು. ||೨೧||

[1]ಗಿರಿರಾಜ[1] ಉವಾಚ = ಗಿರಿರಾಜನ ವಾಕ್ಯವು.

ಮಹಾಪ್ರಾಜ್ಞ = ಮಹಾಪ್ರಾಜ್ಞನಹಂಥಾ ಸರ್ವಶಾಸ್ತ್ರವಿಶಾರದ = ಸರ್ವ ಶಾಸ್ತ್ರಪರಿಚಿತನಹಂಥಾ ಭೋಃ ವಿಶ್ವಕರ್ಮನ್ ! = ಎಲೇ ವಿಶ್ವಕರ್ಮನೇ ! ಯತ್ಕಾರಣಂ = ಅವುದಾನೊಂದು ಕಾರಣವಾಗಿ ತ್ವಂ = ನೀನು ಮಯಾ = ಎನ್ನಿಂದ ಇಹ = ಇಲ್ಲಿ ಆಹೂತಃ = ಕರೆಯಲ್ಪಟ್ಟಾತನು. ತತ್ = ಆ ಕಾರಣ ವನು ಅಹಂ = ನಾನು ಬ್ರವೀಮಿ = ಹೇಳುವೆನು. ||೨೨||

ವಿಶ್ವೇಶ್ವರಃ = ವಿಶ್ವಕ್ಕೊಡೆಯನಹಂಥಾ ಮಹಾದೇವಃ = ಅಧಿಕವಹ ದೇವನಹಂಥಾ ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಹಂಥಾ ನೀಲಲೋಹಿತಃ = [2]ಕೊರಳ ಕಪ್ಪು ಜಟಾಮಕುಟದ ಕೆಂಪು ವರ್ಣವನುಳ್ಳಂಥಾ[2] ಶಿವಃ = ಶಿವನು ಸ್ವಯಂ = ತಾನೇ ವಿಶ್ವೇಶೀಂ = ವಿಶ್ವಕ್ಕೆ ಒಡೆತಿಯಹಂಥಾ ಪಾರ್ವತೀದೇವಿಯನು ಪರಿಣೇತುಂ = ವಿವಾಹನಾಗಲೋಸ್ಕರ ಆಗಮಿಷ್ಯತಿ = ಬಂದಾನು. ||೨೩||

ತತ್ರ = ಅಲ್ಲಿ ಯಜ್ಞಾರ್ಥಂ = ವಿವಾಹಯಜ್ಞಕ್ಕೋಸ್ಕರ ಹಿರಣ್ಮಯಂ = ಸುವರ್ಣಮಯವಹಂಥಾ ಯೋಜನಾಯುತವಿಸ್ತೀರ್ಣಮನೇಕಾಶ್ಚರ್ಯಸಂಯುತಂ

---

[1] ಪರ್ವತಃ (ಖ) [2] ಲುಪ್ತ (ಕ)

ದೃಷ್ಟಮಾತ್ರೇಣ ಶರ್ವಸ್ಯ ಪ್ರೀತಿರ್ಭವತಿ ವೈ ಯಥಾ
ತಥಾ ತ್ವಂ ಮಂಟಪಂ ಶೀಘ್ರಂ ಕುರು ವಿಶ್ವೇಶ್ವರಪ್ರಿಯಮ್ ||೨೫||

ಏವಮುಕ್ತಸ್ತದಾ ತೇನ ಗಿರಿಣಾ ವಿಶ್ವಕರ್ಮಕೃತ್
ವೈವಾಹಂ ಮಂಟಪಂ ಶೀಘ್ರಮಸೃಜದ್ರತ್ನವಿಗ್ರಹಮ್ ||೨೬||

ಸ್ತಂಭೈರ್ಹೇಮಮಯೈಶ್ಚಿತ್ರೈರ್ಮಣಿಭಿಸ್ಸೂರ್ಯಸನ್ನಿಭೈಃ
ಇಂದ್ರನೀಲಮಯೈರ್ದಿವ್ಯೈಃ ವೈಡೂರ್ಯೈರ್ವಿದ್ರುಮೈರಪಿ ||೨೭||

---

=ಹತ್ತು ಸಾವಿರ ಗಾವುದ ವಿಸ್ತೀರ್ಣವಹಂಥಾ ನಾನಾ ಪ್ರಕಾರವಹ ಆಶ್ಚರ್ಯ ದೊಡನೆ ಕೂಡಿದಂಥಾ[1] ತತ್ = ಆ ಮಂಟಪಂ = ವಿವಾಹವು ಕರ್ತವ್ಯಂ = ಮಾಡಬೇಕಾದ್ದು. ||೭೪||

ದೃಷ್ಟಮಾತ್ರೇಣ = ನೋಡಿದ ಮಾತ್ರದಿಂದ ಶರ್ವಸ್ಯ = ಶಿವಂಗೆ ಪ್ರೀತಿಃ = ಸಂತೋಷವು ಯಥಾ = ಎಹಂಗೆ ಭವತಿ ವೈ = ಆಗುತ್ತಿಹುದು ತಥಾ = ಹಾಂಗೆ ತ್ವಂ = ನೀನು ವಿಶ್ವೇಶ್ವರಪ್ರಿಯಂ = [2]ವಿಶ್ವೇಶ್ವರಂಗೆ ಪ್ರೀತಿಯಹಂಥಾ ಮಂಟಪಂ = [3]ವಿವಾಹಮಂಟಪವನು ಶೀಘ್ರಂ = ಬೇಗ ಕುರು = ಮಾಡು.[3] ||೨೫||

ತೇನ ಗಿರಿಣಾ = ಆ ಗಿರಿರಾಜನಿಂದ ಏವಂ = ಈ ಪ್ರಕಾರದಲ್ಲಿ ಉಕ್ತಃ = ನುಡಿಯಲುಪಟ್ಟಂಥಾ ವಿಶ್ವಕರ್ಮಕೃತ್ = ವಿಶ್ವಕರ್ಮನು ತದಾ = ಆಗ ರತ್ನಮಯವಹಂಥಾ ವೈವಾಹಂ ಮಂಟಪಂ = ವಿವಾಹಮಂಟಪವನು ಶೀಘ್ರಂ— ಬೇಗ ಅಸೃಜತ್ = ನಿರ್ಮಿಸಿದನು. ||೨೬||

ಹೇಮಮಯೈಃ = ಸುವರ್ಣಮಯವಹಂಥಾ ಸ್ತಂಭೈಃ = ಕಂಭಂಗಳಿಂದ ಸೂರ್ಯಸನ್ನಿಭೈಃ = ಸೂರ್ಯಂಗೆ ಸಮಾನವಹಂಥಾ ಚಿತ್ರೈಃ = ನಾನಾ ಪ್ರಕಾರವಹಂಥಾ ಮಣಿಭಿಃ = ರತ್ನಂಗಳನುಳ್ಳಂಥಾ ಸ್ತಂಭೈಃ = ಕಂಭಂಗಳಿಂದ ದಿವ್ಯೈಃ— ಹೊಳವುತ್ತಿದ್ದಂಥಾ ಇಂದ್ರನೀಲಮಯೈಃ = ಇಂದ್ರನೀಲಮಯವಹ ಕಂಭಂಗಳಿಂದ ವೈಡೂರ್ಯೈಃ = ವೈಡೂರ್ಯದ ಕಂಭಗಳಿಂದ ವಿದ್ರುಮೈರಪಿ = ಹವಳದ ಕಂಭಂಗಳಿಂದವೂ, ||೨೭||

---

1 ಲುಪ್ತ (ಕ) 2 ಪರಮೋ (ಖ) 3 ಲುಪ್ತ (ಕ)

ಮೌಕ್ತಿಕೈರ್ವಜ್ರನೀಲೈಶ್ಚ ಚಂದ್ರಕಾಂತಮಯೈರಪಿ
ಸ್ಫಾಟಿಕೈರ್ವಿದ್ರುಮೈಶ್ಚಾಪಿ ಮುಕ್ತಾದಾಮವಿಲಂಬಿತೈಃ ||೨೮||

ಚಾಮರಾಲಂಕೃತೈರುಚ್ಚೈರ್ದರ್ಪಣೈರ್ವಿವಿಧೈರಪಿ
ಸೂರ್ಯಬಿಂಬಪ್ರತೀಕಾಶೈಶ್ಚಂದ್ರಬಿಂಬಸಮಪ್ರಭೈಃ ||೨೯||

ಧ್ವಜಮಾಲಾಕುಲಂ ದಿವ್ಯಪತಾಕಾನೇಕಶೋಭಿತಮ್
ರತ್ನಜೈಸ್ಸಿಂಹಶಾರ್ದೂಲೈರ್ಗಜೈರ್ವ್ಯಾಳೈರ್ನಿರಂತರಮ್ ||
ರಚಿತಂ ಮಂಟಪಂ ದಿವ್ಯಂ ಪ್ರಿಯಂ ತ್ರಿಪುರವಿದ್ವಿಷಃ ||೩೦||

ರುದ್ರಾಣಾಂ ಚ ತಥಾರೂಪೈಃ ಗಂಧರ್ವಾಪ್ಸರಸಾಂ ಗಣೈಃ

---

ಮೌಕ್ತಿಕೈಃ = ಮುತ್ತಿನ ಕಂಭಂಗಳಿಂದ ವಜ್ರನೀಲಮಯೈಃ = ವಜ್ರನೀಲದ ಕಂಭಂಗಳಿಂದಲೂ ಚಂದ್ರಕಾಂತಮಯೈರಪಿ — ಚಂದ್ರಕಾಂತಮಯವಹಂಥಾ ಕಂಭಂಗಳಿಂದವೂ, ಮುಕ್ತಾದಾಮವಿಲಂಬಿತೈಃ = ಮುತ್ತಿನ ಗೊಂಡೆಯಂಗಳಿಂದವೂ ನೇಲುತ್ತಿದ್ದಂಥಾ ವಿದ್ರುಮೈಶ್ಚಾಪಿ = ಹವಳದ ಗೋಡೆಯಂಗಳಿಂದ ನೇಲುತ್ತಿದ್ದಂಥಾ ಸ್ಫಾಟಿಕೈಃ = ಸ್ಫಟಿಕದ ಕಂಭಂಗಳಿಂದಲೂ. ||೨೮||

ಉಚ್ಚೈಃ — ಉನ್ನತವಹಂಥಾ ಚಾಮರಾಲಂಕೃತೈಃ — ಚಾಮರಂಗಳಿಂದ ಅಲಂಕರಿಸಲ್ಪಟ್ಟ ಕಂಭಂಗಳಿಂದ ಸೂರ್ಯಬಿಂಬಪ್ರತೀಕಾಶೈಃ — ಸೂರ್ಯಮಂಡಲಕ್ಕೆ ಸಮಾನವಹಂಥಾ ಚಂದ್ರಬಿಂಬಸಮಪ್ರಭೈಃ — ಚಂದ್ರಮಂಡಲಕ್ಕೆ ಸಮಾನವಹ ಕಾಂತಿಯನುಳ್ಳಂಥಾ ದರ್ಪಣೈಃ — ಕನ್ನಡಿಗಳನುಳ್ಳಂಥಾ ವಿವಿಧೈರಪಿ — ನಾನಾ ಪ್ರಕಾರವಹ ಕಂಭಂಗಳಿಂದವೂ. ||೨೯||

ದಿವ್ಯಂ — ಒಪ್ಪುತ್ತಂವಿದ್ದಂಥಾ ಧ್ವಜಮಾಲಾಕುಲಂ — ಧ್ವಜಂಗಳ ಸಮೂಹಂಗಳಿಂದ ಸಂಚರಿಸುತ್ತಂವಿದ್ದಂಥಾ ಪತಾಕಾನೇಕಶೋಭಿತಂ — ಪತಾಕೆಗಳ ಅಸಂಖ್ಯಾತಂಗಳಿಂದ ಒಪ್ಪುತ್ತಂವಿದ್ದಂಥಾ ರತ್ನಜೈಃ — ರತ್ನಂಗಳಿಂದ ನಿರ್ಮಿಸಲುಪಟ್ಟಂಥಾ ಸಿಂಹಶಾರ್ದೂಲೈಃ — ಸಿಂಹಗಳು ಹುಲಿಗಳಿಂದ ಗಜೈಃ — ಆನೆಗಳಿಂದ ವ್ಯಾಳೈಃ — ಸರ್ಪಂಗಳಿಂದ ನಿರಂತರಂ — ಆವಾಗವು ದಿವ್ಯಂ — ಒಪ್ಪುತ್ತಂವಿದ್ದಂಥಾ ತ್ರಿಪುರದ್ವಿಷಃ — ಪರಮೇಶ್ವರಂಗೆ ಪ್ರಿಯಂ — [1]ಪ್ರಿಯಮ[1]ಹಂಥಾ ಮಂಟಪಂ = ವಿವಾಹ ಮಂಟಪವು ರಚಿತಂ — ಮಾಡಲುಪಟ್ಟಿತ್ತು. ||೩೦||

ರತ್ನಜೈಃ — ರತ್ನಂಗಳಿಂದ ನಿರ್ಮಿಸಲುಪಟ್ಟಂಥಾ ರುದ್ರಾಣಾಂ — ರುದ್ರರುಗಳ

---

[1] ಪ್ರೀತಿಯು (ಖ)

37*

ದೇವೈಶ್ಚೈವ ಮನೋಹಾರ್ಯೈಃ ಮರ್ತ್ಯೈಶ್ಚೈವ ತಥಾಽಪರೈಃ ||
ಮಾಲಾಭಿಸ್ತಬಕೈರ್ವಿಪ್ರಾ ರತ್ನಜೈಃ ಕುಂಕುಮೈರ್ಭೃಶಮ್ ||೩೦||

ಕ್ವಚಿಚ್ಚಾಮೀಕರೈಸ್ಸೋಽಥ ಹೃದ್ಯಾಂ ಭೂಮಿಂ ವಿನಿರ್ಮಮೇ
ಕ್ವಚಿದ್ಬಂಧೂಕಸಂಕಾಶಾಂ ದೀಪ್ತಾಂ ವಿದ್ರುಮಸಪ್ರಭಾಮ್ ||೩೧||

ಕ್ವಚಿತ್ಪದ್ಮದಲಾಕಾರಾಮಿಂದ್ರಾಯುಧಸಮಪ್ರಭಾಮ್
ಕ್ವಚಿನ್ನೀಲೋತ್ಪಲಾಭಾಸಾಂ ನೀಲಜೀಮೂತಸಪ್ರಭಾಮ್ ||೩೨||

ರೂಪೈಃ—ರೂಪಗಳಿಂದವೂ ತಥಾ—ಹಾಂಗೆ ಗಂಧರ್ವಾಪ್ಸರಸಾಂ—ಗಂಧರ್ವರ ಅಪ್ಸರರುಗಳ ಗಣೈಃ—ಸಮೂಹಂಗಳಿಂದ ಮನೋಹಾರ್ಯೈಃ— ಮನೋಹರವ ಹುಥಾ ದೇವೈಶ್ಚೈವ—ದೇವರ್ಕಳ ರೂಪುಗಳಿಂದ ತಥಾ—ಹಾಂಗೆ ಅಪರೈಶ್ಚೈವ — ಮತ್ತೆ ಕೆಲಬರ ರೂಪುಗಳಿಂದ ರತ್ನಜೈಃ — ರತ್ನಂಗಳಿಂದವೂ ನಿರ್ಮಿಸಿದಂಥಾ ಕುಂಕುಮೈಃ—ಕುಂಕುಮಂಗಳಿಂದ ನಿರ್ಮಿಸಿದಂಥಾ ಪುತ್ಥಳಿಗಳಿಂದವೂ ಭೃಶಂ— ಅತ್ಯಂತವಹ ಮಾಲಾಭಿಃ—ಮಾಲೆಗಳಿಂದ ಸ್ತಬಕೈಃ — ಹೂಗೊಂಚಲುಗಳಿಂದ ಭೋ ವಿಪ್ರಾಃ !—ಎಲೆ ಋಷಿಗಳಿರಾ ! ಮಂಟಪಂ—ವಿವಾಹಮಂಟಪವು ರಚಿತಂ —ವಿರಚಿಸಲ್ಪಟ್ಟಿತ್ತು. ||೩೦||

ಅಥ—ಅನಂತರದಲ್ಲಿ ಸಃ—ಆ ವಿಶ್ವಕರ್ಮನು ಕ್ವಚಿತ್—[1]ಕೆಲವೆಡೆಯಲ್ಲಿ[1] ಚಾಮೀಕರೈಃ — ಸುವರ್ಣಂಗಳಿಂದ ಭೂಮಿಂ — ನೆಲಗಟ್ಟನು ಹೃದ್ಯಾಂ— ಮನೋಹರವಹಂಥಾದನಾಗಿ ವಿನಿರ್ಮಮೇ — ನಿರ್ಮಿಸಿದನು. ಕ್ವಚಿತ್ — [2]ಕೆಲವೆಡೆಯಲ್ಲಿ[2] ಬಂಧೂಕಸಂಕಾಶಾಂ — ಬಂದುಗೆಯ ಹೂವಿಗೆ ಸಮಾನವಹಂಥಾ ನೆಲಗಟ್ಟನು ವಿನಿರ್ಮಮೇ — ನಿರ್ಮಿಸಿದನು. ಕ್ವಚಿತ್ — [3]ಕೆಲವೆಡೆಯಲ್ಲಿ[3] ದೀಪ್ತಾಂ— ಹೊಳವುತ್ತಿದ್ದಂಥಾ ವಿದ್ರುಮಸಪ್ರಭಾಂ — ಹವಳಕ್ಕೆ ಸಮಾನವಹ ಕಾಂತಿಯುಮುಳ್ಳಂಥಾ ನೆಲಗಟ್ಟನು ವಿನಿರ್ಮಮೇ—ನಿರ್ಮಿಸಿದನು. ||೩೧||

ಕ್ವಚಿತ್ — ಕಿರಿದೆಡೆಯಲ್ಲಿ ಪದ್ಮದಲಾಕಾರಾಂ — ತಾವರೆ ಎಲೆಯ ಎಸಳ ಆಕಾರವನುಳ್ಳಂಥಾ ನೆಲಗಟ್ಟನು ನಿರ್ಮಿಸಿದನು. ಕ್ವಚಿತ್ — ಕಿರಿದೆಡೆಯಲ್ಲಿ ಇಂದ್ರಾಯುಧಸಮಪ್ರಭಾಂ — ಇಂದ್ರಚಾಪಕ್ಕೆ ಸಮಾನವಹ ಕಾಂತಿಯನುಳ್ಳಂಥಾ ನೆಲಗಟ್ಟನು ನಿರ್ಮಿಸಿದನು. ಕ್ವಚಿತ್ — ಕಿರಿದೆಡೆಯಲ್ಲಿ ನೀಲೋತ್ಪಲಾಭಾಸಾಂ ಕನ್ನೆಯ್ದಿಲ ಹೂವಿನೋಪಾದಿ ಕಾಂತಿಯುಮುಳ್ಳಂಥಾ ನೆಲಗಟ್ಟನು ನಿರ್ಮಿಸಿದನು.

1, 2, 3 ಕಿರಿದೆಡೆಯಲ್ಲಿ (ಖ)

ಅನೇಕಾಕಾರವಿನ್ಯಾಸೈಸ್ತತೋ ಧಾತ್ರೀಂ ವಿನಿರ್ಮಮೇ
ಮನಸೈವ ಯಥಾ ಬ್ರಹ್ಮಾ ವಿಶ್ವಮೇತದ್ವಿನಿರ್ಮಮೇ ||೩೪||

ಕ್ವಚಿತ್ಕಲಶವಿನ್ಯಾಸೈಃ ಕ್ವಚಿತ್ಸ್ವಸ್ತಿಕಭೂಷಿತೈಃ
ಹರಿಚಂದನಗಂಧಾಢ್ಯೈಃ ಕರ್ಪೂರೋದ್ಗಾರಗಂಧಿಭಿಃ ||೩೫||

[1] ಜಾತಿಪಾಟಲಪದ್ಮಾನಾಂ ಚಂಪಕಾನಾಂ ಸುಗಂಧಿಭಿಃ
ಆಸನೈರ್ವಿವಿಧೈಃ ಪೂತೈಃ ಚಂದ್ರಜೀಮೂತಸನ್ನಿಭೈಃ ||೩೬||

ಉದಯಾರ್ಕಸಮಾಕಾರೈಃ ಮೇರುಶೃಂಗೋಪಮೈರ್ಭೃಶಮ್
ತಮಾಲಚಂಪಕಾಭೈಶ್ಚ ಇಂದ್ರನೀಲಮಯೈಸ್ತಥಾ ||೩೭||

---

ಕ್ವಚಿತ್—ಕಿರಿದೆಡೆಯಲ್ಲಿ ನೀಲಜೀಮೂತಸಪ್ರಭಾಂ—ನೀಲಮೇಘಕ್ಕೆ ಸಮಾನವಹ ಕಾಂತಿಯನುಳ್ಳಂಥಾ ನೆಲಗಟ್ಟನು ನಿರ್ಮಿಸಿದನು. ||೩೩||

ಬ್ರಹ್ಮಾ—ಬ್ರಹ್ಮನು ಏತದ್ವಿಶ್ವಂ—ಈ ಸಮಸ್ತ ಲೋಕವನು ಮನಸೈವ—ಮನಸ್ಸಿನಿಂದವೇ ಯಥಾ—ಹೇಂಗೆ ವಿನಿರ್ಮಮೇ—ನಿರ್ಮಿಸಿದನು ತಥಾ—ಹಾಂಗೆ ತತಃ—ಆ ವಿವಾಹ ಕಾರಣವಾಗಿ ಧಾತ್ರೀಂ—ಭೂಮಿಯನು ಅನೇಕಾಕಾರವಿನ್ಯಾಸೈಃ—ನಾನಾ ಪ್ರಕಾರವಹ ನೆಲಗಟ್ಟುಗಳಿಂದ ವಿನಿರ್ಮಮೇ—ನಿರ್ಮಿಸಿದನು. ||೩೪||

ಕ್ವಚಿತ್—ಕಿರಿದೆಡೆಯಲ್ಲಿ ಕಲಶವಿನ್ಯಾಸೈಃ—ಕಳಶಂಗಳನಿರಿಸಿದಂಥಾ ಕ್ವಚಿತ್—ಕಿರಿದೆಡೆಯಲ್ಲಿ ಸ್ವಸ್ತಿಕಭೂಷಿತೈಃ—ಸ್ವಸ್ತಿಕ ಸಂಬಂಧದಿಂದ ಅಲಂಕರಿಸಲು ಪಟ್ಟಂಥಾ ಹರಿಚಂದನಗಂಧಾಢ್ಯೈಃ—ಹರಿಚಂದನವೃಕ್ಷದ ಗಂಧದ ಬಹಳತಿಕೆಯುನುಳ್ಳಂಥಾ ಕರ್ಪೂರೋದ್ಗಾರಗಂಧಿಭಿಃ—ಕರ್ಪೂರವನುಗುಳುತ್ತಂವಿದ್ದ ಪರಿಮಳಂಗಳನುಳ್ಳಂಥಾ, ||೩೫||

ಜಾತಿಪಾಟಲಪದ್ಮಾನಾಂ—ಜಾಜಿಯ ಹೂ, ಹಾದರಿಯ ಹೂ, ತಾವರೆಯ ಹೂಗಳ ಚಂಪಕಾನಾಂ—ಸಂಪಗೆಯ ಹೂಗಳ ಸುಗಂಧಿಭಿಃ—ವಾಸನೆಯನುಳ್ಳಂಥಾ ಚಂದ್ರಜೀಮೂತಸನ್ನಿಭೈಃ—ಚಂದ್ರನು ಮತ್ತು ಮೇಘಂಗಳಿಗೆ ಸಮಾನವಹ ಕಾಂತಿಯನುಳ್ಳಂಥಾ ವಿವಿಧೈಃ—ನಾನಾಪ್ರಕಾರವಹಂಥಾ ಪೂತೈಃ—[2]ಶುದ್ಧವಹಂಥಾ ಆಸನೈಃ—ಸಿಂಹಾಸನಂಗಳಿಂದ, ||೩೬||

ಉದಯಾರ್ಕಸಮಾಕಾರೈಃ—ಉದಯದ ಸೂರ್ಯಂಗೆ ಸಮಾನವಹ ಆಕಾರ

---

[1] ಜಾತಿಃ ? (ಗ) [2] ಸುದ್ದ (ಕ)

ಸಿಂಧೂರಮಯಸಂಕಾಶೈಃ ಜಪಾಕುಸುಮಸನ್ನಿಭೈಃ
ಸಂಧ್ಯಾಕಾಲನಿಭೈಶ್ಚಾನ್ಯೈಃ ದಾಡಿಮೀಕುಸುಮಪ್ರಭೈಃ ॥೩೮॥

ಹಿಮಕುಂದನಿಭೈಶ್ಚಾನ್ಯೈರ್ಮುಕ್ತಾಫಲನಿಭೈರಪಿ
ತಾರಕಾಪುಂಜಸಂಕಾಶೈಃ ಪದ್ಮನೀಲೇಂದ್ರನೀಲಜೈಃ ॥೩೯॥

ತತ್ರೈವ ಮಂಟಪೇ ದಿವ್ಯೇ ತೋಯಸ್ಥಾನಾನ್ಯಕಲ್ಪಯತ್ ॥೪೦॥

ದೀರ್ಘಿಕಾಂ ತೋಯಪೂರ್ಣಾಂ ತು ಕ್ಷೀರಪೂರ್ಣಾಂ ತಥೈವ ಚ
ದಧಿಪ್ರದಾನ್ಯನೇಕಾನಿ ಸುಧಾಸಂಪೂರಿತಾನಿ ಚ ॥೪೧॥

ವನುಳ್ಳಂಥಾ ಭೃಶಂ — ಅತ್ಯಂತವಾಗಿ ಮೇರುಶೃಂಗೋಪಮೈಃ — ಮೇರುವಿನ ಶಿಖರಕ್ಕೆ ಸಮಾನವಾಗುತ್ತಿದ್ದಂಥಾ ತಮಾಲಚಂಪಕಾಭೈಶ್ಚ — ಕದ್ವಾಳವೃಕ್ಷ ಸಂಪಗೆಯ ಹೂವಿನೋಪಾದಿಕಾಂತಿಯನುಳ್ಳಂಥಾ ತಥಾ—ಹಾಂಗೆ ಇಂದ್ರನೀಲ-ಮಯೈಃ— ಇಂದ್ರನೀಲಮಣಿಮಯವಹಂಥಾ, ॥೩೬॥

ಸಿಂಧೂರಮಯಸಂಕಾಶೈಃ — ಸಿಂಧೂರವರ್ಣದ ಕಾಂತಿಯನುಳ್ಳಂಥಾ ಜಪಾಕುಸುಮಸನ್ನಿಭೈಃ — ದಾಸಾಣದ ಹೂವಿಗೆ ಸಮಾನವಾಗುತ್ತಿದ್ದಂಥಾ ಸಂಧ್ಯಾಕಾಲನಿಭೈಃ—ಸಂಧ್ಯಾಕಾಲಕ್ಕೆ ಸಮಾನವಾಗುತ್ತಿದ್ದಂಥಾ ಅನ್ಯೈಃ—ಮತ್ತೆ ಕೆಲವು ವರ್ಣವನುಳ್ಳಂಥಾ ದಾಡಿಮೀಕುಸುಮ[1]ಪ್ರಭೈಃ—ದಾಳಿಂಬದ ಹೂವಿನೋಪಾದಿ ಕಾಂತಿಯನುಳ್ಳಂಥಾ,[1] ॥೩೮॥

ಹಿಮಕುಂದನಿಭೈಃ—ಹಿಮದ ಘಟ್ಟ ಮೊಲ್ಲೆಯ ಹೂವಿಗೆ ಸಮಾನವಾಗುತ್ತಿದ್ದಂಥಾ ಅನ್ಯೈಃ—ಮತ್ತೆ ಕೆಲವು ವರ್ಣವನುಳ್ಳಂಥಾ ಮುಕ್ತಾಫಲನಿಭೈರಪಿ —ಮುತ್ತಿನ ಕಾಂತಿಗೆ ಸಮಾನವಾಗುತ್ತಿದ್ದಂಥಾ ತಾರಕಾಪುಂಜಸಂಕಾಶೈಃ — ನಕ್ಷತ್ರದ ಸಮೂಹದೋಪಾದಿ [2]ಕಾಂತಿಯನುಳ್ಳಂಥಾ[2] ಪದ್ಮನೀಲೇಂದ್ರನೀಲಜೈಶ್ಚ — [3]ತಾವರೆನೀಲ, ಇಂದ್ರ[3]ನೀಲಂಗಳಿಂದ ಹುಟ್ಟಲುಪಟ್ಟ ಕಾಂತಿಯನುಳ್ಳಂಥಾ ಆಸನೈಶ್ಚ—ಗದ್ದುಗೆಗಳಿಂದವು ಮಂಟಪಂ ರಚಿತಂ—ವಿವಾಹಮಂಟಪವು ನಿರ್ಮಿಸಲು ಪಟ್ಟಿತ್ತು. ॥೩೯॥

ತತ್ರ ದಿವ್ಯೇ ಮಂಟಪೇ ಏವ — ಆ ದಿವ್ಯ ಮಂಟಪದಲ್ಲಿಯೇ ತೋಯ-ಸ್ಥಾನಾನಿ—ಉದಕದ ಸ್ಥಾನಂಗಳನು ಅಕಲ್ಪಯತ್—ಕಲ್ಪಿಸಿದನು. ॥೪೦॥

ತೋಯಪೂರ್ಣಾಂ—ಉದಕದಿಂದ ತುಂಬಲುಪಟ್ಟಂಥಾ ದೀರ್ಘಿಕಾಂ ತು—ಸರೋವರವನು ತಥೈವ—ಹಾಂಗೇ ಕ್ಷೀರಪೂರ್ಣಾಂ — ಕ್ಷೀರದಿಂದ ತುಂಬಲು

[1] ಲುಪ್ತ (ಕ) [2, 3] ಲುಪ್ತ (ಕ)

ಘೃತಪೂರ್ಣಾ ಮಹಾನದ್ಯೋ ರತ್ನಸೋಪಾನಮಂಡಿತಾಃ
ವೃಕ್ಷಾಂಶ್ಚ [1]ಕಾಮಿಕಾ[1]ನ್ದಿವ್ಯಾನ್ ದೀರ್ಘಿಕಾಣಾಂ ತಟೇ ತಟೇ ||೪೨||
ಅಸೃಜತ್ ಕ್ರೀಡನಾರ್ಥಾಯ ಸದಾ ಪುಷ್ಪಫಲಾನ್ವಿತಾನ್
ಭಕ್ಷ್ಯೈರ್ನಾನಾವಿಧೈರ್ದಿವ್ಯೈಃ ಫಲಿತಾನ್ಮುನಿಪುಂಗವಾಃ ||೪೩||

ಕದಲೀಷಂಡಮಧ್ಯೇ ತು ತಮಾಲಗಹನೇಷ್ವಪಿ
ಕ್ರೀಡಾವಾಪ್ಯಃ ಸುಶೋಭಾಢ್ಯಾಃ ತಥೈವಾಶೋಕಸಂಕುಲೇ ||೪೪||

ದೀರ್ಘಿಕಾಣಾಂ ತಟೇ ರಮ್ಯೇ ತರೂಣಾಂ ಚಿತ್ರಶಾಖಿನಾಮ್
[2]ಡೋ[2]ಲಾಶ್ಚ ಬದ್ಧಯಾಮಾಸ ಮುಕ್ತಾದಾಮಭಿರುಜ್ಜ್ವಲೈಃ ||೪೫||

ಪಟ್ಟಂಥಾ ಸರೋವರವನು, ದಧಿಪ್ರದಾನಿ—ಮೊಸರು ಕೊಡುವಂಥಾ ಅನೇಕಾನಿ ಅನೇಕ ಕೊಳಂಗಳನು, ಸುಧಾಸಂಪೂರಿತಾನಿ ಚ—ಅಮೃತದಿಂದ ತುಂಬಲುಪಟ್ಟಂಥ ಕೊಳಂಗಳನು, ಘೃತಪೂರ್ಣಾಃ—ತುಪ್ಪದಿಂದ ತುಂಬಲುಪಟ್ಟಂಥಾ ರತ್ನಸೋಪಾನ ಮಂಡಿತಾಃ—ರತ್ನಂಗಳ ಸೋಪಾನದಿಂದ ಅಲಂಕರಿಸಲುಪಟ್ಟಂಥಾ ಮಹಾನದ್ಯಃ—ದೊಡ್ಡಿಹ ಹೊಳೆಗಳನು, ದೀರ್ಘಿಕಾಣಾಂ—ದೊಡ್ಡಿಯ ಕೊಳಂಗಳ ತಟೇ ತಟೇ —[3]ದಡ ದಡ[3]ದಲ್ಲಿ ಸದಾ—ಆವಾಗವೂ ಪುಷ್ಪಫಲಾನ್ವಿತಾನ್—ಪುಷ್ಪ ಫಲಂಗಳೊಡನೆ ಕೂಡಿನಂಥಾ ದಿವ್ಯಾನ್ — ಒಪ್ಪುತ್ತಿದ್ದಂಥಾ ಕಾಮಿಕಾನ್ — ಬಯಸಿದುದ ಕೊಡುವಂಥಾ ನಾನಾವಿಧೈಃ— ನಾನಾ ಪ್ರಕಾರವಹಂಥಾ ಭಕ್ಷ್ಯೈಃ — ಭಕ್ಷಂಗಳೊಡನೆ ಫಲಿತಾನ್ — ಫಲಂಗಳನುಳ್ಳಂಥಾ ವೃಕ್ಷಾಂಶ್ಚ — ವೃಕ್ಷಂಗಳನು ಕ್ರೀಡನಾರ್ಥಾಯ — ಸಂಖಿಸಲೋಸ್ಕರ ಭೋ ಮುನಿಪುಂಗವಾಃ !—ಎಲೆ ಋಷಿ ಶ್ರೇಷ್ಠರುಗಳಿರಾ ! ಅಸೃಜತ್—ನಿರ್ಮಿಸಿದನು. ||೪೨-೪೩||

ಕದಲೀಷಂಡಮಧ್ಯೇ ತು — ಬಾಳೆಯ ವನಸಮೂಹದ ಮಧ್ಯದಲ್ಲಿಯು ತಮಾಲಗಹನೇಷ್ವಪಿ — ಕದ್ದಾಳವೃಕ್ಷಂಗಳ ವನಂಗಳಲ್ಲಿಯು ತಥೈವ — ಹಾಂಗೆ ಅಶೋಕಸಂಕುಲೇ—ಅಶೋಕವೃಕ್ಷಂಗಳ[4][ಗುಂಪಿನಲ್ಲಿಯು][4] ಸುಶೋಭಾಢ್ಯಾಃ— ಅತಿ ಮನೋಹರವಹಂಥಾ ಕ್ರೀಡಾವಾಪ್ಯಃ — ಜಲಕ್ರೀಡೆಯ ಕೊಳಂಗಳನು ಅಸೃಜತ್—ನಿರ್ಮಿಸಿದನು. ||೪೪||

ದೀರ್ಘಿಕಾಣಾಂ—ಕೊಳಂಗಳ ರಮ್ಯೇ—ಒಪ್ಪುತ್ತಿದ್ದಂಥಾ ತಟೇ — ದಡ

---

[1] ಕಾಮಿತಾ(ಘ) [2] ದೋ (ಘ)

[3] ತಡಿ ತಡಿಯಲ್ಲಿ (ಖ) [4] ಮೊದಲಲ್ಲಿಯೂ (ಕ ಖ) ? [ಮೊತ್ತದಲ್ಲಿಯು]

ರಮಣೀಯಾನಿ ದಿವ್ಯಾನಿ ಮನಸ್ತುಷ್ಟಿಕರಾಣಿ ಚ
ಉದ್ಯಾನವನಷಂಡಾನಿ ಸ್ಥಾನೇ ಸ್ಥಾನೇ ಹ್ಯಕಲ್ಪಯತ್ ||೪೭||

ತ್ರಿಲೋಕತಿಲಕೇ ತಸ್ಮಿನ್ ಹೇಮಪೀಠಸ್ಯ ಮಧ್ಯಗಾಮ್
ಸಿಂಹೈಶ್ಚ ವಿಧೃತಾಂ ಶ್ವೇತೈಃ ಸಹಸ್ರದಲಮಂಡಿತೈಃ ||೪೭||
ಪಾರಿಜಾತದ್ರುಮಾಣಾಂ ಚ ಮಂಜರೀಭಿರಲಂಕೃತಾಃ
ಇಂದ್ರನೀಲಮಯೀಂ ವೇದಿಂ ಚಾರುಸೋಪಾನಭೂಷಿತಾಮ್ ||೪೮||
ಶತಯೋಜನವಿಸ್ತೀರ್ಣಾಂ ಸ್ತಂಭೈಶ್ಚ ಕಲಶಾನ್ವಿತಾಮ್ ||೪೯||

ದಲ್ಲಿ ಚಿತ್ರಶಾಖಿನಾಂ—ನಾನಾ ಪ್ರಕಾರವಹ ಕೊಂಬೆ (ಕೊಂಬು ?)ಗಳನುಳ್ಳಂಥಾ ತರೂಣಾಂ—ವೃಕ್ಷಂಗಳಿಗೆ ಉಜ್ಜ್ವಲೈಃ—ಒಪ್ಪುತ್ತಿದ್ದಂಥಾ ಮುಕ್ತಾದಾಮಭಿಃ ಮುತ್ತು ತೆತ್ತಿಸಿದಂಥಾ ಸರಪಣಿಗಳಿಂದ ಡೋಲಾಶ್ಚ — ಉಯ್ಯಾಲೆಗಳನು ಬದ್ಧಯಾಮಾಸ—ಕಟ್ಟಿದನು. ||೪೫||

ರಮಣೀಯಾನಿ—ಮನೋಹರವಹಂಥಾ ಮನಸ್ತುಷ್ಟಿಕರಾಣಿ — ಮನಸ್ಸಿಗೆ ಸಂತೋಷವ ಮಾಡುತ್ತಿದ್ದಂಥಾ ದಿವ್ಯಾನಿ—ದೇವತಾಸಂಬಂಧವಹಂಥಾ ಉದ್ಯಾನ-ವನಷಂಡಾನಿ ಚ—ಉದ್ಯಾನವನಂಗಳ ಮೊತ್ತಂಗಳನು ಸ್ಥಾನೇ ಸ್ಥಾನೇ — ಸ್ಥಾನ ಸ್ಥಾನದಲ್ಲಿ ಅಕಲ್ಪಯತ್ ಹಿ—ಕಲ್ಪಿಸಿದನಲಾ. ||೪೬||

ತ್ರಿಲೋಕತಿಲಕೇ— ಮೂರು ಲೋಕಕ್ಕೆ ತಿಲಕವಹಂಥಾ ತಸ್ಮಿನ್ — ಆ ವಿವಾಹ ಮಂಟಪದಲ್ಲಿ ಹೇಮಪೀಠಸ್ಯ— ಸುವರ್ಣದ ಗದ್ದುಗೆಯ ಮಧ್ಯಗಾಂ—ಮಧ್ಯವನೆಯ್ದಿದಂಥಾ ಸಿಂಹೈಶ್ಚ—ಸಿಂಹಂಗಳ ರೂಪುಗಳಿಂದವೂ ಶ್ವೇತೈಶ್ಚ—ಬಿಳಿದಹಂಥಾ ಸಹಸ್ರದಳಮಂಡಿತೈಃ — ಸಾವಿರ ಎಸಳ ತಾವರೆಗಳ ಅಲಂಕಾರಂಗಳಿಂದವೂ ವಿಧೃತಾಂ — ಧರಿಸಲುಪಟ್ಟಂಥಾ ಪಾರಿಜಾತದ್ರುಮಾಣಾಂ—ಪಾರಿಜಾತವೃಕ್ಷಂಗಳ ಮಂಜರೀಭಿಶ್ಚ—ಹೂಗೊಂಚಲುಗಳಿಂದವೂ ಅಲಂಕೃತಾಂ — ಅಲಂಕರಿಸಲುಪಟ್ಟಂಥಾ ಚಾರುಸೋಪಾನಭೂಷಿತಾಂ — ಒಪ್ಪುತ್ತಂಪಿದ್ದ ಸೋಪಾನಗಳಿಂದ ಅಲಂಕರಿಸಲುಪಟ್ಟಂಥಾ ಸ್ತಂಭೈಶ್ಚ— [1]ಸ್ತಂಭಂಗಳಿಂದವೂ ಕಲಶಾನ್ವಿತಾಂ—ಕಲಶಂಗಳಿಂದ ಕೂಡಿದಂಥಾ ಇಂದ್ರನೀಲಮಯೀಂ—ಇಂದ್ರನೀಲಮಯವಹಂಥಾ ಶತಯೋಜನವಿಸ್ತೀರ್ಣಾಂ — ನೂರುಗಾವುದ ವಿಸ್ತೀರ್ಣವಹಂಥಾ ವೇದಿಂ—ವಿವಾಹದ ಜಗಲಿಯನು ವಿನಿರ್ಮಮೇ—ನಿರ್ಮಿಸಿದನು ||೪೭-೪೮-೪೯||

1 ಕಂ (ಖ)

ಕೋಟ್ಯನೇಕಾಪ್ಸರಸಶ್ಚ ರತ್ನಜಾ ದಿವ್ಯರೂಪಿಣೀಃ
ಪೀನೋರುಜಘನಾಸ್ತಾಶ್ಚ ಪೀನೋನ್ನತಪಯೋಧರಾಃ ||೫೦||
ಚಾಮರಾಗ್ರಕರಾಸ್ತಾಸ್ತು ಹಾರಾವಲಿವಿಚಿತ್ರಿತಾಃ
ವೀಣಾವೇಣುಕರಾಶ್ಚಾನ್ಯಾಃ ಕಾಂಚೀಗುಣವಿರಾಜಿತಾಃ ||೫೧||
ಚಂಚಲಾಯತನೇತ್ರಾಶ್ಚ ತಿಲಕಾಲಕಮಂಡಿತಾಃ
ಮಧ್ಯೇ ಕ್ಷಾಮಾಃ ಸುಬಿಂಬೋ[1]ಷ್ಠಾಃ[1] ಕಮಲೋತ್ಪಲಪಾಣಿನೀಃ||೫೨ |
ಅನೇಕಾಕಾರವಿನ್ಯಾಸೈಃ ನಿರ್ಮಮೇ ತಾಃ ಪೃಥಕ್ ಪೃಥಕ್ ||೫೩||

*ಏವಂ ಹಿ ದಿವ್ಯೈ ಸ್ಸುರಸುಂದರೀಭಿಃ
ನಾನಾಪ್ರಯೋಗೈರ್ವಿವಿಧೈಶ್ಚರಿತ್ರೈಃ ।

---

ರತ್ನಜಾಃ — ರತ್ನಂಗಳಿಂದ ನಿರ್ಮಿಸಲುಪಟ್ಟಂಥಾ ದಿವ್ಯರೂಪಿಣೀಃ — ಮನೋಹರವಹ ರೂಪನುಳ್ಳಂಥಾ ಪೀನೋರುಜಘನಾಃ — ದೊಡ್ಡಿತ್ತಾಗಿ ಉನ್ನತವಹ ಬಳದೊಡೆ [ಜಘನ(ಖ)]ಗಳನುಳ್ಳಂಥಾ ಪೀನೋನ್ನತಪಯೋಧರಾಃ— ತೋರವಾಗಿ ಉನ್ನತವಾಗಿಹ ಸ್ತನಂಗಳನುಳ್ಳಂಥಾ ಚಾಮರಾಗ್ರಕರಾಃ —ಚಾಮರಂಗಳೇ ತುದಿ ಹಸ್ತದಲ್ಲಿ ಉಳ್ಳಂಥಾ, ಹಾರಾವಲಿವಿಚಿತ್ರಿತಾಃ—ಹಾರಂಗಳ ಪಂಕ್ತಿಯಿಂದ ಅತ್ಯಂತ ಚಿತ್ರಿಸಲುಪಟ್ಟಂಥಾ ವೀಣಾವೇಣುಕರಾಶ್ಚ — ವೀಣೆಕೊಳಲುಗಳೇ ಹಸ್ತಂಗಳಲ್ಲಿ ಉಳ್ಳಂಥಾ ಅನ್ಯಾಃ—ಮತ್ತೆ ಕೆಲಬರಹಂಥಾ ಕಾಂಚೀಗುಣವಿರಾಜಿತಾಃ—ಕಾಂಚಿ ದಾಮದಿಂದ ಒಪ್ಪುತ್ತಿದ್ದಂಥಾ ಚಂಚಲಾಯತನೇತ್ರಾಶ್ಚ — ಚಂಚಲಿಸುತ್ತಂನಿಹ ವಿಶಾಲನೇತ್ರೆಯರಹಂಥಾ ತಿಲಕಾಲಕಮಂಡಿತಾಃ — ನೊಸಲ ತಿಲಕ ಕುರುಳು ಗೂದಲುಗಳಿಂದ ಒಪ್ಪುತ್ತಂವಿದ್ದಂಥಾ ಮಧ್ಯೇ—ನಡುವಿನಲ್ಲಿ ಕ್ಷಾಮಾಃ — ಸಣ್ಣ ವನುಳ್ಳಂಥಾ ಸುಬಿಂಬೋಷ್ಠಾಃ — ಒಪ್ಪುತ್ತಂವಿಪ್ಪ ಬಿಂಬಾಧರೆಯರಹಂಥಾ ಕಮಲೋತ್ಪಲಪಾಣಿನೀಃ — ತಾವರೆ ನೈದಿಲುಗಳೇ ಹಸ್ತಂಗಳಲ್ಲಿ ಉಳ್ಳಂಥಾ ತಾಸ್ತಾಶ್ಚ—ಆ ಆ ಕೋಟ್ಯನೇಕಾಪ್ಸರಸಶ್ಚ — ಅನೇಕಕೋಟಿ ಅಪ್ಸರಸ್ತ್ರೀಯರುಗಳನು ಪೃಥಕ್ ಪೃಥಕ್—ಬೇರೆ ಬೇರೆ ತಾಸ್ತು—ಅವರುಗಳನು ಅನೇಕಾಕಾರವಿನ್ಯಾಸೈಃ—ನಾನಾಪ್ರಕಾರವಹಂಥಾ ರೂಪುಗಳ ವಿಲಾಸಂಗಳಿಂದ ನಿರ್ಮಮೇ— ನಿರ್ಮಿಸಿದನು. ಈ ಶ್ಲೋಕಂಗಳು ಕುಳಕಂಗಳು. ||೫೩||

ಏವಂ — ಈ ಪ್ರಕಾರದಲ್ಲಿ ಸುರಸುಂದರೀಭಿಃ — ದೇವಸ್ತ್ರೀಯರುಗಳಿಂದ ದಿವ್ಯೈಃ — ದೇವತಾಸಂಬಂಧವಹಂಥಾ ವಿವಿಧೈಃ — ನಾನಾಪ್ರಕಾರವಹಂಥಾ

---

[1] ಷ್ಠೀಃ (ಗ) * ಉಪಜಾತಿ ವೃತ್ತಮ್

ಮನೋಭಿರಾಮೈರ್ನಯನಾಭಿರಾಮೈಃ
ಯುಕ್ತಾಂ ತು ವೇದಿಂ ತ್ವರಿತಂ ಚಕಾರ ||೫೪||

ಮಂಟಪಂ ನಿರ್ಮಿತಂ ಶ್ರುತ್ವಾ ಶಂಕರೋ ವಿಶ್ವಕರ್ಮಣಾ
ಶೈಲಾದಿಮಬ್ರವೀದ್ದೇವೋ ವಿಶ್ವೇಶೋ ವಿಶ್ವಪೂಜಿತಃ ||೫೫||

ಶ್ರೀ ಭಗವಾನುವಾಚ

ಹಿತಾರ್ಥಂ ಸರ್ವದೇವಾನಾಮಸ್ಮಾಕಂ ಚ ವಿಶೇಷತಃ
ವಿವಾಹಯಜ್ಞ ಆರಬ್ಧೋ ನಗರಾಜೇನ ಧೀಮತಾ ||೫೬||

[1]ದಾನಾರ್ಥಮದ್ರಿ[1]ಕನ್ಯಾಯಾಃ ಪ್ರಸ್ಥಿತೋ ಹಿಮವಾನ್ ಸ್ವಯಮ್
ಅಹಂ ತತ್ರ ಗಮಿಷ್ಯಾಮಿ ಸುರೈರ್ಬ್ರಹ್ಮಾದಿಭಿಸ್ಸಹ ||೫೭||

ಚರಿತ್ರೈಃ—ಚಾರಿತ್ರಂಗಳಿಂದ ಮನೋಭಿರಾಮೈಃ—ಮನಸ್ಸಿಂಗೆ ಆನಂದವಹಂಥಾ ನಯನಾಭಿರಾಮೈಃ—ನಯನಂಗಳಿಗೆ ಸಂತೋಷವಹಂಥಾ ನಾನಾಪ್ರಯೋಗೈಃ—ನೆಲಗಟ್ಟು ಮುಂತಾದ ನಾನಾ ಪ್ರಯೋಗಂಗಳಿಂದ ಯುಕ್ತಾಂ — ಕೂಡಿದಂಥಾ ವೇದಿಂ ತು — ವಿವಾಹದ ಜಗಲಿಯನು ತ್ವರಿತಂ — ಬೇಗದಲ್ಲಿ ಚಕಾರ ಹಿ— ಮಾಡಿದನಲಾ. ||೫೪||

ವಿಶ್ವಕರ್ಮಣಾ — ವಿಶ್ವಕರ್ಮನಿಂದ ನಿರ್ಮಿತಂ — ನಿರ್ಮಿಸಲುಪಟ್ಟಂಥಾ ಮಂಟಪಂ—ಮಂಟಪವನು ಶ್ರುತ್ವಾ—ಕೇಳಿ ದೇವಃ—ಪ್ರಕಾಶಸ್ವರೂಪನಹಂಥಾ ವಿಶ್ವೇಶಃ— ವಿಶ್ವಕ್ಕೆ ಒಡೆಯನಹಂಥಾ ವಿಶ್ವಪೂಜಿತಃ — ಸಮಸ್ತ ಲೋಕದಿಂದ ಪೂಜಿಸಿಕೊಳಲುಪಟ್ಟಂಥಾ ಶಂಕರಃ—ಪರಮೇಶ್ವರನು ಶೈಲಾದಿಂ—ನಂದಿಕೇಶ್ವರನನು ಕುರಿತು ಅಬ್ರವೀತ್—ನುಡಿದನು. ||೫೫||

ಶ್ರೀ ಭಗವಾನುವಾಚ — ಷಡ್ಗುಣೈಶ್ವರ್ಯಸಂಪನ್ನನಹಂಥಾ ಶ್ರೀ ಮಹಾದೇವನು ನಿರೂಪಿಸುತ್ತಂವಿದ್ದಾನು.

ಸರ್ವದೇವಾನಾಂ — ಸಮಸ್ತ ದೇವರ್ಕಳ ಹಿತಾರ್ಥಂ — ಹಿತಕ್ಕೋಸ್ಕರ ಅಸ್ಮಾಕಂ ಚ—ನಮಗೆ[2]ಯೂ[2] ವಿಶೇಷತಃ— ವಿಶೇಷವಹೆ ಪ್ರೀತಿನಿಮಿತ್ತವಾಗಿ ಧೀಮತಾ—ವಿಚಕ್ಷಣನಹಂಥಾ ನಗರಾಜೇನ — ಗಿರಿರಾಜನಿಂದ ವಿವಾಹಯಜ್ಞ —ವಿವಾಹ ಯಜ್ಞವು ಆರಬ್ಧಃ—ಪ್ರಾರಂಭಿಸಲುಪಟ್ಟಿತ್ತು. ||೫೬||

ಅದ್ರಿಕನ್ಯಾಯಾಃ — ಪಾರ್ವತೀದೇವಿಯ ದಾನಾರ್ಥಂ — ಕೊಡಲೋಸ್ಕರ

[1] ದಾನಾರ್ಥಮದ್ರಿಃ (ಖ) [2] ವೂ (ಕ)

ತ್ವಮಿಹಾವಾಹಯ ಸುರಾನ್ ಕಾಲಾಗ್ನ್ಯಾದೀನ್ದ್ವಿಜೋತ್ತಮಾನ್
ದ್ವೀಪಾಂಶ್ಚ ಸಾಗರಾಂಶ್ಚೈವ ಪರ್ವತಾಂಶ್ಚ ನದೀಸ್ತಥಾ ||೫೮||

ಮಂಟಪಂ ನಿರ್ಮಿತಂ ತತ್ರ ವಿಚಿತ್ರಂ ವಿಶ್ವಕರ್ಮಣಾ
ತತ್ರ ತಿಷ್ಠತ್ಯುಮಾದೇವೀ ಮಮ ಧ್ಯಾನಪರಾಯಣಾ ||
ವಿದ್ಯುಲ್ಲತೇವ ಭಾಸ್ವಂತೀ ಚಂದ್ರಕೋಟಿನಿಭಾನನಾ ||೫೯||

ಏವಮುಕ್ತೋ ಮಹೇಶೇನ ನಂದೀ ಸೂರ್ಯಾಯುತಪ್ರಭಃ
ನತ್ವಾ ವಿಶ್ವೇಶ್ವರಂ ಶಂಭುಂ ಧ್ಯಾನಾರೂಢಸ್ತದಾಽಭವತ್ ||೬೦||

---

ಹಿಮವಾನ್— ಹಿಮವತ್ಪರ್ವತನು ಸ್ವಯಂ — ತಾನೇ ಪ್ರಸ್ಥಿತಃ — ಪಯಣವಾದನು. ಅಹಂ—ನಾನು ತತ್ರ—ಅಲ್ಲಿಗೆ ಬ್ರಹ್ಮಾದಿಭಿಃ — ಬ್ರಹ್ಮಮೊದಲಾದಂಥಾ ಸುರೈಸ್ಸಹ—ದೇವರ್ಕಳೊಡನೆ ಗಮಿಷ್ಯಾಮಿ—ಎಯ್ದುವೆನು. ||೫೭||

ತ್ವಂ—ನೀನು ಇಹ—ಇಲ್ಲಿ ಸುರಾನ್—ದೇವರ್ಕಳನು ಕಾಲಾಗ್ನ್ಯಾದೀನ್ — ಕಾಲಾಗ್ನಿ ಮೊದಲಾದಂಥಾ ಗಣೇಶ್ವರರುಗಳನು ದ್ವಿಜೋತ್ತಮಾನ್ ಬ್ರಾಹ್ಮಣೋತ್ತಮರಹಂಥಾ ಋಷಿಗಳನು ದ್ವೀಪಾಂಶ್ಚ — ದ್ವೀಪಂಗಳನು ಸಾಗರಾಂಶ್ಚೈವ—ಸಮುದ್ರಂಗಳನು ಪರ್ವತಾಂಶ್ಚ—ಪರ್ವತಂಗಳನು ತಥಾ — ಹಾಂಗೆ ನದೀಃ—ನದಿಗಳನು ಆವಾಹಯ—ನೆನೆ. ||೫೮||

ಯತ್ರ—ಆವನಾನೊಬ್ಬ ಹಿಮವತ್ಪರ್ವತನಲ್ಲಿ ವಿಶ್ವಕರ್ಮಣಾ—ವಿಶ್ವಕರ್ಮನಿಂದ ಮಂಟಪಂ—ವಿವಾಹಮಂಟಪವು ವಿಚಿತ್ರಂ—ಆಶ್ಚರ್ಯವಾಗಿ ನಿರ್ಮಿತಂ —ನಿರ್ಮಿಸಲುಪಟ್ಟಿತ್ತು. ತತ್ರ — ಆ ಮಂಟಪದಲ್ಲಿ ಲತಾ ವಿದ್ಯುದಿವ — ಬಳ್ಳಿ ಮಿಂಚಕ್ಕೈಯೆಂಬ ಹಾಂಗೆ ಭಾಸ್ವಂತೀ — ಬೆಳಗುತ್ತಿದ್ದಂಥಾ ಚಂದ್ರಕೋಟಿನಿಭಾನನಾ — ಕೋಟಿಚಂದ್ರರಿಗೆ ಸಮಾನವಹ ಮುಖವನುಳ್ಳಂಥಾ ಉಮಾದೇವೀ —ಪಾರ್ವತೀದೇವಿ ಮಮಧ್ಯಾನಪರಾಯಣಾ — ಎನ್ನ ಧ್ಯಾನದಲ್ಲಿ ತಾತ್ಪರ್ಯವನುಳ್ಳಾಯಕನಾಗಿ ತಿಷ್ಠತಿ—ಇರುತ್ತಿದ್ದಾಳು. ||೫೯||

ಮಹೇಶೇನ—ಪರಮೇಶ್ವರನಿಂದ ಏವಂ — ಈ ಪ್ರಕಾರದಲ್ಲಿ ಉಕ್ತಃ — ನುಡಿಯಲುಪಟ್ಟಂಥಾ ಸೂರ್ಯಾಯುತಪ್ರಭಃ — ಹತ್ತು ಸಾವಿರ ಸೂರ್ಯರ ಪ್ರಕಾಶವನುಳ್ಳಂಥಾ ನಂದೀ—ನಂದಿಕೇಶ್ವರನು ವಿಶ್ವೇಶ್ವರಂ—ವಿಶ್ವೇಶ್ವರನಹಂಥಾ ಶಂಭುಂ—ಪರಮೇಶ್ವರನನು ನತ್ವಾ—ನಮಸ್ಕರಿಸಿ ತದಾ—ಆಗ ಧ್ಯಾನಾರೂಢಃ — ಧ್ಯಾನಾರೂಢನು ಅಭವತ್—ಆದನು. ||೬೦||

ಧ್ಯಾತಸ್ತೇನ ಸಮಾಯಾತಃ ಕಾಲಾಗ್ನಿರ್ವಿಶ್ವದಾಹಕಃ
ರುದ್ರೈಃ ಪರಿವೃತೋ ದೇವೈಃ ಕೋಟಿಕೋಟಿಗಣೇಶ್ವರೈಃ ||೬೧||

ತತೋಽಬ್ರವೀತ್ಸ ಕಾಲಾಗ್ನಿಃ ಸರ್ವಜ್ಞಂ ನಂದಿಕೇಶ್ವರಮ್
ಕಿಮರ್ಥಮಹಮಾಹೂತೋ ದೇವದೇವೇನ ಶಂಭುನಾ ||೬೨||

ಉಪಸ್ಥಿತೋ ವಾ ಪ್ರಳಯಃ ಸಂಹರಿಷ್ಯಾಮಿ ತತ್ಕ್ಷಣಾತ್
ಏವಮುಕ್ತಸ್ತದಾ ತೇನ ಶೈಲಾದಿಸ್ತಮಥಾಬ್ರವೀತ್ ||೬೩||

ಶ್ರೀನಂದಿಕೇಶ್ವರ ಉವಾಚ
ಪ್ರಲಯಾರ್ಥಂ ನ ಚಾಹೂತಸ್ತ್ವಂ ವಿಶೇಷೇಣ ಶಂಭುನಾ
ಗ್ರಹೀಷ್ಯತಿ ಗಿರೇಃ ಪುತ್ರೀಂ ಪತ್ನೀತ್ವೇನ ಮಹೇಶ್ವರಃ ||೬೪||

---

ತೇನ—ಆ ನಂದಿಕೇಶ್ವರನಿಂದ ಧ್ಯಾತಃ—ಧ್ಯಾನಿಸಲುಪಟ್ಟಂಥಾ ವಿಶ್ವದಾಹಕಃ — ವಿಶ್ವವನು ದಹಿಸುವಂಥಾ ಕಾಲಾಗ್ನಿಃ — ಕಾಲಾಗ್ನಿರುದ್ರನು ರುದ್ರೈಃ = ರುದ್ರರುಗಳಿಂದ ದೇವೈಃ — ದೇವರ್ಕಳಿಂದ ಕೋಟಿಕೊಟಿಗಣೇಶ್ವರೈಃ— ಕೋಟಾನುಕೋಟಿಗಣೇಶ್ವರರಿಂದ ಪರಿವೃತಃ — ಮುಸುಕಲ-ಪಟ್ಟಾತನಾಗಿ ಸಮಾಯಾತಃ—ಬಂದನು. ||೬೧||

ತತಃ—ಅನಂತರದಲ್ಲಿ ಸ ಕಾಲಾಗ್ನಿಃ = ಆ ಕಾಲಾಗ್ನಿರುದ್ರನು ಕಿಮರ್ಥಂ = ಏನು ಕಾರಣ ದೇವದೇವೇನ = ದೇವದೇವನಹಂಥಾ ಶಂಭುನಾ = ಪರಮೇಶ್ವರ ನಿಂದ ಅಹಂ = ನಾನು ಆಹೂತಃ = ಕರೆಯಲ್ಪಟ್ಟಾತನೆಂದು ಸರ್ವಜ್ಞಂ = ಸರ್ವಜ್ಞನಹಂಥಾ ನಂದಿಕೇಶ್ವರಂ = ನಂದಿಕೇಶ್ವರನನು ಕುರಿತು ಅಬ್ರವೀತ್ = ನುಡಿದನು. ||೬೨||

ಪ್ರಳಯಃ = ಪ್ರಳಯಕಾಲವು ಉಪಸ್ಥಿತೋ ವಾ = ಬಂ [ದಿದ್ದಿ]ತೋ [ಬಂದು ತೋ(ಕ)], ತತ್ = ಆ ಜಗತ್ತನು ಕ್ಷಣಾತ್ = ಕ್ಷಣಮಾತ್ರದ ದೆಸೆಯಿಂದ ಸಂಹರಿಷ್ಯಾಮಿ = ಸಂಹರಿಸೇ[ಸೀ(ಕ)]ನು. ಏವಂ = ಈ ಪ್ರಕಾರದಲ್ಲಿ ತದಾ = ಆಗ ತೇನ = ಆ ಕಾಲಾಗ್ನಿರುದ್ರನಿಂದ ಉಕ್ತಃ = ನುಡಿಯಲುಪಟ್ಟಂಥಾ ಶೈಲಾದಿಃ = ನಂದಿಕೇಶ್ವರನು ಅಥ = ಅನಂತರದಲ್ಲಿ ತಂ = ಆ ಕಾಲಾಗ್ನಿ ರುದ್ರನನು ಕುರಿತು ಅಬ್ರವೀತ್ = ನುಡಿದನು. ||೬೩||

ಶ್ರೀನಂದಿಕೇಶ್ವರ ಉವಾಚ = ಶ್ರೀ ನಂದಿಕೇಶ್ವರನು ನುಡಿದನು.

ಪ್ರಳಯಾರ್ಥಂ = ಪ್ರಳಯವ ಮಾಡಲೋಸ್ಕರ ಶಂಭುನಾ = ಪರಮೇಶ್ವರ ನಿಂದ ತ್ವಂ = ನೀನು ವಿಶೇಷೇಣ ಚ = ವಿಶೇಷದಿಂದವು ನಾಹೂತಃ = ಕರೆಯು

ತದರ್ಥಂ ತ್ವಮಿಹಾಹೂತಾ ಬ್ರಹ್ಮಾದ್ಯಾಶ್ಚ ದಿವೌಕಸಃ
ನಂದಿನೋ ವಚನಂ ಶ್ರುತ್ವಾ ಕಾಲಾಗ್ನಿರಿದಮಬ್ರವೀತ್ ॥೬೫॥

ಕಾಲಾಗ್ನಿರುವಾಚ

ದ್ರಷ್ಟುಕಾಮಾ ವಯಂ ಸರ್ವೇ ಬ್ರಹ್ಮಾದ್ಯಾಶ್ಶೂಲಪಾಣಿನಮ್
ಶೀಘ್ರಂ ದರ್ಶಯ ಶೈಲಾದೇ ನಿವೃತ್ತಾಸ್ಸ್ಮ ಯಥಾ ವಯಮ್॥೬೬॥

ವಿಜ್ಞಾಪಯ ಮಹಾದೇವಂ ಬ್ರಹ್ಮಾದ್ಯಾಶ್ಚಾಗತಾ ಇತಿ
ಸರ್ವೇ ತದ್ಧ್ಯಾನನಿರತಾಃ ಸರ್ವೇ ತದ್ದರ್ಶನೋತ್ಸುಕಾಃ ॥೬೭॥

---

ಲುಪಟ್ಟುದಿಲ್ಲ. ಮಹೇಶ್ವರಃ=ಶಿವನು ಗಿರೇಃ=ಹಿಮವತ್ಪರ್ವತನ ಪುತ್ರೀಂ= ಕುಮಾರಿಯನು ಪತ್ನೀತ್ವೇನ=ಸ್ತ್ರೀಯಹತನದಿಂದ ಗ್ರಹೀಷ್ಯತಿ= ಪರಿಗ್ರಹಿಸುವನು. ॥೬೪॥

ತದರ್ಥಂ=ಆ ಪರಮೇಶ್ವರನ ವಿವಾಹಕ್ಕೋಸ್ಕರ ತ್ವಂ=ನೀನು ಬ್ರಹ್ಮಾದ್ಯಾಃ =ಬ್ರಹ್ಮ ಮೊದಲಾದಂಥಾ ದಿವೌಕಸಶ್ಚ=ದೇವರ್ಕಳೂ ಇಹ=ಇಲ್ಲಿ ಆಹೂತಾಃ =ಕರೆಯಲುಪಟ್ಟವರುಗಳು. ನಂದಿನಃ=ನಂದಿಕೇಶ್ವರನ ವಚನಂ=ವಾಕ್ಯವನು ಶ್ರುತ್ವಾ=ಕೇಳಿ ಕಾಲಾಗ್ನಿಃ = ಕಾಲಾಗ್ನಿ ರುದ್ರನು ಇದಂ = ಈ ವಾಕ್ಯವನು ಅಬ್ರವೀತ್=ನುಡಿದನು. ॥೬೫॥

[ಕಾಲಾಗ್ನಿರುವಾಚ=ಕಾಲಾಗ್ನಿರುದ್ರನು ನುಡಿದನು.]

ಬ್ರಹ್ಮಾದ್ಯಾಃ=ಬ್ರಹ್ಮನೇ ಮೊದಲಾದಂಥಾ ವಯಂ ಸರ್ವೇ=ನಾವೆಲ್ಲರೂ ಶೂಲಪಾಣಿನಂ = ಪರಮೇಶ್ವರನನು ದ್ರಷ್ಟುಕಾಮಾಃ = ನೋಡಲಿಚ್ಛೆಯನುಳ್ಳವರುಗಳು ಭೋ ಶೈಲಾದೇ!=ಎಲೆ ನಂದಿಕೇಶ್ವರನೇ! ವಯಂ=ನಾವು ಯಥಾ =ಹೇಂಗೆ ನಿರ್ವೃತ್ತಾಃ=ಸುಖವನುಳ್ಳವರುಗಳು ಸ್ಮಃ = ಅಹೆವು ತಥಾ = ಹಾಂಗೆ ಶೀಘ್ರಂ=ಬೇಗ ದರ್ಶಯ=ತೋರಿಸು. ॥೬೬॥

ಬ್ರಹ್ಮಾದ್ಯಾಶ್ಚ — ಬ್ರಹ್ಮಮೊದಲಾದಂಥಾವರುಗಳು ಆಗತಾ ಇತಿ—ಬಂದಿದ್ದಾರು ಎಂದು ಹೀಂಗೆ ಮಹಾದೇವಂ = ಮಹಾದೇವ (ಶಿವ)ನನು ಕುರಿತು ವಿಜ್ಞಾಪಯ—ಬಿನ್ನಯಿಸು (ವಿಜ್ಞಾಪಿಸು). ಸರ್ವೇ—ಎಲ್ಲರೂ ತದ್ಧ್ಯಾನನಿರತಾಃ = ಆ ಶಿವಧ್ಯಾನದಲ್ಲಿ ತಾತ್ಪರ್ಯವನುಳ್ಳಂಥಾವರುಗಳು ಸರ್ವೇ — ಸಮಸ್ತರೂ ತದ್ದರ್ಶನೋತ್ಸುಕಾಃ — ಆ ಪರಮೇಶ್ವರನ ದರ್ಶನವಹಲ್ಲಿ ಎರಕವನುಳ್ಳಂಥಾವರುಗಳು. ॥೬೭॥

ಕಾಲಾಗ್ನಿಪ್ರಮುಖಾನಾಂ ಚ ವಚಃ ಶ್ರುತ್ವಾ ಗಣಾಗ್ರಣೀಃ
ಪ್ರಾಹ ವಿಶ್ವೇಶ್ವರಂ ದೇವಂ ಸ್ನಿಗ್ಧಗಂಭೀರಯಾ ಗಿರಾ ||೬೮||

ಬ್ರಹ್ಮಾದ್ಯಾಶ್ಚಾಗತಾಸ್ಸರ್ವೇ ಶೂಲಪಾಣೇ ತ್ವದಾಜ್ಞಯಾ
ದ್ರಷ್ಟುಮಿಚ್ಛಂತಿ ತೇ ಸರ್ವೇ ತ್ವಾಮನಂತತನುಂ ಹರಮ್ ||೬೯||

ದಿಶಾದೇಶಂ ಪುರಾರೇ [1]ಮಾ[1] ಕಿಂ ವಕ್ಷ್ಯಾಮಿ ಸುರಾಸುರಾನ್
ವಾರಿತಾ ದ್ವಾರಮೂಲೇ ತು ದ್ರಷ್ಟುಕಾಮಾಶ್ಚ ಸಂಸ್ಥಿತಾಃ ||
ಸ್ಥಿತಂ ತೇ ರೂಪಮಪರಂ ತೇಜೋಮಯಮನಿಂದಿತಮ್ ||೭೦||

ಕಾಲಾಗ್ನಿಪ್ರಮುಖಾನಾಂ = ಕಾಲಾಗ್ನಿರುದ್ರರೇ ಮೊದಲಾದಂಥಾವರುಗಳ ವಚಃ—ವಾಕ್ಯವನು ಶ್ರುತ್ವಾ ಚ—ಕೇಳಿ[2]ಯೂ[2] ಗಣಾಗ್ರಣೀಃ = ಗಣಶ್ರೇಷ್ಠನಹಂಥಾ ನಂದಿಕೇಶ್ವರನು ದೇವನಹಂಥಾ ವಿಶ್ವೇಶ್ವರಂ = ಶಿವನನು ಕುರಿತು ಸ್ನಿಗ್ಧಗಂಭೀರಯಾ—ಮನೋಹರವಾಗಿ ಗಂಭೀರವಹಂಥಾ ಗಿರಾ— ವಾಕ್ಯದಿಂದ ಪ್ರಾಹ—ನುಡಿದನು. ||೬೮||

ನಂದಿಕೇಶ್ವರ ಉವಾಚ—ಶ್ರೀನಂದಿಕೇಶ್ವರನು ನುಡಿದನು.

ಭೋ ಶೂಲಪಾಣೇ !—ಎಲೇ ಪರಮೇಶ್ವರನೇ ! ಬ್ರಹ್ಮಾದ್ಯಾಃ — ಬ್ರಹ್ಮ ಮೊದಲಾದಂಥಾ ಸರ್ವೇ ಚ— ಎಲ್ಲರೂ ತ್ವದಾಜ್ಞಯಾ — ನಿನ್ನ ಆಜ್ಞೆಯಿಂದ ಆಗತಾಃ—ಬಂದರು. ತೇ ಸರ್ವೇ— ಅವರೆಲ್ಲರು ಅನಂತತನುಂ — ನಾನಾರೂಪನುಳ್ಳಂಥಾ ಹರಂ — ಹರನಹಂಥಾ ತ್ವಾಂ — ನಿನ್ನನು ದ್ರಷ್ಟುಂ — ನೋಡಲೋಸ್ಕರ ಇಚ್ಛಂತಿ—ಇಚ್ಛೈಸುತ್ತಿದ್ದಾರು. ||೬೯||

ಭೋ ಪುರಾರೇ !—ಎಲೇ ತ್ರಿಪುರಾರಿಯಹಂಥಾ ಶಿವನೇ ಮಾ — ಎನ್ನನು ಕುರಿತು ಆದೇಶಂ — ಆಜ್ಞೆಯನು ದಿಶ — ನಿರೂಪಿಸು. ಸುರಾಸುರಾನ್ — ದೇವಾಸುರರುಗಳನು ಕುರಿತು ಕಿಂ ವಕ್ಷ್ಯಾಮಿ—ಏನೆಂದು ಹೇಳುವೆನು. ತೇ — ನಿನ್ನ ಅನಿಂದಿತಂ — ನಿಂದೆಯಿಲ್ಲದೇ ಇದ್ದಂಥಾ ಅಪರಂ — ಮಾಯಾರಹಿತ[3]ವಾದಂಥಾ[3] ತೇಜೋಮಯಂ—ತೇಜೋಮಯವಾಗಿ ಸ್ಥಿತಂ—ಇರುತ್ತಿದ್ದಂಥಾ ರೂಪಂ—ರೂಪನು ದ್ರಷ್ಟುಕಾಮಾಶ್ಚ—ನೋಡಲಿಚ್ಛೆಯನುಳ್ಳಂಥಾ ದೇವಾಸುರರುಗಳು ದ್ವಾರಮೂಲೇ ತು—ಬಾಗಿಲ ಮೊದಲಲ್ಲಿ ವಾರಿತಾಃ— ತಡೆಯಲ್ಪಟ್ಟವರುಗಳಾಗಿ ಸಂಸ್ಥಿತಾಃ—ಇರುತ್ತಿದ್ದಾರು. 'ನ ವಿದ್ಯತೇ ಪರಾ ಯಸ್ಯ ತತ್ ಅಪರಂ'

[1] ಮಾಂ (ಘ) [2] ಪೂ (ಕ) [3] ನಹಂಥಾ (ಖ)

ಏವಮುಕ್ತ್ವಾ ತತೋ ನಂದೀ ಪ್ರಾಪ್ಯಾನುಜ್ಞಾಂ ಸ ಶೂಲಿನಃ
ಪ್ರಾವೇಶಯತ್ತತೋ ದೇವಾನ್ ಬ್ರಹ್ಮವಿಷ್ಣುಪುರೋಗಮಾನ್ ||೭೧||

ಯ ಅಧೋಭಾಗಮಾಶ್ರಿತ್ಯ ರುದ್ರಃ ಕಾಲಾಗ್ನಿಸಂಜ್ಞಿತಃ
ತಂ ಚೈವ ಪಶುಭೂತೇಶಂ ಶೂಲಹಸ್ತಂ ಸದೋಜ್ಜ್ವಲಮ್ ||೭೨||

ತತೋ ವಿವೇಶ ಕಾಲಾಗ್ನಿಃ ವಿಷ್ಣುಬ್ರಹ್ಮಾ ಶತಕ್ರತುಃ
ಅನ್ಯೇ ಚ ದೇವಾ ಗಂಧರ್ವಾ ಮುನಯೋ ಮನವಸ್ತಥಾ ||೭೩||

ಸರ್ವೇ ಕೋಲಾಹಲಂ ಕೃತ್ವಾ ದೇವಾಸುರಮಹೋರಗಾಃ
ವಿವಿಶುಶ್ಚ ಹಸನ್ ಸ್ಥಾನಂ [1]ವಾಯೋರ್ಘೋಷಾ[1] ಇವ ಸಾಗರಮ್ ||೭೪||

ಇದು ಅಪರಶಬ್ದಕ್ಕೆ ನಿರ್ವಚನವು. 'ವಾ' ಎಂಬ ಶಬ್ದ, ವಿಕಲ್ಪದಿಂದ ದ್ವಿತೀಯಾ ವಿಭಕ್ತಿಯ ನುಡಿವುದು. ||೭೦||

ಸ ನಂದೀ—ಆ ನಂದಿಕೇಶ್ವರನು ಏವಂ—ಈ ಪ್ರಕಾರದಲ್ಲಿ ಉಕ್ತ್ವಾ — ನುಡಿದು ತತಃ—ಅಷ್ಟರಮೇಲೆ ಶೂಲಿನಃ — ಪರಮೇಶ್ವರನ ಅನುಜ್ಞಾಂ — ಅಜ್ಞೆಯನು ಪ್ರಾಪ್ಯ—ಪಡದು ತತಃ — ಅನಂತರದಲ್ಲಿ ಬ್ರಹ್ಮವಿಷ್ಣುಪುರೋಗಮಾನ್ — ಬ್ರಹ್ಮವಿಷ್ಣು ಮೊದಲಾದಂಥಾ ದೇವಾನ್ — ದೇವರ್ಕಳನು ಪ್ರಾವೇಶಯತ್—ಪ್ರವೇಶಿಸಿದನು. ||೭೧||

ಕಾಲಾಗ್ನಿಸಂಜ್ಞಿತಂ — ಕಾಲಾಗ್ನಿಯೆಂಬ ಹೆಸರನುಳ್ಳಂಥಾ ಯಃ— ಅವನಾನೊಬ್ಬ ರುದ್ರಃ—ರುದ್ರನು ಪಶುಭೂತೇಶಂ — ಪಶುಗಳು ಭೂತಂಗಳಿಗೆ ಒಡೆಯನಹಂಥಾ ಶೂಲಹಸ್ತಂ— ತ್ರಿಶೂಲಹಸ್ತನಹಂಥಾ ಸದಾ — ಆವಾಗವೂ ಉಜ್ಜ್ವಲಂ—ಪ್ರಕಾಶಿಸುತ್ತಿದ್ದಂಥಾ ತಂ ಚೈವ — ಆ ಪರಮೇಶ್ವರನನು ಕುರಿತು ಅಧೋಭಾಗಂ—ಪಾತಾಳಲೋಕವನು ಆಶ್ರಿತ್ಯ [ಸ್ಥಿತಃ]—ಆಶ್ರೈಸಿ[ಇ]ಹನು.

ತತಃ—ಅನಂತರದಲ್ಲಿ ಕಾಲಾಗ್ನಿಃ — ಕಾಲಾಗ್ನಿರುದ್ರನು ವಿಷ್ಣುಃ — ವಿಷ್ಣು ಬ್ರಹ್ಮಾ—ಬ್ರಹ್ಮನು ಶತಕ್ರತುಃ— ಇಂದ್ರನು ವಿವೇಶ — ಪ್ರವೇಶಿಸಿದನು. ಅನ್ಯೇ ದೇವಾಶ್ಚ—ಉಳಿದ ದೇವರ್ಕಳು ಗಂಧರ್ವಾಃ— ಗಂಧರ್ವರುಗಳು ಮುನಯಃ— ಸಮಸ್ತಋಷಿಗಳು ಮನವಃ — ಚತುರ್ದಶ ಮನುಗಳು ತಥಾ — ಹಾಂಗೆ ಪ್ರವೇಶಿಸಿದರು. ||೭೩||

ದೇವಾಸುರಮಹೋರಗಾಃ — ದೇವರ್ಕಳು ರಾಕ್ಷಸರು ಮಹಾನಾಗರ್ಕಳು

[1] ವಾಯೌರ್ಘೋಷಾಃ (ಘ)

ಪ್ರವಿಶ್ಯ ಭವನೇ ರಮ್ಯೇ ನಾನಾಧಾತುವಿಚಿತ್ರಿತೇ
ಗಣಕೋಟಿಶತಾಕೀರ್ಣೇ ರುದ್ರಕೋಟಿಸುಸೇವಿತೇ ||೭೫||

ಆದೌ ಜಗಾಮ ತಂ ಪೂರ್ವಂ ರುದ್ರೈರ್ದೇವೈರ್ವೃತಸ್ತದಾ
ಭವಾರಿಮಂಧಕಾಲಾರಿಮಪಶ್ಯನ್ನಂದಿಕೇಶ್ವರಃ ||೭೬||

ಮುಕ್ತಾಚಲಪ್ರತೀಕಾಶಂ ಶಶಾಂಕಚಯಸನ್ನಿಭಮ್
ನೀಲಕಂಠಂ ತ್ರಿಣೇತ್ರಂ ಚ ಶೂಲಿನಂ ಸರ್ವತೋಮುಖಮ್ ||೭೭||

ಕೋಟಿಸೂರ್ಯಪ್ರತೀಕಾಶಂ ಜಗದಾನಂದಕಾರಿಣಮ್
ಕಪಾಲಮಾಲಿನಂ ದೇವಂ ಕಪರ್ದಕೃತಭೂಷಣಮ್ ||೭೮||

---

ಸರ್ವೇ— ಎಲ್ಲರು ಕೋಲಾಹಲಂ — ಕೋಲಾಹಲವನು ಕೃತ್ವಾ — ಮಾಡಿ ಹಸನ್—ನಗುತವು ಸ್ಥಾನಂ ಚ—ಆ ಸ್ಥಾನವನು ವಿವಿಶುಃ — ಪ್ರವೇಶಿಸಿದರು. ಕಥಮಿವ—ಅದು ಹೇಂಗೆಯೂ ಎಂದಡೆ ವಾರ್ಯೋಘಾಃ—ಉದಕಂಗಳ ಪ್ರವಾಹಂಗಳು ಸಾಗರಮಿವ—ಸಮುದ್ರವನೆಹಗಹಗೆ. ||೭೪||

ನಾನಾಧಾತುವಿಚಿತ್ರಿತೇ—ನಾನಾ ಪ್ರಕಾರವಹ ವರ್ಣಂಗಳಿಂದ ಚಿತ್ರಿಸಲುಪಟ್ಟಂಥಾ ಗಣಕೋಟಿಶತಾಕೀರ್ಣೇ — ನೂರು ಕೋಟಿಪ್ರಮಥಗಣಂಗಳಿಂದ ಮುಸುಕಲುಪಟ್ಟಂಥಾ ರುದ್ರಕೋಟಿಸುಸೇವಿತೇ — ಕೋಟಿರುದ್ರರುಗಳಿಂದ ಓಲೈಸಿಕೊಳಲುಪಟ್ಟಂಥಾ ರಮ್ಯೇ—ಮನೋಹರವಹಂಥಾ ಭವನೇ— ಅರಮನೆಯಲ್ಲಿ ಪ್ರವಿಶ್ಯ—ಪ್ರವೇಶಿಸಿ, ||೭೫||

ತದಾ—ಆಗ ರುದ್ರೈಃ—ರುದ್ರಗಣಂಗಳಿಂದ ದೇವೈಃ — ದೇವರ್ಕಳಿಂದ ವೃತಃ — ಮುಸುಕಲುಪಟ್ಟಂಥಾ ನಂದಿಕೇಶ್ವರಃ — ನಂದಿಕೇಶ್ವರನು ಆದೌ — ಮೊದಲಲ್ಲಿ ಜಗಾಮ — ಎಯ್ದಿದನು. ಭವಾರಿಂ—ಸಂಸಾರಕ್ಕೆ ಶತ್ರುವಹಂಥಾ ಅಂಧಕಾಲಾರಿಂ — ಅಂಧಕಾಸುರ ಕಾಲರುಗಳಿಗೆ ವೈರಿಯಹಂಥಾ ತಂ — ಆ ಪರಮೇಶ್ವರನನು ಪೂರ್ವಂ—ಮೊದಲು ಅಪಶ್ಯತ್—ಕಂಡನು. ||೭೬||

ಮುಕ್ತಾಚಲಪ್ರತೀಕಾಶಂ—ಮುತ್ತಿನ ಪರ್ವತಕ್ಕೆ ಸಮಾನವಹ ಕಾಂತಿಯುಳ್ಳಂಥಾ, ಶಶಾಂಕಚಯಸನ್ನಿಭಂ — ಚಂದ್ರರ ಸಮೂಹಕ್ಕೆ ಸಮಾನವಹಂಥಾ, ನೀಲಕಂಠಂ—ಕರೆಗೊರಳನಹಂಥಾ ತ್ರಿಣೇತ್ರಂ ಚ—ತ್ರಿಲೋಚನನಹಂಥಾ, ಶೂಲಿನಂ —ತ್ರಿಶೂಲವನುಳ್ಳಂಥಾ, ಸರ್ವತೋಮುಖಂ — ಎಲ್ಲಾ ಕಡೆಯಲ್ಲಿಯೂ ಮುಖಂಗಳನುಳ್ಳಂಥಾ, ಕೋಟಿಸೂರ್ಯಪ್ರತೀಕಾಶಂ — ಕೋಟಿಸೂರ್ಯಪ್ರಕಾಶನಹಂಥಾ ಜಗದಾನಂದಕಾರಿಣಂ — ಲೋಕಕ್ಕೆ ಆನಂದವನು ಮಾಡುತ್ತಿದ್ದಂಥಾ ಕಪಾಲ

ದಶಬಾಹುಂ ದಶಾರ್ಧಾಸ್ಯಮನಂತಂ ತೇಜಸಾಂ ನಿಧಿಮ್
ಜಗದುತ್ಪತ್ತಿಸಂಹಾರಸ್ಥಿತ್ಯನುಗ್ರಹಕಾರಣಮ್ ||೭೯||

ಅಪ್ರಮೇಯಮನಾಕಾರಮಪ್ರಪಂಚಮನಾಕುಲಮ್
ಸಿಂಹಾಸನಸ್ಥಮಚಲಂ ಚರಾಚರವಿಭೂತಿದಮ್ ||೮೦||

ಕ್ಷೀರೋದಮಿವ ನಿಷ್ಕಂಪಂ ತ್ರೈಲೋಕ್ಯಪ್ರಭವಂ ಶಿವಮ್
ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ||೮೧||

ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ಸಂಸ್ಥಿತಮ್
ಸುರಾಸುರೈರ್ವಂದ್ಯಮಾನಂ ಧ್ಯಾಯಮಾನಂ ಮುಮುಕ್ಷುಭಿಃ ||೮೨||

ಇದಂ ರೂಪಂ [1]ಸಮಾಲೋಕ್ಯ[1] ದೇವದೇವಸ್ಯ ಶೂಲಿನಃ
ಅಗ್ರೇ ಸ್ಥಿತಸ್ಸ ಕಾಲಾಗ್ನಿರ್ಮೇರೋರ್ಮೇರುರಿವಾಪರಃ ||೮೩||

ಮಾಲಿನಂ — ಕಪಾಲಂಗಳ ಮಾಲೆಯುಳ್ಳಂಥಾ, ದೇವಂ — ಪ್ರಕಾಶನಹಂಥಾ, ಕಪರ್ದಕೃತಭೂಷಣಂ — ಜಟಾಮಕುಟವೇ ಅಲಂಕಾರವಾಗಿ ಮಾಡಲುಪಟ್ಟಂಥಾ, ದಶಬಾಹುಂ — ಹತ್ತು ಭುಜಂಗಳನುಳ್ಳಂಥಾ, ದಶಾರ್ಧಾಸ್ಯಂ — ಪಂಚಮುಖವ ನುಳ್ಳಂಥಾ ಅನಂತಂ — ಕಡೆಯಿಲ್ಲದೇ ಇದ್ದಂಥಾ, ತೇಜಸಾಂ—ತೇಜಸ್ಸುಗಳಿಗೆ ನಿಧಿಂ — ಸ್ಥಾನವಹಂಥಾ, ಜಗದುತ್ಪತ್ತಿಸಂಹಾರಸ್ಥಿತ್ಯನುಗ್ರಹಕಾರಣಮ್ — ಲೋಕದ ಉತ್ಪತ್ತಿ ಸ್ಥಿತಿ ಸಂಹಾರ ಪಾಲನೆ ಮೋಕ್ಷಗಳಿಗೆ ಕಾರಣವಹಂಥಾ ಅಪ್ರಮೇಯಂ—ಊಹಿಸಲು ಬಾರದೇ ಇದ್ದಂಥಾ, ಅನಾಕಾರಂ — ಆಕಾರವಿಲ್ಲದೇ ಇದ್ದಂಥಾ, ಅಪ್ರಪಂಚಂ — ಪ್ರಪಂಚರಹಿತನಹಂಥಾ ಅನಾಕುಲಂ — ವ್ಯಾಕುಲನಲ್ಲದೇ ಇದ್ದಂಥಾ ಅಚಲಂ — ಚಂಚಲನಲ್ಲದೇ ಇದ್ದಂಥಾ ಚರಾಚರ-ವಿಭೂತಿದಂ— ಸಚರಾಚರಕ್ಕೆ ಐಶ್ವರ್ಯವನು ಕೊಡುತ್ತಿದ್ದಂಥಾ ಸಿಂಹಾಸನಸ್ಥಂ —ಸಿಂಹಾಸನದಲ್ಲಿ ಕುಳ್ಳಿರ್ದಂಥಾ ನಿಷ್ಕಂಪಂ—ಚಲನೆಯಿಲ್ಲದೇ ಇದ್ದ ಕ್ಷೀರೋದ-ಮಿವ—ಕ್ಷೀರಸಮುದ್ರಕ್ಕೆಯೆಂಬ ಹಾಂಗಿದ್ದಂಥಾ ತ್ರೈಲೋಕ್ಯಪ್ರಭವಂ—ಮೂರು ಲೋಕಂಗಳ ಹುಟ್ಟಿಸಿದಂಥಾ ಶಿವಂ — ಮಂಗಳಸ್ವರೂಪನಹಂಥಾ ಸರ್ವತಃ — ಎಲ್ಲಾ ಕಡೆಯಲ್ಲಿಯು ಪಾಣಿಪಾದಂ —ಹಸ್ತಪಾದಂಗಳನುಳ್ಳಂಥಾ ತತ್ಸರ್ವತಃ— ಆ ಎಲ್ಲಾ ಕಡೆಯಲ್ಲಿಯೂ ಅಕ್ಷಿಶಿರೋಮುಖಂ—ಕಣ್ಣುಗಳು ಮುಖಂಗಳನುಳ್ಳಂಥಾ ಸರ್ವತಃ—ಎಲ್ಲಾ ಕಡೆಯಲ್ಲಿಯೂ ಶ್ರುತಿಮತ್ — ಕಿವಿಗಳನುಳ್ಳಂಥಾ ಲೋಕೇ —ಲೋಕದಲ್ಲಿ ಸರ್ವಂ—ಎಲ್ಲವನು ಆವೃತ್ಯ—ಮುಸುಕಿಕೊಂಡು ಸಂಸ್ಥಿತಂ— ಇರುತ್ತಿದ್ದಂಥಾ ಸುರಾಸುರೈಃ—ದೇವಾಸುರರುಗಳಿಂದ ವಂದ್ಯಮಾನಂ—ನಮಸ್ಕರಿಸಿ

[1] ಸಮಾಲಕ್ಷ್ಯ ? (ಕ ಮೂಲ ಪಾಠ ಮಾತ್ರ)

ಅಥೋವಾಚ ಸ ಶೈಲಾದಿಃ ಪ್ರಣಿಪತ್ಯ ಸನಾತನಮ್
ನರಕಾಣಾಮಧೋಭಾಗೇ ಪುರಂ ಯತ್ರ ಪ್ರತಿಷ್ಠಿತಮ್ ॥೮೪॥

ಶತಕೋಟಿಪ್ರವಿಸ್ತೀರ್ಣಂ ಕಾಮದಂ ಶುಭಲಕ್ಷಣಮ್
ಯಸ್ಯ ಚೋರ್ಧ್ವಂ ನಿರಾಲಂಬಂ ಕೋಟಿಯೋಜನಮಾಯತಮ್

ಜ್ವಾಲಾಮಾಲಾಕುಲಂ ದಿವ್ಯಂ ಸರ್ವಲೋಕಭಯಂಕರಮ್
ಪ್ರಾಕಾರಾಟ್ಟಾಲಕೈರ್ಯುಕ್ತಂ ಗೋಪುರೈಸ್ತೋರಣಾನ್ವಿತಮ್ ॥೮೬॥

ಕೊಳಲುಪಟ್ಟಂಥಾ ಮುಮುಕ್ಷುಭಿಃ — ಮೋಕ್ಷಾರ್ಥಿಗಳಿಂದ ಧ್ಯಾಯಮಾನಂ — ಧ್ಯಾನಿಸಿಕೊಳಲುಪಟ್ಟಂಥಾ ದೇವದೇವಸ್ಯ—ದೇವದೇವನಹಂಥಾ ಶೂಲಿನಃ — ಪರಮೇಶ್ವರನ ಇದಂ ರೂಪಂ— ಈ ರೂಪನು ಸಮಾಲೋಕ್ಯ—ಲೇಸಾಗಿ ನೋಡಿ ಸ ಕಾಲಾಗ್ನಿಃ—ಆ ಕಾಲಾಗ್ನಿರುದ್ರನು ಅಗ್ರೇ—ಇದಿರಿನಲ್ಲಿ ಸ್ಥಿತಃ— ಇದ್ದನು. ಕಥಮಿವ—ಅದು ಹೇಂಗೆಯಾ ಎಂದಡೆ, ಮೇರೋಃ—ಮೇರುಪರ್ವತಕ್ಕೆ ಅಪರಃ ಮೇರುರಿವ—ಮತ್ತೊಂದು ಮೇರುಪರ್ವತವೆಹಗಹಗೆ. ॥೭೭-೮೩॥

ಅಥ—ಅನಂತರದಲ್ಲಿ ಸಃ ಶೈಲಾದಿಃ—ಆ ನಂದಿಕೇಶ್ವರನು ಸನಾತನಂ— ನಿತ್ಯನಹಂಥಾ ಶಿವನನು ಪ್ರಣಿಪತ್ಯ — ನಮಸ್ಕರಿಸಿ ಉವಾಚ — ನುಡಿದನು. ನರಕಾಣಾಂ—[1]ಇಪ್ಪತ್ತೆಂಟು ನರಕಂಗಳ ಅಧೋಭಾಗೇ—ಕೆಳಗಣ ಭಾಗವಹಂಥಾ ಯತ್ರ—ಆವುದಾನೊಂದು ಪಾತಾಳಲೋಕದ ಸ್ಥಾನದಲ್ಲಿ ಪುರಂ— ಪಟ್ಟಣವು ಪ್ರತಿಷ್ಠಿತಂ—ಇರಲುಪಟ್ಟಿತ್ತು. ॥೮೪॥

ಶತಕೋಟಿಪ್ರವಿಸ್ತೀರ್ಣಂ — ಆ ಪಟ್ಟಣ ನೂರು ಕೋಟಿಗಾವುದ ವಿಸ್ತೀರ್ಣ ವಹಂಥಾದು. ಕೋಟಿಯೋಜನಂ — ಕೋಟಿಗಾವುದವು ಆಯತಂ — ನೀಳವ ಹಂಥಾದು. ಕಾಮದಂ—ಬೇಡಿತ್ತ ಕೊಡುವಂಥಾದು. ಶುಭಲಕ್ಷಣಂ—ಒಪ್ಪುತ್ತಂ ಇದ್ದ ಲಕ್ಷಣವನುಳ್ಳಂಥಾದು. ಯಸ್ಯ— ಆವುದಾನೊಂದು ಪಟ್ಟಣದ ಊರ್ಧ್ವಂ —ಮೇಲೆ ನಿರಾಲಂಬಂ ಚ—ಆಶ್ರಯವಿಲ್ಲಾಗಿ, ॥೮೫॥

ಜ್ವಾಲಾಮಾಲಾಕುಲಂ — ಉರಿಯ ಸಮೂಹದಿಂದ ವ್ಯಾಕುಲವಹಂಥಾದು. ದಿವ್ಯಂ—ಪ್ರಕಾಶಿಸುತ್ತಿದ್ದಂಥಾದು. ಸರ್ವಲೋಕಭಯಂಕರಂ—ಸಮಸ್ತ ಲೋಕಂ ಗಳಿಗೆ ಭಯಂಕರವಹಂಥಾದು. ಪ್ರಾಕಾರಾಟ್ಟಾಲಕೈಃ— ಕೋಟೆ ಅಟ್ಟಣೆಗಳಿಂದ

[1] ಇಪ್ಪತ್ತ ಎಂಟು ಕೋಟಿ

ರಕ್ತನೀಲಸಮಾನಾಭೈಃ ಭೀಮಘೋ[1]ಷೈರ್ದುರಾಸದೈಃ[1]
ವೃತಂ ರುದ್ರಸಹಸ್ರೈಸ್ತು ಸಿಂಹರೂಪೈರ್ಮಹಾಬಲೈಃ ||೮೭||

ನಿಯಮ್ಯ ಚ ಸ್ವಯಂ ತೇಜಃ ಪ್ರೀತ್ಯರ್ಥಂ [2]ತೇಽಧುನಾಽಽಗತಃ[2]
ಧೌತಚಾಮೀಕರಾಭಾಸಶ್ಚಂದನಾಗರುಗಂಧಯುಕ್ ||೮೮||

ನೀಲಕಂಠಸ್ತ್ರಿಣೇತ್ರಶ್ಚ ವೃಷಕೇತುರ್ಮಹಾಬಲಃ
ದ್ವೀಪಿಚರ್ಮಪರೀಧಾನಃ ಪಂಚವಕ್ತ್ರೇಂದುಭೂಷಣಃ ||೮೯||

ಅನಂತಮೇಖಲಾಧಾರೀ ಕುಂಡಲೀಕೃತತಕ್ಷಕಃ
ದಶಬಾಹುರ್ಮಹಾತೇಜಾ ಪೀನವಕ್ಷಾ ಮಹಾತನುಃ ||೯೦||

---

ಗೋಪುರೈಃ—ಹೆಬ್ಬಾಗಿಲುಗಳಿಂದ ಯುಕ್ತಂ—ಕೂಡಲುಪಟ್ಟಂಥಾದು. ತೋರಣಾನ್ವಿತಂ—ತೋರಣಂಗಳೊಡನೆ ಕೂಡಲ್ಪಟ್ಟಂಥಾದು. ||೮೬||

ರಕ್ತನೀಲಸಮಾನಾಭೈಃ—ರಕ್ತವರ್ಣ ನೀಲವರ್ಣಂಗಳಿಗೆ ಸಮಾನವಹ ಕಾಂತಿಯನುಳ್ಳಂಥಾ ಭೀಮಘೋಷೈಃ — ಭಯಂಕರವಹ ಗರ್ಜನೆಯನುಳ್ಳಂಥಾ ದುರಾಸದೈಃ— ಎಯ್ದಲು ಬಾರದೇ ಇದ್ದಂಥಾ ಸಿಂಹರೂಪೈಃ — ಸಿಂಹದೋಪಾದಿ ರೂಪನುಳ್ಳಂಥಾ ಮಹಾಬಲೈಃ—ಮಹಾಸತ್ತ್ವವನುಳ್ಳಂಥಾ ರುದ್ರಸಹಸ್ರೈಸ್ತು —ರುದ್ರಗಣಂಗಳ ಅಸಂಖ್ಯಾತಗಣಂಗಳಿಂದವೂ ವೃತಂ — ಮುಸುಕಲುಪಟ್ಟಂಥಾ ಪಟ್ಟಣವು, ||೮೭||

ಧೌತಚಾಮೀಕರಾಭಾಸಃ — ತೊಳೆಯಲುಪಟ್ಟ ಸುವರ್ಣದೋಪಾದಿ ಕಾಂತಿಯನುಳ್ಳಂಥಾ ಚಂದನಾಗರುಗಂಧಯುಕ್—ಬಾವನ್ನ ಅಗಿಲು ಗಂಧದೊಡನೆ ಕೂಡಿದಂಥಾ ಕಾಲಾಗ್ನಿ ರುದ್ರನು ತೇಜಃ — ತೇಜಸ್ಸನು ಸ್ವಯಂ — ತಾನೇ ನಿಯಮ್ಯ— ತಗ್ಗಿಸಿಕೊಂಡು ತೇ — ನಿನ್ನ ಪ್ರೀತ್ಯರ್ಥಂ — ಪ್ರೀತಿಗೋಸುಗ ಅಧುನಾ—ಈಗಳೂ ಆಗತಃ—ಬಂದನು. ||೮೮||

ನೀಲಕಂಠಃ — ಕರೆಗೊರಳನುಳ್ಳಂಥಾ ತ್ರಿಣೇತ್ರಶ್ಚ — ಮೂರು ಕಣ್ಣುಗಳನುಳ್ಳಂಥಾ ವೃಷಕೇತುಃ — [3]ವೃಷಭಧ್ವಜನಹಂಥಾ[3] ಮಹಾಬಲಃ — ಮಹಾಪರಾಕ್ರಮಿಯಹಂಥಾ ದ್ವೀಪಿಚರ್ಮಪರೀಧಾನಃ—ಹುಲಿಯ ಚರ್ಮವ ಹೊದ್ದಂಥಾ ಪಂಚವಕ್ತ್ರೇಂದುಭೂಷಣಃ—ಪಂಚಮುಖವು ಚಂದ್ರಾಭರಣವುಳ್ಳಂಥಾ, ||೮೯||

ಅನಂತಮೇಖಲಾಧಾರೀ—ಶೇಷನ ಉಡಿದಾರವಾಗಿ ಧರಿಸಿದಂಥಾ ಕುಂಡಲೀ-

---

[1] ಷದುರಾಸದೈಃ (ಘ) [2] ತೇಽಧುನಾ ಗತಃ (ಘ) [3] ಲುಪ್ತ (ಕ)

38*

ಆಗತಸ್ಸೌಮ್ಯರೂಪೇಣ ತವ ದೇವ ಸಮೀಪತಃ
ಪಶ್ಯೈನಂ ಮೃದುಭಾವೇನ ದೇವದೇವ ಜಗತ್ಪತೇ ॥೯೧॥

ಏತೇ ಚೈವ ಮಹಾವೀರ್ಯಾ ಕಾಲಾಗ್ನೇಶ್ಚ ಸಮೀಪತಃ
ತಿಷ್ಠಂತಿ ಜ್ವಲಮಾನಾಭಾ ರುದ್ರಾಶ್ಚ ಶತಕೋಟಯಃ ॥೯೨॥

ತ್ವನ್ನಿಯೋಗಾನ್ಮಹಾದೇವ ಕಾಲಾಗ್ನ್ಯಾದೇಶಕಾರಿಣಃ
ತಿಷ್ಠಂತಿ ಸ್ವಪುರೇ ರಮ್ಯೇ ಕ್ರೀಡಮಾನಾ ಮನೋಹರೈಃ ॥೯೩॥

---

ಕೃತತಕ್ಷಕಃ— ಕುಂಡಲವಾಗಿ ಮಾಡಲ್ಪಟ್ಟ ತಕ್ಷಕನಾಗನನುಳ್ಳಂಥಾ ದಶಬಾಹುಃ —ಹತ್ತು ಭುಜಂಗಳನುಳ್ಳಂಥಾ ಮಹಾತೇಜಾಃ— [1]ಬಹಳವಹ ತೇಜಸ್ಸನುಳ್ಳಂಥಾ[1] ಪೀನವಕ್ಷಾಃ—[2]ದೊಡ್ಡಿಯ (ದೊಡ್ಡಿಹ)[2] ವಕ್ಷಸ್ಥಲವನುಳ್ಳಂಥಾ ಮಹಾತನುಃ — ಸ್ಥೂಲ ಕಾಯುನಹಂಥಾ ಕಾಲಾಗ್ನಿರುದ್ರನು, ॥೯೦॥

ಸೌಮ್ಯರೂಪೇಣ — ಮನೋಹರವಹ ರೂಪಿಂದ ಭೋ ದೇವ! — ಎಲೆ ಶಿವನೇ! ತವ—ನಿನ್ನ ಸಮೀಪತಃ—ಸಮೀಪದಲ್ಲಿ ಆಗತಃ — ಬಂದಿದ್ದಾನು. ದೇವದೇವ! — ದೇವದೇವನಹಂಥಾ ಭೋ ಜಗತ್ಪತೇ! — ಎಲೆ ಲೋಕಂಗಳಿಗೆ ಒಡೆಯನಹಂಥಾ ಪರಮೇಶ್ವರನೇ! ಮೃದುಭಾವೇನ—ಕಾರುಣ್ಯಚಿತ್ತದಿಂದ ಏನಂ —ಈ ಕಾಲಾಗ್ನಿರುದ್ರನನು ಪಶ್ಯ—ನೋಡು. ॥೯೧॥

ಕಾಲಾಗ್ನೇಃ— ಕಾಲಾಗ್ನಿ ರುದ್ರನ ಸಮೀಪತಃ — ಸಮೀಪದಲ್ಲಿ ಮಹಾವೀರ್ಯಾಃ—ಮಹಾಪರಾಕ್ರಮವನುಳ್ಳಂಥಾ ಜ್ವಲಮಾನಾಭಾಃ—ಅಗ್ನಿಗೆ ಸಮಾನವಹ ಕಾಂತಿಯನುಳ್ಳಂಥಾ ಏತೇ — ಈ ಶತಕೋಟಯಶ್ಚ — ನೂರು ಕೋಟಿಯಹಂಥಾ ರುದ್ರಾಶ್ಚ—ರುದ್ರಗಣಂಗಳು ತಿಷ್ಠಂತಿ—ಇರುತ್ತಿದ್ದಾರು. ॥೯೨॥

ಭೋ ಮಹಾದೇವ— ಎಲೆ ಪರಮೇಶ್ವರನೇ! ಕಾಲಾಗ್ನ್ಯಾದೇಶಕಾರಿಣಃ — ಕಾಲಾಗ್ನಿರುದ್ರನ ಆಜ್ಞೆಯನು ನಡಸುವಂಥಾ [3]ರುದ್ರ[3]ರುಗಳು ಮನೋಹರೈಃ — ಮನೋಹರವಹಂಥಾ ಭೋಗಂಗಳಿಂದ ಕ್ರೀಡಮಾನಾಃ — ಸುಖಿಸುತ್ತಿದ್ದವರುಗಳಾಗಿ ರಮ್ಯೇ — ಒಪ್ಪುತ್ತಿದ್ದಂಥಾ ಸ್ವಪುರೇ —ತಮ್ಮ ಪಟ್ಟಣದಲ್ಲಿ ತ್ವನ್ನಿಯೋಗಾತ್—ನಿನ್ನ ವಿನಿಯೋಗದ ದೆಸೆಯಿಂದ ತಿಷ್ಠಂತಿ—ಇರುತ್ತಿಹರು. ॥೯೩॥

---

[1,2] ಲುಪ್ತ (ಕ) [3] ವ (ಖ)

ತವಾನುಜ್ಞಾಂ ಗತಾ ಹ್ಯೇತೇ ಶಶಾಂಕಾಮಲಮೌಳಯಃ
ಶುದ್ಧಸ್ಫಟಿಕಸಂಕಾಶಾಃ ಪದ್ಮರಾಗಸಮಪ್ರಭಾಃ ||೯೪||

ತಟಿದ್ಭ್ರಮರಸಂಕಾಶಾಃ ವಜ್ರಶೂಲಧನುರ್ಧರಾಃ
ನೀಲಕಂಠಾಸ್ತ್ರಿಣೇತ್ರಾಶ್ಚ ಶಾರ್ದೂಲಾಜಿನವಾಸಸಃ ||೯೫||

ಸರ್ವಾಭರಣಸಂಪನ್ನಾಃ ಅನಂತಬಲವಿಕ್ರಮಾಃ
ಜರಾರುಕ್‌ಶೋಕಸಂತ್ಯಕ್ತಾಃ ಸುಖದುಃಖವಿವರ್ಜಿತಾಃ ||೯೬||

ಇಮಾನಪಿ ಮಹಾದೇವ ಪಶ್ಯ ಪ್ರೀತಿಕರೋ ಭವ ||೯೭||

---

ಶಶಾಂಕಾಮಲಮೌಳಯಃ—ಚಂದ್ರನಿಂದ ನಿರ್ಮಲವಹಮಕುಟವನುಳ್ಳಂಥಾ ಶುದ್ಧಸ್ಫಟಿಕಸಂಕಾಶಾಃ — ನಿರ್ಮಲವಹ ಸ್ಫಟಿಕದೋಪಾದಿ ಕಾಂತಿಯನುಳ್ಳಂಥಾ ಪದ್ಮರಾಗಸಮಪ್ರಭಾಃ — ತಾವರೆಯ ಕೆಂಪಿಗೆ ಸಮಾನವಹ ಕಾಂತಿಯನುಳ್ಳಂಥಾ ಏತೇ — ಈ ರುದ್ರಗಣಂಗಳು ತವ —ನಿನ್ನ ಅನುಜ್ಞಾಂ ಗತಾ ಹಿ — ಅನುಜ್ಞೆಯನು ಎಯ್ದಿದಂಥಾವರುಗಳಲಾ. ||೯೪||

ತಟಿದ್ಭ್ರಮರಸಂಕಾಶಾಃ—ಮಿಂಚು ತುಂಬಿಗಳೋಪಾದಿ ಕಾಂತಿಯನುಳ್ಳಂಥಾ ಅವರುಗಳು, [[2]ವಜ್ರಶೂಲಧನುರ್ಧರಾಃ—ವಜ್ರಾಯುಧ ತ್ರಿಶೂಲ ಧನುಸ್ಸುಗಳನ್ನು ಧರಿಸಿದಂಥಾ][2]ಅವರುಗಳು, ನೀಲಕಂಠಾಃ — ಕಪ್ಪಿನ ಕೊರಳನುಳ್ಳಂಥಾವರುಗಳು, ತ್ರಿಣೇತ್ರಾಃ—ತ್ರಿಲೋಚನರಹಂಥಾವರುಗಳು, ಶಾರ್ದೂಲಾಜಿನವಾಸಸಃ — ಪುಲಿ ಚರ್ಮವೇ ವಸ್ತ್ರವಾಗಿ ಉಳ್ಳಂಥಾವರುಗಳು, ||೯೫||

ಸರ್ವಾಭರಣಸಂಪನ್ನಾಃ—ಸಮಸ್ತ ಆಭರಣಂಗಳೊಡನೆ ಕೂಡಿದಂಥಾವರುಗಳು, ಅನಂತಬಲವಿಕ್ರಮಾಃ — ಬಹಳವಹ ಸತ್ತ್ವ ಪರಾಕ್ರಮವನುಳ್ಳಂಥಾವರುಗಳು, ಜರಾರುಕ್‌ಶೋಕಸಂತ್ಯಕ್ತಾಃ—ವೃದ್ಧಾಪ್ಯ ವ್ಯಾಧಿ ದುಃಖಂಗಳಿಂದ ಬಿಡಲುಪಟ್ಟಂಥಾವರುಗಳು, ಸುಖದುಃಖವಿವರ್ಜಿತಾಃ—ಸುಖದುಃಖವಿಲ್ಲದವರುಗಳು, ||೯೬||

ಭೋ ಮಹಾದೇವ !—ಎಲೆ ಪರಮೇಶ್ವರನೇ ! ಇಮಾನಪಿ—ಈ ರುದ್ರಗಣಂಗಳನು ಪಶ್ಯ—ನೋಡು. ಪ್ರೀತಿಕರಃ—ಸಂತೋಷವ ಮಾಡುವಾತನು ಭವ—ಆಗು. ||೯೭||

---

[2] ಇಲ್ಲ. (ಕ.ಖ)

ಹರಿಚಂದನಲಿಪ್ತಾಂಗಾಃ ಅಶೋಕಕಮಲಾರ್ಚಿತಾಃ
ದೈತ್ಯಾಧಿಪತಯಶ್ಚೈತೇ ಪ್ರಹ್ಲಾದಾದ್ಯಾ ಮಹಾಬಲಾಃ ||೯೮||

ಸಮಾಗತಾ ಮಹಾದೇವ ನಾಗಾಶ್ಶೇಷಾ ಯಶಸ್ವಿನಃ
ಸರ್ವಾಃ ಪಾತಾಲವಾಸಿನ್ಯೋ ರೂಪಯೌವನಗರ್ವಿತಾಃ ||
ಆಗತಾ ದೇವದೇವೇಶ ಹಾಟಕೇಶ್ವರಕನ್ಯಕಾಃ ||೯೯||

ಏತೇ ಪರ್ವತರಾಜಾನಃ ಕೈಲಾಸಾದ್ಯಾ ಮಹಾಬಲಾಃ
ಆಗತಾ ದೇವದೇವೇಶ ದ್ವೀಪೈಶ್ಚ ಸಹ ಸಾಗರಾಃ ||೧೦೦||

ಗಂಧರ್ವಾಃ ಕಿನ್ನರಾ ಯಕ್ಷಾಸ್ಸಿದ್ಧಾ ವಿದ್ಯಾಧರಾಶ್ಚಿವ
ಉರ್ವಶ್ಯಾದ್ಯಾಶ್ಚಾಪ್ಸರಸೋ ನದ್ಯಃ ಪಾಪಹರಾಶ್ಶುಭಾಃ ||೧೦೧||

---

ಹರಿಚಂದನಲಿಪ್ತಾಂಗಾಃ—ಸ್ವರ್ಗದ ಹರಿಚಂದನವೃಕ್ಷದ ಗಂಧದಿಂದ ಪೂಸಲ್ಪಟ್ಟ ಶರೀರವನುಳ್ಳಂಥಾ ಅಶೋಕಕಮಲಾರ್ಚಿತಾಃ — ಅಶೋಕೆಯ ಹೂ, ತಾವರೆಯ ಹೂಗಳನು ಮುಡಿದಂಥಾ ಮಹಾಬಲಾಃ — ಮಹಾಸತ್ತ್ವವನುಳ್ಳಂಥಾ ಪ್ರಹ್ಲಾದಾದ್ಯಾಃ — ಪ್ರಹಲಾದ ಮೊದಲಾದಂಥಾ ಏತೇ ಚ — ಇವರುಗಳು ದೈತ್ಯಾಧಿಪತಯಃ—ರಾಕ್ಷಸೇಶ್ವರರುಗಳು, ||೯೮||

ಭೋ ಮಹಾದೇವ!—ಎಲೆ ಶಿವನೇ! ಯಶಸ್ವಿನಃ —ಕೀರ್ತಿಯನುಳ್ಳಂಥಾ ಶೇಷಾಃ — ಉಳಿದಂಥಾ ನಾಗಾಃ — ನಾಗರ್ಕಳು ಸಮಾಗತಾಃ — ಬಂದರು. ಪಾತಾಳವಾಸಿನ್ಯಃ—ಪಾತಾಳಲೋಕದಲ್ಲಿ ಇರುತ್ತಿದ್ದಂಥಾ ರೂಪಯೌವನಗರ್ವಿತಾಃ ರೂಪ ಯವ್ವನನಿಂದ ಗರ್ವಿಸುತ್ತಿದ್ದಂಥಾ ಸರ್ವಾಃ—ಸಮಸ್ತವಹಂಥಾ ಹಾಟಕೇಶ್ವರಕನ್ಯಕಾಃ — ಹಾಟಕೇಶ್ವರನಾಗನ ಕುಮಾರಿಯರುಗಳು ದೇವದೇವೇಶ! —ಎಲೆ ಪರಮೇಶ್ವರನೇ! ಆಗತಾಃ—ಬಂದರು. ||೯೯||

ಭೋ ದೇವದೇವೇಶ!—ಎಲೆ ಪರಮೇಶ್ವರನೇ! ಮಹಾಬಲಾಃ — ಮಹಾಸತ್ತ್ವವನುಳ್ಳಂಥಾ ಕೈಲಾಸಾದ್ಯಾಃ — ಕೈಲಾಸಪರ್ವತ ಮೊದಲಾದಂಥಾ ಏತೇ ಪರ್ವತರಾಜಾನಃ — ಈ ಪರ್ವತರಾಯರುಗಳು ಸಾಗರಾಶ್ಚ — ಸಮುದ್ರಂಗಳು ದ್ವೀಪೈಸ್ಸಹ—ದ್ವೀಪಂಗಳೊಡನೆ ಆಗತಾಃ — ಬಂದರು. ||೧೦೦||

ಭೋಃ ಶಿವ! —ಎಲೆ ಶಿವನೇ! ಗಂಧರ್ವಾಃ — ಗಂಧರ್ವರುಗಳು ಕಿನ್ನರಾಃ —ಕಿನ್ನರರುಗಳು ಯಕ್ಷಾಃ—ಯಕ್ಷರುಗಳು ಸಿದ್ಧಾಃ — ಸಿದ್ಧರುಗಳು ವಿದ್ಯಾಧರಾಃ —ವಿದ್ಯಾಧರರುಗಳು ಉರ್ವಶ್ಯಾದ್ಯಾಃ—ಉರ್ವಶೀ ಮೊದಲಾದಂಥಾ ಅಪ್ಸರಸಶ್ಚ

ಏತೇ ಚ ಮುನಯೋ ದೇವಾ ಭೃಗ್ವಾದ್ಯಾಃ ಪ್ರಥಿತೌಜಸಃ
ಸಂಪ್ರಾಪ್ತಾನಿ ಪುರಾಣೀಹ ಶಕ್ರಾದೀನಾಂ ಮಹಾತ್ಮನಾಮ್ ||೧೦೨||

ಏತೇ ಲೋಕಾಸ್ಸಮಾಯಾತಾಃ ಸತ್ಯಾಂತಾಸ್ಸಪ್ತ ಶಂಕರ
ಮೂರ್ತಯಸ್ತವ ದೇವೇಶ ಭವಾದ್ಯಾಶ್ಚ ಸಮಾಗತಾಃ ||೧೦೩||

ಆದಿತ್ಯಾ ವಸವೋ ರುದ್ರಾಸ್ಸಾಧ್ಯಾಶ್ಚೈವ ಮರುದ್ಗಣಾಃ
ಸನಕಾದ್ಯಾ ಮಹಾತ್ಮಾನಃ ಸತ್ಯಲೋಕನಿವಾಸಿನಃ ||೧೦೪||

---

—ಅಪ್ಸರಸ್ತ್ರೀಯರುಗಳು ಬಂದರು. ಶುಭಾಃ— ಒಪ್ಪುತ್ತಿರುವಿದ್ದಂಥಾ ಪಾಪಹರಾಃ —ಪಾಪವ ಕೆಡಿಸುತ್ತಿದ್ದಂಥಾ ನದ್ಯಃ—ನದಿಗಳು [1]ಬಂದವು.[1] ||೧೦೧||

ಪ್ರಥಿತೌಜಸಃ—ಪ್ರಖ್ಯಾತವಹ ತೇಜಸ್ಸನುಳ್ಳಂಥಾ ಭೃಗ್ವಾದ್ಯಾಃ —ಭೃಗು ಮೊದಲಾದಂಥಾ ಮುನಯಃ—ಋಷಿಗಳು ಏತೇ ದೇವಾಶ್ಚ — ಈ ದೇವರ್ಕಳು ಬಂದರು. ಮಹಾತ್ಮನಾಂ — ಮಹಾತ್ಮರಹಂಥಾ ಶಕ್ರಾದೀನಾಂ — ಇಂದ್ರ ಮೊದಲಾದಂಥಾವರುಗಳ ಪುರಾಣಿ—ಪಟ್ಟಣಂಗಳು ಇಹ—ಇಲ್ಲಿಗೆ ಸಂಪ್ರಾಪ್ತಾನಿ —ಬಂದವು. ||೧೦೨||

ಭೋಃ ಶಂಕರ !— ಎಲೆ ಶಿವನೇ ! ಸತ್ಯಾಂತಾಃ = ಸತ್ಯಲೋಕ ಕಡೆಯಾಗಿ ಉಳ್ಳಂಥಾ ಏತೇ ಸಪ್ತಲೋಕಾಃ—ಈ ಏಳು ಲೋಕಂಗಳು ಸಮಾಯಾತಾಃ = ಬಂದವು. ಭೋ ದೇವೇಶ !—ಎಲೇ ದೇವರ್ಕಳಿಗೆ ಒಡೆಯನಹಂಥಾ ಶಿವನೇ ! ತವ —ನಿನ್ನ ಮೂರ್ತಯಃ = ಮೂರ್ತಿಗಳಹಂಥಾ ಭವಾದ್ಯಾಶ್ಚ—ಭವ ಶರ್ವ ರುದ್ರ ಪಶುಪತಿ ಉಗ್ರ ಮಹಾದೇವ ಭೀಮ ಈಶಾನರೆಂಬವರುಗಳು ಸಮಾಗತಾಃ — ಬಂದರು. ||೧೦೩||

ಆದಿತ್ಯಾಃ—ದ್ವಾದಶಾದಿತ್ಯರುಗಳು ವಸವಃ—ಅಷ್ಟವಸುಗಳು ರುದ್ರಾಃ— ಏಕಾದಶ ರುದ್ರರುಗಳು ಸಾಧ್ಯಾಶ್ಚೈವ — ಸಾಧ್ಯರುಗಳು ಮರುದ್ಗಣಾಃ — ನಾಲ್ವತ್ತೊಂಬತ್ತು ಮಂದಿ ಮರುದ್ದೇವತೆಗಳು ಸತ್ಯಲೋಕನಿವಾಸಿನಃ — ಸತ್ಯ ಲೋಕದಲ್ಲಿ ಇರುತ್ತಿದ್ದಂಥಾ ಮಹಾತ್ಮಾನಃ—ಮಹಾತ್ಮರುಗಳಹಂಥಾ ಸನಕಾದ್ಯಾಃ —ಸನಕ ಸನಂದನ ಮೊದಲಾದಂಥಾ ಯೋಗೀಶ್ವರರುಗಳು ಸಮಾಗತಾಃ—ಬಂದರು

---

[1] ಬಂದರು (ಕ)

ಪದ್ಮರಾಗನಿಭೋ ದೇವೋ ಬಂಧೂಕಕುಸುಮದ್ಯುತಿಃ
ಜಟಾಭಿಸ್ತು ಶಿರೋ ನದ್ಧೋ ರತ್ನಮಾಲಾವಿಭೂಷಿತಃ ||೧೦೫||
ಕಮಂಡಲುಧರಶ್ಶ್ರೀಮಾನ್ ದಂಡಹಸ್ತಸ್ಸುಲೋಚನಃ
ಕೃಷ್ಣಾಜಿನೋತ್ತರೀಯೇಣ ರಕ್ತಮಾಲ್ಯಾಂಬರೇಣ ಚ ||೧೦೬||
ಸುವರ್ಣಮೇಖಲಾಧಾರೀ ರೌಕ್ಮಕುಂಡಲಮಂಡಿತಃ[1]
ಹಂಸಧ್ವಜಶ್ಚತುರ್ಬಾಹುಃ ಸುರಾಸುರನಮಸ್ಕೃತಃ ||
ಸಾವಿತ್ರ್ಯಾ ಸಹಿತೋ ದೇವಃ ಪದ್ಮಯೋನಿರಿಹಾಗತಃ ||೧೦೭||

ಅತಸೀಪುಷ್ಪಸಂಕಾಶಃ ತಮಾಲದಲವರ್ಚಸಃ
[2] ಪೀತಾಂಬರಧರಶ್ಶ್ಯಾಮಃ ಪೀತಗಂಧಾನುಲೇಪನಃ ||೧೦೮||

ಪದ್ಮರಾಗನಿಭಃ— ತಾವರೆಯ ಹೂವಿನ ಕೆಂಪಿನೋಪಾದಿ ಕಾಂತಿಯನುಳ್ಳಂಥಾ, ದೇವಃ—ಹೊಳವುತಿದ್ದಂಥಾ, ಬಂಧೂಕಕುಸುಮದ್ಯುತಿಃ — ಬಂದುಗೆಯ ಹೂವಿನೋಪಾದಿ ಕಾಂತಿಯನುಳ್ಳಂಥಾ, ಶಿರಃ—ಶಿರಸ್ಸನು ಜಟಾಭಿಸ್ತು—ಜೆಡೆಗಳಿಂದವು ನದ್ಧಃ—ಸಂಬಂಧಿಸಲುಪಟ್ಟಂಥಾ. ರತ್ನಮಾಲಾವಿಭೂಷಿತಃ — ರತ್ನಮಾಲೆಗಳಿಂದ ಅಲಂಕರಿಸಲುಪಟ್ಟಂಥಾ ಕಮಂಡಲುಧರಃ — ಕಮಂಡಲವ ಧರಿಸಿದಂಥಾ, ಶ್ರೀಮಾನ್—ಐಶ್ವರ್ಯವನುಳ್ಳಂಥಾ ದಂಡಹಸ್ತಃ—ಪಾಲಾಶ ದಂಡವೇ ಹಸ್ತದಲ್ಲಿ ಉಳ್ಳಂಥಾ ಸುಲೋಚನಃ—ಒಪ್ಪುತ್ತಂವಿದ್ದ (ಒಪ್ಪುತಿದ್ದ) ನಯನಂಗಳನುಳ್ಳಂಥಾ ಕೃಷ್ಣಾಜಿನೋತ್ತರೀಯೇಣ — ಕೃಷ್ಣಾಜಿನದ ಮೇಲುಹೊದಕೆಯಿಂದವು. ರಕ್ತ-ಮಾಲ್ಯಾಂಬರೇಣ ಚ —ರಕ್ತವರ್ಣವಹ ಪುಷ್ಪಮಾಲೆ ವಸ್ತ್ರದಿಂದವೂ ಕೂಡಿದಂಥಾ, ಸುವರ್ಣಮೇಖಲಾಧಾರೀ— ಹೊನ್ನ ಉಡಿದಾರವನು ಧರಿಸಿದಂಥಾ, ರೌಕ್ಮಕುಂಡಲ ಮಂಡಿತಃ — ಸುವರ್ಣಮಯುವಹ ಕುಂಡಲಗಳಿಂದ ಅಲಂಕರಿಸಲುಪಟ್ಟಂಥಾ, ಹಂಸಧ್ವಜಃ—ಹಂಸೆಯ ಧ್ವಜವನುಳ್ಳಂಥಾ, ಚತುರ್ಬಾಹುಃ—ನಾಲ್ಕು ಭುಜಂಗಳ ನುಳ್ಳಂಥಾ. ಸುರಾಸುರ ನಮಸ್ಕೃತಃ — ದೇವಾಸುರರುಗಳಿಂದ ನಮಸ್ಕರಿಸಲು ಪಟ್ಟಂಥಾ ದೇವಃ—ದೇವನಹಂಥಾ ಪದ್ಮಯೋನಿಃ —ತಾವರೆಯಲ್ಲಿ ಉತ್ಪತ್ತಿಯ ನುಳ್ಳಂಥಾ ಬ್ರಹ್ಮನು ಸಾವಿತ್ರ್ಯಾ ಸಹಿತಃ — ಸಾವಿತ್ರೀದೇವಿಯಿಂದ ಸಹಿತನಾಗಿ ಇಹ—ಇಲ್ಲಿಗೆ ಆಗತಃ—ಬಂದನು. ||೧೦೫-೧೦೭||

ಅತಸೀಪುಷ್ಪಸಂಕಾಶಃ— ಎಳ್ಳಗಸೆಯ ಹೂವಿನೋಪಾದಿ ಕಾಂತಿಯನುಳ್ಳಂಥಾ ತಮಾಲದಲವರ್ಚಸಃ — ಕದ್ದಾಳಮರದ ಎಲೆಯೋಪಾದಿ ಕಾಂತಿಯನುಳ್ಳಂಥಾ

1 ರೌಕ್ಮಕುಂಡಲಿ ಮಂಡಲೀ (ಗ) 2 (ಕ ಮೂಲದಲ್ಲಿ ಮಾತ್ರವಿಲ್ಲ.)

ಶಂಕಚಕ್ರಗದಾಧಾರೀ ಶಾಙ್ರ್ಗೀ ಪಕ್ಷೀಶವಾಹನಃ
ಕಿರೀಟೀ ಕುಂಡಲೀ ಹಾರೀ ಕೌಸ್ತುಭಾಭರಣಾನ್ವಿತಃ ||೧೦೯||

ಚಾಮೀಕರಸುಮಾಲಾಭಿಃ ದೀಪ್ಯಮಾನೋ ವಿರಾಜಿತಃ
ಸೂರ್ಯಾಯುತಪ್ರತೀಕಾಶೋ ನೀಲೋತ್ಪಲದಲೇಕ್ಷಣಃ ||೧೧೦||

ಕ್ಷೀರೋದಾರ್ಣವಶಾಯೀ ಚ ನೀಲಜೀಮೂತನಿಸ್ಸ್ವನಃ
ರಮಾಮೃದಿತಸರ್ವಾಂಗಃ ಶೇಷಪರ್ಯಂಕಲಾಲಸಃ ||೧೧೧||

ವರದೋ ಭಕ್ತವಾತ್ಸಲ್ಯಃ ದೈತ್ಯಕೋಟಿಕ್ಷಯಂಕರಃ
ಆಗತೋಽಯಂ ಮಹಾದೇವ ವಿಷ್ಣುಃ ಪ್ರಿಯತಮಸ್ತವ ||೧೧೨||

---

ಪೀತಾಂಬರಧರಃ—ಅರಿಸಿನವರ್ಣದ ವಸ್ತ್ರವ ಧರಿಸಿದಂಥಾ ಶ್ಯಾಮಃ — ನೀಲವರ್ಣನಹಂಥಾ ಪೀತಗಂಧಾನುಲೇಪನಃ— ಅರಿಸಿನ ವರ್ಣವಹ ಗಂಧವ ಹೂಸಿದಂಥಾ ಶಂಖಚಕ್ರಗದಾಧಾರೀ — ಶಂಖಚಕ್ರಗದೆಯನುಧರಿಸಿದಂಥಾ ಶಾಙ್ರ್ಗೀ — ಸಿಂಗಾಡಿಯ ಬಿಲ್ಲನುಳ್ಳಂಥಾ ಪಕ್ಷೀಶವಾಹನಃ— ಗರುಡವಾಹನನಹಂಥಾ ಕಿರೀಟೀ —ಮಕುಟವನುಳ್ಳಂಥಾ ಕುಂಡಲೀ—ಕುಂಡಲಂಗಳನುಳ್ಳಂಥಾ ಹಾರೀ— ಮುತ್ತಿನ ಹಾರವನುಳ್ಳಂಥಾ ಕೌಸ್ತುಭಾಭರಣಾನ್ವಿತಃ —ಕೌಸ್ತುಭರತ್ನದ ಅಲಂಕಾರದೊಡನೆ ಕೂಡಿದಂಥಾ ಚಾಮೀಕರಸುಮಾಲಾಭಿಃ — ಸುವರ್ಣಮಯವಹ ಮಾಲೆಗಳಿಂದ ದೀಪ್ಯಮಾನಃ—ಪ್ರಕಾಶಿಸುತ್ತಿದ್ದಂಥಾ, ವಿರಾಜಿತಃ—ಒಪ್ಪುತ್ತಂವಿದ್ದಂಥಾ (ಒಪ್ಪುತಿದ್ದಂಥಾ) ಸೂರ್ಯಾಯುತ ಪ್ರತೀಕಾಶಃ—ಹತ್ತುಸಾವಿರ ಸೂರ್ಯರ ಪ್ರಕಾಶವನುಳ್ಳಂಥಾ ನೀಲೋತ್ಪಲದಲೇಕ್ಷಣಃ—ಕನ್ನೈದಿಲ ಎಸಳೋಪಾದಿಯ ನಯನಂಗಳನುಳ್ಳಂಥಾ ಕ್ಷೀರೋದಾರ್ಣವಶಾಯೀ ಚ — ಕ್ಷೀರಾಬ್ಧಿಶಯನನಹಂಥಾ ನೀಲಜೀಮೂತನಿಸ್ಸ್ವನಃ — ನೀಲಮೇಘದೋಪಾದಿ ಧ್ವನಿಯನುಳ್ಳಂಥಾ ರಮಾಮೃದಿತಸರ್ವಾಂಗಃ — ಶ್ರೀ ಮಹಾಲಕ್ಷ್ಮಿಯಿಂದ ಒತ್ತಿಸಿಕೊಳಲುಪಟ್ಟ ಸರ್ವಾಂಗವನುಳ್ಳಂಥಾ ಶೇಷಪರ್ಯಂಕಲಾಲಸಃ—ಶೇಷನ ಹಾಸಿಕೆಯಲ್ಲಿ ತಾತ್ಪರ್ಯವನುಳ್ಳಂಥಾ ವರದಃ—[1]ವರವ ಕೊಡುವಂಥಾ[1] ಭಕ್ತವಾತ್ಸಲ್ಯಃ — ಭಕ್ತರಲ್ಲಿ ಸ್ನೇಹವನುಳ್ಳಂಥಾ ದೈತ್ಯಕೋಟಿಕ್ಷಯಂಕರಃ — ರಾಕ್ಷಸಕೋಟಿಯ ಲಯುವ ಮಾಡುತ್ತಿದ್ದಂಥಾ ತವ — ನಿನಗೆ ಪ್ರಿಯತಮಃ — ಅತ್ಯಂತಪ್ರಿಯನಹಂಥಾ ಅಯಂ ವಿಷ್ಣುಃ—ಈ ಮಹಾವಿಷ್ಣು ಭೋ ಮಹಾದೇವ !—ಎಲೆ ಪರಮೇಶ್ವರನೇ ! ಆಗತಃ—ಬಂದನು. ||೧೦೮-೧೧೨||

---

[1] ಲುಪ್ತ (ಕ)

ತಪ್ತಚಾಮೀಕರಪ್ರಖ್ಯೋ ವಜ್ರಹಸ್ತೋ ಮಹಾಬಲಃ
ಪಟ್ಟಾಂಶುಕಪರೀಧಾನೋ ಹೇಮಮಾಲಾವಿಭೂಷಿತಃ ||೧೧೩||

§ಪ್ರಖ್ಯಾತವೀರ್ಯೋ ಬಲವೃತ್ರಹಂತಾ
ಬಾಲಾರ್ಕಭಾಸೋ ಹರಿಚಂದನಾಂಕಃ ।
ಪುನ್ನಾಗನಾಗೈರ್ಬಕುಲೈಶ್ಚ ಜುಷ್ಟೋ
ಮುಕ್ತಾಫಲಾಲಂಕೃತಕಂಠದೇಶಃ ||೧೧೪||

ಅಯಂ ಸಮಾಗತಶ್ಶಕ್ರೋ ವಹ್ನಿರ್ವೈವಸ್ವತೋ ಯಮಃ
ನಿರ್ಋತಿರ್ವರುಣೋ ವಾಯುಃ ಕುಬೇರಶ್ಚ ಸಮಾಗತಃ ||೧೧೫||

ಈಶಾನಶ್ಚ ಮಹಾಭಾಗಃ ತ್ರಿಂಶತ್ಕೋಟಿಗಣೈರ್ವೃತಃ
ಆಗತಸ್ತ್ರಿಜಗದ್ಯೋನೇ ಪಿನಾಕೀ ಚ ಗಣೇಶ್ವರಃ ||೧೧೬||

"ತಪ್ತಚಾಮೀಕರಪ್ರಖ್ಯಃ — ಕಾಸಿದ ಸುವರ್ಣದೋಪಾದಿ ಕಾಂತಿಯನುಳ್ಳಂಥಾ ವಜ್ರಹಸ್ತಃ — ವಜ್ರವು ಹಸ್ತದಲ್ಲಿ ಉಳ್ಳಂಥಾ ಮಹಾಬಲಃ — ಮಹಾಸತ್ತ್ವವನುಳ್ಳಂಥಾ ಪಟ್ಟಾಂಶುಕಪರೀಧಾನಃ — ಪಟ್ಟಾವಳಿಯ ವಸ್ತ್ರವ ಹೊದ್ದುಕೊಂಡಿದ್ದಂಥಾ ಹೇಮಮಾಲಾವಿಭೂಷಿತಃ — ಸುವರ್ಣಮಯುವಹ ಮಾಲಿಗಳಿಂದ (ಮಾಲೆಯಿಂದ) ಅಲಂಕೃತನಹಂಥಾ [2]ಪ್ರಖ್ಯಾತವೀರ್ಯಃ[3] — ಪ್ರಖ್ಯಾತವಹ ಪರಾಕ್ರಮವನುಳ್ಳಂಥಾ ಬಲವೃತ್ರಹಂತಾ — ಬಲಾಸುರ ವೃತ್ರಾಸುರನ ಕೊಂದಂಥಾ ಬಾಲಾರ್ಕಭಾಸಃ — ಬಾಲಸೂರ್ಯನೋಪಾದಿ ಕಾಂತಿಯನುಳ್ಳಂಥಾ ಹರಿಚಂದನಾಂಕಃ — ಹರಿಚಂದನ ವೃಕ್ಷದ ಕುರುಹನುಳ್ಳಂಥಾ ಮುಕ್ತಾಫಲಾಲಂಕೃತಕಂಠದೇಶಃ — ಮುತ್ತುಗಳಿಂದ ಅಲಂಕರಿಸಲ್ಪಟ್ಟ ಕೊರಳಸ್ಥಾನವನುಳ್ಳಂಥಾ ಅಯಂ ಶಕ್ರಃ — ಈ ಇಂದ್ರನು ಸಮಾಗತಃ — ಬಂದನು" ವಹ್ನಿಃ — ಅಗ್ನಿ ಬಂದನು. ವೈವಸ್ವತಃ — ಸೂರ್ಯನ ಪುತ್ರನಹಂಥಾ ಯಮಃ — ಯಮನು ಬಂದನು. ನಿರ್ಋತಿಃ — ನೈರ್ಋತ್ಯನು ಬಂದನು. ವರುಣಃ — ವರುಣನು ಬಂದನು. ವಾಯುಃ — ವಾಯು ಬಂದನು. ಕುಬೇರಶ್ಚ — ಕುಬೇರನು ಸಮಾಗತಃ — ಬಂದನು. ||೧೧೩–೧೧೫||

ಭೋ ಜಗದ್ಯೋನೇ ! — ಎಲೆ ಮೂರು ಲೋಕಕ್ಕೆ ಉತ್ಪತ್ತಿಸ್ಥಾನಸಹಂಥಾ ಶಿವನೇ ! ಮಹಾಭಾಗಃ — ಮಹಾಭಾಗ್ಯವನುಳ್ಳಂಥಾ ಈಶಾನಶ್ಚ — ಈಶಾನನು ತ್ರಿಂಶತ್ಕೋಟಿಗಣೈಃ — ಮೂವತ್ತು ಕೋಟಿ ಗಣೇಶ್ವರರುಗಳಿಂದ ವೃತಃ — ಮುಸುಕಲ್ಪಟ್ಟಾತನಾಗಿ ಆಗತಃ — ಬಂದನು, ಪಿನಾಕೀ ಚ — ಪಿನಾಕಿ ಎಂಬಂಥಾ ಗಣೇಶ್ವರಃ

§ ಇಂದ್ರವಜ್ರಾವೃತ್ತಂ [2] ಮಹಾಬಲಃ (ಕ) ವ್ಯಾಖ್ಯಾನ ಪಾಠ

ದಶಕೋಟಿಗಣೈರ್ಯುಕ್ತಃ ಕಾಲಕಂಠಸ್ತಥೈವ ಚ
ಸಪ್ತಕೋಟಿಗಣೈರ್ಯುಕ್ತೋ ಘಂಟಾಕರ್ಣೋ ಮಹಾಬಲಃ ||೧೧೭||

ದಶಕೋಟಿಗಣೈರ್ಯುಕ್ತೋ ಸುಘೋಷಶ್ಚ ಮಹಾಬಲಃ
ಚತುಷ್ಕೋಟಿಗಣೈರ್ದಂಡೀ ಶಿಖಂಡೀ ದಶಕೋಟಿಭಿಃ ||೧೧೮||

ಷಡ್ಭಿರ್ಮಯೂರವದನಃ ಸಿಂಹಾಸ್ಯೋ ದಶಕೋಟಿಭಿಃ
ಸಪ್ತಕೋಟಿಗಣೈರ್ಯುಕ್ತಃ ಕಿರೀಟಿ ಚ ಸಮಾಗತಃ ||೧೧೯||

ಕಾಲಾಂತಕಸ್ತು ದಶಭಿಃ ಲಾಕುಲೀ ದಶಕೋಟಿಭಿಃ
ಷಡ್ಭಿಶ್ಚ ಮುಂಡಮಾಲೀ ಚ ತ್ರಿಶೂಲೀ ಪಂಚಕೋಟಿಭಿಃ ||೧೨೦||

---

—ಗಣೇಶ್ವರನು ದಶಕೋಟಿಗಣೈಃ— ಹತ್ತು ಕೋಟಿಗಣಂಗಳಿಂದ ಯುಕ್ತಃ— ಕೂಡಲುಪಟ್ಟಾತನಾಗಿ ಆಗತಃ — ಬಂದನು. ಕಾಲಕಂಠಃ — ಕಾಲಕಂಠನೆಂಬ ಗಣೇಶ್ವರನು ತಥೈವ ಚ— ಆ ಪ್ರಕಾರದಲಿ ಹತ್ತು ಕೋಟಿ ಗಣಂಗಳಿಂದ ಕೂಡಲು ಪಟ್ಟಾತನಾಗಿ ಬಂದನು, ಮಹಾಬಲಃ — ಮಹಾಸತ್ತ್ವವನುಳ್ಳಂಥಾ ಘಂಟಾ ಕರ್ಣಃ— ಘಂಟಾಕರ್ಣನು ಸಪ್ತಕೋಟಿಗಣೈಃ— ಏಳುಕೋಟಿ ಪ್ರಮಥಗಣಂಗಳಿಂದ ಯುಕ್ತಃ— ಕೂಡಲುಪಟ್ಟಾತನಾಗಿ ಬಂದನು. || ೧೧೬—೧೧೭||

ಮಹಾಬಲಃ — ಮಹಾಸತ್ತ್ವವನುಳ್ಳಂಥಾ ಸುಘೋಷಶ್ಚ — ಸುಘೋಷ ಗಣೇಶ್ವರನು ದಶಕೋಟಿಗಣೈಃ—ಹತ್ತುಕೋಟಿ ಗಣಂಗಳಿಂದ ಯುಕ್ತಃ—ಕೂಡಲು ಪಟ್ಟನು. ದಂಡೀ—ದಂಡಿಯೆಂಬ ಗಣನಾಥನು ಚತುಷ್ಕೋಟಿಗಣೈಃ — ನಾಲ್ಕು ಕೋಟಿಗಣಂಗಳಿಂದ ಯುಕ್ತಃ = ಕೂಡಲುಪಟ್ಟನು. ಶಿಖಂಡೀ = ಶಿಖಂಡಿಯೆಂಬ ಗಣೇಶ್ವರನು ದಶಕೋಟಿಭಿಃ = ಹತ್ತು ಕೋಟಿಗಣಂಗಳಿಂದ ಯುಕ್ತಃ = ಕೂಡಲು ಪಟ್ಟಾತನಾಗಿ ಬಂದನು ||೧೧೮||

ಮಯೂರವದನಃ = ಮಯೂರವದನನೆಂಬ ಗಣೇಶ್ವರನು ಷಡ್ಭಿಃ = ಆರು ಕೋಟಿ ಗಣೇಶ್ವರರುಗಳಿಂದ ಕೂಡಲುಪಟ್ಟನು. ಸಿಂಹಾಸ್ಯಃ = ಸಿಂಹಾಸ್ಯನು ದಶಕೋಟಿಭಿಃ = ಹತ್ತು ಕೋಟಿ ಗಣಂಗಳಿಂದ ಕೂಡಲುಪಟ್ಟನು. ಕಿರೀಟೀ ಚ = ಕಿರೀಟಿಯೆಂಬ ಗಣೇಶ್ವರನು ಸಪ್ತಕೋಟಿಗಣೈಃ = ಏಳು ಕೋಟಿ ಗಣಂಗಳಿಂದ ಯುಕ್ತಃ = ಕೂಡಲುಪಟ್ಟಾತನಾಗಿ ಸಮಾಗತಃ = ಬಂದನು. ||೧೧೯||

ಕಾಲಾಂತಕಸ್ತು = ಕಾಲಾಂತಕಗಣೇಶ್ವರನು ದಶಭಿಃ = ಹತ್ತು ಕೋಟಿ ಗಣಂಗಳಿಂದ ಕೂಡಲುಪಟ್ಟನು. ಲಾಕುಲೀ = ಲಾಕುಲಿ ಎಂಬ ಗಣೇಶ್ವರನು ದಶಕೋಟಿಭಿಃ

ಅಷ್ಟಾಭಿರ್ವಿಶ್ವಮಾಲೀ ಚ ತ್ರಿಮೂರ್ತಿರ್ನವಕೋಟಿಭಿಃ
ಏತೇ ಗಣೇಶ್ವರಾಸ್ಸರ್ವೇ ತಥಾ ಚಾನ್ಯೇ ಗಣೇಶ್ವರಾಃ ||೧೨೧||

ತೇಷಾಂ ಸಂಖ್ಯಾಂ ನ ಜಾನಂತಿ ಬ್ರಹ್ಮಾದ್ಯಾ ದೇವತಾಗಣಾಃ
ಆಗತಾನಾಂ ಮಹಾದೇವ ಶೃಣು ಕೋಲಾಹಲಂ ವಿಭೋ ||೧೨೨||

ಅಮರೇಶಃ ಪ್ರಭಾಸಶ್ಚ ಪುಷ್ಕರೋ ನೈಮಿಷಸ್ತಥಾ
ಆಷಾಢೀ ದಂಡಿಮುಂಡಾದ್ಯಾಃ ಪಾವಕಾ ದಿವ್ಯಮೂರ್ತಯಃ ||೧೨೩||

ಏತೇ ದಿವ್ಯಾಷ್ಟಕಾ ದೇವ ಕಾಮರೂಪಾ ಮಹಾಬಲಾಃ

---

=ಹತ್ತು ಕೋಟಿ ಗಣಂಗಳಿಂದ ಕೂಡಲುಪಟ್ಟನು. ಮುಂಡಮಾಲೀ ಚ=ಮುಂಡಮಾಲಿ ಎಂಬ ಗಣೇಶ್ವರನು ಷಡ್ಭಿಶ್ಚ=ಆರುಕೋಟಿ ಗಣಂಗಳಿಂದ ಕೂಡಲುಪಟ್ಟ[illegible] ತ್ರಿಶೂಲೀ=ತ್ರಿಶೂಲಿಯೆಂಬ ಗಣೇಶ್ವರನು ಪಂಚಕೋಟಿಭಿಶ್ಚ=ಅಯ್ದುಕೋಟಿ ಗಣಂಗಳಿಂದ ಕೂಡಲುಪಟ್ಟನು. ||೧೨೦||

ವಿಶ್ವಮಾಲೀ ಚ=ವಿಶ್ವಮಾಲಿಯೆಂಬ ಗಣೇಶ್ವರನು ಅಷ್ಟಾಭಿಃ=ಎಂಟು ಕೋಟಿಗಣಂಗಳಿಂದ ಕೂಡಲುಪಟ್ಟನು. ತ್ರಿಮೂರ್ತಿಃ=ತ್ರಿಮೂರ್ತಿಯೆಂಬ ಗಣೇಶ್ವರನು ನವಕೋಟಿಭಿಃ=ಒಂಭತ್ತು ಕೋಟಿ ಗಣಂಗಳಿಂದ ಕೂಡಲುಪಟ್ಟನು. ಏತೇ ಸರ್ವೇ ಗಣೇಶ್ವರಾಃ=ಈ ಸಮಸ್ತ ಗಣೇಶ್ವರರುಗಳು ಅನ್ಯೇ ಗಣೇಶ್ವರಾಶ್ಚ=ಮತ್ತೆ ಕೆಲಬರು ಗಣೇಶ್ವರರುಗಳು ತಥಾ=ಆ ಪ್ರಕಾರದಲ್ಲಿಯೇ ಬಂದರು. ||೧೨೧||

ತೇಷಾಂ=ಆ ಗಣಂಗಳ ಸಂಖ್ಯಾಂ=ಲೆಕ್ಕವನು ಬ್ರಹ್ಮಾದ್ಯಾಃ=ಬ್ರಹ್ಮ ಮೊದಲಾದಂಥಾ ದೇವತಾಗಣಾಃ=ದೇವರ್ಕಳ ಸಮೂಹಂಗಳು ನ ಜಾನಂತಿ=ಅರಿಯರು. ಮಹಾದೇವ=ಉತ್ಕೃಷ್ಟ ದೇವನಹಂಥಾ ಭೋ ವಿಭೋ=ಎಲೆ ಪರಿಪೂರ್ಣನಹಂಥಾ ಪರಮೇಶ್ವರನೇ! ಆಗತಾನಾಂ=ಬಂದಂಥಾ ಗಣೇಶ್ವರರುಗಳ ಕೋಲಾಹಲಂ=ಗಲಭೆಯನು ಶೃಣು=ಕೇಳು ||೧೨೨||

ಅಮರೇಶಃ=ಅಮರೇಶನು ಪ್ರಭಾಸಶ್ಚ=ಪ್ರಭಾಸನು ಪುಷ್ಕರಃ=ಪುಷ್ಕರನು ತಥಾ=ಹಾಂಗೆ ನೈಮಿಷಃ=ನೈಮಿಷನು ಆಷಾಢೀ=ಆಷಾಢಿ, ದಂಡಿಮುಂಡಾದ್ಯಾಃ=ದಂಡಿ ಮುಂಡ ಮೊದಲಾದಂಥಾ ಪಾವಕಾಃ=ಪಾವಕರುಗಳು ದಿವ್ಯಮೂರ್ತಯಃ=ದಿವ್ಯಮೂರ್ತಿಗಳೆನಿಸುವರು. ||೧೨೩||

ಭೋ ಮಹಾದೇವ=ಎಲೆ ದೇವನೇ ಮಹಾಬಲಾಃ=ಮಹಾಸತ್ತ್ವವನುಳ್ಳಂಥಾ ಕಾಮರೂಪಾಃ=ಬಯಸಿದ ರೂಪಾಗಲುಳ್ಳಂಥಾ ಜಲಾವರಣವಾಸಿನಃ

ತ್ವದಾಜ್ಞಯಾಽಽಗತಾ ರುದ್ರಾ ಜಲಾವರಣವಾಸಿನಃ ।
ಕೋಟಿಕೋಟಿಗಣೈರ್ಯುಕ್ತಾ ದೇವ ದೇವ ಮಹೇಶ್ವರ ॥೧೨೪॥

ವಿಶ್ವೇಶ್ವರ ! ಜಟೋದ್ಭೂತಾ ಸಿಂಧುಶ್ಚೈವ ಸರಸ್ವತೀ
ಯಮುನಾ ಗಂಡಕೀ ರುಕ್ಮಾ ವಿಪಾಶಾ ನರ್ಮದಾ ಶಿವಾ ॥೧೨೫॥

ರುಕ್ಮಘಂಟಾ ಚ [1]ನಿರ್ವಿಂದ್ಯಾ[1] ದೇವಿಕಾ ಚ ದೃಷದ್ವತೀ
ಶತರುದ್ರಾ ಪಯೋಷ್ಣೀ ಚ ಚಂದ್ರಭಾಗಾ ಚ ಗೌತಮೀ ೧೨೬॥

ಚರ್ಮಣ್ವತೀ ಚ ಕಾವೇರೀ ಸರಯೂಶ್ಚ ಶರಾವತೀ
ಧೂತಪಾಪಾ ಚ ಸಾರಥ್ಯಾ ಮಣಿಮಾಲಾ ಸುಗಂಧಿಕಾ ॥೧೨೭॥

---

= ಉದಕದ ಆವರಣದಲ್ಲಿ ಸ್ಥಾನವನುಳ್ಳಂಥಾ ಏತೇ = ಈ ದಿವ್ಯಾಷ್ಟಕಾಃ = ಒಪ್ಪತ್ತೆಂವಿನ್ದ ಎಂಟು ಮಂದಿ ರುದ್ರಾಃ = ರುದ್ರರುಗಳು ಕೋಟಿ ಕೋಟಿಗಣೈಃ = ಕೋಟಾನುಕೋಟಿಗಣಂಗಳಿಂದ ಯುಕ್ತಾಃ = ಕೂಡಲುಪಟ್ಟವರುಗಳಾಗಿ ದೇವದೇವ = ದೇವದೇವನಹಂಥಾ ಭೋ ಮಹೇಶ್ವರ = ಎಲೆ ಪರಮೇಶ್ವರನೇ ! ತ್ವದಾಜ್ಞಯಾ = ನಿನ್ನ ಆಜ್ಞೆಯಿಂದ ಆಗತಾಃ = ಬಂದರು. ॥ ೨೪॥

ಭೋ ವಿಶ್ವೇಶ್ವರ ! = ಎ ಪರಮೇಶ್ವರನಹಂಥಾ ಶಿವನೇ ! ಜಟೋದ್ಭೂತಾ = ಜಟೋಃದ್ಭೂತಾನದಿ, ಸಿಂಧುಶ್ಚೈವ = ಸಿಂಧುನದಿ, ಸರಸ್ವತೀ = ಸರಸ್ವತೀ ನದಿ, ಯಮುನಾ = ಯಮುನಾನದಿ, ಗಂಡಕೀ = ಗಂಡಕೀ ನದಿ, ರುಕ್ಮಾ = ರುಕ್ಮಾನದಿ ವಿಪಾಶಾ = ವಿಪಾಶಾನದಿ. ನರ್ಮದಾ = ನರ್ಮದಾನದಿ, ಶಿವಾ = ಶಿವಾನದಿ,

ರುಕ್ಮಘಂಟಾ ಚ—ರುಕ್ಮಘಂಟಾ ನದಿಯು, ನಿರ್ವಿಂದ್ಯಾ = ನಿರ್ವಿಂದ್ಯಾನದಿ, ದೇವಿಕಾ ಚ = ದೇವಿಕಾ ನದಿಯು, ದೃಷದ್ವತೀ = ದೃಷದ್ವತೀ ನದಿಯು, ಶತರುದ್ರಾ = ಶತರುದ್ರಾನದಿ ಪಯೋಷ್ಣೀಚ = ಪಯೋಷ್ಣೀ ನದಿಯು, ಚಂದ್ರಭಾಗಾ ಚ = ಚಂದ್ರಭಾಗಾನದಿಯು ಗೌತಮೀ = ಗೌತಮಿಯೆಂಬ ನದಿಯು, ॥೨೬॥

ಚರ್ಮಣ್ವತೀ ಚ = ಚರ್ಮಣ್ವತಿನದಿಯು ಕಾವೇರೀ = ಕಾವೇರಿ ನದಿಯು, ಸರಯೂಶ್ಚ = ಸರಯೂನದಿಯು ಶರಾವತೀ = ಶರಾವತಿ ನದಿಯು ಧೂತಪಾಪಾ ಚ = ಧೂತಪಾಪಾನದಿಯು ಸಾರಥ್ಯಾ = ಸಾರಥ್ಯಾ ನದಿಯು ಮಣಿಮಾಲಾ = ಮಣಿಮಾಲಾ ನದಿ, ಸುಗಂಧಿಕಾ = ಸುಗಂಧಿಕಾನದಿ, ॥೧೨೭॥

---

[1] ನಿರ್ವಿದ್ಯಾ (ಕ) ನಿರ್ವದ್ಯಾ (ಗ)

²ಜಂಬೂ ತಾಪೀ ಚ² ನಿಶ್ಚಾರಾ ಕೌಶಿಕೀ ಕುಮುದಾಕರಾ
ಮಂದಾಕಿನೀ ಚಂದ್ರಲೇಖಾ ಪಂಕಜಾಮೋದವಾಹಿನೀ ||೧೨೮||

ಐರಾವತೀ ಕಾಮವೇಗಾ ಪ್ರೇಂಖಾ ವೈ ಕಾಮಚಾರಿಣೀ
ಪೂರ್ಣಭದ್ರಾ ಮದಾಮೋದಾ ಗಂಭೀರಾಽಽವರ್ತಕಾ ಸ್ಮೃತಾ||೧೨೯||

ಮೇಘಘೋಷಾ ಮೇಘವರ್ಣೀ ಸದಾನೀರಾ ಚ ನಂದಿನೀ
ವೇದಾ ವೇದಾವತೀ ತೀರ್ಣಾ ಸಿತಾ ಚಿತ್ರೋತ್ಪಲಾ ತಥಾ ||೧೩೦||

ವೇತ್ರಾವತೀ ಚ ವೃತ್ರಘ್ನೀ ಪಿಪ್ಪಲಾ ಜಂಜಲಾ ತಥಾ
ಸರಜಾ ಕುಮುದಾ ಶಿಕ್ಷಾ ಕೌಶೀ ಚ ನಿಷಧಾ ಸಿತಾ ||೧೩೧||

---

ಜಂಬೂ = ಜಂಬೂನದಿ ತಾಪೀ ಚ = ತಾಪಿನದಿಯು ನಿಶ್ಚಾರಾ = ನಿಶ್ಚಾರಾ ನದಿಯು ಕೌಶಿಕೀ = ಕೌಶಿಕೀ ನದಿಯು ಕುಮುದಾಕರಾ = ಕುಮುದಾಕರಾ ನದಿ ಮಂದಾಕಿನೀ = ಮಂದಾಕಿನಿ ನದಿ ಚಂದ್ರಲೇಖಾ — ಚಂದ್ರಲೇಖಾ ನದಿ. ಪಂಕಜಾಮೋದವಾಹಿನೀ = ಪಂಕಜಾಮೋದವಾಹಿನೀನದಿ. ||೧೨೮||

ಐರಾವತೀ = ಐರಾವತಿನದಿ ಕಾಮವೇಗಾ = ಕಾಮವೇಗಾನದಿ ಪ್ರೇಂಖಾ ವೈ = ಪ್ರೇಂಖಾ ನದಿ ಕಾಮಚಾರಿಣೀ = ಕಾಮಚಾರಿಣೀನದಿ ಪೂರ್ಣಭದ್ರಾ = ಪೂರ್ಣಭದ್ರಾನದಿ ಮದಾಮೋದಾ = ಮದಾಮೋದನದೀ ಗಂಭೀರಾ = ಗಂಭೀರಾ ನದಿ ಆವರ್ತಕಾ = ಆವರ್ತಕಾ ಎಂಬ ನದಿ ಸ್ಮೃತಾ = ಹೇಳಲುಪಟ್ಟಿತ್ತು. ||೧೨೯||

ಮೇಘಘೋಷಾ = ಮೇಘಘೋಷಾನದಿ ಮೇಘವರ್ಣೀ = ಮೇಘವರ್ಣೀ ನದಿ ಸದಾನೀರಾ ಚ = ಸದಾನೀರಾ ನದಿಯು ನಂದಿನೀ = ನಂದಿನೀನದಿ ವೇದಾ = ವೇದಾನದಿ ವೇದಾವತೀ = ವೇದಾವತಿನದಿ ತೀರ್ಣಾ = ತೀರ್ಣಾನದಿ ಸಿತಾ = ಸಿತಾನದಿ ತಥಾ = ಹಾಂಗೆ ಚಿತ್ರೋತ್ಪಲಾ = ಚಿತ್ರೋತ್ಪಲಾ ನದಿ, ||೧೩೦||

ವೇತ್ರಾವತೀ ಚ = ವೇತ್ರಾವತಿ ನದಿಯು ವೃತ್ರಘ್ನೀ = ವೃತ್ರಘ್ನೀ ನದಿ ಪಿಪ್ಪಲಾ = ಪಿಪ್ಪಲಾನದಿ ತಥಾ = ಹಾಂಗೆ ಜಂಜಲಾ = ಜಂಜಲಾನದಿ ಸರಜಾ = ಸರಜಾನದಿ ಕುಮುದಾ = ಕುಮುದಾನದಿಯು ಶಿಕ್ಷಾ = ಶಿಕ್ಷಾನದಿ ಕೌಶೀಚ = ಕೌಶೀನದಿಯು ನಿಷಧಾ = ನಿಷಧಾನದಿ ಸಿತಾ = ಸಿತಾನದಿ, ||೧೩೧||

---

² ಜಂಬೂಕ್ಯಾಪಿ ಚ (ಘ)

ವೈತಾರಿಣೀ ಸಿನೀವಾಲೀ ವೇಗವಂತೀ ತಥೈವ ಚ
ಗೌರೀ ಕೃಷ್ಣಾ ತಥಾ ದುರ್ಗಾ ತುಂಗಭದ್ರೋತ್ಪಲಾವತೀ ||೧೩೨||

ಸ್ವರ್ಣಾ ಭೀಮರಥೀ ಶುದ್ಧಾ ಕೃತಮಾಲಾ ತರಂಗಿಣೀ
ಏತಾ ದೇವ ಮಹಾನದ್ಯಃ ಪಾವನಾಃ ಕಲ್ಮಷಾಪಹಾಃ ||೧೩೩||

ಮೂರ್ತಿಮತ್ಯಸ್ತವೇಶಾನ ಉತ್ಸವೇಷ್ವಿಹ ಆಗತಾಃ
ಸರ್ವಾ ಏತಾ ಮಹಾದೇವ ಪಶ್ಯ ಕಾರುಣ್ಯವಾರಿಧೇ ||೧೩೪||

ಭವಂತ್ಯಾಕೃತಿನಃ ಸರ್ವೇ ತ್ವಯಿ ದೃಷ್ಟೇ ಮಹೇಶ್ವರ ! ||೧೩೫||

---

ವೈತಾರಿಣೀ = ವೈತಾರಿಣಿನದಿ ಸಿನೀವಾಲೀ = ಸಿನೀವಾಲಿನದಿ ತಥೈವ ಚ = ಹಾಂಗೆ ವೇಗವಂತೀ = ವೇಗವಂತೀನದಿ ಗೌರೀ = ಗೌರೀನದಿ ಕೃಷ್ಣಾ = ಕೃಷ್ಣಾನದಿ ತಥೈವ = ಹಾಂಗೆ ದುರ್ಗಾ = ದುರ್ಗಾನದಿ ತುಂಗಭದ್ರಾ = ತುಂಗಭದ್ರಾನದಿಯು ಉತ್ಪಲಾವತೀ = ಉತ್ಪಲಾವತಿ ನದಿ, ||೧೩೨||

ಸ್ವರ್ಣಾ = ಸ್ವರ್ಣಾನದೀ ಭೀಮರಥೀ = ಭೀಮರಥೀನದಿ ಶುದ್ಧಾ = ಶುದ್ಧಾನದಿ ಕೃತಮಾಲಾ = ಕೃತಮಾಲಾನದಿ ತರಂಗಿಣೀ = ತರಂಗಿಣೀ ನದಿ, ಭೋ ದೇವ ಎಲೆ ಪರಮೇಶ್ವರನೇ ! ಏತಾಃ ಮಹಾನದ್ಯಃ = ಈ ಮಹಾನದಿಗಳು ಪಾವನಾಃ = ಪಾವನಂಗಳಹಂಥಾವು. ಕಲ್ಮಷಾಪಹಾಃ = ಪಾಪಂಗಳ ಕೆಡಿಸುವಂಥಾವು. ||೧೩೩||

[1]ಭೋ ಈಶಾನ! = ಎಲೆ ಪರಮೇಶ್ವರನೆ ಮೂರ್ತಿಮತ್ಯಃ = ಮೂರ್ತಿಯನುಳ್ಳಂಥಾವಾಗಿ ತವ = ನಿನ್ನ ಉತ್ಸವೇಷು = ಉತ್ಸಾಹಂಗಳಲ್ಲಿ ಇಹ = ಇಲ್ಲಿಗೆ ಆಗತಾಃ = ಬಂದವು. ಕಾರುಣ್ಯವಾರಿಧೇ = ಕರುಣಕ್ಕೆ ಸಮುದ್ರನಹಂಥಾ ಭೋ ಮಹಾದೇವ = ಎಲೆ ಪರಮೇಶ್ವರನೆ ! ಏತಾಃ = ಸರ್ವಾಃ = ಈ ಸಮಸ್ತ ನದಿಗಳನು ಪಶ್ಯ = ನೋಡು. ||೧೩೪||

ಭೋ ಮಹೇಶ್ವರ ![1] = ಎಲೆ ಪರಮೇಶ್ವರನೆ ತ್ವಯಿ = ನೀನು ದೃಷ್ಟೇ ಸತಿ = ನೋಡಲುಪಡುತ್ತಿರಲು ಸರ್ವೇ = ಪರ್ವತ ನದಿ ಸಮುದ್ರ ಮೊದಲಾದ ಸಮಸ್ತ ಸ್ಥಾವರಂಗಳು ಆಕೃತಿನಃ = ಆಕಾರವನುಳ್ಳಂಥಾವು ಭವಂತಿ = ಆಗುತ್ತಿದ್ದಾವು.

---

[1] (ಕ) ದಲ್ಲಿ ಈ ಭಾಗ ಬಿಟ್ಟು ಹೋಗಿದೆ.

ಏವಮುಕ್ತ್ವಾ ತಥಾ ನಂದೀ ದೇವದೇವಸ್ಯ ಚಾಗ್ರತಃ
ಪಪಾತ ದಂಡವದ್ಭೂಮೌ ಭಕ್ತ್ಯಾ ಚ ಪರಮಯಾ ದ್ವಿಜಾಃ ||೧೩೬||

ನಂದಿನಂ ತಂ ಮಹಾತ್ಮಾನಂ ದೃಷ್ಟ್ವಾ ವಿಶ್ವೇಶ್ವರಃ ಪ್ರಭುಃ
ಪ್ರೀತೋಽಭವತ್ಸ ಕಾಲಾರಿಃ ಮಂದರೇ ಚಾರುಕಂದರೇ ||೧೩೭||

ಅಥಾಸೌ ಹಿಮವಾನ್ ವಿಪ್ರಾ ದೇವೀಮಾತ್ಮಸುತಾಮುಮಾಮ್
ಪ್ರದಾನಾರ್ಥಂ ಮಹೇಶಾಯ ಸಂಪ್ರಾಪ್ತೋ ಮಂದರಂ ಕ್ಷಣಾತ್ ||

ಅಹ ದೃಷ್ಟ್ವಾ ಗಿರಿಂ ನಂದೀ ದೇವದೇವಂ ಪಿನಾಕಿನಮ್
ವಕ್ತುಕಾಮಃ ಸಮಾಯಾತೋ ಭಗವಾನ್ಸರ್ವತೇಶ್ವರಃ ||೧೩೯||

---

ಭೋ ದ್ವಿಜಾಃ = ಎಲೆ [1]ಋಷಿಗಳಿರಾ ![1] ನಂದೀ = ನಂದಿಕೇಶ್ವರನು ತಥಾ = ಹಾಂಗೆ ಏವಮುಕ್ತ್ವಾ = ಈ ಪ್ರಕಾರದಲ್ಲಿ ನುಡಿದು ದೇವದೇವಸ್ಯ = ಪರಮೇಶ್ವರನ ಅಗ್ರತಃ = ಮುಂದೆ ಪರಮಯಾ = ಉತ್ಕೃಷ್ಟವಹಂಥಾ ಭಕ್ತ್ಯಾ ಚ = ಭಕ್ತಿಯಿಂದವೂ ದಂಡವತ್ = ದಡಿಯೋಪಾದಿಯಲ್ಲಿ ಭೂಮೌ = ಭೂಮಿಯಲ್ಲಿ ಪಪಾತ = ಬಿದ್ದನು. ||೧೩೬||

ಚಾರುಕಂದರೇ = ಮನೋಹರವಹ [2]ಗುಹೆಗಳನುಳ್ಳಂಥಾ[2] ಮಂದರೇ = ಮಂದರಪರ್ವತದಲ್ಲಿ ಪ್ರಭುಃ = ಸಮರ್ಥನಹಂಥಾ ವಿಶ್ವೇಶ್ವರಃ = ಸಮಸ್ತಲೋಕಕ್ಕೆ ಒಡೆಯನಹಂಥಾ ಕಾಲಾರಿಃ = ಕಾಲಂಗೆ ವೈರಿಯಹಂಥಾ ಸಃ = ಆ ಪರಮೇಶ್ವರನು ಮಹಾತ್ಮಾನಂ = ಮಹಾತ್ಮನಹಂಥಾ ತಂ ನಂದಿನಂ = ಆ ನಂದಿಕೇಶ್ವರನನು ದೃಷ್ಟ್ವಾ = ಕಂಡು ಪ್ರೀತಃ = ಸಂತೋಷಿಸಲುಪಟ್ಟವನು ಅಭವತ್ = ಆದನು. ||೧೩೭||

ಭೋ ವಿಪ್ರಾಃ = ಎಲೆ ಋಷಿಗಳಿರಾ ! ಅಥ = ಅನಂತರದಲ್ಲಿ ಅಸೌ ಹಿಮವಾನ್ = ಈ ಹಿಮವತ್ಪರ್ವತನು ಆತ್ಮಸುತಾಂ = ತನ್ನ ಮಗಳಹಂಥಾ ಉಮಾಂ = ಪಾರ್ವತೀ ದೇವಿಯನು ಮಹೇಶಾಯ = ಪರಮೇಶ್ವರಂಗೋಸ್ಕರ ಪ್ರದಾನಾರ್ಥಂ = ಕೊಡಲೋಸ್ಕರ ಕ್ಷಣಾತ್ = ಕ್ಷಣಮಾತ್ರದ ದೆಸೆಯಿಂದ ಮಂದರಂ = ಮಂದರ ಪರ್ವತವನು ಸಂಪ್ರಾಪ್ತಃ = [3]ಹೊಂದಿದನು (ಎಯ್ದಿದನು)[3] ||೧೩೮||

ಗಿರಿಂ = ಹಿಮವತ್ಪರ್ವತನನು ನಂದೀ = ನಂದಿಕೇಶ್ವರನು ದೃಷ್ಟ್ವಾ = ಕಂಡು ದೇವದೇವಂ = ದೇವದೇವನಹಂಥಾ ಪಿನಾಕಿನಂ = ಪರಮೇಶ್ವರನನು

---

[1] ಲುಪ್ತ (ಕ) [2] ಲುಪ್ತ (ಕ) [3] ಹೊಂದಿದನು (ಕ) ಎಯ್ದಿದನು (ಖ)

ಶ್ರುತ್ವಾ ತು ವಚನಂ ಶ್ಲಕ್ಷ್ಣಂ ಚ್ಯುತಂ ನಂದಿಮುಖಾತ್ತಥಾ
ಮೇಘಗಂಭೀರಯಾ ವಾಚಾ ಮಹಾದೇವೋಽಬ್ರವೀದಿದಮ್ ||೧೪೦||

ವದತ್ವಯಂ ಗಿರಿಶ್ರೇಷ್ಠೋ ಹೃದಯೇ ಯತ್ಪ್ರತಿಷ್ಠಿತಮ್
ಕಾಮಸ್ತದಾಽಚಿರಾತ್ತಸ್ಯ ಭವಿಷ್ಯತಿ ನ ಸಂಶಯಃ ||೧೪೧||

ಏವಮುಕ್ತೇ ತದಾ ವಿಪ್ರಾ ದೇವದೇವೇ ಮಹೇಶ್ವರೇ
ಉವಾಚ ಗಿರಿಶಾರ್ದೂಲೋ ಭೂತ್ವಾಽಗ್ರೇ ಚ ಕೃತಾಂಜಲಿಃ ||೧೪೨||

ಹಿಮವಾನುವಾಚ—

---

ಕುರಿತು ಆಹ=ನುಡಿದನು. ಭೋ ಭಗವನ್=ಎಲೆ ಷಡ್ಗುಣೈಶ್ವರ್ಯ ಸಂಪನ್ನನಹಂಥಾ ದೇವನೇ! ಪರ್ವತೇಶ್ವರಃ = ಗಿರಿರಾಜನು ವಕ್ತುಕಾಮಃ = ಬಿನ್ನಹ ಮಾಡಲಿಚ್ಛೆಯನುಳ್ಳಾತನಾಗಿ ಸಮಾಯಾತಃ=ಬಂದನು. ||೧೩೯||

ನಂದಿಮುಖಾತ್ = ನಂದಿಕೇಶ್ವರನ ಮುಖದ ದೆಸೆಯಿಂದ ಚ್ಯುತಂ = ಬಿದ್ದಂಥಾ ಶ್ಲಕ್ಷ್ಣಂ=ಮೃದುವಹಂಥಾ ವಚನಂ ತು=ವಾಕ್ಯವನು ಶ್ರುತ್ವಾ= ಕೇಳಿ ತದಾ=ಆಗ ಮಹಾದೇವಃ =ಪರಮೇಶ್ವರನು ಮೇಘಗಂಭೀರಯಾ = ಮೇಘದೋಪಾದಿ ಗಂಭೀರವಹಂಥಾ ವಾಚಾ=ವಾಕ್ಯದಿಂದ ಇದಂ=ಈ ಮಾತನು ಅಬ್ರವೀತ್=ನುಡಿದನು. ||೧೪೦||

ಭೋ ಗಿರಿಶ್ರೇಷ್ಠ=ಎಲೆ ಗಿರಿರಾಜನೇ! ಹೃದಯೇ = ಚಿತ್ತದಲ್ಲಿ ಯತ್ =ಆವುದಾನೊಂದು ಪ್ರತಿಷ್ಠಿತಂ=ಇರಲುಪಟ್ಟಿತ್ತು, ತತ್=ಅದು ವದತು= ನುಡಿಯಲ್ಪಡಲಿ. ತಸ್ಯ=ಆ ಚಿತ್ತದ ಅಯಂ ಕಾಮಃ=ಈ ಬಯಕೆ ಅಚಿರಾತ್ =ಬೇಗ ಭವಿಷ್ಯತಿ=[4]ಆದೀತು.[4] ನ ಸಂಶಯಃ=ಸಂದೇಹವಿಲ್ಲ. ||೧೪೧||

ಭೋ ವಿಪ್ರಾಃ!=ಎಲೆ ಋಷಿಗಳಿರಾ! ದೇವದೇವೇ=ದೇವದೇವನಹಂಥಾ ಮಹೇಶ್ವರೇ=ಮಹೇಶ್ವರನು ಏವಂ = ಈ ಪ್ರಕಾರದಲ್ಲಿ ಉಕ್ತೇ ಸತಿ = ನುಡಿಯಲುಪಡುತ್ತಿರಲು ತದಾ=ಆಗ ಗಿರಿಶಾರ್ದೂಲಃ=ಗಿರಿಶ್ರೇಷ್ಠನು ಅಗ್ರೇ ಚ =ಇದಿರಲ್ಲಿಯೂ ಕೃತಾಂಜಲಿಃ=ಕೈಮುಗಿದುಕೊಂಡಾತನು ಭೂತ್ವಾ = ಆಗಿ ಉವಾಚ=ನುಡಿದನು. ||೧೪೨||

ಹಿಮವಾನುವಾಚ—ಹಿಮವಂತನು ನುಡಿವುತಿದ್ದನು

---

[4] ಆದೂತು (ಕ)

ಯಾಽಽಸೀತ್ಪೂರ್ವಂ ಚ ತೇ ಪತ್ನೀ ಸಾಽವತೀರ್ಣಾ ಗೃಹೇ ಮಮ
ತಾಮೇವ ತವ ದಾನಾರ್ಥಮಾಗತೋಽಸ್ಮಿ ಮಹೇಶ್ವರ ||೧೪೩||

ಅಮೀ ಬ್ರಹ್ಮಾದಯೋ ದೇವಾ ತ್ವತ್ಸಮೀಪಮಿಹಾಗತಾಃ
ಕಿಂ ಗೋತ್ರಮಿತಿ ಪೃಚ್ಛಾಮಿ ಏಷಾಮಗ್ರೇ ವಿಭೋ ವದ ||೧೪೪||

ಶ್ರುತ್ವಾ ತು ಭಾರತೀಂ ತಸ್ಯ ವಿಶ್ವೇಶೋ ವಿಶ್ವವಂದಿತಃ
ಕಿಂ ಗೋತ್ರಮಿತಿ ಸಂಚಿಂತ್ಯ ನೋತ್ತರಂ ಚ ಸಸರ್ಜ ಹ ||೧೪೫||

ದೃಷ್ಟ್ವಾ ನಿರುತ್ತರಂ ಶಂಭುಂ ಜಹಸುರ್ದೇವದಾನವಾಃ
ಏಷ ಏವ ಜಗದ್ಯೋನಿಃ ಗೋತ್ರಮಸ್ಯ ಕಥಂ ಭವೇತ್ ||೧೪೬||

---

ಭೋ ಮಹೇಶ್ವರ ! = ಎಲೆ ಪರಮೇಶ್ವರನೇ ! ಪೂರ್ವಂ = ಮುನ್ನ ತೇ = ನಿನ್ನ ಪತ್ನೀ = ಸ್ತ್ರೀಯಹಂಥಾ ಯಾ = ಆವಳಾನೊಬ್ಬ ದೇವಿಯುಂಟು ಸಾ ಚ = ಆಯಕನು [ಆಕೆಯು], ಮಮ = ಎನ್ನ ಗೃಹೇ = ಗೃಹದಲ್ಲಿ ಅವತೀರ್ಣಾ = ಅವತರಿಸಿದಾಯಕನು ಆಸೀತ್ = ಆದಳು. ತಾಮೇವ = ಆ ಪಾರ್ವತೀ ದೇವಿಯನೇ ತವ = ನಿನಗೆ ದಾನಾರ್ಥಂ = ಕೊಡಲೋಸ್ಕರ ಆಗತಃ = ಬಂದಾತನು ಅಸ್ಮಿ = ಆಗುತ್ತಿದ್ದೇನು. ||೧೪೩||

ಬ್ರಹ್ಮಾದಯಃ = ಬ್ರಹ್ಮ ಮೊದಲಾದಂಥಾ ಅಮೀ ದೇವಾಃ = ಈ ದೇವರ್ಕಳು ಇಹ = ಇಲ್ಲಿ ತ್ವತ್ಸಮೀಪಂ = ನಿನ್ನ ಸಮೀಪವನು ಆಗತಾಃ = ಎಯ್ದಿದರು. ಗೋತ್ರಂ = ಗೋತ್ರವು ಕಿಂ = ಏನು ? ಇತಿ = ಹೀಂಗೆಂದು ಪೃಚ್ಛಾಮಿ = ಬೆಸಗೊಳುತ್ತಿದ್ದೇನು. ಭೋ ವಿಭೋ ! = ಎಲೆ ಒಡೆಯನೇ ! ಏಷಾಂ = ಇವರುಗಳ ಅಗ್ರೇ = ಇದಿರಲ್ಲಿ ವದ = ಹೇಳು. ||೧೪೪||

ವಿಶ್ವೇಶಃ = ಸಮಸ್ತ ಲೋಕಕ್ಕೆ ಒಡೆಯನಹಂಥಾ ವಿಶ್ವವಂದಿತಃ = ಸಮಸ್ತ ಲೋಕದಿಂದ ವಂದಿಸಿಕೊಳಲುಪಟ್ಟಂಥಾ ಸಃ = ಆ ಪರಮೇಶ್ವರನು ತಸ್ಯ = ಆ ಗಿರಿರಾಜನ ಭಾರತೀಂ = ವಾಕ್ಯವನು ಶ್ರುತ್ವಾ ತು = [1]ಕೇಳಿಯು[1] ಗೋತ್ರಂ = ಗೋತ್ರವು ಕಿಮಿತಿ = ಏನೆಂದು ಸಂಚಿಂತ್ಯ = ಚಿಂತಿಸಿ ಉತ್ತರಂ = ಮಾತನು ನ ಸಸರ್ಜ ಹ = ನುಡಿದುದಿಲ್ಲ. ||೧೪೫||

ನಿರುತ್ತರಂ = ಉತ್ತರವಿಲ್ಲದೇ ಇದ್ದಂಥಾ ಶಂಭುಂ = ಪರಮೇಶ್ವರನನು

---

[1] ಕೇಳಿ ಉ (ಕ)

ಇತ್ಯೂಚುರ್ವಿಬುಧಾಸ್ಸರ್ವೇ ಹಿಮವಂತಂ ನಗೋತ್ತಮಮ್
ದೇವತಾನಾಂ ವಚಃ ಶ್ರುತ್ವಾ ಗಿರಿರಾಜೋಽಬ್ರವೀದಿದಮ್ ॥೧೪೭॥

ವಿಶ್ವೇಶ್ವರಂ ಪರಂ ಧಾಮ ಪರಮಾತ್ಮಾನಮವ್ಯಯಮ್
ಶಾಶ್ವತಂ ಗಿರಿಶಂ ಸ್ಥಾಣುಂ ವಿಶ್ವಾಕಾರಂ ಸನಾತನಮ್ ॥೧೪೮॥

ದತ್ತಾ ದತ್ತಾ ಪುನರ್ದತ್ತಾ ಉಮಾ ಸತ್ಯೇನ ತೇ ಪ್ರಭೋ
ತತೋ ಮಹಾನ್ ರವೋ ವಿಪ್ರಾ ಜಯಶಬ್ದಾದಿಮಂಗಳೈಃ ॥೧೪೯॥

---

ದೃಷ್ಟ್ವಾ = ಕಂಡು ದೇವದಾನವಾಃ = ದೇವರ್ಕಳೂ ರಾಕ್ಷಸರೂ ಜಹಸುಃ = ನಕ್ಕರು. ಏಷ ಏವ = ಈ ಪರಮೇಶ್ವರನೇ ಜಗದ್ಯೋನಿಃ = ಲೋಕಕ್ಕೆ ಉತ್ಪತ್ತಿ ಸ್ಥಾನನಹಂಥಾ ಆತನು. ಅಸ್ಯ = ಈ ಶಿವಂಗೆ ಗೋತ್ರಂ = ಗೋತ್ರವು ಕಥಂ = ಭವೇತ್ = ಹೇಂಗಹುದು ? ॥೧೪೬॥

ಸರ್ವೇ ವಿಬುಧಾಃ = ಸಮಸ್ತ ದೇವತೆಗಳು ನಗೋತ್ತಮಂ = ಪರ್ವತಂಗಳಿಗೆ ಉತ್ತಮನಹಂಥಾ ಹಿಮವಂತಂ = ಹಿಮವತ್ಪರ್ವತನನು ಕುರಿತು ಇತಿ = ಈ ಪ್ರಕಾರದಲ್ಲಿ ಊಚುಃ = ನುಡಿದರು. ದೇವತಾನಾಂ = ದೇವತೆಗಳ ವಚಃ = ವಾಕ್ಯವನು ಶ್ರುತ್ವಾ = ಕೇಳಿ ಗಿರಿರಾಜಃ = ಗಿರಿರಾಜನು ಇದಂ = ಈ ವಾಕ್ಯವನು ಅಬ್ರವೀತ್ = ನುಡಿದನು. ॥೧೪೭॥

ವಿಶ್ವೇಶ್ವರಂ = ವಿಶ್ವಕ್ಕೆ ಒಡೆಯನಹಂಥಾ ಪರಂ ಧಾಮ = ಪರಮ ತೇಜಸನುಳ್ಳಂಥಾ ಪರಮಾತ್ಮಾನಂ = ಪರಮಾತ್ಮನಹಂಥಾ ಅವ್ಯಯಂ = ಬಳಕೆಗೆ ಬಾರದಂಥಾ ಶಾಶ್ವತಂ = ನಿತ್ಯನಹಂಥಾ ಗಿರಿಶಂ = ಪರ್ವತಂಗಳಲ್ಲಿ ಶಯನವ ಮಾಡಿದಂಥಾ ಸ್ಥಾಣುಂ = ತ್ರೈಲೋಕ್ಯಕ್ಕೆ ಮೂಲಸ್ತಂಭವಹಂಥಾ ವಿಶ್ವಾಕಾರಂ = ವಿಶ್ವರೂಪನಹಂಥಾ ಸನಾತನಂ = [1]ಒಪ್ಪುತ್ತಿದ್ದಂಥಾ[1] ಪರಮೇಶ್ವರನನು ಕುರಿತು,

ಭೋಃ ಪ್ರಭೋ = ಎಲೆ ಒಡೆಯನೇ ತೇ = ನಿನಗೆ ಉಮಾ = ಪಾರ್ವತೀದೇವಿ ಸತ್ಯೇನ = ನಿಶ್ಚಯದಿಂದ ದತ್ತಾ = ಕೊಡಲ್ಪಟ್ಟಾಯಕನು [2]ದತ್ತಾ = ಕೊಡಲ್ಪಟ್ಟಾಯಕನು[2] ಪುನಃ = ಮತ್ತೆಯೂ ದತ್ತಾ = ಕೊಡಲ್ಪಟ್ಟಾಯಕನು. ತತಃ = ಅಷ್ಟರ ಮೇಲೆ ಭೋ ವಿಪ್ರಾಃ = ಎಲೆ ಸಮಸ್ತ[3]ಋಷಿ[3]ಗಳಿರಾ ! ಜಯಶಬ್ದಾದಿಮಂಗಳೈಃ = ಜಯ ಜಯ ಎಂಬ ಧ್ವನಿ ಮೊದಲಾದಂಥಾ ಮಂಗಳಗಳೊಡನೆ

---

[1] ಒಪ್ಪುತಂವಿದ್ದಂಥಾ (ಖ) [2] ಇಲ್ಲ (ಕ) [3] ರು (ಕ)

ದುಂದುಭೀನಾಂ ಚ ವಾದ್ಯಾನಾಮಭವತ್ಸಾಗರೋಪಮಃ
ಗೃಹೀತೇತಿ ಶಿವಃ ಪ್ರಾಹ ಪಾರ್ವತೀ ಪರ್ವತೇಶ್ವರಮ್ ||೧೫೦||

ತದ್ಧಸ್ತೇ ಭಗವಾನ್ ಶಂಭುರಂಗುಲೀಯಂ ಪ್ರವೇಶಯತ್
ಇಮಂ ಚ ಕಲಶಂ ಹೈಮಮಾದಾಯ ತ್ವಂ ನಗೋತ್ತಮ ||೧೫೧||

ಯಾಹಿ ಗತ್ವಾ ಅನೇನೈವ ತಾಮುಮಾಂ ಸ್ನಾಪಯ ತ್ವರಾತ್
ಅನ್ಯೇಷಾಂ ಪರಿಹಾರಾರ್ಥಮೇಷ ಏವ ವಿಧಿಸ್ಸದಾ ||೧೫೨||

ಜಗತ್ತ್ರಯೇಽಪಿ ನೂನಂ ಸ್ಯಾತ್ ವ್ರಜ ತೂರ್ಣಂ ನಗಾಧಿಪ
ತತಸ್ತುಷ್ಟೋ ಮಹಾಶೈಲೋ ನಮಸ್ಕೃತ್ಯ ಮಹೇಶ್ವರಮ್ ||೧೫೩||

---

ದುಂದುಭೀನಾಂ = [3]ಭೇರಿಗಳ[3] ವಾದ್ಯಾನಾಂ = ವಾದ್ಯಂಗಳ ಮಹತ್ = ಬಹಳವ ಹಂಥಾ ರವಶ್ಚ = ಧ್ವನಿಯೂ ಸಾಗರೋಪಮಃ = ಸಮುದ್ರ ಘೋಷಕ್ಕೆ ಸಮಾನ ವಹಂಥಾದ್ದು ಅಭವತ್ = ಆಯಿತ್ತು. ಪಾರ್ವತೀ = ಪಾರ್ವತೀದೇವಿ ಗೃಹೀತಾ = ಗ್ರಹಿಸಲುಪಟ್ಟಳು. ಇತಿ = ಹೀಂಗೆಂದು ಶಿವಃ = ಪರಮೇಶ್ವರನು ಪರ್ವತೇಶ್ವರಂ = ಹಿಮವತ್ಪರ್ವತನನು ಕುರಿತು ಪ್ರಾಹ = ನುಡಿದನು. ||೪೮-೧೫೦||

ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಹಂಥಾ ಶಂಭುಃ = ಪರಮೇಶ್ವರನು ತದ್ಧಸ್ತೇ = ಆ ಹಿಮವತ್ಪರ್ವತನ ಹಸ್ತದಲ್ಲಿ ಅಂಗುಲೀಯಂ = ಮುದ್ರೆಯುಂಗುರವನು ಪ್ರವೇಶಯತ್ = ಕೊಟ್ಟನು. ಭೋ ನಗೋತ್ತಮ = ಎಲೆ ಪರ್ವತಶ್ರೇಷ್ಠನೇ! ಹೈಮಂ = ಸುವರ್ಣಸಂಬಂಧವಹಂಥಾ ಇಮಂ ಕಲಶಂ ಚ = ಈ ಕಳಶವನು ಆದಾಯ = ತೆಗೆದುಕೊಂಡು ತ್ವಂ = ನೀನು ಯಾಹಿ = ಹೋಗು. ಗತ್ವಾ = ಹೋಗಿ ಅನೇನೈವ = ಈ ಸುವರ್ಣದ ಕಲಶೋದಕದಿಂದವೇ ತಾಂ ಉಮಾಂ = ಆ ಪಾರ್ವತೀದೇವಿಯನು ತ್ವರಾತ್ = ಬೇಗದ ದೆಸೆಯಿಂದ ಸ್ನಾಪಯ = ಅಭಿಷೇಕವ ಮಾಡು. ಅನ್ಯೇಷಾಂ = ಉಳಿದಂಥಾ ಅಶುಭಂಗಳ ಪರಿಹಾರಾರ್ಥಂ = ತೊಲಗಿಸಲೋಸ್ಕರ ಸದಾ = ಎಲ್ಲಾಗವೂ ಏಷ ಏವ = ಇದೇ ವಿಧಿಃ = ವಿಧಾನವು. ||೪೯-೧೫೨||

ಜಗತ್ತ್ರಯೇಽಪಿ = ಮೂರು ಲೋಕದಲ್ಲಿಯೂ ನೂನಂ = ಉತ್ಕೃಷ್ಟವಹಂಥಾ ಆಯಕನು ಸ್ಯಾತ್ = ಅಹಳು. ಭೋ ನಗಾಧಿಪ! = ಎಲೆ ಗಿರಿರಾಜನೇ! ತೂರ್ಣಂ = ಬೇಗ ವ್ರಜ = ಹೋಗು. ತತಃ = ಅಸ್ಟರ ಮೇಲೆ ಮಹಾಶೈಲಃ

---

[3] ಭೇರಿ ಮದ್ದಳೆಗಳ (ಖ)

ಯಯೌ [1]ಗತ್ವಾ[1] ತು ತಾಂದೇವೀಂ ದೃಷ್ಟ್ವಾ ಚೈವ ತು ಋತ್ವಿಜಃ
[2] ಸ್ನಾಪಯೆತ್ಕಲಶೇನೈವ ಪಾರ್ವತೀಂ ಪರಮೇಶ್ವರಮ್ ||೧೫೪||

ಏವಂ ಯಜ್ಞರತೋ ವಿಪ್ರಾಃ ತರ್ಪಣಾಯ ಚರಾಚರಮ್
ಅಭವದ್ದೇವಮುದ್ದಿಶ್ಯ ಶಂಕರಂ ಸ ಗಿರಿಸ್ತ[3]ಥಾ[3] ||೧೫೫||

ಅಥಾಸ್ಮಿನ್ನಂತರೇ ದೇವೋ ಧರ್ಮಕೇತುರ್ಮಹೇಶ್ವರಃ
ಉತ್ಥಿತೋ ಮುನಿಶಾರ್ದೂಲಾಃ ಸಮಾಲೋಕ್ಯ ಚ ಶಾರ್ಙ್ಗಿಣಮ್ ||

ಅಭವಜ್ಜಯಶಬ್ದಾನಾಂ ತುಮುಲೋ ಹಿ ಮಹಾಂಸ್ತದಾ
ಪುಷ್ಪವೃಷ್ಟಿಃ ಪಪಾತೋಚ್ಚೈಃ ಸತ್ಯಲೋಕಾದ್ದ್ವಿಜೋತ್ತಮಾಃ||೧೫೭

= ಮಹಾಪರ್ವತನಹಂಥಾ ಗಿರಿರಾಜನು ತುಷ್ಟಃ = ಸಂತೋಷಿಸಿದಾತನಾಗಿ ಮಹೇಶ್ವರಂ = ಶಿವನನು ನಮಸ್ಕೃತ್ಯ = ನಮಸ್ಕರಿಸಿ ಯಯೌ = ಹೋದನು. ಗತ್ವಾ ತು = ಹೋಗಿಯು, ತಾಂ ದೇವೀಂ — ಆ ಪಾರ್ವತೀದೇವಿಯನು ದೃಷ್ಟ್ವಾ ಚೈವ ತು — ಕಂಡು ಕಲಶೇನೈವ = ಸುವರ್ಣಕಲಶದಿಂದವೇ ಪಾರ್ವತೀಂ = ಪಾರ್ವತೀ ದೇವಿಯನು ಹೇ ಋತ್ವಿಜಃ ! = ಎಲೆ ಋತ್ವಿಕ್ಕುಗಳಹ ಮುನಿಗಳಿರಾ ! ಸ್ನಾಪಯತ್ = ಅಭಿಷೇಕವ ಮಾಡಿದನು. ಏವಂ = ಈ ಪ್ರಕಾರದಲ್ಲಿ ಸ ಗಿರಿಃ = ಆ ಹಿಮವತ್ಪರ್ವತನು ಯಜ್ಞರತಃ = ವಿವಾಹಯಜ್ಞದಲ್ಲಿ ತಾತ್ಪರ್ಯವನುಳ್ಳಾತನಾಗಿ ಭೋ ವಿಪ್ರಾಃ ! = ಎಲೆ ನೈಮಿಷಾರಣ್ಯ ವಾಸಿಗಹಂಥಾ ಋಷಿಗಳಿರಾ ! ದೇವಂ = ದೇವರಹಂಥಾ ಶಂಕರಂ = ಸುಖವನು ಮಾಡುತ್ತಿದ್ದಂಥಾ ಪರಮೇಶ್ವರಂ = ಪರಮೇಶ್ವರನನು ಉದ್ದಿಶ್ಯ = ಕುರಿತು ಚರಾಚರಂ = ಚರಾಚರವಹಂಥಾ ಜಗತ್ತನು ತಥಾ = ಹಾಂಗೆ ತರ್ಪಣಾಯ = ಸಂತುಷ್ಟಿ ಮಾಡಲೋಸ್ಕರ ಅಭವತ್ = ಆದನು. ||೧೫೩-೧೫೫||

ಅಥ = ಅನಂತರದಲ್ಲಿ ಅಸ್ಮಿನ್ನಂತರೇ = ಈ ವೇಳೆಯಲ್ಲಿ ಭೋ ಮುನಿಶಾರ್ದೂಲಾಃ ! = ಎಲೆ ಮುನಿಶ್ರೇಷ್ಠರುಗಳಿರಾ ! ಧರ್ಮಕೇತುಃ = ಧರ್ಮಧ್ವಜನಹಂಥಾ ದೇವಃ = ಪ್ರಕಾಶಿಸುತ್ತಿದ್ದಂಥಾ ಮಹೇಶ್ವರಃ = ಪರಮೇಶ್ವರನು ಶಾರ್ಙ್ಗಿಣಂ = ಹರಿಯನು ಸಮಾಲೋಕ್ಯ ಚ = ನೋಡಿಯೂ ಉತ್ಥಿತಃ = ಎದ್ದನು

ಭೋ ದ್ವಿಜೋತ್ತಮಾಃ = ಎಲೆ ಬ್ರಾಹ್ಮಣೋತ್ತಮರುಗಳಿರಾ ! ತದಾ = ಆಗ ಜಯಶಬ್ದಾನಾಂ = ಜಯ ಜಯಾ ಎಂಬ ಧ್ವನಿಗಳ ತುಮುಲಃ = ಬಹುಳವು

[1] ದತ್ವಾ (ಘ) [2] ಆರ್ಷಃ ಅಡಾಗಮಾಭಾವಃ. [3] ದಾ (ಘ)

ವನಾನಾಮಧಿಪಾಶ್ಚೈವ ಋತವಶ್ಚ ಮುದಾನ್ವಿತಾಃ
ಕುಸುಮೈರ್ದಿವ್ಯಗಂಧಾಢ್ಯೈಃ ವವೃಷುರ್ಮೇಘವೃಂದವತ್

ವೀಣಾವೇಣುಮೃದಂಗಾನಾಂ ದುಂದುಭೀನಾಂ ತತೋ ರವೈಃ
ವಿರಿಂಚಿಹರಿಶಕ್ರಾದ್ಯಾಃ ಪೂರಯಂತಸ್ಸುರಾಸುರಾಃ ||೧೫೯||

ತ್ರೈಲೋಕ್ಯಮಿವ ನಾದೇನ ದೇವಾ ಘೋಷಂ ಪ್ರಚಕ್ರಿರೇ ||೧೬೦||

ಗಾಯತ್ರೀ ಚೈವ ಸಾವಿತ್ರೀ ಶಚೀ ಲಕ್ಷ್ಮೀಃ ಸರಸ್ವತೀ
ಅದಿತಿಶ್ಚ ದಿತಿಃ ಕದ್ರೂರ್ವಿನತಾದ್ಯಾಸ್ತಥಾ ಪರಾಃ ||೧೬೧||

---

ಮಹಾನ್ = ಅಧಿಕವಾಗಿ ಅಭವದ್ಧಿ = ಆಯಿತಲಾ. ಸತ್ಯಲೋಕಾತ್ = ಸತ್ಯಲೋಕದ ದೆಸೆಯಿಂದ ಉಚ್ಚೈಃ = ಉನ್ನತವಹಂಥಾ ಪುಷ್ಪವೃಷ್ಟಿಃ = ಹೂಮಳೆ ಪಪಾತ = ಬಿದ್ದಿತು. ||೧೫೬–೧೫೭||

ವನಾನಾಂ = ವನಂಗಳಿಗೆ ಅಧಿಪಾಶ್ಚೈವ = ಒಡೆಯರಹಂಥಾ ಋತವಶ್ಚ = ಷಡೃತುಗಳು ಮುದಾನ್ವಿತಾಃ = ಸಂತೋಷದೊಡನೆ ಕೂಡಲುಪಟ್ಟಂಥಾವಾಗಿ ಮೇಘವೃಂದವತ್ = ಮೇಘಸಮೂಹದೋಪಾದಿ ದಿವ್ಯಗಂಧಾಢ್ಯೈಃ = ಮನೋಹರವಹ ಪರಿಮಳದಿಂದ ಬಹಳವಹಂಥಾ ಕುಸುಮೈಃ = ಪುಷ್ಪಂಗಳಿಂದ ವವೃಷುಃ = ಸುರಿದವು. ||೧೫೮||

ತತಃ = ಅಸ್ತರಮೇಲೆ ವಿರಿಂಚಿಹರಿಶಕ್ರಾದ್ಯಾಃ = ಬ್ರಹ್ಮ ವಿಷ್ಣು ಇಂದ್ರ ಮೊದಲಾದಂಥಾ ಸುರಾಸುರಾಃ = ದೇವಾಸುರರುಗಳು ವೀಣಾವೇಣುಮೃದಂಗಾನಾಂ = ವೀಣೆ ಕೊಳಲು ಮದ್ದಳೆಗಳ ದುಂದುಭೀನಾಂ = ಭೇರಿಗಳ ರವೈಃ = ಧ್ವನಿಗಳಿಂದ ಪೂರಯಂತಃ = ತ್ರೈಲೋಕ್ಯವನು ತುಂಬಿದರು. ||೧೫೯||

ತ್ರೈಲೋಕ್ಯಂ = ಮೂರು ಲೋಕವನು ನಾದೇನ — ಧ್ವನಿಯಿಂದ ಪೂರಯಂತ ಇವ = ತುಂಬಲು[1]ಪಟ್ಟರಕ್ಕೈ[1] ಎಂಬ ಹಾಂಗೆ ದೇವಾಃ = ದೇವರ್ಕಳು ಘೋಷಂ = ಮಹಾಘೋಷವನು ಪ್ರಚಕ್ರಿರೇ = ಮಾಡಿದರು. ||೧೬೦||

ಗಾಯತ್ರೀ ಚೈವ = ಗಾಯತ್ರಿಯೂ ಸಾವಿತ್ರೀ = ಸಾವಿತ್ರೀದೇವಿ, ಶಚೀ = ಶಚೀದೇವಿ, ಲಕ್ಷ್ಮೀಃ = ಮಹಾ ಲಕ್ಷ್ಮಿ, ಸರಸ್ವತೀ = ಸರಸ್ವತೀದೇವಿ, ಅದಿತಿಶ್ಚ = ಅದಿತಿದೇವಿ, ದಿತಿಃ = ದಿತಿದೇವಿ ತಥಾ = ಹಾಂಗೆ ಕದ್ರುವಿನತಾದ್ಯಾಃ = [3]ಕದ್ರೂ ವಿನತೆ ಮೊದಲಾದಂಥಾವರುಗಳೂ ಪರಾಃ = ಮತ್ತೆ ಕೆಲಬರುಗಳೂ,[2] ||೧೬೧||

---

[1] ಪಟ್ಟುದಕ್ಕೈ (ಕ) [2] ಲುಪ್ತ (ಕ)

ಅಮಾವಾಸ್ಯಾ ಕುಹೂಶ್ಚೈವ ಸಿನೀವಾಲೀ ಧೃತಿರ್ಮತಿಃ
ಗಂಗಾದ್ಯಾಸ್ಸರಿತಃ ಸರ್ವಾಃ ಕೃತ್ಸ್ನಶೋ ದೇವಯೋಷಿತಃ ||೧೬೨||

ರಂಭಾದ್ಯಪ್ಸರಸೋ ದಿವ್ಯಾ ರುದ್ರಕನ್ಯಾಸ್ತಥೈವ ಚ
ವಿದ್ಯಾಧರ್ಯೋಽಥ ನಾಗಿನ್ಯೋ ದೈತ್ಯಾನಾಂ [1]ಪತ್ನಯ[1]ಸ್ತಥಾ ೧೬೩||

[2]ಸಿದ್ಧಕನ್ಯಾ[2] ಮನೋಹರ್ಷಾ ಯಕ್ಷಕನ್ಯಾಸ್ತಥೈವ ಚ
ಮಾತರಃ ಸಪ್ತ ಯಾಶ್ಚೈವ ಯಾಶ್ಚ ನಕ್ಷತ್ರಮಾತರಃ ||೧೬೪||

ಗಿರೀಣಾಂ [3]ಪತ್ನಯೋ [3]ಯಾಶ್ಚ ಸಮುದ್ರಾಶ್ಚ ಸರಾಂಸಿ ಚ
ಮಂಗಲಂ ಗಾಯಮಾನಾಸ್ತು ಅರ್ಘ್ಯಮಷ್ಟಾಂಗಸಂಯುತಮ್||
ಸಪ್ರಹೃಷ್ಟಾ ದದುಃ ಸರ್ವಾ ದೇವದೇವಸ್ಯ ಪಾದಯೋಃ ||೧೬೫||

---

ಅಮಾವಾಸ್ಯಾ = ಅಮಾವಾಸೆ, ಕುಹೂಶ್ಚೈವ = ಕುಹೂತಿಥಿ, ಸಿನೀವಾಲೀ = ಸಿನೀವಾಲೀ ತಿಥಿ, ಧೃತಿಃ = ಧೈರ್ಯದೇವತೆ, ಮತಿಃ = ಮತಿ, ಗಂಗಾದ್ಯಾಃ = ಗಂಗೆ ಮೊದಲಾದಂಥಾ ಸರ್ವಾಃ ಸರಿತಃ = ಸಮಸ್ತ ನದಿಗಳು ಕೃತ್ಸ್ನಶಃ = ಸಮಸ್ತವಹಂಥಾ ದೇವಯೋಷಿತಃ = ದೇವಸ್ತ್ರೀಯರುಗಳು, ||೧೬೨||

ರಂಭಾದ್ಯಪ್ಸರಸಃ = ರಂಭೆ ಮೊದಲಾದ ಅಪ್ಸರ ಸ್ತ್ರೀಯರುಗಳು ದಿವ್ಯಾಃ = ದೇವಸ್ತ್ರೀಯರುಗಳು ತಥೈವ ಚ = ಹಾಂಗೆ ರುದ್ರಕನ್ಯಾಃ = ರುದ್ರಕನ್ನಿಕೆಯರುಗಳು ವಿದ್ಯಾಧರ್ಯಃ = ವಿದ್ಯಾಧರಸ್ತ್ರೀಯರುಗಳು ಅಥ = ಅನಂತರದಲ್ಲಿ ನಾಗಿನ್ಯಃ = ನಾಗಿಣಿಯರುಗಳು ತಥೈವ = ಹಾಂಗೆ ದೈತ್ಯಾನಾಂ = ರಾಕ್ಷಸರುಗಳ ಪತ್ನಯಃ = ಸ್ತ್ರೀಯರುಗಳು, ||೧೬೩||

ಮನೋಹರ್ಷಾಃ = ಮನೋಹರವಹಂಥಾ ಸಿದ್ಧಕನ್ಯಾಃ = ಸಿದ್ಧ ಕನ್ನಿಕೆಯರುಗಳು, ತಥೈವ ಚ = ಹಾಂಗೆ ಯಕ್ಷಕನ್ಯಾಃ = ಯಕ್ಷಕನ್ನಿಕೆಯರುಗಳು, ಯಾಃ = ಆರು ಕೆಲಂಬರು ಸಪ್ತಮಾತರಶ್ಚೈವ = ಸಪ್ತಮಾತೃಕೆಯರುಗಳು ಯಾಃ = ಆರು ಕೆಲಬರು ನಕ್ಷತ್ರಮಾತರಶ್ಚ = ನಕ್ಷತ್ರಮಾತೆಯರುಗಳು. ||೧೬೪||

ಯಾಃ = ಆರು ಕೆಲಬರು ಗಿರೀಣಾಂ ಪತ್ನಯಶ್ಚ = ಪರ್ವತಂಗಳ ಸ್ತ್ರೀಯರುಗಳು ಸಮುದ್ರಾಶ್ಚ = ಸಮುದ್ರಂಗಳು ಸರಾಂಸಿ ಚ = ಕೊಳಂಗಳು ಮಂಗಳಂ = ಶೋಭನವನು ಗಾಯಮಾನಾಸ್ತು = ಪಾಡುತ್ತಿರ್ದವರುಗಳಾಗಿ ಅಷ್ಟಾಂಗ-

---

1,3 ಪುರಾಣಪಾಠಾತ್ ಸಾಧುತ್ವಂ 2 ರುದ್ರಕನ್ಯಾ (ಘ)

ಏತಸ್ಮಿನ್ನಂತರೇ ವಿಪ್ರಾ ಗಿರಿರಾಜಪ್ರಚೋದಿತಃ
ಮೈನಾಕಸ್ತತ್ರ ಸಂಪ್ರಾಪ್ತೋ ಹೇಮಕುಂಭಕರಶ್ಶುಚಿಃ ||೧೬೬||

ಶಾಲಂಕಾಯನಪೌತ್ರಸ್ಯ ಗತ್ವಾ ತಸ್ಯಾಗ್ರತಃ ಸ್ಥಿತಃ
ತೇನಾಪಿ ದೇವದೇವಸ್ಯ ಜ್ಞಾಪಿತೋ ಗಿರಿರಾಟ್ಸುತಃ ||೧೬೭||

ಅಥಾಸೌ ಭಗವಾನ್ ದೇವೋ ಮಂಗಲೇಶೋ [3][ಜಲೇ ಶಯಃ][3]
ಅಸಿಂಚದ್ವೇಧಸಾ ಯುಕ್ತಃ ಸಮುದ್ರೈ ಶ್ಶೂಲಪಾಣಿನಮ್ ೧೬೮||

ಸಂಯುತಂ = ಗಂಧ ಪುಷ್ಪ ತಿಲಾಕ್ಷತೆ ಮುಂತಾದ ಅಷ್ಟಾಂಗದೊಡನೆ ಕೂಡಿದಂಥಾ ಅರ್ಘ್ಯಂ = ಅರ್ಘ್ಯವನ್ನು ಸರ್ವಾಃ = ಸಮಸ್ತ ಮುತ್ತೈದೆಯರುಗಳು ಸಪ್ರಹೃಷ್ಟಾಃ = ಸಂತೋಷದಿಂದ ಸಹಿತೆಯರಾಗುತವು ದೇವದೇವಸ್ಯ = ಪರಮೇಶ್ವರನ ಪಾದಯೋಃ = ಶ್ರೀಚರಣವೆರಡಕ್ಕೆ ದದುಃ = ಕೊಟ್ಟರು. ||೧೬೫||

ಏತಸ್ಮಿನ್ನಂತರೇ = ಈ ವೇಳೆಯಲ್ಲಿ ಭೋ ವಿಪ್ರಾಃ = ಎಲೆ ಮುನಿಗಳಿರಾ ! ಗಿರಿರಾಜಪ್ರಚೋದಿತಃ = ಹಿಮವತ್ಪರ್ವತನಿಂದ ಕಳುಹಲುಪಟ್ಟಂಥಾ ಶುಚಿಃ = ಶುಚಿಃ ಯುಹಂಥಾ ಮೈನಾಕಃ = ಮೈನಾಕ ಪರ್ವತನು ಹೇಮಕುಂಭಕರಃ ಸುವರ್ಣ ಕಲಶಹಸ್ತದಲ್ಲಿ ಉಳ್ಳಾತನಾಗಿ ತತ್ರ = ಅಲ್ಲಿ ಸಂಪ್ರಾಪ್ತಃ = ಎಯ್ದಿದನು.

ಗಿರಿರಾಟ್ಸುತಃ = ಗಿರಿರಾಜನ ಪುತ್ರನಹಂಥಾ ಮೈನಾಕನು ಗತ್ವಾ = ಹೋಗಿ, ಶಾಲಂಕಾಯನ ಪೌತ್ರಸ್ಯ = ಶಾಲಂಕಾಯನ ಋಷಿಯ ಮೊಮ್ಮಗನಹಂಥಾ ತಸ್ಯ = ಆ ನಂದಿಕೇಶ್ವರನ ಅಗ್ರತಃ = ಮುಂದೆ ಸ್ಥಿತಃ = ಇದ್ದಾತನಾಗಿ ತೇನಾಪಿ = ಆ ನಂದಿಕೇಶ್ವರನಿಂದವೂ ದೇವದೇವಸ್ಯ = ಪರಮೇಶ್ವರಂಗೆ ಜ್ಞಾಪಿತಃ = ಬಿನ್ನಹಂ ಮಾಡಿಸಿದನು. ||೧೬೬-೧೬೭||

ಅಥ = ಅನಂತರದಲ್ಲಿ ಭಗವಾನ್ = ಲಕ್ಷ್ಮಿಯನುಳ್ಳಂಥಾ ದೇವಃ = ಹೊಳವುತ್ತಿದ್ದಂಥಾ ಮಂಗಲೇಶಃ = ಶೋಭನಂಗಳಿಗೆ ಒಡೆಯನಹಂಥಾ ಜ[ಲೇ] ಶಯಃ = ಜಲಶಯನಹಂಥಾ ಅಸೌ = ಈ ವಿಷ್ಣು ವೇಧಸಾ = ಬ್ರಹ್ಮನೊಡನೆ ಯುಕ್ತಃ = ಕೂಡಲುಪಟ್ಟವನಾಗಿ ಸಮುದ್ರೈಃ = ಸಮುದ್ರಂಗಳಿಂದ ಶೂಲಪಾಣಿನಂ = ಪರಮೇಶ್ವರನನು ಅಸಿಂಚತ್ = ಅಭಿಷೇಕವ ಮಾಡಿದನು. ||೧೬೮

3 ಜಲಾಶಯಃ ಇತಿ ಪುರಾಣಪಾಠಃ. 4 ಟ್ವಾತ (ಖ)

ಸ್ನಾಪ್ಯಮಾನೇ ತದಾ ದೇವೇ ನದ್ಯೋ ವೈ ಸಾಗರಾ ದ್ವಿಜಾಃ
ಬಭೂವುಸ್ಸಲಿಲೈರ್ಮುಕ್ತಾಃ ಕೃಶಾಂಗಾಸ್ಸ್ವೇದಸಂಯುತಾಃ ||೧೬೯||

ಅಥ ತೇ ತ್ರಿದಶಾಸ್ಸರ್ವೇ ಸನಾರಾಯಣಕಾ ದ್ವಿಜಾಃ
ಪರಂ ವಿಸ್ಮಯಮಾಪನ್ನಾ ಭವಂ ಪಶ್ಯಂತಿ ಚಾದ್ಭುತಮ್ ||೧೭೦||

ತತೋ [1]ನಿರೀಕ್ಷಮಾಣಾಸ್ತು ಶರೀರೇ ಶಂಕರಸ್ಯ ಚ
ನದೀಸ್ಸರ್ವಾಸ್ಸಮುದ್ರಾಂಶ್ಚ ಪ್ರಪಶ್ಯಂತಿ ಸುವಿಸ್ಮಿತಾಃ ||೧೭೧||

ಯೋಗಮಾಯಾವೃತಂ ವೀಕ್ಷ್ಯ ಯತ್ತೋಯಂ ಜಗತಿ ಸ್ಥಿತಮ್
ಅಸ್ತುವನ್ ಪಶುಭರ್ತಾರಂ ಬ್ರಹ್ಮಾದ್ಯಾ ದೇವತಾಗಣಾಃ ||೧೭೨||

ದೇವೇ = ಪರಮೇಶ್ವರನು ಸ್ನಾಪ್ಯಮಾನೇ ಸತಿ = ಮಜ್ಜನವ ಮಾಡುತ್ತಾ ಇರಲು ತದಾ = ಆಗ ನದ್ಯೋ ವೈ = ನದಿಗಳು ಸಾಗರಾಃ = ಸಮುದ್ರಂಗಳು ಭೋದ್ವಿಜಾಃ = ಎಲೆ ಋಷಿಗಳಿರಾ ! ಕೃಶಾಂಗಾಃ = ಬಡವಾದ ಶರೀರವನುಳ್ಳಂಥಾ ಸ್ವೇದಸಂಯುತಾಃ = ಬೆವರಿನೊಡನೆ ಕೂಡಲುಪಟ್ಟಂಥಾವಾಗಿ ಸಲಿಲೈಃ = ಉದಕಂಗಳಿಂದ ಮುಕ್ತಾಃ = ಬಿಡಲುಪಟ್ಟಂಥಾವು ಬಭೂವುಃ = ಆದವು. ||೧೬೯||

ಅಥ = ಅನಂತರದಲ್ಲಿ ಭೋ ದ್ವಿಜಾಃ = ಎಲೆ ಋಷಿಗಳಿರಾ ! ಸನಾರಾಯಣಕಾಃ = ನಾರಾಯಣನೊಡನೆ ಕೂಡಿದಂಥಾ ತೇ ಸರ್ವೇ ತ್ರಿದಶಾಃ = ಆ ಸಮಸ್ತ ದೇವತೆಗಳೂ ಪರಂ ವಿಸ್ಮಯಂ = ಅತ್ಯಾಶ್ಚರ್ಯವನು ಆಪನ್ನಾಃ = ಎಯ್ದಿದಂಥಾವರುಗಳಾಗಿ ಅದ್ಭುತಂ = ಆಶ್ಚರ್ಯವಹ ರೂಪನುಳ್ಳಂಥಾ ಭವಂ ಚ = ಪರಮೇಶ್ವರನನು ಪಶ್ಯಂತಿ = ನೋಡುತ್ತಿದ್ದಾರು. ||೧೭೦||

ನಿರೀಕ್ಷಮಾಣಾಸ್ತು = ನೋಡುತ್ತಿದ್ದಂಥಾ ದೇವರ್ಕಳು ತತಃ = ಆಷ್ಟರಮೇಲೆ ಶಂಕರಸ್ಯ = ಶಿವನ ಶರೀರೇ ಚ = ಶರೀರದಲ್ಲಿಯೂ ಸರ್ವಾಃ ನದೀಃ = ಸಮಸ್ತ ನದಿಗಳನೂ ಸಮುದ್ರಾಂಶ್ಚ = ಸಮುದ್ರಂಗಳನೂ ಸುವಿಸ್ಮಿತಾಃ = ಬೆರಗಾದಂಥಾವರುಗಳಾಗಿ ಪ್ರಪಶ್ಯಂತಿ = ಕಾಣುತ್ತಿದ್ದರು. ||೧೭೧||

ಬ್ರಹ್ಮಾದ್ಯಾಃ = ಬ್ರಹ್ಮ ಮೊದಲಾದಂಥಾ ದೇವತಾಗಣಾಃ = ದೇವರ್ಕಳ ಸಮೂಹಂಗಳು ಜಗತಿ = ಲೋಕದಲ್ಲಿ ಸ್ಥಿತಂ = ಇದ್ದಂಥಾ ಯತ್ = ಆವುದಾನೊಂದು ತೋಯಂ = ಉದಕವನು ಶಂಕರಸ್ಯ ಶರೀರೇ = ಶಿವನ ಅಂಗದಲ್ಲಿ

[1] ನಿರೀಕ್ಷ್ಯ (ಕ.ಖ)

ತತಸ್ತೈಸ್ತು ಸ್ತುತೋ ದೇವಃ ಪ್ರಹಸ್ಯ ಭಗವಾನ್ಭವಃ
ವಿಸೃಜ್ಯ ಚ ²ತದಾ² ತೋಯಮಭವತ್ಪೂರ್ವರೂಪಧೃಕ್ ||೧೭೩||

ಏವಂ ಸಮ್ಯಕ್ ಸ್ಥಿತೇ ತಸ್ಮಿನ್ ದೇವದೇವೇ ಪಿನಾಕಿನಿ
ಸ್ನಾಪಿತೋಽಸೌ ವಿರಿಂಚ್ಯಾದ್ಯೈಃ ತ್ರಿಮೂರ್ತಿರ್ಭಗವಾನ್ಭವಃ ||೧೭೪||

ಮೈನಾಕೋಽಥಾಂಜಲಿಂ ಕೃತ್ವಾ ದೇವದೇವಸ್ಯ ಚಾಗ್ರತಃ
ಸಂಸ್ಥಿತೋ ಹರ್ಷಸಂಯುಕ್ತೋ ನಿಧಿಂ ಲಬ್ಧ್ವಾ ಯಥಾಽಧನಃ ||

---

ವೀಕ್ಷ್ಯ = ಕಂಡು ಯೋಗಮಾಯಾವೃತಂ = ಯೋಗ ಮಾಯೆಯಿಂದ ಮುಸುಕಲು ಪಟ್ಟಂಥಾ ಪಶುಭರ್ತಾರಂ = ಪಶುಪತಿಯಹಂಥಾ ದೇವನನು ಅಸ್ತುವನ್ = ಕೊಂಡಾಡಿದರು. ||೧೭೨||

ಅಸ್ಟರ ಮೇಲೆ ತೈಸ್ತು = ಆ ದೇವರ್ಕಳಿಂದವೂ ಸ್ತುತಃ = ಕೊಂಡಾಡಿಸಿ ಕೊಳಲು ಪಟ್ಟಂಥಾ ದೇವಃ = ಪ್ರಕಾಶಸ್ವರೂಪನಹಂಥಾ ಭಗವಾನ್ = ಷಡ್ಗುಣೈಶ್ವರ್ಯ ಸಂಪನ್ನನಹಂಥಾ ಭವಃ = ಪರಮೇಶ್ವರನು ಪ್ರಹಸ್ಯ = ನಕ್ಕು ತದಾ = ಆಗ ತೋಯಂ ಚ = ಉದಕವನು ವಿಸೃಜ್ಯ = ಬಿಟ್ಟು ಪೂರ್ವರೂಪ ಧೃಕ್ = ಮುನ್ನಿನ ರೂಪಧರಿಸಿದಾತನು ಅಭವತ್ = ಆದನು. ||೧೭೩||

ಏವಂ = ಈ ಪ್ರಕಾರದಲ್ಲಿ ದೇವದೇವೇ = ದೇವದೇವನಹಂಥಾ ತಸ್ಮಿನ್ ಪಿನಾಕಿನಿ = ಆ ಪರಮೇಶ್ವರನು ಸಮ್ಯಕ್ ಸ್ಥಿತೇ ಸತಿ = ಲೇಸಾಗಿ ಇರುತ್ತಂ ಇರಲು ವಿರಿಂಚ್ಯಾದ್ಯೈಃ = ಬ್ರಹ್ಮ ಮೊದಲಾದಂಥಾ ದೇವರ್ಕಳಿಂದ ತ್ರಿಮೂರ್ತಿಃ = ತ್ರಿಮೂರ್ತಿಯನುಳ್ಳಂಥಾ ಭಗವಾನ್ = ಷಡ್ಗುಣೈಶ್ವರ್ಯಸಂಪನ್ನನಹಂಥಾ ಅಸೌ ಭವಃ = ಈ ಪರಮೇಶ್ವರನು ಸ್ನಾಪಿತಃ = ಮಜ್ಜನ ಮಾಡಿಸಿಕೊಳಲುಪಟ್ಟನು.

ಅಥ = ಅನಂತರದಲ್ಲಿ ಮೈನಾಕಃ = ಮೈನಾಕಪರ್ವತನು ಅಂಜಲಿಂ = ಕೈಮುಗಿಹವನು ಕೃತ್ವಾ ಚ = ಮಾಡಿಕೊಂಡು ದೇವದೇವಸ್ಯ = ದೇವದೇವನಹಂಥಾ ಪರಮೇಶ್ವರನ ಅಗ್ರತಃ = ಮುಂದೆ ಹರ್ಷಸಂಯುಕ್ತಃ = ಹರುಷದೊಡನೆ ಕೂಡಿ ದಾತನಾಗಿ ಸಂಸ್ಥಿತಃ = ಇದ್ದನು. ತದ್ಯಥಾ = ಅದು ಹೇಂಗೆಯಾ ಎಂದರೆ ಅಧನಃ = ನಿರ್ಧನಿಕನು ನಿಧಿಂ = ನಿಧಾನವನು ಲಬ್ಧ್ವಾ ಯಥಾ = ಪಡದು ಎಹಗಹಗೆ.

---

² ತಥಾ (ಘ)

ವಿಸರ್ಜಿತಃ ಸ್ವತಸ್ತೇನ ದೇವದೇವೇನ ಶಂಭುನಾ
ತ್ರೈಲೋಕ್ಯತಿಲಕೇ ತಸ್ಮಿನ್ ಯಯೌ ತೂರ್ಣಂ ನಗಾತ್ಮಜಃ ||೧೭೬||

ತತಃ ಶುಕ್ಲಂ ಪರೀಧಾಪ್ಯ ದೇವೀಂ ತಾಮರಸೇಕ್ಷಣಾಮ್
ಸ್ನಾಪಯತ್ತೇನ ಕುಂಭೇನ ಹರಾಂಘ್ರಿಸ್ನಾಪಿತೇನ ಚ ||೧೭೭||

ತತೋ ಭಗವತೀ ದೇವೀ ಹೃಷ್ಟಪೃಷ್ಟಾ ತಪೋಮಯೀ
ಪಿತುರಭ್ಯಾ[ಶ]ಗಾ ಭೂತ್ವಾ ವಿವೇಶ ಪರಮಾಸನೇ ||೧೭೮||

ಅಥಾಯಾಂತಂ ಶಿವಂ ದೃಷ್ಟ್ವಾ ಹಿಮವಾನ್ಪರ್ವತೇಶ್ವರಃ
ಮೇರುಶ್ಚೈವ ಯಥಾಽಸಂಖ್ಯೈರಗ್ನಿಚಂದ್ರದಿವಾಕರೈಃ ||೧೭೯||

---

ನಗಾತ್ಮಜಃ = ಗಿರಿರಾಜನ ಕುಮಾರನಹಂಥಾ ಮೈನಾಕನು ಸ್ವತಃ = ತನ್ನನು ದೇವದೇವೇನ = ದೇವದೇವನಹಂಥಾ ತೇನ ಶಂಭುನಾ = ಆ ಪರಮೇಶ್ವರನಿಂದ ವಿಸರ್ಜಿತಃ = ಕಳುಹಿಸಿಕೊಂಡನು. ತ್ರೈಲೋಕ್ಯತಿಲಕೇ = ಮೂರು ಲೋಕಕ್ಕೆ ತಿಲಕವಹುಥಾ ತಸ್ಮಿನ್ = ಆ ವಿವಾಹವುಂಟಪದಲ್ಲಿ ತೂರ್ಣಂ = ಬೇಗ ಯಯೌ = ಎಯ್ದಿದನು. ||೧೭೪–೧೭೫–೧೭೬||

ತತಃ = ಅಪ್ಟರ ಮೇಲೆ ಶುಕ್ಲಂ = ಬಿಳಿಯ ಸೀರೆಯುನು ಪರೀಧಾಪ್ಯ = ಉಡಿಸಿ ತಾಮರಸೇಕ್ಷಣಾಂ = ತಾವರೆಯೋಪಾದಿಯ ನಯನಂಗಳನುಳ್ಳಂಥಾ ದೇವೀಂ = ಪಾರ್ವತೀದೇವಿಯುನು ಹರಾಂಘ್ರಿಸ್ನಾಪಿತೇನ = ಪರಮೇಶ್ವರನ ಪಾದ ಪ್ರಕ್ಷಾಲನೆಯ ಮಾಡಿದಂಥಾ ತೇನ ಕುಂಭೇನ ಚ = ಆ ಕಳಶದಿಂದವೂ ಸ್ನಾಪ-ಯತ್ = ಸ್ನಾನವ ಮಾಡಿಸಿದನು. ||೧೭೭||

ತತಃ = ಅಪ್ಟರ ಮೇಲೆ ಭಗವತೀ = ಷಡ್ಗುಣೈಶ್ವರ್ಯಸಂಪನ್ನೆಯಹಂಥಾ ತಪೋಮಯೀ = ತಪೋರೂಪಿಯಹಂಥಾ ದೇವೀ = ಪಾರ್ವತೀ ದೇವಿ ಹೃಷ್ಟಪೃಷ್ಟಾ = ಸಂತೋಷದಿಂದ ಬೆಸಗೊಳ್ಳಲ್ಪಟ್ಟಾಯಕನಾಗಿ ಪಿತುಃ = ತಂದೆಯ ಅಭ್ಯಾ[ಶ]ಗಾ = ಸಮೀಪವ ನೆಯ್ದಿದಾಯಕನು ಭೂತ್ವಾ = ಆಗಿ ಪರಮಾಸನೇ = ಉನ್ನತಾಸನದಲ್ಲಿ ವಿವೇಶ = ಕುಳ್ಳಿರ್ದಳು. || ೭೮||

ಅಥ = ಅನಂತರದಲ್ಲಿ ಅಗ್ನಿಚಂದ್ರದಿವಾಕರೈಃ = ಅಗ್ನಿ ಚಂದ್ರ ಸೂರ್ಯರು ಗಳೊಡನೆ ಮೇರುರ್ಯಥೈವ = ಮೇರುವೆಹಗಹಗೆ ತಥಾ = ಹಾಂಗೆ ಸೋಮ-ಸೂರ್ಯಾಗ್ನಿ ನೇತ್ರನಹಂಥಾ ಛತ್ರೇಣ = ಸತ್ತಿಗೆಯಿಂದ ಶೋಭಿತಂ = ಒಪ್ಪುತ್ತಂ

